" ಶ್ರೀ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯಃ ಪ್ರಸೀದತು "

ಶ್ರೀ ಗಣಾಧೀಶ್ವರ ಗ್ರಂಥಮಾಲೆಯ ೮ನೆಯ ಪುಷ್ಪ

# ವೀರಶೈವ ಭಕ್ತಿವಿಜಯ

ಅ ಥ ವಾ

# ಶ್ರೀ ಬಸವೇಶ್ವರ ಕಥಾಮೃತ







ಗ್ರಂಥಕರ್ತರು :
ಜ್ಯೋತಿರ್ವಿದ್ಯಾ ವಿಭೂಷಣ, ಸಾಹಿತ್ಯರತ್ನ
ವೇ. ಬಸವಯ್ಯಶಾಸ್ತ್ರಿಗಳು ಹಿರೇಮಠ
ಶ್ರೀ ಗಣಾಧೀಶ್ವರ ಪಂಚಾಂಗ ಕರ್ತರು,
ಗ ದ ಗ.

೧೯೬೫  ಬೆಲೆ : ೨=೫೦ ಪೈಸೆ.

## ವಿಷಯಾನುಕ್ರಮ

---

# ಪ್ರಾರ್ಥನೆ

ಶ್ರೀ ಮಹಾ ಕೈಲಾಸ ಪರ್ವತದಲ್ಲಿ ವಿರಾಜ ಮಾನನಾಗಿ ಮಸ್ತಕದಲ್ಲಿ ಗಂಗೆಯನ್ನೂ, ಎಡದ ತೊಡೆಯ ಮೇಲೆ ಪಾರ್ವತಿಯನ್ನೂ ಬಲದ ತೊಡೆಯ ಮೇಲೆ ಗಣಪತಿಯನ್ನೂ ಕುಳ್ಳಿರಿಸಿಕೊಂಡು, ತನ್ನ ಉದರದಲ್ಲಿ ಸಮಸ್ತ ಚರಾಚರ ಪ್ರಪಂಚವನ್ನು ಧರಿಸಿ ಕಾಪಾಡುತ್ತ ಪ್ರಪಂಚದ ಸಂಪತ್ತಿಗೆ ತಾನೇ ಕಾರಣ ಪುರುಷನೆನಿಸಿ ಅಣಿಮಾದಿ ಅಷ್ಟಸಿದ್ಧಿಯುಳ್ಳವನಾಗಿ ಜಗತ್ತಿನ ಕಲ್ಯಾಣಕ್ಕಾಗಿ ಚಂದ್ರಶೇಖರ ಮೊದಲಾದ ಇಪ್ಪತ್ತೈದು ಲೀಲೆಗಳನ್ನು ಧರಿಸಿ ಪ್ರಣವ ಸ್ವರೂಪನೂ, ಪರಮಾನಂದಮಯನೂ, ಆಗಿ ಪರಿಶೋಭಿಸುತ್ತಿರುವ ಪರಮೇಶ್ವರನು ನಮ್ಮನ್ನು ಸದಾ ಸಂರಕ್ಷಿಸಲಿ.

ಸಕಲಶಾಸ್ತ್ರಕೋವಿದರು ಸಮಸ್ತಲೋಕಗಳ ಉತ್ಪತ್ತಿಗೆ ಯಾವಳನ್ನು ಮೂಲಕಾರಣೀ ಭೂತಳನ್ನಾಗಿ ಹೇಳುತ್ತಾರೆಯೋ, ತನ್ನನ್ನು ಶರಣಾಗತರಾದ ಸಕಲಭಕ್ತರ ಪಾಪಗಳನ್ನೆಲ್ಲ ಪರಿಹರಿಸಿ ಮುಕ್ತಿಸುಖವನ್ನುದಯಪಾಲಿಸಿ ಕಾಪಾಡುವ, ಪರಮೇಶ್ವರನ ಧರ್ಮಸ್ವರೂಪಳಾದ ಲೋಕಮಾತೆಯೂ ಆದ ಪಾರ್ವತಿಗೆ ನಾನು ನಮಸ್ಕರಿಸುತ್ತೇನೆ.

ತನ್ನನ್ನು ಭಕ್ತಿಯಿಂದ ಪ್ರಾರ್ಥಿಸುವ ಸದ್ಭಕ್ತರ ಸಕಲ ಇಷ್ಟಾರ್ಥಗಳನ್ನು ಪೂರ್ಣಮಾಡುವ ಕೃಪಾನಿಧಿಯಾದ ವಿಘ್ನೇಶ್ವರನನ್ನು ಧ್ಯಾನಿಸಿ ಈ ಗ್ರಂಥ ಪರಿಪೂರ್ಣತೆಗೆ ನಿರ್ವಿಘ್ನತೆಯನ್ನುಂಟುಮಾಡಲು ಪ್ರಾರ್ಥಿಸುತ್ತೇನೆ.

ಶ್ರೀ ರುದ್ರನ ಅಗ್ನಿನೇತ್ರದಿಂದ ಉದ್ಭವಿಸಿ ಶಿವದ್ರೋಹಿಯಾದ ದಕ್ಷಬ್ರಹ್ಮನನ್ನು ಸಂಹರಿಸಿ ಶಿವಭಕ್ತಿಯನ್ನು ಸ್ಥಾಪಿಸಿದ ವೀರಭದ್ರನು ನನ್ನ ಸ್ಮೃತಿ ಮಂದಿರದಲ್ಲಿ ಸದಾ ಶುಭ ಪ್ರದನಾಗಿರಲಿ.

ಈ ಭೂಲೋಕದಲ್ಲಿ ಕಲ್ಯಾಣ ಪಟ್ಟಣದ ದೊರೆಯಾದ ಬಿಜ್ಜಳ ಮಹಾರಾಜನಿಂದ ಸ್ತೋತ್ರಮಾಡಿಸಿಕೊಂಡು ಗಂಗಾಂಬಿಕಾದೇವಿಗೆ ಪತಿಯಾಗಿ ಸಕಲ ಶಿವಗಣಂಗಳೊಡನೆ ಕೂಡಿಕೊಂಡು ಈ ಭೂಮಿಯಮೇಲೆ ಅಗಾಧ ಮಹಿಮೆಗಳನ್ನು ಪ್ರಕಾಶ ಪಡಿಸಿದವನೂ, ಶಾಂತಸ್ವಭಾವಿಯೂ, ಭಸ್ಮಾಂಗ

ಲೇಪನೂ, ಪ್ರಣವಧ್ಯಾನಾಸಕ್ತನೂ, ಲಿಂಗಾಂಗ ಸಾಮರಸ್ಯಾನಂದ ಭರಿತನೂ, ಧರ್ಮಸ್ವರೂಪನೂ ಆದ ಬಸವೇಶ್ವರನು ನಮಗೆ ಸದಾಸದ್ಭಕ್ತಿಯನ್ನಿತ್ತು ಕರುಣಿಸಲಿ.

ಪರಶಿವನಲ್ಲಿ ಅತಿಶಯವಾದ ಭಕ್ತಿಸಂಪತ್ತಿಯನ್ನು ಪ್ರಕಾಶಪಡಿಸಿ ಸಾಲೋಕ್ಯ ಮೊದಲಾದ ಪದವಿಗಳನ್ನು ಪಡೆದುಕೊಂಡು ಆ ಪರಶಿವನಿ ಗಿಂತಲೂ ಅಧಿಕರೆನಿಸಿಕೊಂಡು ಮೆರೆದು ಘನತರರಾದ ಶಿವಶರಣರ ಪಾದಾರ ವಿಂದಗಳಲ್ಲಿ ನನ್ನ ಅನಂತ ಪ್ರಾರ್ಥನೆಗಳು.

## — ಕಥಾ ಪ್ರಾರಂಭ —

ಶ್ರೀ ಮಹಾಲಕ್ಷ್ಮಿಗೆ ಜನ್ಮ ಸ್ಥಳವೂ, ಸಮಸ್ತ ಸಂಪತ್ತುಗಳಿಗೆ ಆಶ್ರಯ ಸ್ಥಾನವೂ, ಶ್ರೀ ವಿಷ್ಣುವಿಗೆ ಮಲಗುವ ಮನೆಯೂ, ಸೂರ್ಯದೇವನಿಗೆ ಸ್ನಾನದ ಸರೋವರವೂ, ದೇವೇಂದ್ರನ ಆಯುಧವಾದ ವಜ್ರಕ್ಕೆ ಭಯಪಟ್ಟು ಓಡಿಬಂದ ಪರ್ವತಗಳಿಗೆ ಅಜ್ಞಾತ ಸ್ಥಳವಾಗಿಯೂ, ಆಕಾಶವೆಂಬ ಲಕ್ಷ್ಮೀ ದೇವಿಗೆ ಕನ್ನಡಿಯಂತೆ ಕಂಗೊಳಿಸುತ್ತಿರುವ, ರತ್ನಗಳ ಸಮೂಹಕ್ಕೆ ಆಶ್ರಯ ಸ್ಥಾನವಾಗಿರುವ ಮಹಾಸಾಗರದ ಮಧ್ಯಭಾಗದಲ್ಲಿ ರಜತಾದ್ರಿಯೆಂಬ ಪರ್ವ ತವು ಪ್ರಕಾಶಿಸುತ್ತಿರುವದು. ಆ ಪರ್ವತದಲ್ಲಿಯ ಮರಗಳು ಕಲ್ಪವೃಕ್ಷ ದಂತೆಯೂ, ಹಾವುಗಳು ಆದಿಶೇಷನಂತೆಯೂ, ನೀರು ಸಿದ್ಧವಾದರಸ ದಂತೆಯೂ, ಕಲ್ಲುಗಳು ಚಿಂತಾಮಣಿಗಳಂತೆಯೂ, ಗೋವುಗಳು ಕಾಮಧೇ ನುಗಳಾಗಿಯೂ, ಬಳ್ಳಿಗಳು ಕಲ್ಪಲತೆಯಂತೆಯೂ ಇದ್ದು ಮಹಾ ತಪಸ್ವಿ ಗಳಾದ ಮಹರ್ಷಿಗಳ ತಪೋವನಗಳಲ್ಲಿಯ ಮೃಗಗಳೆಲ್ಲ ತಮ್ಮ ಸ್ವಭಾವ ಜನ್ಯವಾದ ವೈರತ್ವವನ್ನು ಮರೆತು ಪರಸ್ಪರ ಪ್ರೀತಿಯಿಂದಲೂ, ಸಲುಗೆ ಯಿಂದಲೂ ಆಟವಾಡುತ್ತಿದ್ದವು. ಆ ಪರ್ವತದ ಉನ್ನತವಾದ ತಪ್ಪಲ ಪ್ರದೇಶದಲ್ಲಿರುವ ಕಲ್ಪವೃಕ್ಷಗಳ ನೆರಳಲ್ಲಿ ಗಂಧರ್ವರು, ಯಕ್ಷರು, ಕಿನ್ನರರು, ಕಿಂಪುರುಷರು ಚಂದ್ರಕಾಂತ ಶಿಲೆಗಳ ಮೇಲೆ ಕುಳಿತುಕೊಂಡು ಆನಂದದಿಂದ ವಿಶ್ರಾಂತಿ ಪಡೆಯುತ್ತಿರುವರು. ಆ ಪರ್ವತದ ಎಲ್ಲ ಕಡೆಗಳಲ್ಲಿ ನದಿಗಳೂ, ತೋಟಗಳೂ, ನಿರ್ಮಲವಾದ ಕೊಳಗಳೂ, ಲತಾಗೃಹಗಳೂ, ಕಾಮಧೇನು ಗಳೂ, ಸಂತೋಷದಿಂದ ಆಟವಾಡುತ್ತಿರುವ ಯಕ್ಷ, ಗಂಧರ್ವ, ಗಣೇಂದ್ರರೂ,

ತಪಸ್ವಿಗಳೂ ಶೋಭಿಸುತ್ತಿದ್ದರು. ಆ ಪರ್ವತದ ಅತ್ಯುನ್ನತ ಭಾಗದಲ್ಲಿ ಆಕಾಶವನ್ನು ಸೋಂಕುತ್ತಿರುವಂತೆ ರಂಜಿಸುವ ರತ್ನದ ಕೋಟಿ ಕೊತ್ತಳಗ ಳಿಂದಲೂ, ಬಂಗಾರದ ಉಪ್ಪರಿಗೆಗಳಿಂದಲೂ, ಮನೋಹರವಾದ ರಾಜಬೀದಿ ಗಳಿಂದಲೂ, ಸುವರ್ಣ ಕಮಲಗಳ ಸುಗಂಧ ರಸದಿಂದ ತುಂಬಿದ ಸ್ನಾನದ ಕೊಳಗಳಿಂದಲೂ, ದೊಡ್ಡ ದೊಡ್ಡ ಸಹಸ್ರಾರು ಸುವರ್ಣ ಸ್ತಂಭಗಳಿಂದ ವಿರಾಜಿಸುವ ಕಮಾನುಗಳಿಂದಲೂ, ರತ್ನಗಳ ದೀಪದ ಶಿಖೆಯಿಂದ ಹೊರ ಹೊರಟ ಕಿರಣಗಳಿಂದ ಪ್ರಕಾಶಮಾನವಾಗಿ, ಕಂಗೊಳಿಸುವ ಅಂತಃಪುರಗ ಳಿಂದಲೂ, ಮಹಾದ್ವಾರಗಳ ಸ್ತಂಭಗಳ ಎರಡೂ ಕಡೆಗಳಲ್ಲಿ ಶಂಖ, ಪದ್ಮಗ ಳೆಂಬ ನಿಧಿಗಳಿಂದ ಕೂಡಿಕೊಂಡು, ನಕ್ಷತ್ರಗಳಂತೆ ಹೊಳೆಯುವ ಮುತ್ತುಗ ಳಿಂದ ವಿರಚಿತವಾದ ವಿಶಾಲವಾದ ಛತ್ತುಗಳಿಂದ ಅಲಂಕೃತವಾದುದೂ, ಸ್ಪರ್ಶದಿಂದಲೇ ಕಂಡುಹಿಡಿಯ ಬಹುದಾದ ವಜ್ರ, ವೈಡೂರ್ಯ ಮೊದಲಾದ ಮಣಿಮಯವಾದ ಗೋಡೆಗಳ ಸಾಲುಗಳಿಂದ ಕೂಡಿದುದೂ, ಅಲ್ಲಲ್ಲಿ ಸಂಚಾರ ಮಾಡುತ್ತಿರುವ ಪ್ರಮಥಗಣಂಗಳ ಪಾದಗಳಲ್ಲಿರುವ ಗೆಜ್ಜೆಯ (ಜಂಗಿನ) ಇಂಪಾದ ಶಬ್ದದಿಂದ ಕೂಡಿದುದೂ, ಹವಳ ಗಳಿಂದ ವಿರಚಿತವಾದ ಪ್ರಾಕಾರ ಶೃಂಗಗಳಿಂದ ಕೂಡಿದ ಕ್ರೀಡಾಮಂಟಪಗಳು ಳ್ಳದ್ದೂ ಆಗಿ ಕಂಗೊಳಿಸುವ ಈಶ್ವರನ ರಾಜಧಾನಿಯಾದ ಕೈಲಾಸ ಪಟ್ಟಣವು ಶೋಭಿಸುತ್ತಿರುವದು. ಸಕಲ ಐಶ್ವರ್ಯಗಳಿಗೆ ನಿಧಿಯಾಗಿ, ಲೋಕಕ್ಕೇ ಉತ್ಕೃಷ್ಟ ಶೃಂಗಾರವಾಗಿ, ಕೋಟಿ ಸೂರ್ಯ ಪ್ರಕಾಶ ಮಾನವಾದ ಆ ಪಟ್ಟಣದ ಸೊಬಗನ್ನು ವರ್ಣಿ ಸುವದು ಯಾರಿಂದಲೂ ಸಾಧ್ಯವಿಲ್ಲ. ಅಂತಹ ಪಟ್ಟಣದ ಮಧ್ಯದಲ್ಲಿ ಪುಣ್ಯ ಜನರ ಕಣ್ಣಿಗೆ ಹಬ್ಬದಂತೆ ಶೋಭಿಸುವ ಶಿವನ ಅರಮನೆಯಲ್ಲಿ ಒಂದು ದಿವ್ಯ ವಾದ ಸಭಾಮಂಟಪವಿತ್ತು. ಅದರ ಮಧ್ಯದಲ್ಲಿ ರತ್ನಖಚಿತವಾಗಿ ಥಳಥಳಿಸು ತ್ತಿರುವ ಸಿಂಹಾಸನದ ಮೇಲೆ ಮಂಗಳಕರನಾದ ಪರಮೇಶ್ವರನು ಕುಳಿತು ಕೊಂಡಿರಲು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೆಲ್ಲರೂ ಸ್ತೋತ್ರ ಮಾಡುತ್ತಿದ್ದರು. ಇಂದ್ರ ಮೊದಲಾದ ಅಷ್ಟದಿಕ್ಪಾಲಕರೂ, ವಸುಗಳೂ, ಸಿದ್ಧಚಾರಣರೂ, ಕಿನ್ನರ, ಕಿಂಪುರುಷ, ಯಕ್ಷ, ಸಾಧ್ಯಗಂಧರ್ವ ಮೊದ ಲಾದ ಮನುಮುನಿಗಳೂ ನೆರೆದು ಪರಶಿವನನ್ನು ಸೇವಿಸುತ್ತಿದ್ದರು. ಇಂತಹ ಆ ಸಭೆಯಲ್ಲಿ ದೇವಾಧಿದೇವನೂ, ಸರ್ವಲೋಕಾಧಿಪತಿಯೂ, ವೇದಾಂತ

ರೂಪವಾದ ಕಮಲವನದ ವಿಹಾರದಲ್ಲಿ ರಾಜಹಂಸ ಸ್ವರೂಪನೂ, ಸರ್ವಮಂಗಲಗಳಿಗೂ, ಸಮಸ್ತ ಸೌಭಾಗ್ಯಗಳಿಗೂ ಮಂದಿರ ಸ್ವರೂಪನೂ, ಅನಂತ ಬ್ರಹ್ಮಾಂಡಗಳನ್ನು ಒಂದು ಗೂಡಿಸುವದರಲ್ಲಿ ಕುಶಲನೂ, ಕೋಟಿ ಸೂರ್ಯರಿಗೆ ಸಮಾನವಾದ ತೇಜೋಮಯ ಶರೀರವುಳ್ಳವನೂ, ಸಮಸ್ತದೇವತಾ ಸಾರ್ವಭೌಮನೂ, ರತ್ನಮಯ ಕಿರೀಟದಿಂದ ಹೊರಹೊರಟ ಕಿರೀಟಗಳಿಂದ ವಿಚಿತ್ರ ವರ್ಣವಾಗಿ ಶೋಭಿಸುವ ವಸ್ತ್ರಗಳುಳ್ಳವನೂ, ಕೋಮಲವಾದ ಚಂದ್ರನನ್ನು ಜಡೆಯಲ್ಲಿ ಧರಿಸಿದವನೂ, ಮುತ್ತಿನ ಸರಗಳಿಂದ ಯುಕ್ತವಾದ ರುಂಡಮಾಲೆಯನ್ನು ಧರಿಸಿದವನೂ, ಪೂರ್ಣಚಂದ್ರನ ಸೌಂದರ್ಯವನ್ನು ತಿರಸ್ಕರಿಸುವ ಮುಖಕಾಂತಿಯುಳ್ಳವನೂ, ಪ್ರಾತಃಕಾಲದಲ್ಲಿ ಅರಳಿದ ಕಮಲಗಳಿಗೆ ಸಮಾನವಾದ ಮೂರು ನೇತ್ರಗಳುಳ್ಳವನೂ, ಮುಗುಳು ನಗೆಯಿಂದಲೂ, ಮಿತಭಾಷಣ ದಿಂದಲೂ, ಯುಕ್ತವಾದ ಸುಂದರಾಧರಗಳುಳ್ಳವನೂ, ಗಲ್ಲದವರೆಗೆ ಜೋಲಾಡುತ್ತಿರುವ ಮೀನಾಕಾರದಂತಿರುವ ಕರ್ಣಕುಂಡಲಗಳುಳ್ಳವನೂ, ಕಾಲಕೂಟ ವಿಷದ ಕಪ್ಪು ಬಣ್ಣದಿಂದ ಕಲಂಕಿತವಾದ ಕಂಠವುಳ್ಳವನೂ, ರತ್ನಕಂಕಣ, ರತ್ನಮಯ ಭುಜಕಿರೀಟಗಳ ಕಾಂತಿಯಿಂದ ಕೂಡಿದ ಕೈಬೆರಳುಗಳುಳ್ಳ ನಿಡಿದಾದ ನಾಲ್ಕು ಹಸ್ತಗಳಿಂದ ಪರಿಶೋಭಿಸುವವನೂ; ಹಸ್ತಗಳಲ್ಲಿ ಮೃಗ, ತ್ರಿಶೂಲ, ಡಮರುಗ ಅಭಯವರ ಪ್ರದಾನವನ್ನೂ, ಪಾರ್ವತೀದೇವಿಯ ಕುಚಾಲಿಂಗನದಿಂದ ಕೃತಾರ್ಥವಾದ ಭುಜಗಳುಳ್ಳವನೂ, ನಡುವಿನಲ್ಲಿ ಚರ್ಮಾಂಬರ ವನ್ನೂ, ರೇಶಿಮೆಯ ವಸ್ತ್ರವನ್ನೂ ಧರಿಸಿ, ನಾನಾ ರತ್ನನೂಪುರಗಳ ಪ್ರಭೆಯಿಂದ ಎಳದಳಿರುಗಳಂತೆ ಶೋಭಿಸುವ ಚರಣಗಳುಳ್ಳವನಾಗಿ ಎಡತೊಡೆಯಲ್ಲಿ ಸಕಲ ಸೌಭಾಗ್ಯ ಕುಲವಿದ್ಯಾ ಸ್ವರೂಪಳಾದ ಪಾರ್ವತಿಯನ್ನು, ಕುಳ್ಳಿರಿಸಿಕೊಂಡು ಆನಂದಯುತನಾಗಿ ಷಣ್ಮುಖನನ್ನು ಎತ್ತಿಕೊಂಡು ತೊಡೆಯಮೇಲೆ ಕುಳ್ಳಿರಿಸಿ ಮೈದಡವುತ್ತ ಮುಂದೆ ಕುಣಿಯುತ್ತಿರುವ ಭೃಂಗಿಯನ್ನು ನೋಡಿ ನಗುತ್ತ, ಗಣಪತಿಯನ್ನು ಪ್ರೀತಿಯಿಂದ ತಬ್ಬಿ ಮುದ್ದಾಡುತ್ತ, ಶಿವಗಣಂಗಳೊಡನೆ ಸಂತೋಷದಿಂದ ಮೆರೆಯುತ್ತಿದ್ದನು. ಆಗ ಮಹಾಲಕ್ಷ್ಮಿಯು ಪರಮೇಶ್ವರನಿಗೆ ಶ್ವೇತಕಮಲದಂತೆ ಶುಭ್ರವೂ, ಪೂರ್ಣ ಚಂದ್ರನಂತೆ ಶೋಭಿಸುವ ಶ್ವೇತಛತ್ರವನ್ನು ಹಿಡಿದಿದ್ದಳು. ಸರಸ್ವತೀದೇವಿಯು ತನ್ನ ವೀಣೆಯ ಮಂಜುಳ ಧ್ವನಿಯಿಂದ ಅಮೃತಸದೃಶ ಸಂಗೀತ

ವಿದ್ಯೆಯಿಂದಲೂ, ಉಪನಿಷದ್ ರೂಪ ಸ್ತ್ರೀಯಳು ಓಂಕಾರರೂಪ ವ್ಯಜನ ಬೀಸುವಿಕೆಯಿಂದಲೂ, ರತ್ನಮಯವಾದ ಕಂಕಣಗಳುಳ್ಳ ದೇವಕನ್ಯೆಯರು ಅಲ್ಲಾಡುತ್ತಿರುವ ಚಾಮರಗಳಿಂದಲೂ ಸೇವಿಸುತ್ತಿದ್ದರು. ನಂದಿ, ಭೃಂಗಿ, ಪುಷ್ಪದಂತ, ವೀರಭದ್ರ ಮೊದಲಾದ ಪ್ರಮಥರೂ, ಅನಂತ, ಸೂಕ್ಷ್ಮ, ಏಕ ನೇತ್ರ, ಶ್ರೀಕಂಠ ಮೊದಲಾದ ಎಂಟು ಜನ ವಿದ್ಯಾಧೀಶ್ವರರೂ, ದ್ವಾದಶಾದಿ ತ್ಯರೂ, ಅಷ್ಟವಸುಗಳೂ,ಏಕಾದಶ ರುದ್ರರೂ, ಕುಬೇರ ಮೊದಲಾದ ಯಕ್ಷರೂ, ಹಾಹಾ ಮೊದಲಾದ ಗಂಧರ್ವರೂ, ಅಶ್ವಮುಖ ಮೊದಲಾದ ಕಿನ್ನರರೂ, ದಾನವರೂ, ರಾಕ್ಷಸರೂ, ದೈತ್ಯರೂ, ಆದಿನಾಥ ಮೊದಲಾದ ಸಿದ್ಧರೂ, ಮಣಿಭದ್ರಾದಿ ವಿದ್ಯಾಧರರೂ, ಆದಿಶೇಷ ಮೊದಲಾದ ಸರ್ಪಗಳೂ ವಶಿಷ್ಠ, ವಾಮದೇವ, ಅತ್ರಿ, ಶೌನಕ, ದಧೀಚಿ, ಸಾನಂದ, ಶುಕ, ಪರಾಶರ ಮೊದಲಾದ ಮಹರ್ಷಿಗಳೂ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ಮೂವತ್ತುಮೂರು ಕೋಟಿ ದೇವತೆಗಳೂ ತಮ್ಮ ತಮ್ಮ ಆಯುಧಗಳಿಂದ ಅಲಂಕೃತರಾಗಿ ವಿಶ್ವಸೂತ್ರಾಧಿಕಾರಿಯಾದ ಪರಮೇಶ್ವರ ನನ್ನುಸುತ್ತುಗಟ್ಟಿಕೊಂಡು ಸೇವಿಸುತ್ತಿದ್ದರು. ಈ ಪ್ರಕಾರ ಪರಿಶೋಭಿಸುತ್ತಿರುವ ಪರಮೇಶ್ವರನು ಕ್ಷಣಕಾಲ ದೇವತೆಗಳಿಗೆ ನೀವು ಇಂತಹ ಕಾರ್ಯಮಾಡಿರಿ ಎಂದು ಆಜ್ಞಾಪಿಸುವನು. ಕ್ಷಣಕಾಲ ಗಂಧರ್ವರ ಗಾನ ಕೇಳುವನು. ಕ್ಷಣಕಾಲ ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೊಡನೆ ಮಾತಾಡುವನು. ಕ್ಷಣಹೊತ್ತು ದೇವತಾ ಸ್ತ್ರೀಯರ ನರ್ತನ ನೋಡುವನು. ಕ್ಷಣಕಾಲ ಮಹ ರ್ಷಿಗಳ ವೇದೋಚ್ಚಾರಣೆ ಪರಾಮರ್ಶಿಸುವನು. ಕ್ಷಣಕಾಲ ಪಾರ್ವತಿಯ ಮುಖ ಕಮಲದಲ್ಲಿ ದೃಷ್ಟಿಯನ್ನಿಡುವನು. ಕ್ಷಣಕಾಲ ಭೃಂಗಿಯ ಹಾಸ್ಯ ಮಯ ನರ್ತನ ನೋಡುವನು. ಸಮಸ್ತ ಕಾರ್ಯಾಧಿಕಾರಿಯಾದ ನಂದೀ ಶ್ವರನಿಂದ ಕೆಲವರನ್ನು ಕರೆಯಿಸುವನು. ಕೆಲವರನ್ನು ನೇತ್ರಸಂಜ್ಞೆಯಿಂದ ಕಳಿಸುವನು. ಕೆಲವರನ್ನು ಪ್ರೀತಿಯಿಂದ ಸಂತೋಷ ಪಡಿಸುವನು. ಕೆಲ ವರನ್ನು ಬಂಧಿಸುವನು. ಹೀಗೆ ತಾನು ಚತುರ್ದಶ ಲೋಕಾಧಿಪತಿಯಾಗಿ ತನ್ನ ಆಜ್ಞೆಯನ್ನು ದೇವತೆಗಳ ಮೂಲಕ ನೆರವೇರಿಸತಕ್ಕವನೂ, ಅಪ್ರತಿಹತ ಶಕ್ತಿಯುಳ್ಳವನೂ, ಶರಣಾಗತರಿಗೆ ಚಿಂತಾಮಣಿ ಸ್ವರೂಪನೂ ಆದ ಪರ ಮೇಶ್ವರನು ಸಭೆಯನ್ನು ಮುಗಿಸಿ ಭದ್ರಾಸನದಿಂದ ಎದ್ದು ಭ್ರೂಸಂಜ್ಞೆಯಿಂದ

ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟು ನಂದಿ ಮೊದಲಾದ ಪ್ರಮಥ ಗಣದೊಡನೆ ಪಾರ್ವತೀ ಸಹಿತನಾಗಿ ಅಂತಃಪುರವನ್ನು ಪ್ರವೇಶಿಸಿ ಅಲ್ಲಿ ರತ್ನಖಚಿತವಾದ ಉಪ್ಪರಿಗೆಯಲ್ಲಿ ಪಾರ್ವತೀ ಸಮೇತನಾಗಿ ಉನ್ನತಾಸನದಲ್ಲಿ ಕುಳಿತುಕೊಂಡು ಪರಿಮಿತರಾದ ಕೆಲವು ಜನ ಪ್ರಮಥ ಗಣಂಗಳೊಡನೆ ಆಸ್ಥಾನಗೊಂಡಿರುವಾಗ ಶಿವಭಕ್ತಿ ಸಂಪನ್ನನೂ, ಅನಂತ ವಿದ್ಯಾವಿಶಾರದನೂ ಆದ ನಾರದ ಮಹರ್ಷಿಯು ಜಟಾಧಾರಿಯಾಗಿ ತ್ರಿಪುಂಡ್ರಧಾರಣ ಮಾಡಿಕೊಂಡು ಮುಗುಳು ನಗೆನಗುತ್ತ ಶಿವಸಭೆಗೆ ಬಂದು ಗಂಗಾಧರನ ಪಾದಸನ್ನಿಧಿಯಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿ ಬೃಹತಿ ಯೆಂಬ ತನ್ನ ವೀಣೆಯನ್ನು ನುಡಿಸುತ್ತ ಮಂಗಳ ಸ್ವರೂಪನೇ, ಗಜಾಸುರ ಸಂಹಾರಕನೇ. ವಿಷಕಂಠನೇ, ವೃಷಭ ಧ್ವಜನೇ, ಸರ್ಪಾ ಭರಣನೇ, ಸಕಲ ದೇವತಾರ್ಚಿತನೇ, ಭಕ್ತ ಸುಖದಾಯಕನೇ, ಎಂದು ನಾನಾ ವಿಧವಾಗಿ ಸ್ತುತಿಸಿ ಕೈಮುಗಿದು ನಿಂತಿರುವ ನಾರದ ಋಷಿಯನ್ನು ಪರಶಿವನು ನೋಡಿ ಆತನಿಂದ ಭೂಲೋಕದ ವರ್ತಮಾನವನ್ನು ಕೇಳಿ ತಿಳಿದುಕೊಳ್ಳ ಬೇಕೆಂದು ಅಪೇಕ್ಷಿಸಿ ತನ್ನ ಪತ್ನಿಯಾದ ಪಾರ್ವತಿಯ ಮುಖವನ್ನು ನೋಡಲು ಆಕೆಯು ಪತಿಯ ಮನೋಭಿಲಾಷೆಯನ್ನು ತಿಳಿದು ನಾರದರ ಮುಖವನ್ನು ನೋಡುತ್ತ ಎಲೈ ಮುನಿಯೇ, ನೀನು ಯಾವ ಯಾವ ಲೋಕಗಳಲ್ಲಿ ಸಂಚ ರಿಸಿ ಬಂದಿರುವೆ? ಭೂಲೋಕದಲ್ಲಿ ಶಿವಭಕ್ತಿ ಸಂಪನ್ನರು ಇದ್ದಾರೆಯೇ? ಎಂದು ಕೇಳಲು ನಾರದನು- ನಾನು ಮೊದಲೇ ಬಿನ್ನವಿಸಿಕೊಳ್ಳಬೇಕೆಂದಿದ್ದ ಕಾರ್ಯಕ್ಕೆ ಒಳ್ಳೆಯ ಸಮಯ ಒದಗಿತೆಂಬುದಾಗಿ ಯೋಚಿಸಿ ಸಮೀಪಕ್ಕೆ ಬಂದು ಪರ ಮೇಶ್ವರನಿಗೂ, ಪಾರ್ವತಿಗೂ, ಪುನಃ ನಮಸ್ಕರಿಸಿ ಕೈಮುಗಿದು— ಎಲೈ ದೇವ ದೇವನಾದ ಪರಮೇಶ್ವರನೇ, ನನ್ನ ಬಿನ್ನಪವನ್ನು ಲಾಲಿಸು. ಶಿವ ಭಕ್ತಿಯು ಎಲ್ಲ ಲೋಕಗಳಲ್ಲಿ ವಿಶೇಷವಾಗಿರುವದು ಆದರೆ ಭೂಲೋಕದಲ್ಲಿ ಮಾತ್ರ ಗುಪ್ತವಾಗಿರುವದು. ಭರತ ಖಂಡದಲ್ಲಿ ಜೈನ, ಬೌದ್ಧ ಮೊದಲಾದ ಮತಗಳು ಹೆಚ್ಚಾಗಿ ಪ್ರಭುಗಳೂ, ಪ್ರಜೆಗಳೂ ಶಿವಮತವನ್ನೂ, ಅಷ್ಟಾವರಣ ಗಳನ್ನೂ ದೂಷಿಸುತ್ತಿರುವರು. ನೋಡಿದಲ್ಲೆಲ್ಲ ಶಿವದೇವಾಲಯಗಳ ಬಾಗಿ ಲುಗಳು ಮುಚ್ಚಿಹೋಗಿವೆ. ಜಂಗಮರಿಗೆ ಕೊಡಲ್ಪಟ್ಟಿದ್ದ ಗ್ರಾಮ, ಭೂಮಿ ಮಠಮಾನ್ಯಗಳು ಹಾಳಾಗಿರುವವು. ಎಲ್ಲೆಲ್ಲಿಯೂ, ಧರ್ಮ, ನೀತಿ ಸದಾ

ಚಾರಗಳು ನಾಶವಾಗಿ ಅಧರ್ಮ, ಅನೀತಿ, ಅನಾಚಾರ, ಕಳವು, ಮೋಸ, ಡಂಭ ಮೊದಲಾದ ದುರ್ಗುಣಗಳು ಆವರಿಸಿಕೊಂಡಿರುವವು. ಆದ ಕಾರಣ ಶಿವಾನುಭವಿಗಳು ಹೊರಗೆ ಬಾರದೆ ಗುಪ್ತವಾಗಿರುವರು. ಅಲ್ಲಲ್ಲಿ ಇದ್ದ ಶಿವಭಕ್ತಿ ಸಂಪನ್ನರಾದ ಕೆಲವರು ತಮ್ಮ ವೇಷಗಳನ್ನು ಬದಲಿಸಿ ಬೇರೆ ವೇಷಭೂಷಣಗ ಳನ್ನು ಧರಿಸಿ ಕಾಲಯಾಪನೆ ಮಾಡುತ್ತಿರುವರು. ಬೇರೆ ಕೆಲವರು ಭೂಲೋಕದ ವ್ಯಾಪಾರವನ್ನೇ ಮರೆತು ಪರವಶಭಾವದಿಂದ ಇರುವರು. ಹೀಗೆ ಅಲ್ಲಲ್ಲಿಗೆ ವಿರಳವಾಗಿರುವ ಶಿವಭಕ್ತರೂ ಸಹ ಗುಪ್ತರಾಗಿದ್ದುಕೊಂಡು ಶಿವ ಮಹಿಮೆ ಯನ್ನು ಪ್ರತ್ಯಕ್ಷ ಪ್ರಮಾಣಗಳಿಂದ ಲೋಕಕ್ಕೆ ತೋರ್ಪಡಿಸದೆ ಇರುವವರಿಂದ ಅಜ್ಞಾನಿಗಳಾದ ಮೂಢ ಜನರಿಗೆ ನಂಬಿಗೆ ಹುಟ್ಟದೆ, ಗುರುಲಿಂಗ ಜಂಗ ಮದ ಮಹಿಮೆಯೂ, ಜ್ಞಾನವೂ, ಭಕ್ತಿಯೂ ಕಡಿಮೆಯಾಗಿರುವವು. ಇವು ಗಳನ್ನೆಲ್ಲ ಲೋಕದಲ್ಲಿ ಸ್ಥಾಪಿಸಿ ಗುಪ್ತವಾಗಿ ಅಡಗಿಕೊಂಡಿರುವ ಭಕ್ತರನ್ನೆಲ್ಲ ಧನ್ಯರನ್ನಾಗಿ ಮಾಡುವದಕ್ಕಾಗಿ ಹೇ ಪರಶಿವನೇ, ನೀನು ಕೃಪೆಮಾಡಿ ಭೂಲೋಕದಲ್ಲಿ ಅವತಾರ ಮಾಡಿ ಭಕ್ತಿ, ಜ್ಞಾನಗಳ ಪ್ರಭಾವವನ್ನು ಪ್ರಚಾರ ಮಾಡಬೇಕೆಂದು ಬಿನ್ನೈಸಲಾಗಿ ಪರಶಿವನು ಪರಮ ಹರುಷವನ್ನು ಹೊಂದಿ ಎಲೈ ನಾರದನೇ, ನನಗೂ, ಈ ನಂದೀಶ್ವರನಿಗೂ ಏನೂ ಭೇದವಿಲ್ಲ. ನನ್ನ ಸ್ವರೂಪನಾದ ಈತನನ್ನು ಭೂಲೋಕಕ್ಕೆ ಕಳುಹಿಸಿ ಕೊಡುತ್ತೇನೆ. ಈ ನಂದೀ ಶ್ವರನು ಭೂಲೋಕದಲ್ಲಿ ಭಕ್ತಿ, ಜ್ಞಾನ, ಶಿವಾಚಾರಗಳನ್ನು ಪ್ರತಿಷ್ಠಾಪಿಸಿ ಸಕಲ ಸದ್ಧರ್ಮ ನೀತಿಗಳನ್ನು ಕಾಪಾಡುವನು. ದ್ವಿತೀಯ ಶಂಭುವಾದ ಈತನಿಂದ ಲೋಕವೆಲ್ಲ ಸಂತುಷ್ಟವಾಗುವದು. ಎಂದು ನುಡಿಯಲು ಪಾರ್ವ ತಿಯು ಎಲೈ-ಸ್ವಾಮಿಯೇ, ಈ ನಂದೀಶ್ವರನು ತಮಗೆ ಅಭಿನ್ನನೆಂದು ತಿಳಿಸಿ ದಿರಲ್ಲ ! ಈ ಮಾತು ಹೇಗೆಂಬುದನ್ನು ಅಪ್ಪಣೆ ಕೊಡಿಸಬೇಕೆಂದು ವಿಜ್ಞಾಪಿ ಸಲು ಶಂಕರನು— ಎಲೈ, ಪಾರ್ವತಿಯೇ, ನಾನು ಭಕ್ತದೇಹಿಯೆನ್ನಿಸಿಕೊಳ್ಳು ವದು ನಿಜವಿದ್ದಾಗ್ಯೂ ಇದರಲ್ಲಿ ಒಂದು ವಿಶೇಷವಿದೆ. ಅದೇನೆಂದರೆ— ಪೂರ್ವದಲ್ಲಿ ಶಿಲಾದನೆಂಬ ಋಷಿಯು ಶ್ರೀಶೈಲ ಪರ್ವತದಲ್ಲಿ ನನ್ನನ್ನು ಕುರಿತು ತಪಸ್ಸು ಮಾಡುತ್ತ ಗಡ್ಡೆ, ಗೆಣಸು, ತರಗೆಲೆ, ನೀರು, ಗಾಳಿಗಳನ್ನು ಆಹಾರ ಮಾಡಿಕೊಂಡು ಎಷ್ಟೋ ವರ್ಷಗಳ ವರೆಗೆ ದಿವ್ಯ ತಪಸ್ಸು ಮಾಡಿದನು. ಆ ಮೇಲೆ ಪ್ರತಿದಿವಸ ಸಾಸಿವೆ ಕಾಳಿನ ಅಳತೆಯ ಕಲ್ಲುಗಳನ್ನು ತಿಂದು ಸಹ

ಸ್ರಾರು ವರ್ಷ ತಪಸ್ಸನ್ನಾಚರಿಸಿದನು. ಬಳಿಕ ನಾನು ಸಂತುಷ್ಟನಾಗಿ ಆತನ ತಪಶ್ಯಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ನಿನ್ನ ಅಪೇಕ್ಷೆಯೇನೆಂದು ಕೇಳಲು ಆ ಮುನಿಯು ನನ್ನ ಪಾದಗಳಿಗೆ ನಮುಸ್ಕರಿಸಿ ಶಿವಭಕ್ತಿ ಸಂಪನ್ನನೂ, ಶಿವಮು ತೋದ್ಧಾರಕನೂ, ಆಗಿರುವ ನಿನ್ನಂತಹ ಪುತ್ರನನ್ನು ದಯಪಾಲಿಸಬೇಕು. ಆದರೆ ಆ ಮಗನು ಬೇಕಾದಷ್ಟು ಸದ್ಗುಣ ಸಂಪನ್ನನಾಗಿದ್ದರೂ ನಿನ್ನ ಪಾದ ಭಕ್ತಿಯಿರದಿದ್ದರೆ ಆತನು ನನಗೆ ಶತ್ರುವು. ಅಂಥವನನ್ನು ನಾನು ಕೊಂದು ಬಿಡುವೆನು. ಆದ್ದರಿಂದ ಶಿವಭಕ್ತಿ, ಸದ್ಗುಣ ಸಂಪನ್ನನಾದ ಸುತನನ್ನು ಕರು ಣಿಸಬೇಕು ಎಂದು ಬೇಡಿಕೊಳ್ಳಲು ಅದಕ್ಕೆ ನಾನು ಮೆಚ್ಚಿ ಎಲ್ಲ ವಿಷಯದ ಲ್ಲಿಯೂ ನನಗೆ ಅಭಿನ್ನನಾಗಿರುವ ವೃಷಭೇಶ್ವರನನ್ನು ಪ್ರೀತಿಯಿಂದ ಕರೆದು- ಎಲೈ ನನ್ನ ಪ್ರಾಣ ಸ್ವರೂಪನೇ, ನೀನು ನಂದೀಶ್ವರನೆಂಬ ಹೆಸರಿನಿಂದ ಈ ಶಿಲಾದ ಋಷಿಗೆ ಪುತ್ರನಾಗಿ ಅವತರಿಸು ಎಂಬುದಾಗಿ ಅಪ್ಪಣೆ ಮಾಡಲು ವೃಷಭೇಶ್ವರನು ನನ್ನ ಅಪ್ಪಣೆಯನ್ನು ಶಿರಸಾವಹಿಸಿ ನನ್ನ ಪಾದಗಳಿಗೆ ನಮು ಸ್ಕರಿಸಿ ಯೋನಿಮಾರ್ಗದಿಂದ ಜನಿಸದೆ ಶಿಲಾದ ಮುನಿಗೆ ಪುತ್ರನಾಗಿ ಅವತ ರಿಸಿ ಷಡಕ್ಷರ ಮಂತ್ರವೇ ತಾಯಿ, ಮಹೇಶ್ವರನೇ ತಂದೆ, ಶಿವಭಕ್ತಿಯೇ ಸಹೋದರಿ, ಪರಶಿವಪಾದ ಧ್ಯಾನವೇ ಬೆಣ್ಣೆ, ಶಿವಜ್ಞಾನವೇ ಹಾಲು, ಉಪ ನಿಷದ್ ವಾಕ್ಯವೇ ತೊದಲು ಮಾತು, ಶಿವಾಚಾರವೇ ಬಾಲ ಲೀಲೆಯಾಗಿ ಬೆಳವಣಿಗೆ ಹೊಂದಿದನು. ಆ ಪುತ್ರನ ಶಿವಭಕ್ತಿ ಸಂಪತ್ತನ್ನು ನೋಡಿ ತಂದೆಯು ಸಂತೋಷಭರಿತನಾಗಿದ್ದನು. ನಂತರ ನಂದೀಶ್ವರನು ತಪಸ್ಸನ್ನಾ ಚರಿಸಬೇಕೆಂಬ ಅಪೇಕ್ಷೆಯುಳ್ಳವನಾಗಿ ಮಳೆಗಾಲದಲ್ಲಿ ಆಲದ ಮರದ ಕೆಳಗೂ, ಚಳಿಗಾಲದಲ್ಲಿ ಹೊಳೆಯ ದಂಡೆಯಲ್ಲಿಯೂ, ಬೇಸಿಗೆಯಲ್ಲಿ ತನ್ನ ಸುತ್ತಲೂ ನಾಲ್ಕೂ ಕಡೆಗೆ ಅಗ್ನಿಯನ್ನು ಹಾಕಿಕೊಂಡು ಮೇಲೆ ಸೂರ್ಯನನ್ನು ನೋಡುತ್ತ ಪಂಚಾಗ್ನಿ ಮಧ್ಯದಲ್ಲಿಯೂ ನಿಂತು ಉಗ್ರತಪಸ್ಸು ಮಾಡಲು ಆ ತಪೋಜ್ವಾಲೆಯು ಮೂರು ಲೋಕಗಳನ್ನೂ ವ್ಯಾಪಿಸಿತು. ವಿಷ್ಣು, ಬ್ರಹ್ಮ ಇಂದ್ರಾದಿಗಳು ತಮ್ಮ ಪದವಿಯನ್ನು ಅಪೇಕ್ಷಿಸಿ ಯಾರು ತಪಸ್ಸು ಮಾಡುತ್ತಿ ರುವರೋ ಎಂದು ಆತನ ತಪಸ್ಸಿಗೆ ಹೆದರಿ ನಾನಿದ್ದ ಬಳಿಗೆ ಬಂದು ನಮುಸ್ಕ ರಿಸಿ ಕೈಂಕರ್ಯದಿಂದ ನಿಂತು ನಾನಾವಿಧವಾಗಿ ಸ್ತೋತ್ರ ಮಾಡುತ್ತಿರುವ ಅವರನ್ನು ಕಂಡು ಆ ನಂದೀಶ್ವರನ ತಪಸ್ಸಿಗಾಗಿ ನೀವು ಭಯಪಡಬೇಡಿರಿ.

ಆ ಪರಮ ಪುರುಷನು ನಿಮ್ಮ ಐಶ್ವರ್ಯವನ್ನು ಮನಸ್ಸಿನಲ್ಲಿಯೂ ನೆನೆಯುವ ವನಲ್ಲ. ಆತನ ಮಹಿಮೆ ಅಗಾಧವಾದುದು. ನನ್ನ ಭಾಗ್ಯಕ್ಕೂ ಸಹ ಮನಸ್ಸು ಮಾಡದ ಪ್ರಾಣಸ್ವರೂಪನಾದ ಆ ನಂದೀಶ್ವರನು ನಿಮ್ಮ ಪದವಿಗಳನ್ನು ಎಂದೂ ಅಪೇಕ್ಷಿಸಲಾರನು. ಆದ್ದರಿಂದ ನೀವು ನಿರ್ಭಯರಾಗಿರಿ ಎಂದು ಅವರಿಗೆ ಅಭಯವನ್ನು ಕೊಟ್ಟೆನು. ಆದಾಗ್ಯೂ ಅವರ ಸಂಶಯ ನಿವಾರಣೆಯಾಗದಿರಲು ಅವರನ್ನು ನನ್ನ ಸಂಗಡ ಕರೆದುಕೊಂಡು ತಪಸ್ಸು ಮಾಡುತ್ತಿದ್ದ ನಂದೀಶ್ವರನ ಬಳಿಗೆ ಬಂದು ಪ್ರತ್ಯಕ್ಷವಾಗಿ ನಿಂತಿರಲು ನಂದಿನಾಥನು ಕಣ್ತೆರೆದು ನೋಡಿ ಅಂತರಂಗದಲ್ಲಿ ಧ್ಯಾನಿಸುತ್ತಿದ್ದ ಮೂರ್ತಿಯನ್ನೇ ಬಹಿರಂಗದಲ್ಲಿಯೂ ಕಂಡು ಹರ್ಷಗೊಂಡು ನಮಸ್ಕರಿಸಿ ಸ್ತುತಿಸಲು ನಾನು— ಎಲೈ, ಮಗನೇ, ನಿನ್ನ ಶ್ರೇಷ್ಠ ತಪಸ್ಸಿಗೆ ನಾನು ಮೆಚ್ಚಿದ್ದೇನೆ. ನಿನ್ನ ಇಷ್ಟಾರ್ಥವೇನು ? ದಯಪಾಲಿಸುವೆನು ಎಂದು ನುಡಿಯಲು ಪರಮ ವೈರಾಗ್ಯ ಮೂರ್ತಿಯಾದ ನಂದೀಶ್ವರನು ಮುಗುಳು ನಗೆನಗುತ್ತ ಎಲೈ—ಶಂಕರನೇ, ಕ್ಷೀರಸಮುದ್ರದಲ್ಲಿ ಕ್ರೀಡೆ ಮಾಡುತ್ತಿರುವ ಹಂಸಪಕ್ಷಿಯು ಸಣ್ಣ ಹಳ್ಳವನ್ನು ಆಸೆ ಮಾಡುವದೇ ಇಲ್ಲ. ಅದರಂತೆ ನಿನ್ನ ಪಾದ ಸೇವೆಯೆಂಬ ಅತ್ಯಂತ ಐಶ್ವರ್ಯದಿಂದ ಬದುಕುತ್ತಿರುವ ನನಗೆ ಬೇರೆ ಅಪೇಕ್ಷೆಗಳಿರುವವೇ ? ಎಲೈ— ಕೃಪಾನಿಧಿಯೇ, ನಿನ್ನ ಪಾದಕಮಲದ ಭಕ್ತಿಯು ಮಾತ್ರ ಯಾವಾಗಲೂ ನನಗೆ ಸ್ಥಿರವಾಗಿರಲಿ. ಉಳಿದ ನಶ್ವರವಾದ ಭೋಗಗಳು ನನಗೆ ಬೇಡ ಎಂದು ವಿಷ್ಣು, ಬ್ರಹ್ಮ, ಇಂದ್ರಾದಿಗಳ ಮನಸ್ಸಿನ ಸಂಶಯವು ನಿವಾರಣೆಯಾಗುವ ಹಾಗೆ ಬಿನ್ನವಿಸಲು ನಾನು ಆ ನಂದೀಶ್ವರನನ್ನು ತಬ್ಬಿ ಮುದ್ದಾಡಿ ಆತನಿಗೆ ಪ್ರಮಥಪತಿ ಪಟ್ಟವನ್ನು ಕಟ್ಟಿ ಸರ್ವಜ್ಞತ್ವ ಶಕ್ತಿಯನ್ನೂ, ಸ್ಥಿರವಾದ ಸದ್ಭಕ್ತಿಯನ್ನೂ ಅನುಗ್ರಹಿಸಿ. "ಎಂದೆಂದಿಗೂ ನೀನು ನನಗೆ ವಾಹನವಾಗಿರು" ಎಂಬುದಾಗಿ ಅಪ್ಪಣೆ ಮಾಡಿ ಸರ್ವರನ್ನೂ ಕೂಡಿಕೊಂಡು ಕೈಲಾಸಕ್ಕೆ ಮರಳಿ ಬಂದೆನು. ಅಂದಿನಿಂದಲೂ ಆ ಶ್ರೀಶೈಲ ಕ್ಷೇತ್ರದಲ್ಲಿ ನಂದೀಶ್ವರನು ತಪಸ್ಸು ಮಾಡಿದ ಸ್ಥಾನವು ನಂದಿಮಂಡಲವೆಂಬ ಹೆಸರಿನಿಂದ ಪ್ರಸಿದ್ಧವಾಗಿ ಆಶ್ರಿತರಿಗೆ ಮುಕ್ತಿದಾಯಕವಾಗಿರುವದು. ಎಂದು ಪರಶಿವನು ನುಡಿಯಲು ನಾರದಋಷಿಯು ಉತ್ಸಾಹಭರಿತನಾಗಿ ಸ್ತುತಿಸುತ್ತಿರಲು ಪಾರ್ವತಿಯು ಪರಮಾಶ್ಚರ್ಯಪಟ್ಟು ಸಂತೋಷಭರಿತಳಾಗಿ ಮುಂದೆಯೇ ನಿಂತಿದ್ದ

ನಂದೀಶ್ವರನನ್ನು ನೋಡಿ ಪರಮೇಶ್ವರನನ್ನು ಕುರಿತು– ಎಲೈ ಪರಶಿವನೇ, ನಂದೀಶ್ವರನಿಗೂ ತಮಗೂ ಭೇದವಿಲ್ಲವೆಂಬುದು ಸತ್ಯವಾಗಿರದಿದ್ದರೆ ಈತನಿಗೆ ಈ ರೂಪ, ಈ ಭಕ್ತಿ, ಈ ಪವಿತ್ರಶರೀರ, ಸೌಂದರ್ಯ, ಶಾಂತಿ, ಸದ್ಗುಣಗಳು, ನಿಪುಣತ್ವವು ದೊರೆಕೊಳ್ಳುತ್ತಿದ್ದುವೇ ? ಎಂದು ಹೇಳಲು ಪರಶಿವನು ಸಂತುಷ್ಟನಾಗಿ ತಾನು ಹೇಳಿದ ಚರಿತ್ರೆಯನ್ನು ಕೇಳಿ ಭಯಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿದ ನಂದಿನಾಥನನ್ನು ಕೃಪಾದೃಷ್ಟಿಯಿಂದ ನೋಡಿ ಎಲೈ-ನಂದೀಶ್ವರನೇ, ನೀನು ಭೂಲೋಕದಲ್ಲಿ ಭಕ್ತಹಿತಾರ್ಥವಾಗಿ ಬಸವೇಶ್ವರನೆಂಬ ಹೆಸರಿನಿಂದ ಅವತರಿಸಿ ಸದ್ಭಕ್ತಿ, ಸುಜ್ಞಾನ, ಸದ್ಧರ್ಮ, ಸದಾಚಾರ, ಸದ್ಗುಣಗಳನ್ನು ಪ್ರಚಾರಗೊಳಿಸಿ, ಭೂಲೋಕದಲ್ಲೆಲ್ಲ ನನ್ನ ಮಹಿಮೆಯನ್ನು ಮೆರೆಯಿಸು ಎಂದು ನಿರೂಪಿಸಲು ನಂದಿನಾಥನು ಆ ಆಜ್ಞೆಯನ್ನು ಮಹಾ ಪ್ರಸಾದವೆಂದು ಶಿರಸಾವಹಿಸಿ ಪರಶಿವನನ್ನು ಕುರಿತು ಭೋಸ್ವಾಮಿಯೇ, ಸಮಸ್ತ ಪ್ರಪಂಚಕ್ಕೆ ಅಧಿಪತಿಯಾಗಿರುವ ನಿನಗೆ ಈ ಲೋಕ, ಆ ಲೋಕ ಎಂಬ ಭೇದವಿಲ್ಲ. ಆದ್ದರಿಂದ ಭೂಲೋಕದಲ್ಲಿ ನಿನ್ನ ಭಕ್ತಿಯು ಪ್ರಸಾರವಾಗುವಂತೆ ಮಾಡುವ ಕಾರ್ಯವು ನಿನ್ನದೇ ಆಗಿರುವದಿಲ್ಲವೇ ? ಎಂದು ವಿನಯದಿಂದ ಅರಿಕೆಮಾಡಿಕೊಳ್ಳಲು ಇಂದುಧರನು ಎಲೈ ನಂದಿನಾಥನೇ ನಾನು ಭೂಲೋಕದಲ್ಲಿ ನಿನಗೆ ಗುರುವಾಗಿ ಬಂದು ಚಿತ್ ಸುಖವನ್ನು ಅನುಗ್ರಹಿಸುವೆನು. ಇಷ್ಟಲಿಂಗವಾಗಿ ನಿನ್ನ ತನುಕರುಣಾದಿಗಳಲ್ಲೆಲ್ಲ ವ್ಯಾಪಿಸಿ ಭೋಗಿಸುವೆನು. ಜಂಗಮಸ್ವರೂಪನಾಗಿ ಬಂದು ಪ್ರಸಾದವನ್ನು ದಯಪಾಲಿಸುವೆನು. ಮತ್ತು ನನ್ನ ಪ್ರಾಣ ಸ್ವರೂಪರಾದ ಪ್ರಮಥ ಗಣಾಧೀಶ್ವರರನ್ನು ನಿನ್ನ ಸಂಗಡ ಕಳುಹಿಸಿಕೊಡುವೆನು ಎಂದು ಹೇಳಲು ನಂದೀಶ್ವರನು ಪರಶಿವನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಆತನ ಅಪ್ಪಣೆಯನ್ನು ಪಡೆದುಕೊಂಡು ಪ್ರಮಥಗಣ ಸಮೇತನಾಗಿ ಹೊರಟು ಮಧ್ಯಮಾರ್ಗದಲ್ಲಿ ಇಂದ್ರಾದಿದೇವತೆಗಳಿಂದ ಸತ್ಕಾರಹೊಂದಿ ಭೂಲೋಕಕ್ಕೆ ಬರುತ್ತಾ ಇದ್ದನು.

## ಬಸವೇಶ್ವರ ಅವತಾರವು

ಇತ್ತ ಜಂಬೂದ್ವೀಪದಲ್ಲಿ ಅತ್ಯಂತ ಪುಣ್ಯ ಭೂಮಿಯೆಂದು ಪ್ರಸಿದ್ಧವಾದ, ಮುಕ್ತಿದಾಯಕವಾದ, ತಪಸ್ವಿಗಳಿಗೆ ಆಶ್ರಯಸ್ಥಾನವಾಗಿರುವ

ಕರ್ನಾಟಕ ದೇಶವು ಶ್ರೀಶೈಲ ಪರ್ವತದ ಪಶ್ಚಿಮ ದಿಗ್ಭಾಗದಲ್ಲಿದ್ದು ಆ ದೇಶವು ಅನೇಕ ನದಿಗಳಿಂದಲೂ, ಕಾಲುವೆಗಳಿಂದಲೂ, ಫಲಭರಿತವಾದ ಹೊಲಗದ್ದೆ ತೋಟಗಳಿಂದಲೂ, ಕೆರೆ, ಕೊಳ, ಅರವಟ್ಟಿಗೆ, ಛತ್ರ, ದೇವಾಲಯಗಳಿಂದಲೂ ಶೋಭಿಸುತ್ತಿತ್ತು. ಆ ದೇಶದಲ್ಲಿ ಬಾಗೇವಾಡಿ ಎಂಬ ಒಂದು ದೊಡ್ಡ ಪಟ್ಟಣವು ಅತ್ಯುನ್ನತವಾದ ಕೋಟೆಗಳಿಂದಲೂ, ಆಕಾಶವನ್ನು ಮುಟ್ಟುತ್ತಿರುವ ಧ್ವಜಪಟಗಳಿಂದಲೂ, ಸುಂದರವಾದ ಉಪ್ಪರಿಗೆಗಳಿಂದಲೂ, ಮಂಗಲಕರವಾದ ಶಿವಮಂದಿರ ಗುಡಿ-ಗೋಪುರಗಳಿಂದಲೂ ಮನೋಹರವಾಗಿರುವದು. ಆ ಪಟ್ಟಣದಲ್ಲಿ ಸತ್ಕುಲ ಪ್ರಸೂತನೂ, ಶಿವಭಕ್ತಿ ಸಂಪನ್ನನೂ, ಸಕಲವಿದ್ಯಾ ವಿಶಾರದನೂ, ಸದ್ಗುಣ ಭರಿತನೂ, ಕೀರ್ತಿವಂತನೂ ಆದ ಮಾದರಸನೆಂಬ ಒಬ್ಬ ಶೈವ ಬ್ರಾಹ್ಮಣನಿದ್ದನು. ಆತನಿಗೆ ಪತಿವ್ರತಾಶಿರೋಮಣಿಯೂ, ಸೌಂದರ್ಯವತಿಯೂ, ಸದ್ಗುಣ ಸಂಪನ್ನೆಯೂ ಶಿವಧ್ಯಾನಾಸಕ್ತಳೂ, ಆದ ಮಾದಲಾಂಬಿಕೆ ಎಂಬ ಧರ್ಮಪತ್ನಿ ಇದ್ದಳು. ಈ ದಂಪತಿಗಳು ಯಾವಾಗಲೂ ಶಿವಭಕ್ತರ ಪಾದಪೂಜೆಯನ್ನು ಪ್ರೀತಿಯಿಂದ ಮಾಡುತ್ತ, ಶಿವಪುರಾಣಗಳನ್ನು ಆದರದಿಂದ ಕೇಳುತ್ತ ಭಗವದ್ಭಕ್ತಿ ಸಂಪನ್ನರಾಗಿ ಸಂಸಾರ ಸಾಗಿಸುತ್ತಿದ್ದರು. ಹೀಗಿರಲು ಒಂದು ದಿವಸ ಮೃಕಂಡು ಮುನಿಯ ಮಗ ಮಾರ್ಕಂಡೇಯ ಹಾಗು ಶಿಲಾದ ಋಷಿಯ ಪುತ್ರ ನಂದೀಶ್ವರರ ಚರಿತ್ರೆಗಳನ್ನು ಕೇಳಿ ತನಗೂ ಮಕ್ಕಳು ಇಲ್ಲದಿರುವದನ್ನು ನೆನೆದು ನೊಂದು ಬಹಳ ಚಿಂತಾಕ್ರಾಂತಳಾಗಿ ತನ್ನ ಪ್ರಾಣಕಾಂತನಾದ ಮಾದರಸನನ್ನು ಕುರಿತು— ಕಮಲವು ಬೆಳೆಯದೆ ಇರುವ ಕೊಳವೂ, ಗಿಳಿಯ ಮರಿಗಳು ವಾಸ ಮಾಡದೆ ಇರುವ ಮಾವಿನ ಮರವೂ, ಭ್ರಮರಗಳಿಲ್ಲದ ಸರೋವರವೂ, ಗರ್ಭವನ್ನು ಧರಿಸದೆ ಇರುವ ಸ್ತ್ರೀಯೂ ನಿರುಪಯುಕ್ತವಾದವುಗಳು. ರತ್ನವಿಲ್ಲದಿರುವ ಒಡ್ಯಾಣವೂ, ಸೂರ್ಯನಿಲ್ಲದಿರುವ ಆಕಾಶವೂ, ಹಂಸ ಪಕ್ಷಿಗಳು ಸಂಚರಿಸದಿರುವ ಪುಳಿನ ಪ್ರದೇಶವೂ, ಸದ್ಗುಣವಿಲ್ಲದ ಸಂಪತ್ತೂ, ಕುಣಿದಾಡುವ ಮಕ್ಕಳಿಲ್ಲದ ಮನೆಯೂ ಅಮಂಗಲಕರವಾದವುಗಳು. ಕೆಂಪು ಕಮಲದಲ್ಲಿ ಸೆರೆಸಿಕ್ಕ ಭ್ರಮರದಂತೆ ಚಿಸುಗುಟ್ಟುತ್ತ ಕಮಲವನ್ನು ಬಿರಿದು ಬರುವ ಹಾಗೆ ಸೂಸುವ ನಸುನಗೆಯನ್ನೂ, ತಪ್ಪು ಹೆಜ್ಜೆಗಳಿಂದ ದಟ್ಟಡಿಯಿಡುವ ಪುಟ್ಟಹಕ್ಕಿಯನ್ನೂ, ತೊದಲು ನುಡಿಗಳನ್ನು ಮಾತಾ

ಡುವ ಮಗುವನ್ನೂ ನಾನು ಎಂದು ಕಾಣುವೆನೋ? ಅಯ್ಯೋ! ಬಹಳ ಮಾತಾಡುವದರಿಂದ ಪ್ರಯೋಜನವೇನು? ಚೆಲುವಾದ ಮುದ್ದುಮಗುವನ್ನು ತಬ್ಬಿ ಮುದ್ದಾಡಿ, ಅಪ್ಪಿಕೊಳ್ಳದಿರುವ ಸ್ತ್ರೀಯಳ ತೋಳುಗಳು ಬೇಕಾದಷ್ಟು ಕೋಮಲವಾಗಿದ್ದರೂ ಅವು ಬಂಜೆ ತೋಳುಗಳು. ಅಂತಹ ಕಂದನನ್ನು ನೋಡಿ ತಣಿಯದಿರುವ ಹೆಂಗಸಿನ ಕಣ್ಣುಗಳು ಕಮಲದ ಎಸಳಿನಂತಿದ್ದರೂ ಅವು ನಿರರ್ಥಕವಾದವುಗಳು. ಅಂತಹ ಸುಕುಮಾರನನ್ನು ಮಲಗಿಸಿ ಜೋಗು ಳವನ್ನು ಹಾಡದ ಹೆಣ್ಣಿನ ಮುಖವು ಬೇಕಾದಷ್ಟು ಸುಂದರವಾಗಿದ್ದರೂ ಅದು ಇಲಿ, ಹೆಗ್ಗಣಗಳ ಬಿಲದಬಾಯಿ ಆಗುವದು ಎಂದು ಮಕ್ಕಳ ಅಪೇಕ್ಷೆಯಿಂದ ನಾನಾವಿಧವಾಗಿ ಹಲುಬಿ ದುಃಖಾಲಾಪಗಳನ್ನು ಮಾಡುತ್ತಿರುವ ಪತ್ನಿಯ ಕಂದಿದ ಮುಖವನ್ನು ಮಾದರಸನು ನೋಡಿ ತಾನೂ ವ್ಯಥಿತನಾಗಿ ಎಲೈ— ಕಮಲಮುಖಿಯೇ, ಮಗನ ಮುಖವನ್ನು ನೋಡಿ ನಕ್ಕುನಗಿಸಿ ಅಕ್ಕರತೆ ಯಿಂದ ತಬ್ಬಿ ಮುದ್ದಾಡಿ ಗದ್ದವನ್ನು ಹಿಡಿದು ಅಲುಗಾಡಿಸಿ ಅನುರಾಗದಿಂದ ಎತ್ತಿ ಮುದ್ದಿಸುತ್ತ ಬಾರಿಬಾರಿಗೂ ತೊದಲು ಮಾತುಗಳನ್ನು ಕೇಳುವ ಪುಣ್ಯವು ಪಡೆಯದೇ ಬರುವದೇ? ಈ ನಮ್ಮ ಸಂಪತ್ತು ಧನ, ಯೌವ್ವನ, ಸೌಂದರ್ಯ, ವಿದ್ಯಾ ಬುದ್ಧಿಗಳು ಸಹ ಮಗನನ್ನು ಪಡೆಯದಿರುವದರಿಂದ ನಿಷ್ಫಲವಾದವುಗಳಾಗಿವೆ. ಎಂದು ಹೇಳಿ ಇಬ್ಬರೂ ಪುತ್ರಾಪೇಕ್ಷೆಯಿಂದ ಚಿಂತಾಕ್ರಾಂತರಾಗಿ ಅನೇಕ ವ್ರತ, ನಿಯಮಗಳನ್ನು ಮಾಡಿದಾಗ್ಯೂ ಅವು ಗಳಿಂದ ಮನೋರಥವು ಸಿದ್ಧಿಯಾಗದಿರಲು, ಧರ್ಮಶಾಸ್ತ್ರಗಳನ್ನು ಅರಿತ ವರೂ ವಯೋವೃದ್ಧರೂ ಆದ ಹಿರಿಯರಲ್ಲಿ ಪ್ರಾರ್ಥಿಸಲು ಅವರು ನಂದೀಶ್ವ ರನ ವ್ರತದಿಂದ ನಿಶ್ಚಯವಾಗಿ ಸಂತಾನ ಲಾಭವಾಗುವದೆಂದು ನುಡಿಯಲು ಅವರ ಹೇಳಿಕೆಯ ಪ್ರಕಾರ ನಂದೀಶ್ವರನ ವ್ರತವನ್ನು ನಂಬಿಗೆಯಿಂದ ಮಾಡ ಬೇಕೆಂದು ನಿರ್ಧರಿಸಿ ಶುಚಿರ್ಭೂರ್ತರಾಗಿ ಮಡಿ, ಪಟ್ಟೆ, ಪೀತಾಂಬರಗಳನ್ನೂ ದಿವ್ಯಾಭರಣಗಳನ್ನೂ ಧರಿಸಿ ಆಪೂರ ಮುಂಭಾಗದಲ್ಲಿರುವ ಶಿವದೇವಾಲಯಕ್ಕೆ ವಾದ್ಯ ಮೇಳದೊಂದಿಗೆ ವೈಭವದಿಂದ ಬಂದು ನಂದೀಶ್ವರನನ್ನು ಕಂಡು ದೀರ್ಘದಂಡ ನಮಸ್ಕಾರವನ್ನು ಮಾಡಿ ಸ್ತೋತ್ರಮಾಡಿ ಸೋಮವಾರದಿಂದ ಒಂಭತ್ತು ದಿನಗಳ ವರೆಗೆ ಉತ್ಸವ ಪೂರ್ಣವಾಗಿ ವ್ರತವನ್ನು ಆಚರಿಸಿ ಮರುದಿವಸ ಪ್ರಾತಃಕಾಲದಲ್ಲೆದ್ದು ಶುಚಿರ್ಭೂತನಾಗಿ ಪತ್ನೀಸಮೇತನಾಗಿ

ವೃಷಭೇಶ್ವರನಿಗೆ ಹಾಲು, ಮೊಸರು, ತುಪ್ಪ, ಜೇನುತುಪ್ಪ ಮೊದಲಾದವು ಗಳಿಂದಲೂ, ನಾನಾವಿಧ ಪರಿಮಳ ದ್ರವ್ಯಗಳಿಂದಲೂ, ನಿರ್ಮಲೋದಕ ದಿಂದಲೂ, ಅಭಿಷೇಕಮಾಡಿ ಸುಶೋಭಿತ, ಶುಭ್ರವಾದ ಗಂಧ, ಅಕ್ಷತೆಗ ಳಿಂದಲೂ, ಬಿಲ್ವಪತ್ರಿ. ದವನ, ಮರುಗಗಳಿಂದಲೂ, ಸುಗಂಧ ಪೂರ್ಣವಾದ ಕೆಂಪು, ಬಿಳಿಯ ಕಮಲ, ಬಕುಲ, ಸಂಪಿಗೆ, ಕಣಗಿಲ, ಮಲ್ಲಿಗೆ, ಗುಲಾಬಿ, ಮೊದಲಾದ ಪುಷ್ಪಗಳಿಂದಲೂ, ಪರಿಶುದ್ಧವಾದ ನಯನಮನೋಹರವಾದ ರೇಶಿಮೆಯ ವಸ್ತ್ರಭೂಷಣಗಳಿಂದಲೂ, ಸಾರತರವಾದ ದಶಾಂಗ, ಧೂಪ ಗಳಿಂದಲೂ, ಘನತರವಾದ ದೀಪಗಳಿಂದಲೂ, ಅರ್ಚಿಸಿ ಶುಚಿಯಾದ, ರುಚಿ ಯಾದ ಸುಗಂಧ ಪೂರ್ಣ ಹಾಲು, ತುಪ್ಪಗಳಿಂದ ಸಿದ್ಧಪಡಿಸಿದ ನಾನಾವಿಧ ಭೋಜ್ಯಪದಾರ್ಥಗಳನ್ನೂ, ಪ್ರಸಿದ್ಧವಾದ ಹಲಸು, ಮಾವು, ಬಾಳೆ, ಮೊದ ಲಾದ ರಸಭರಿತವಾದ ಫಲಸಮುದಾಯಗಳನ್ನೂ, ರಸಕರ್ಪೂರ ಸಹಿತವಾದ ಮಧುರ ತಾಂಬೂಲವನ್ನೂ ಸಮರ್ಪಿಸಿ, ರತ್ನಖಚಿತವಾದ ಬಹುಮೂಲ್ಯದಾ ಭರಣಗಳಿಂದ ಅಲಂಕರಿಸಿ, ಅನೇಕ ವಿಧವಾದ ವಾದ್ಯಗಳಿಂದಲೂ, ನರ್ತನ, ಕೀರ್ತನ, ವಿನೋದಗಳಿಂದಲೂ, ನವವಿಧವಾದ ಭಕ್ತಿ, ನವ್ಯತರವಾದ ಯುಕ್ತಿಯಿಂದಲೂ, ವಿವಿಧೋಪಚಾರಗಳಿಂದ ಉಪಚರಿಸಿ ಪುಷ್ಪಾಂಜಲಿಯ ನ್ನಿತ್ತು, ಭಯಭಕ್ತಿ ಭರಿತರಾಗಿ, ಶಿವಧರ್ಮ ರೂಪನೇ, ಶಿಷ್ಟಜನ ಪರಿಪಾಲ ಕನೇ, ಜಂಗಮವಿಲೋಲನೇ, ವೇದಾಗ ಮಗಳಿಗೆ ವೇದ್ಯನೇ, ನಂದಿಕೇಶ್ವ ರನೇ, ಎಂದು ಸ್ತೋತ್ರಮಾಡಿ, ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡಿ ಕೈಮುಗಿದು ನಿಂತುಕೊಂಡು— ಎಲೈ ದಯಾಸಮುದ್ರನಾದ ನಂದೀಶ್ವರನೇ, ಪಾಪಸಂಹಾರಕನೇ, ಘೋರಭವಾಂಧಕಾರ ಭಾಸ್ಕರನೇ, ಭಕ್ತಾಭೀಷ್ಟ ಪ್ರದಾಯಕನೇ, ಪ್ರಮಥ ಗಣಾಧಿಪನೇ, ನೀನು ಸಂತುಷ್ಟನಾಗಿ ನನಗೆ ನಿನ್ನಂಥ ಪುತ್ರನನ್ನು ದಯಪಾಲಿಸಿದರೆ ನಿನ್ನ ಹೆಸರನ್ನೇ ಆ ಕೂಸಿಗೆ ಇಡು ವೆನು ಎಂದು ನಾನಾಪರಿಯಿಂದ ಪ್ರಾರ್ಥಿಸಿಕೊಳ್ಳಲು ಅಲ್ಲಿ ಸೇರಿದ್ದ ಭಕ್ತಜನ ಸಮುದಾಯವೆಲ್ಲ ನೋಡುತ್ತಿರುವ ಹಾಗೆಯೇ ನಂದೀಶ್ವರನು ತನ್ನ ಬಲ ಕೊಂಬಿನ ಮೇಲಿದ್ದ ಪ್ರಸಾದ ಪುಷ್ಪವನ್ನು ಅನುಗ್ರಹಿಸಲು ಅದನ್ನು ಮಾದರ ಸನು ಅತ್ಯಂತ ಆನಂದದಿಂದ ಕೂಡಲೇ ತೆಗೆದುಕೊಂಡು ತನ್ನ ಪತ್ನಿಗೆ ಕೊಡಲು ಆಕೆಯು ಭಕ್ತಿಭಾವದಿಂದ ನಮಸ್ಕರಿಸಿ ಅದನ್ನು ತನ್ನ ಮುಡಿಯಲ್ಲಿ

ಧರಿಸಿಕೊಂಡಳು. ಆನಂತರ ದಂಪತಿಗಳೀರ್ವರೂ ವರವನ್ನು ಪಡೆದು ಸಂತೋಷಭರಿತರಾಗಿ ನಂದೀಶ್ವರನಿಗೆ ಪುನಃ ನಮಸ್ಕರಿಸಿ ಅಪ್ಪಣೆಯಂ ಪಡೆದು ಬೀಳ್ಕೊಂಡು ತಮ್ಮ ಅರಮನೆಗೆ ಬಂದು ಶಿವಗಣಂಗಳ ಪಾದಪೂಜೆ ಯನ್ನು ಮಾಡಿ ಅವರಿಂದ ತೀರ್ಥ ಪ್ರಸಾದವನ್ನು ಸ್ವೀಕರಿಸಿ, ಅವರನ್ನೂ ತೃಪ್ತಿಪಡಿಸಿ ಶಿವಕಥೆ, ಶಿವಪುರಾಣಗಳನ್ನು ಕೇಳುತ್ತ ನಂದೀಶ್ವರನನ್ನು ಧ್ಯಾನಿ ಸುತ್ತ ಸುಖವಾಗಿರುತ್ತಿರಲು ಇತ್ತ ನಂದೀಶ್ವರನು ತನ್ನ ಪಾದಸ್ಪರ್ಶದಿಂದ ಭೂಲೋಕವನ್ನು ಪರಿಶುದ್ಧಗೊಳಿಸುವದಕ್ಕೋಸ್ಕರವಾಗಿಯೂ, ಪರಮೇಶ್ವ ರನು ಕೊಟ್ಟಿದ್ದ ಅಪ್ಪಣೆಯ ಪ್ರಕಾರ ಮಹಾಕಾರ್ಯವನ್ನು ಮಾಡುವದಕ್ಕೂ, ಮಾದರಸನಿಗೆ ಕೊಟ್ಟಿದ್ದ ವರವನ್ನು ನೆರವೇರಿಸುವದಕ್ಕೂ, ಮಾದಲಾಂಬಿ ಕೆಯ ಪುಣ್ಯಮಯವಾದ ಗರ್ಭದಲ್ಲಿ ಪಿಂಡರೂಪನಾಗಿ ಪ್ರವೇಶಿಸಿದನು.

## ಬಸವೇಶ್ವರನ ಬಾಲ ಲೀಲೆಗಳು

ಆನಂತರ ಮಾದಲಾಂಬಿಕೆಯು ಗರ್ಭವನ್ನು ಧರಿಸಲಾಗಿ ಆಕೆಯ ಚಿಕ್ಕದಾಗಿದ್ದ ಉದರವು ದಪ್ಪವಾಯಿತು. ರೋಮರಾಜಿಯು ಕಪ್ಪೇರಿತು. ಮುಖವು ಬೆಳ್ಳಗಾಯಿತು. ಕುಚಗಳ ಮುಂಭಾಗವು ಕಪ್ಪಗಾಯಿತು. ತ್ರಿವ ಳಿಗಳು ಇಲ್ಲದಂತಾದವು. ಮಂದವಾದ ನಡಿಗೆಯು ಆರಂಭವಾಯಿತು. ಗರ್ಭ ದೊಳಗಿರುವ ನಂದೀಶ್ವರನ ದೇಹದ ಬಿಳಿಯ ಬಣ್ಣವು ಹೊರಗೆ ವ್ಯಾಪಿಸಿ ಕೊಂಡಿತೆಂಬಂತೆ ಆ ಮಾದಲಾಂಬಿಕೆಯ ದೇಹವೆಲ್ಲಾ ಬೆಳ್ಳಗಾಯಿತು. ಆ ತಾಯಿಯ ಮುಖವೆಂಬ ಚಂದ್ರನು ಜಡೆಯೆಂಬ ರಾಹುವಿಗೆ ಭಯಪಟ್ಟು ಅಮೃತವನ್ನು ಚಿನ್ನದ ಕಲಶಗಳಲ್ಲಿ ತುಂಬಿ ಬಾಯಿಗೆ ಅರಗಿನ ಮುದ್ರೆಯ ನ್ನೊತ್ತಿ ಇರಿಸಿದಂತೆ ಕಪ್ಪಾದ ತೊಟ್ಟಿನಿಂದ ಒಪ್ಪುವ ಹೊಂಬಣ್ಣದ ಸ್ತನಗಳು ಶೋಭಿಸಿದವು. ಒಳಭಾಗದಲ್ಲಿ ಶಿವಯೋಗ ಮುದ್ರೆಯಿಂದ ಕುಳಿತಿರುವ ನಂದೀಶ್ವರನ ಕರಿಯ ಕಣ್ಣುಗುಡ್ಡೆಯ ಕಾಂತಿಯು ಸ್ತನಮುಖದಿಂದ ಹೊರಗೆ ಹೊರಟಂತೆ ಮೊಲೆಗಳ ತುದಿಯಲ್ಲಿ ಕಪ್ಪುಕಾಂತಿಯು ಕಂಗೊಳಿಸುತ್ತಿತ್ತು. ಜಗದ್ಗುರುವಾದ ವೃಷಭೇಶ್ವರನು ತನ್ನಲ್ಲಿ ನೆಲೆಸಿರುವದರಿಂದ ಆ ಮಾದ ಲಾಂಬಿಕೆಯ ಕುಚಗಳೂ ಕಿಬ್ಬೊಟ್ಟೆಯೂ ಗುರು (ದಪ್ಪ) ವಾದವಲ್ಲದೆ ಗಮ ನದ ವಿಷಯದಲ್ಲಿ ಹಂಸ ಪಕ್ಷಿಗೂ ಸಹ ಗುರುವಾಗಿದ್ದಳು. ಶಿವಭಕ್ತಿ ಧುರೀ

ಣನಾದ ನಂದೀಶ್ವರನು ಬಸುರಿನಲ್ಲಿದ್ದ ಕಾರಣದಿಂದ ಆ ತಾಯಿಗೆ ಶಿವಕಥಾ ಶ್ರವಣ, ಶಿವಪೂಜೆ ಮೊದಲಾದವುಗಳ ಬಯಕೆಯುಂಟಾದವಲ್ಲದೆ ಬೇರೆ ಬಯಕೆಗಳಿರಲಿಲ್ಲ. ಹಾಗು ಓಕರಿಸುವಿಕೆ, ಆಕಳಿಸುವಿಕೆ, ಮೈಭಾರವಾಗುವಿಕೆ, ಬಳಲಿದ ನೋಟ ಮುಂತಾದ ಗರ್ಭ ಚಿಹ್ನಗಳೆಲ್ಲ ಅತಿಯಾಗಿ ತಲೆದೋರಿದವು. ಆ ಮಾದಲಾಂಬಿಕೆಯ ಗರ್ಭದೊಳು ನಂದೀಶ್ವರನು ಕೈಮುಗಿದುಕೊಂಡು ಶಿವಯೋಗದಲ್ಲಿರಲು ಶರತ್ಕಾಲದಲ್ಲಿ ಮೋಡಗಳ ಮಧ್ಯದೊಳಗೆ ತೋರುವ ಚಂದ್ರನಂತೆಯೂ, ಬಿಳಿಯ ಕಮಲಗಳಲ್ಲಿ ಕುಳಿತಿರುವ ಹಂಸ ಪಕ್ಷಿಯ ಪರಿಯಂತೆಯೂ ಶೋಭಿಸುತ್ತಿದ್ದನು. ಶಿವಾದ್ವೈತ ವಿದ್ಯಾವಿಶಾರದನಾದ ವೃಷಭೇಶ್ವರನು ಮನಸ್ಸು, ಪ್ರಾಣಗಳನ್ನು ಒಂದುಮಾಡಿ ಆಜ್ಞಾ ಚಕ್ರದ ಎರಡು ಎಸಳಿನ ತಾವರೆಯ ಕರ್ಣಿಕಾ ಮಧ್ಯದಲ್ಲಿ ಶೋಭಿಸುತ್ತಿರುವ ಸಹಸ್ರ ಸೂರ್ಯರ ಕಾಂತಿಯಿಂದ ಹೊಳೆಯುತ್ತಿರುವ ಪ್ರಣವ ಪೀಠದಲ್ಲಿರುವ ಶಿವಲಿಂಗವನ್ನು ಧ್ಯಾನಿಸುತ್ತ ಲಿಂಗಾಂಗ ಸಾಮರಸ್ಯಾನಂದ ಸಮುದ್ರದಲ್ಲಿ ಲೋಲಾಡುತ್ತಿದ್ದನು. ಉದಯ ಚಂದ್ರನನ್ನು ಹೊಂದಿದ ದಿಕ್ಕನ್ನು ನೋಡಿ ಚಕೋರ ಪಕ್ಷಿಯು ನಲಿಯುವಂತೆ ಗರ್ಭಧಾರಣೆಯಾಗಿ ಬಿಳುಪೇರಿದ ತನ್ನ ಪ್ರಿಯಪತ್ನಿಯ ಶರೀರದ ಸೊಂಪನ್ನು ನೋಡಿ ಮಾದರಸನು ಸಂತೋಷ ಭರಿತನಾಗಿದ್ದನು. ಮತ್ತು ನಂದೀಶ್ವರನು ಕೊಟ್ಟ ಅಮೋಘವಾದ ವರವನ್ನು ಸ್ಮರಿಸಿ ಉತ್ಸಾಹಭರಿತನಾಗಿರುತ್ತಿದ್ದನು. ಎಂದಿನಂತೆ ಒಂದು ದಿವಸ ಸಂಜೆಯಾಗಲು ಪಶ್ಚಿಮ ದಿಕ್ಕಿನಲ್ಲಿ ತಳಿರಿನಂತೆ ಸಂಜೆಗೆಂಪು ಶೋಭಿಸಲು ಆಕಾಶದಲ್ಲಿ ನಕ್ಷತ್ರಗಳು ಪುಷ್ಪಗಳಂತೆ ಕಂಗೊಳಿಸಲು ತಾರೆಗಳೆಂಬ ವೃಕ್ಷಗಳಲ್ಲಿ ಹೊಳೆಯುವ ಹವಳದ ಇನಿದಾದ ಹಣ್ಣಿನಂತೆ ಚಂದ್ರೋದಯವಾಯಿತು. ಆ ರಾತ್ರಿಯಲ್ಲಿ ಮಾದಲಾಂಬಿಕೆಯು ಶಿವಲಿಂಗ ಪೂಜೆಯನ್ನು ಮಾಡಿ ಭಕ್ತಿಯಿಂದ ಪ್ರಸಾದವನ್ನು ಸ್ವೀಕರಿಸಿ ಆ ಸಾಧ್ವಿಯು ಸಖಿಯರೊಡನೆ ಸುಖಾಲಾಪಗಳನ್ನಾಡಿ ಸುಪ್ಪತ್ತಿಗೆಯಲ್ಲಿ ಶಯನಮಾಡಿಕೊಂಡು ಪವಡಿಸಿರಲಾಗಿ ನಂದೀಶ್ವರನು ಶಿಶುಭಾವವನ್ನು ಧರಿಸಿ ಪರಶಿವನಪಾದ ಧ್ಯಾನಾಸಕ್ತನಾಗಿ ಚಂದ್ರಮುಖಿಯಾದ ಮಾದಲಾಂಬಿಕೆಯ ಮಗ್ಗುಲಲ್ಲಿ ಮಲಗಿದ್ದನು. ಈ ಮಹಾಪುರುಷನ ಉದಯದಿಂದ ಶಿವಭಕ್ತರ ಬಲಗಣ್ಣು ಹಾರಿ ಶುಭಸೂಚನೆಯಾಯಿತು. ಭೂದೇವಿಗೆ ಉತ್ಸಾಹವೆನಿಸಿತು. ಸೂರ್ಯನ ತೇಜೋ

ಮಂಡಲವು ಉಜ್ವಲವಾಗಿ ವಿಕಸಿತವಾಯಿತು. ತಂಗಾಳಿಯು ಬೀಸಿತು. ಹೊಳೆ, ಹಳ್ಳ, ಕೆರೆ, ಕೊಳಗಳ ಜಲ ನಿರ್ಮಲವಾದವು. ಎಲ್ಲ ಗಿಡಬಳ್ಳಿಗಳು ಚಿಗುರೆಲೆ, ಮೊಗ್ಗೆ, ಹೂ-ಕಾಯಿ ಹಣ್ಣುಗಳಿಂದ ಫಲಭರಿತ ವಾದವು. ಆಗ ಕಪ್ಪಡಿ ಸಂಗಮನಾಥನು ಪಾರ್ವತಿಸಮೇತನಾಗಿ ಸಮಸ್ತ ಪ್ರಮಥ ಗಣಂಗಳೊಡನೆ ಕೂಡಿಕೊಂಡು ಉತ್ಸಾಹದಿಂದ ಅಲ್ಲಿಗೆ ದಯ ಮಾಡಿಸಿ ತನ್ನ ಸತ್ಪುತ್ರನಾದ ಬಸವೇಶ್ವರನನ್ನು ಅಂತಃಕರಣದಿಂದ ನೋಡಿ ಸಂತಸಪಟ್ಟು ತನ್ನಪತ್ನಿಗೂ, ಶಿವಗಣಂಗಳಿಗೂ ತೋರಿಸಿ ಆತನ ಮಹಿಮೆ ಯನ್ನು ಕೊಂಡಾಡಿ ಪರಮಕೃಪಾಳುವೂ, ದಯಾರ್ದ್ರ ಹೃದಯಿಯೂ ಆದ ಸಂಗಮನಾಥನು ತನ್ನ ಪರಶು ಹಸ್ತವನ್ನು ಆ ಕೂಸಿನ ಮಸ್ತಕದ ಮೇಲಿ ರಿಸಿ ಹಣೆಗೆ ವಿಭೂತಿಯನ್ನು ಧರಿಸಿ ಆ ಶಿಶುವಿನ ದೇಹಾಂತರ್ಗತವಾದ ತಮೋಗುಣ ಸಮುದಾಯವನ್ನು ಹೊರಡಿಸಿ ಶಿವಜ್ಞಾನ ಕಳೆಯನ್ನಾಕರ್ಷಿಸಿ ಆತನ ಭಾವದಲ್ಲಳವಡಿಸಿ ಅಲ್ಲಿಂದ ತನ್ನ ಮನಸ್ಸಿಗೆ ನಿಯೋಜಿಸಿ ಅಂತಹ ಕಳೆಯನ್ನು ತನ್ನ ದೃಷ್ಟಿಯಲ್ಲಿ ನಿಲ್ಲಿಸಿ ಅಲ್ಲಿಂದ ಪಂಚಸೂತ್ರಘಟಿತವಾದ, ಷಡಧ್ವಶೋಧಿತವಾದ ಶಿವಲಿಂಗದಲ್ಲಿ ಆವಾಹಿಸಿ ಪವಿತ್ರವಾದ ಆ ಲಿಂಗವನ್ನು ಶಿಶುವಿನ ಕಂಠದಲ್ಲಿ ಧರಿಸಿ ಶಿವಷಡಕ್ಷರ ಮಂತ್ರವನ್ನು ಬಲಗಿವಿಯಲ್ಲಿ ಉಪ ದೇಶಿಸಿದನು. ಈ ಪ್ರಕಾರ ಶಿವದೀಕ್ಷೆಯನ್ನು ಮಾಡಿ ಆ ಮಗುವನ್ನೆತ್ತಿ ಮುದ್ದಾಡಿ ನೆತ್ತಿಯನ್ನು ಆಘ್ರಾಣಿಸಿ ಪರಮಾನಂದಭರಿತನಾಗಿ ಆ ಸಂಗಮ ನಾಥನು ಪಾರ್ವತಿಯೊಡನೆ ಕಪ್ಪಡಿ ಸಂಗಮಕ್ಕೆ ತಿರುಗಿ ದಯಮಾಡಿಸಿದನು. ಇತ್ತ ಮಾದಲಾಂಬಿಕೆಯು ನಿದ್ರೆಯಿಂದ ತಿಳಿದೆದ್ದು ಕಣ್ದೆರೆದು ನೋಡಲಾಗಿ ಗಂಗಾ ನದಿಯ ಪುಳಿನ ಪ್ರದೇಶದಲ್ಲಿ ಕಂಗೊಳಿಸುವ ಹಂಸಪಕ್ಷಿಯ ಮರಿ ಯಂತೆ ಬಿಳಿಯ ಕಮಲಗಳ ಧವಳ ಕಾಂತಿಯಂತೆ ಎಸೆಯುವ ಮೃದುವಾದ ಹಾಸಿಗೆಯಲ್ಲಿ ಮಲಗಿರುವ ಬಾಲಕನನ್ನು ಕಂಡು ಆಶ್ಚರ್ಯಪಟ್ಟು ಸಮೀಪ ದಲ್ಲಿಯೇ ಮಲಗಿಕೊಂಡಿದ್ದ ದಾಸಿಯರನ್ನು ಕೂಗಿ ಎಬ್ಬಿಸಿ ವೃದ್ಧರಾದ ಸಖೀ ಜನರನ್ನು ಕರೆಯಿಸಿ ತನ್ನ ಪತಿಯನ್ನು ಬರಮಾಡಿಕೊಂಡು ಹಣೆಗೆ ಭಸ್ಮ ವನ್ನೂ, ಕೊರಳಿಗೆ ರುದ್ರಾಕ್ಷಿ ಮಾಲೆಯನ್ನೂ, ಹೃದಯದಲ್ಲಿ ಶಿವಲಿಂಗ ವನ್ನೂ, ಧರಿಸಿ ಮುಗುಳು ನಗೆಯಿಂದ ನಗುತ್ತಿರುವವನೂ, ಮಂದಾರ ಪುಷ್ಪ ಗಳೆಂಬ ನಕ್ಷತ್ರಗಳ ನಡುವೆ ಬಾಲಚಂದ್ರನಂತೆ ಶೋಭಿಸುವವನೂ, ಚಂದ್ರ

ನಂತಹ ಮುಖವುಳ್ಳವನೂ, ಕಮಲದಂತಹ ಕಣ್ಣುಗಳುಳ್ಳವನೂ, ಪವಿತ್ರವಾದ ಅವಯವಗಳುಳ್ಳವನೂ, ವಿಚಿತ್ರವಾದ ಚರಿತ್ರವುಳ್ಳವನೂ ಆದ ಶಿಶುವನ್ನು ತೋರಿಸುತ್ತ ಸಂಗಮನಾಥನು ಬಂದು ಶಿಶುವಿಗೆ ಶಿವದೀಕ್ಷಾ ಸಂಸ್ಕಾರವನ್ನು ಮಾಡಿ ಹೋದನೆಂದು ತಾನು ಸ್ವಪ್ನದಲ್ಲಿ ಕಂಡದ್ದನ್ನೆಲ್ಲ ತಿಳಿಸಲು ಸರ್ವರೂ ಕೇಳಿ ಆಶ್ಚರ್ಯಚಕಿತರಾದರು. ಆಗ ಮಾದರಸನು ಶಿಶುವಿನ ಮಹಿಮೆಗೆ ತಲೆದೂಗಿ ನಂದೀಶ್ವರನ ದೇವಾಲಯಕ್ಕೆ ಬಾಗಿನಗಳನ್ನು ಕಳುಹಿಸಿ ಅತ್ಯಂತ ವೈಭವದೊಡನೆ ಸಂಭ್ರಮದಿಂದ ಶಿವಾರಾಧನೆಯನ್ನು ನಡೆಯಿಸಿ ಈ ಪುತ್ರನು ವೃಷಭೇಶ್ವರನ ವರದಿಂದ ಜನಿಸಿದವನಾದುದರಿಂದ ಬಸವೇಶ್ವರನೆಂದು ನಾಮಕರಣವನ್ನು ಮಾಡಿಸಬೇಕೆಂದು ನಿಶ್ಚಯಿಸಿದನು. ಹುಟ್ಟು ಕುರುಡನು ಕಣ್ಣುಗಳನ್ನು ಪಡೆದಂತೆಯೂ, ಕಡುಬಡವನು ಚಿಂತಾರತ್ನವನ್ನು ಕಂಡಂತೆಯೂ, ರೋಗಿಯು ಸಂಜೀವಿನಿಯನ್ನು ಸವಿದಂತೆಯೂ ಪರಮಾನಂದ ಪರಿಪೂರ್ಣ ಮನಸ್ಸುಳ್ಳವನಾಗಿದ್ದನು. ಶಿವಧರ್ಮವೇ ಶಿಶುರೂಪವನ್ನು ಧರಿಸಿದಂತೆಯೂ, ಶಿವಾಚಾರವೇ ಮಗುವಾಗಿ ಅವತರಿಸಿದಂತೆಯೂ, ಶಿವತೇಜಸ್ಸೇ ಮೂರ್ತೀಭವಿಸಿದಂತೆಯೂ, ಶಿವಾನಂದವೇ ಬಲಿತು ಸಾಕಾರವನ್ನು ಧರಿಸಿದಂತೆಯೂ ಆ ಬಸವೇಶ್ವರನು ಬಾಲ್ಯದಲ್ಲಿ ಪ್ರಕಾಶಿಸಿದನು. ಈ ಕೂಸು ಜಗತ್ತಿನಲ್ಲಿಯ ಇತರ ಶಿಶುಗಳಂತಿರದೆ ಇದು ಮಹಾ ಮಹಿಮಾಶಾಲಿಯಾದ ಕೂಸುಯೆಂದು ಅಕ್ಕರತೆಯಿಂದ ಹೊಗಳುತ್ತ ಮಾದಲಾಂಬಿಕೆಯು ಸಂತೋಷಪಟ್ಟು ತಬ್ಬಿ ಮುದ್ದಾಡುತ್ತ ಹನ್ನೆರಡನೇ ದಿವಸದಲ್ಲಿ ಅತ್ಯಂತ ವಿಜೃಂಭಣೆಯಿಂದ ರತ್ನಖಚಿತವಾದ ತೊಟ್ಟಿಲಿನಲ್ಲಿ ಮಲಗಿಸಿ–ಸುಲಲಿತರೂಪನೇ ಜೋ, ಸುಗುಣಮಂದಿರನೇ ಜೋ, ಸುಕೃತಾತ್ಮನೇ ಜೋ, ಸಮುಜ್ವಲ ಶಿವಧರ್ಮನೇ ಜೋ, ಸಕಲೇಶನೇ ಜೋ, ನಿಗಮಸನ್ನುತನೇ ಜೋ, ಜಂಗಮಪ್ರಿಯನೇ ಜೋ,. ಬಸವೇಶ್ವರನೇ ಜೋ, ಎಂದು ಜೋಗಳವನ್ನು ಹಾಡುತ್ತ ತೊಟ್ಟಿಲವನ್ನು ತೂಗಿದಳು. ಹಾಗೂ ನೆರೆದ ಸುಮಂಗಲಿಯರೊಡನೆ ಜೋಗುಳ ಹಾಡಿಸಿದಳು. ಬಸವೇಶ್ವರನು ಶಿವಧ್ಯಾನದಲ್ಲಿ ಬೆರೆತಿರುವಂತೆ ಒಂದೊಂದು ವೇಳೆ ಕಣ್ಣುಗಳನ್ನು ಮುಚ್ಚಿಕೊಳ್ಳುವನು. ಈ ಜಡವಾದ ಪ್ರಪಂಚವು ಮಿಥ್ಯವಾದದ್ದೆಂದು ನೋಡಿ ಆಗಾಗ ಮುಗುಳ್ನಗೆ ನಗುವನು. ಶಿವಭಕ್ತಿಯನ್ನು ಗಟ್ಟಿಯಾಗಿ ಕೈಯಲ್ಲಿ

ಹಿಡಿದಂತೆ ಒಂದೊಂದು ಸಾರೆ ಮುಷ್ಟಿಯನ್ನು ಹಿಡಿಯುವನು. ಋಷಿಗಳ ಮನಸ್ಸಿನಲ್ಲಿ ತಾನು ಕುಳಿತಿರುವ ರೀತಿಯನ್ನು ತೋರಿಸುವ ಹಾಗೆ ಇಲ್ಲಿ ಕುಳಿತುಕೊಳ್ಳುವನು. ಭೂದೇವಿಗೆ ಪ್ರೀತಿಯನ್ನುಂಟುಮಾಡುವಂತೆ ತಪ್ಪು ಹೆಜ್ಜೆಗಳನ್ನಿಡುವನು. ಶಿವಾಗಮ ವಾಕ್ಯಗಳೊಂದೇ ನಿಜವಲ್ಲದೆ ಉಳಿದವೆಲ್ಲ ಸುಳ್ಳು ಎಂಬುದನ್ನು ತೋರಿಸುವ ಹಾಗೆ ತೊದಲು ನುಡಿಗಳನ್ನು ನುಡಿಯುವನು. ಆದರೆ ಬಸವೇಶ್ವರನಿಗೆ ಉಳಿದ ಮಕ್ಕಳಂತೆ ಬಾಲ್ಯದಲ್ಲಿ ಕೆಮ್ಮು, ನೆಗಡಿ, ಹೊಟ್ಟೆಯುಬ್ಬರಿಸುವದು, ವಾಂತಿ, ಭೇದಿ, ವಗೈರೆ ಜಾಡ್ಯಗಳು ಸಂಭವಿಸಲಿಲ್ಲ. ಆಗ ಆ ತಾಯಿಯು ಬಸವೇಶ್ವರನನ್ನು ಕುರಿತು— ಎಲೈ ತಂದೆಯೇ ಬಾ, ನನ್ನ ಕ್ಷೀರಸಮುದ್ರವೇ ಮುತ್ತನ್ನು ಕೊಡು, ರಾಜಹಂಸ ಪಕ್ಷಿಯೇ ನೀನು ತಿರುಗಾಡು, ನನ್ನ ಪುಣ್ಯದರಾಶಿಯೇ ತಿರುಗಿನೋಡು. ಅರಗಿಣಿಯೇ ನೀನು ಮಾತಾಡು. ನನ್ನ ರತ್ನವೇ ಕುಳಿತುಕೋ ಎಂದು ಸಂತೋಷದಿಂದ ಮಾತಾಡುತ್ತ ಪ್ರೀತಿಯಿಂದ ತಬ್ಬಿ ಮುದ್ದಾಡುವಳು. ತಾಯಿಯು ಕೈಯಿಂದ ಹಾಕುವ ತಾಳಕ್ಕನುಸಾರವಾಗಿ ಮುಗುಳು ಮುಗುಳು ನಗೆ ನಗುತ್ತ ಕುಣಿಯುತ್ತಿರಲು ಹಣೆಯಲ್ಲಿಯ ಅರಳೆಲೆಯು ಕುಣಿಯುವದು. ಕಿವಿಯಲ್ಲಿಯ ಕಡಕುಗಳು ಅದುರುತ್ತಿರುವವು. ಕಾಲಲ್ಲಿಯ ಸಣ್ಣ ಗೆಜ್ಜೆಗಳು ಧ್ವನಿಮಾಡುತ್ತಿರುವವು. ಈ ಪ್ರಕಾರ ಬಾಲಲೀಲೆಗಳನ್ನು ಮಾಡುತ್ತ ಶುಕ್ಲಪಕ್ಷದ ಚಂದ್ರನಂತೆ ದಿನೇದಿನೇ ವೃದ್ಧಿಯನ್ನು ಹೊಂದುತ್ತಿರುವ ಬಸವೇಶ್ವರನಿಗೆ ಎಂಟನೆಯ ವರ್ಷ ಪ್ರಾಪ್ತವಾಗಲು ಮಾದರಸನು ಮಗನಿಗೆ ಉಪನಯನ ಸಂಸ್ಕಾರವನ್ನು ಮಾಡಬೇಕೆಂದು ಆಲೋಚಿಸಿ ಜ್ಯೋತಿಷಿಗಳನ್ನು ಕರೆಯಿಸಿಕೊಂಡು ಉತ್ತಮ ಮುಹೂರ್ತವನ್ನು ತೆಗೆಯಿಸುತ್ತಿರುವಾಗ ಅದನ್ನು ಬಸವೇಶ್ವರನು ನೋಡಿ ಅವರ ಮೂಢತನಕ್ಕೆ ಆಶ್ಚರ್ಯಪಟ್ಟು ಎಲೈ ತಂದೆಯೇ, ಇದೇನು ಸಂಭ್ರಮವು. ಇದರ ನಿಜ ಸಂಗತಿಯನ್ನು ತನಗೆ ಹೇಳಬೇಕೆಂದು ಕೇಳಲು ಮಗುವೇ, ಧರ್ಮಶಾಸ್ತ್ರಾನುಸಾರವಾಗಿ ನಿನಗೆ ಈಗ ಉಪನಯನವನ್ನು ಮಾಡಬೇಕಾಗಿದೆ. ಅದಕ್ಕಾಗಿ ಒಂದು ಉತ್ತಮ ಮುಹೂರ್ತವನ್ನು ಕೇಳಿ ನಿಶ್ಚಯಮಾಡುವ ವಿಚಾರದಲ್ಲಿದ್ದೇವೆ ಎಂದು ನುಡಿಯಲು ಬಸವೇಶ್ವರನು ಅವರ ಮಾತು ಕೇಳಿ ಮುಗುಳು ನಗೆ ನಗುತ್ತ ತಂದೆಯೇ, ನಾನು ಜನಿಸಿದ ಕೂಡಲೇ ಸಂಗಮನಾಥನು

ಬಂದು ನನಗೆ ಶಿವದೀಕ್ಷೆಯನ್ನು ಮಾಡಿ ಹೋದ ಸಂಗತಿಯನ್ನು ನೀನು ಮರೆತುಬಿಟ್ಟಿರುವೆಯಾ ? ಶಿವದೀಕ್ಷೆಯಾದ ಬಳಿಕ ನಾನು ಬೇರೆ ದೀಕ್ಷೆಗೆ ಆಸೆಪಡುವೆನೇ ? ಎಂದಿಗೂ ಇಲ್ಲ. ಸಾರ್ವಭೌಮತ್ವದ ಪಟ್ಟಾಭಿಷಕ್ತನಾದ ಚಕ್ರವರ್ತಿಯು ಉಳಿದ ಚಿಕ್ಕಪುಟ್ಟ ಪದವಿಗಳಿಗೆ ಆಶೆ ಪಡುವನೇ ? ಅದರಂತೆ ಶಿವಭಕ್ತಿಯಲ್ಲಿ ಮನಸ್ಸಿಟ್ಟವನು ಅನ್ಯ ದೈವಭಕ್ತಿಯಲ್ಲಿ ಮನಸ್ಸು ತೊಡಗಿಸುವನೇ ? ಕಲ್ಪವೃಕ್ಷದ ನೆರಳನ್ನು ಆಶ್ರಯಿಸಿದವನು ಚಿಕ್ಕ ಮುಳ್ಳುಕಂಟಿಯ ನೆರಳಿಗೆ ಆಶಿಸುವನೇ ? ಶಿವಮತವನ್ನು ಸ್ವೀಕರಿಸಿದವನು ಅನ್ಯಭವಿಮತಕ್ಕೆ ಳಸುವನೇ ? ಅಮೃತವನ್ನು ಪಾನಮಾಡಿ ಅಮರನಾದವನು ಉಳಿದ ತುಚ್ಛ ಪಾನೀಯಗಳಿಗೆ ಮನಸ್ಸು ಮಾಡುವನೇ? ಶಿವಪಾದ ಸೇವೆಯನ್ನು ಮಾಡುವ ಪುಣ್ಯಶಾಲಿಗೆ ಇತರ ದೇವತೆಗಳನ್ನು ಪೂಜಿಸುವವನು ಸಮಾನನಾಗುವನೇ ? ಬೆಟ್ಟವನ್ನಾಶ್ರಯಿಸಿದ ಮೃಗರಾಜನಾದ ಸಿಂಹವು ಸಣ್ಣ ದಿನ್ನೆಯಲ್ಲಿದ್ದ ಮೊಲಕ್ಕೆ ಸಾಟಿಯಾದೀತೆ? ಶಿವಲಾಂಛನಗಳನ್ನು ಧರಿಸಿಕೊಂಡಿರುವವನು ಹೇಯವಾದ ಲಾಂಛನಗಳನ್ನು ಧರಿಸಲು ಇಚ್ಛಿಸುವನೇ? ರಾಜ ಚಿನ್ಹಗಳನ್ನು ಧರಿಸಿದವನು ಸೇವಕನ ಚಿನ್ಹಗಳನ್ನು ಧರಿಸುವದಕ್ಕೆ ಪ್ರೀತಿಸುವನೇ ? ಎಂಬುದಾಗಿ ಬಸವೇಶ್ವರನು ನುಡಿದ ಸ್ವಾನುಭವಪೂರ್ಣವಾದ ಭಕ್ತಿ ರಸಭರಿತ ನುಡಿಗಳನ್ನು ಕೇಳಿದ ಮಾದರಸನು ಗೌರವ ಪೂರ್ಣವಾದ ಪ್ರೀತಿಯಿಂದ ಎಲೈ— ಸತ್ಪುರುಷರಿಗೆ ಆಹ್ಲಾದಕರನಾದ ಪುತ್ರನೇ, ಕೇಳು ಈಗ ನಿನ್ನ ಈ ಆಗ್ರಹ ವನ್ನು ಬಿಟ್ಟುಬಿಡು. ಈ ದ್ವಿಜಚಿನ್ಹವೆಂಬುದು ಶಿವಚಿನ್ಹವೇ ಹೊರತು ಬೇರೆಯಲ್ಲ, ಅದು ಹೇಗೆಂದರೆ– ಕೊರಳಲ್ಲಿರುವ ಈ ಉಪವೀತವು ಈಶ್ವರನು ವಿಷ್ಣುವಿನ ಕೂದಲುಗಳಿಂದ ತಯಾರಿಸಿ ಧರಿಸಿಕೊಂಡಿರುವ ಹುರಿಯಾಗಿದೆ. ಆ ವಿಷ್ಣುವಿನ ಎಲುವುಗಳೇ ಕೈಯಲ್ಲಿಯ ದಂಡವು. ನಾರಸಿಂಹನ ಚರ್ಮವೇ ಕೃಷ್ಣಾಜಿನವು. ಬ್ರಹ್ಮಶಿರಃಕಪಾಲವೇ ಭಿಕ್ಷಾಪಾತ್ರೆಯು. ಆದಕಾರಣ ಇವೆಲ್ಲವುಗಳೂ ಶಿವಚಿನ್ಹಗಳೇ ಆಗಿವೆ. ಜಪಿಸತಕ್ಕ ಗಾಯತ್ರೀ ಮಂತ್ರಕ್ಕೆ ಶಿವನೇ ಅಧಿದೇವತೆಯು. ದ್ವಿಜನೂ ಸಹ ಶಿವಾಂಶದಿಂದಲೇ ಹುಟ್ಟಿದವನು. ಹೋಮಮಾಡತಕ್ಕ ಅಗ್ನಿಯು ಶ್ರೀ ರುದ್ರನ ಒಂದು ಅಂಗವು. ಇವೆಲ್ಲವೂ ವೇದ ಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ನನ್ನ ಅಭಿಪ್ರಾಯವನ್ನು ನೇರವೇರಿಸಿಕೊಡು. ನೀನು ಉಪನಯನವನ್ನು ತಿರಸ್ಕರಿಸುವ ಮಾತನ್ನು ವಿಪ್ರರು ಕೇಳಿದರೆ

ನನ್ನನ್ನು ನಿಂದಿಸಿ ಹೀಯಾಳಿಸದೆ ಬಿಡಲಾರರು ಎಂದು ಹೇಳಲು ಬಸವೇಶ್ವ ರನು ಮುಗುಳು ನಗೆಯಿಂದ— ಎಲೈ ತಂದೆಯೇ, ಮೂಢರೊಡನೆ ಕೂಡಿ ಕೊಂಡು ನೀನೂ ಮೂಢನಾಗುವೆಯಾ ? ನಿಜಸ್ಥಿತಿಯನ್ನು ತಿಳಿಯದೆ ಇರುವ ನಿನ್ನ ಮನಸ್ಸಿನಲ್ಲಿರುವ ಮಾಲಿನ್ಯವೆಲ್ಲ ಹರಿದು ಹೋಗುವಂತೆ ಹೇಳುತ್ತೇನೆ ಕೇಳು— ಲಕ್ಷ್ಮೀದೇವಿಯಿಂದ ವಿನೋದಕ್ಕಾಗಿ ಸೆಳೆಯಲ್ಪಟ್ಟ ವಿಷ್ಣುವಿನ ಕೂದಲಿಗೆ ವಿಧವೆಯರು ಹೊಸೆದಿರುವ ದಾರವನ್ನೂ, ಪರಮೇಶ್ವರನು ಮುರಿದು ಹಿಡಿದುಕೊಂಡಿರುವ ವಾಮನ ಮೂರ್ತಿಯ ಎಲುವಿಗೆ ಅಲ್ಪ ಮನುಷ್ಯರು ಮುರಿದ ಕಾಡುಗಿಡದ ಕಟ್ಟಿಗೆಯನ್ನೂ, ವೀರಭದ್ರನು ಶರಭಾವತಾರ ಮಾಡಿ ಕೊಂದ ನಾರಸಿಂಹನ ಚರ್ಮಕ್ಕೆ ಬೇಡರವನು ಕೊಂದ ಚಿಗರೆಯ ಚರ್ಮ ವನ್ನೂ, ಬ್ರಹ್ಮನ ತಲೆಬುರುಡೆಗೆ ಎಲೆಯ ದೊನ್ನೆಯನ್ನೂ ಸಮವೆಂದು ನೀನು ಹೇಳುತ್ತೀಯಲ್ಲಾ ! ಈ ಮೂಢ ಮಾತುಗಳಿಗೆ ನನಗೆ ಆಶ್ಚರ್ಯವಾಗುತ್ತಿದೆ. ಗಾಯತ್ರೀ ಮಂತ್ರಕ್ಕೆ ಅಂಗಾಧಿ ದೇವತೆಗಳು ಬೇರೆ ಇದ್ದಾರೆ. ಹೀಗಿರಲು ಶಿವಪಂಚಾಕ್ಷರೀ ಮಂತ್ರಕ್ಕೆ ಅದು ಸಮಾನವಾಗುವದೇ ? ಪರಶಿವನು ತನಗೆ ಸ್ವಾಮಿಯಾಗಿರುವಾಗ ವಿಷ್ಣು, ಬ್ರಹ್ಮ, ಇಂದ್ರಾದಿಗಳನ್ನು ಗಣನೆ ಮಾಡದೆ ಬದುಕುವವನೇ ಶಿವಾಂಶದಿಂದ ಹುಟ್ಟಿದ ಬ್ರಾಹ್ಮಣನು. ಉಳಿದ ವರು ಪ್ರಾಕೃತ ಬ್ರಾಹ್ಮಣರು. ಅಗ್ನಿಯು ಶಿವನ ಅಂಗವು. ಹಾಗಾದರೆ ಅವನ ನಾಲಿಗೆಯನ್ನು ವೀರಭದ್ರನು ಏಕೆ ಸೀಳಿದನು ? ಅಯ್ಯೋ ! ಇಂತಹ ಮೂಢತನದ ಮಾತುಗಳನ್ನು ನಾನು ಹೇಗೆ ಪುರಸ್ಕರಿಸಲಿ ! ಶಿವತತ್ವಜ್ಞಾನ ಪರಿಪೂರ್ಣರಾದವರಿಗೆ ಇಂತಹ ದಡ್ಡತನದ ಮಾತುಗಳು ರುಚಿಸಲಾರವು. ದಿವ್ಯ ತೇಜೋಭರಿತನಾದ ಸೂರ್ಯನನ್ನು ಗೂಗೆಯ ಕೂಗು ಏನು ಮಾಡ ಬಲ್ಲದು ? ಋಷಿಶ್ರೇಷ್ಠರಾದ ದಧೀಚಿ, ಗೌತುಮ ಮೊದಲಾದ ಶಿವಭಕ್ತರ ಶಾಪವನ್ನು ಹೊಂದಿದ ಕೆಟ್ಟನಡತೆಯ ಈ ಕೀಳುಜನರು ಕಲಿಯುಗದಲ್ಲಿ ಯಾವಾಗಲೂ ಶಿವಭಕ್ತರನ್ನು ನಿಂದಿಸುತ್ತಲೇ ಇರುವರು. ಆದರೆ ದಧೀಚಿ ಮೊದಲಾದ ಋಷಿಪುಂಗವರು ದ್ವಿಜಚಿನ್ಹಗಳನ್ನೇ ತಮ್ಮ ದೇಹಗಳಲ್ಲಿ ಧರಿಸಿ ಕೊಂಡಿದ್ದರಲ್ಲಾ ! ಎಂದು ನೀನು ಕೇಳಿದರೆ ಅವರು ಮೊದಲು ದ್ವಿಜಚಿನ್ಹಧಾ ರಿಗಳಾಗಿದ್ದು ಅನಂತರ ಪರಿಶುದ್ಧವಾದ ಶಿವಲಾಂಛನಗಳನ್ನು ಧರಿಸಿಕೊಂಡರು. ಅಷ್ಟೇ ಹೊರತು ಮೊದಲು ಶಿವಚಿಹ್ನಧಾರಿಯಾಗಿದ್ದವನು ಬಳಿಕ ದ್ವಿಜಚಿನ್ಹ

ವನ್ನು ಧರಿಸಿಕೊಳ್ಳುವದು ಯೋಗ್ಯವಲ್ಲ. ಆವಕಾರಣ ಮೊದಲು ಶಿವದೀಕ್ಷಾ ಸಂಪನ್ನನಾದ ನಾನು ಈಗ ಈ ಮುಂಜಿಯನ್ನು ಮಾಡಿಸಿಕೊಳ್ಳಲಾರೆ. ಪುನ ರ್ಜನ್ಮವನ್ನುಂಟು ಮಾಡದೆಯಿರುವ ಶಿವಭಕ್ತಿಯೆಂಬ ದೇವಗಂಗೆಯನ್ನು ಬಿಟ್ಟು ಭವಕ್ಕೆ ತರುವ ಇತರ ದೇವತೆಗಳ ಮತದ ಬಿಸಿಲುಗುದುರೆಯನ್ನು ಬೆನ್ನಟ್ಟಿ ಭ್ರಮಿಸಲೇ ? ಶ್ರೇಷ್ಠವಾದ ರುದ್ರಾಕ್ಷಿಗಳನ್ನು ಧರಿಸುವ ಈ ಕೊರಳಲ್ಲಿ ಮುಂಜಿಯ ಹಾರವನ್ನು ಹಾಕಿಕೊಳ್ಳುವೆನೇ ? ಶಿವಭಕ್ತರಿಗೆ ನಮಸ್ಕರಿಸುವ ಈ ಹಣೆಯಿಂದ ಭವಿಗಳನ್ನು ನಮಸ್ಕರಿಸುವೆನೋ ? ಸಮಸ್ತ ಮಂತ್ರಗಳಲ್ಲಿ ಶ್ರೇಷ್ಠವಾದ ಪಂಚಾಕ್ಷರಿ ಮಂತ್ರವನ್ನು ಜಪಿಸುವ ವಾಕ್ಕಿನಿಂದ ಇತರ ದೇವತಾಮಂತ್ರ ಜಪಿಸುವೆನೋ ? ಎಂದಿಗೂ ಸಾಧ್ಯವಿಲ್ಲ. ಎಂಬುದಾಗಿ ನುಡಿದ ಬಸವೇಶ್ವರನನ್ನು ನೋಡಿ ಮಾದರಸನು— ಮಗನೇ, ಹಿರಿಯರೆ ಲ್ಲರೂ ನಡೆದ ನಡವಳಿಕೆಯನ್ನು ತಿರಸ್ಕರಿಸುವದು ಜಾಣತನವಲ್ಲ. ವರ್ಣಾ ಶ್ರಮಕ್ಕೆ ಉಚಿತವಾದ ವೈದಿಕ ಶಿವಭಕ್ತಿಯಿಂದ ಶಿವಕೃಪೆಯನ್ನು ಪಡೆಯ ಬಹುದು. ಆದ್ದರಿಂದ ನನ್ನ ಮಾತನ್ನು ಮೀರದೆ ಅಂಗೀಕರಿಸಬೇಕು ಎಂದು ಹೇಳಲು ಬಸವೇಶ್ವರನು ನಕ್ಕು— ಎಲೈ ತಂದೆಯೇ, ತಲೆಯಲ್ಲಿಯ ಕೂದಲು ಗಳೆಲ್ಲ ನರೆತು, ಮೈಯಲ್ಲಿಯ ಚರ್ಮವೆಲ್ಲ ಸುಕ್ಕು ಹಿಡಿದಿರುವ ಜಡರೆಲ್ಲರೂ ಹಿರಿಯರಾಗುವರೇ ? ಪರಮ ಶಿವಭಕ್ತಿ ಸಂಪನ್ನರಾಗಿ ಶಿವಜ್ಞಾನದಿಂದ ಕೂಡಿ ರುವ ಶಿವವ್ರತಸ್ಥರೇ ಹಿರಿಯರು. ನಮಗೆ ಶಿವಪಂಚಾಕ್ಷರಿ ವರ್ಣ (ಅಕ್ಷರ) ಇರಲಾಗಿ ಬೇರೆ ವರ್ಣವೇತಕ್ಕೆ ? ಶಿವಪಾದದ ಆಶ್ರಯವೆಂಬ ಆಶ್ರಮವು ಇರ ಲಾಗಿ ನಮಗೆ ಉಳಿದ ಆಶ್ರಮವೇಕೆ ? ಶಿವಾರ್ಚನೆ ಎಂಬ ಯಜ್ಞವು ನಮಗೆ ಇರಲು ಬೇರೆ ಯಜ್ಞಯಾಗಗಳು ಏಕೆ ? ಶಿವಲಿಂಗವೆಂಬ ಯಜ್ಞೋಪವೀತ ವಿರಲು ಬೇರೆ ಯಜ್ಞೋಪವೀತಗಳು ಏಕೆ ? ಪಾಪನಾಶಕ್ಕಾಗಿ ಭಸ್ಮಲೇಪನ ವಿರಲಾಗಿ (ಭಸ್ಮಸ್ನಾನ) ನದಿ, ತೀರ್ಥ, ಸಮುದ್ರ ಸ್ನಾನಗಳು ಏಕೆ ? ತಲೆಯ ತುಂಬೆಲ್ಲ ಜಡೆ ಬಿಟ್ಟಿರುವಾಗ ಬೇರೆ ಜುಟ್ಟು ಯಾತಕ್ಕೆ ? ಈ ನಮ್ಮ ಚಿನ್ಹ ಗಳು ಮೋಕ್ಷಕ್ಕೆ ಕಾರಣವಲ್ಲವೇ ? ವೀರಶೈವರಲ್ಲಿ ಗುರುಗಳ ಮಾರ್ಗವೇ ಬೇರೆ. ದೀಕ್ಷಾ ಕ್ರಮವೇ ಬೇರೆ. ನಿತ್ಯ ಆಚಾರ ಕ್ರಮವೇ ಬೇರೆ. ದೇಹ ದಲ್ಲಿ ಧರಿಸುವ ಲಾಂಛನಗಳೇ ಬೇರೆ. ಶಿವಪೂಜೆಯನ್ನು ಮಾಡುವ ರೀತಿಯೇ ಬೇರೆ. ಜಪಿಸುವ ಮಂತ್ರವೂ, ಪೂಜಿಸುವ ದೈವವೂ ಬೇರೆಯಾಗಿರುವವು.

ಹೀಗಿರಲು ಎರಡೂ ಹೇಗೆ ಒಂದಾಗುವವು. ನಾನಾ ದೇವತೆಗಳನ್ನು ಪೂಜಿಸುವ ಬ್ರಾಹ್ಮಣರ ಆಚಾರವು ಸೂಳೆಯರ ನಡತೆಗೆ ಸಮಾನವಾಗುವದು. ಶಿವನೊಬ್ಬನಲ್ಲಿಯೇ ವಿಶ್ವಾಸವುಳ್ಳ ಶಿವಶರಣರ ಆಚಾರವು ಪತಿವ್ರತೆಯರ ನಡತೆಗೆ ಸಮಾನವಾಗುವದು. ಶಿವಪ್ರಸಾದವನ್ನು ಪಡೆದ ಶುಕ ಋಷಿಯೂ, ಚಂಡೇಶ್ವರನೂ, ಉಪನಯನವನ್ನು ಮಾಡಿಕೊಂಡಿದ್ದರೋ? ಉಪನಯನ ಮಾಡಿಕೊಂಡಿದ್ದವರಲ್ಲಿ ಯಾರು ಅವರ ಮಹಿಮಾಶಕ್ತಿಗೆ ಸಮಾನರಾಗಿದ್ದಾರೆ? ಬುದ್ಧಿಶಾಲಿಯಾದ ನೀನು ಹಲವು ರೀತಿಯಾಗಿ ಹಂಬಲಿಸದೆ ಪಾರ್ವತೀಪತಿಯಾದ ಪರಶಿವನಪಾದಗಳನ್ನು ನಂಬಿ ಪೂಜಿಸಿದರೆ ನಿನ್ನ ಇಷ್ಟಾರ್ಥ ಸಿದ್ಧಿಯಾಗುವದು. ಬಹುಕೋಟಿ ಜನ್ಮಗಳಿಂದ ಸಂಪಾದಿಸಿದ ಪುಣ್ಯರಾಶಿಯು ಫಲಿಸಿದವನಿಗೆ ಮಾತ್ರ ಶಿವಭಕ್ತಿಯು ದೊರೆಯುವದೇ ಹೊರತು ಉಳಿದವರಿಗೆ ಪ್ರಾಪ್ತವಾಗಲಾರದು. ತಮ್ಮ ಜನನ ಮರಣಗಳನ್ನೇ ಕಳೆದುಕೊಳ್ಳದ ದೇವತೆಗಳು ಇತರರಿಗೆ ಮುಕ್ತಿಯನ್ನು ಕೊಡಲು ಸಮರ್ಥರಾಗುವರೇ ? ಸೌಳು ಭೂಮಿಯಲ್ಲಿಯ ಬಾವಿಯ ನೀರು ಗಂಗಾಜಲದಂತೆ ಬಾಯಾರಿಕೆಯನ್ನು ನೀಗಿಸುವದೇ ? ನನಗೆ ಮಾತ್ರ— ಪರಮೇಶ್ವರನೇ ತಂದೆ, ಪಾರ್ವತಿಯೇ ತಾಯಿ, ಶಿವಾನುಭವಿಗಳೇ ಆಪ್ತರು. ಶಿವಲಾಂಛನಧಾರಿಗಳೇ ನನ್ನಿಂದ ಸೇವೆ ಮಾಡಿಸಿಕೊಳ್ಳುವ ಸ್ವಾಮಿಗಳು. ಶಿವಪಾದ ಸೇವೆಯೇ ಎಣೆಯಿಲ್ಲದ ಭಾಗ್ಯವು. ಶಿವಪಾದ ಭಕ್ತಿಯೇ ಮುಕ್ತಿಸಂಪತ್ತು" ಎಂದು ತನ್ನ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ಯಥಾ ರೀತಿಯಾಗಿ ಉಪದೇಶಿಸಿದ ಬಸವೇಶ್ವರನ ಭಕ್ತಿಸಂಪನ್ನತೆಯನ್ನು ಕಂಡು ಮಾದರಸನು ಆಶ್ಚರ್ಯಪಟ್ಟು ಆತನ ವಚನಗಳೆಂಬ ಬೆಳದಿಂಗಳಿನಿಂದ ತನ್ನ ಅಜ್ಞಾನವೆಂಬ ಕತ್ತಲೆಯು ಹರಿದು ಹೋಗಿ ಮನಸ್ಸೆಂಬ ನೈದಿಲೆಯ ಕಮಲವು ಅರಳಿ, ಸುಜ್ಞಾನವೆಂಬ ಸುವಾಸನೆಯನ್ನು ಹರಡಲು ವಿವೇಕಶಾಲಿನಿಯಾದ ತನ್ನ ಧರ್ಮಪತ್ನಿಮಾಲಾಂಬಿಕೆಯನ್ನು ಕುರಿತು---ಎಲೈ ಸಾಧ್ವಿಯೇ, ಈ ಮಗನು ಶಿವಾಂಶಸಂಭೂತನು. ಈತನು ಆಡಿದ ಮಾತುಗಳು ನಮಗೆ ಹಿತಕರವಾದ ಉಪದೇಶವು. ನಮ್ಮ ಪುಣ್ಯ ವಿಶೇಷದಿಂದ ಈತನು ನಮಗೆ ಮಗನೆನಿಸಿಕೊಂಡಿದ್ದಾನೆ. ಇಷ್ಟೇ ಸಾಕು. ಈತನು ಜನ್ಮಿಸಿದ್ದರಿಂದ ಈ ಭೂಲೋಕವು ಪರಿಶುದ್ಧವಾಯಿತು. ನಾವು ಕೃತಾರ್ಥರಾದೆವು. ನಮ್ಮ ವಂಶವು ಪ್ರಕಾಶಮಾನವಾಯಿತು. ನಮ್ಮ

ಪಿತೃದೇವತೆಗಳಿಗೆಲ್ಲ ಸಂತೋಷವಾಯಿತು. ಎಂದು ಹೇಳಿ ಕೃತಾರ್ಥ ಭಾವವನ್ನು ವ್ಯಕ್ತಮಾಡಲು ಬಸವೇಶ್ವರನು ತನ್ನನ್ನು ತಡೆಯಲು ಅಸಮರ್ಥರಾದ ತಾಯಿತಂದೆಗಳನ್ನು ಸಮಾಧಾನಪಡಿಸಿ ಅವರಿಂದ ಅಪ್ಪಣೆಯನ್ನು ಪಡೆದುಕೊಂಡು ದುಷ್ಕರ್ಮವೆಂಬ ಅರಣ್ಯಕ್ಕೆ ದಾವಾನಲನೂ, ಕರುಣಾ ಸಮುದ್ರನೂ, ಶಿವಭಕ್ತಿ ಧುರಂಧರನೂ ಆದ ಬಸವೇಶ್ವರನು ದಿವ್ಯಜ್ಞಾನಿಯೂ, ತನ್ನ ಸಹೋದರಿಯೂ ಆದ ನಾಗಲಾಂಬಿಕೆಯನ್ನು ಸಂಗಡ ಕರೆದುಕೊಂಡು ಕಪ್ಪಡಿ ಸಂಗಮನಾಥನಲ್ಲಿಗೆ ಪ್ರಯಾಣ ಮಾಡಿದನು. ಈ ಪ್ರಕಾರ ಅವರು ಬಾಗೇವಾಡಿ ಪಟ್ಟಣದ ರಾಜಮಾರ್ಗದಲ್ಲಿ ಬರುತ್ತಿರಲು ಬಾಗಿಲದಲ್ಲಿ ನಂದೀ ಧ್ವಜವನ್ನು ಕಟ್ಟಿ ಅಲಂಕರಿಸಿರುವ ಒಬ್ಬ ದ್ವಾರಪಾಲಕನ ಮನೆಯನ್ನು ಕಂಡು ಅದು ಶಿವಭಕ್ತರ ಮನೆ ಎಂದು ನಿಶ್ಚಯಿಸಿ ಮನೆಯೊಳಗೆ ಹೋಗಲು ಮನೆಯ ಯಜಮಾನನು ಮಾಡುತ್ತಿದ್ದ ಜಂಗಮ ಪೂಜೆಯನ್ನು ನೋಡಿ ಸಂತೋಷಭರಿತನಾಗಿ ಒಬ್ಬರಿಗೊಬ್ಬರು ನಮಸ್ಕರಿಸಿ ಕುಳಿತುಕೊಂಡ ನಂತರ ಅಲ್ಲಿ ನೆರೆದ ಶರಣ ಸಮೂಹದೊಡನೆ ಆ ಯಜಮಾನನು ಮಾಡಿದ ಸತ್ಕಾರವನ್ನೆಲ್ಲ ತಾನೂ ಸ್ವೀಕರಿಸಿ ಶಿವಾನುಭವ ಗೋಷ್ಠಿಯಲ್ಲಿ ಇದ್ದು ಬಳಿಕ ಸಂಗಮನಾಥನನ್ನು ಸ್ಮರಿಸಿಕೊಂಡು ಅಲ್ಲಿಂದ ಹೊರಟು ಕಪ್ಪಡಿಗೆ ಬರುತ್ತಿರಲು ದೂರದಲ್ಲಿಯೇ ಸಂಗಮೇಶ್ವರನ ದೇವಾಲಯದ ಗೋಪುರವನ್ನು ಕಂಡು ಅಲ್ಲಿಂದಲೇ ನಮಸ್ಕರಿಸಿ ಬಾರಿಬಾರಿಗೂ ಕೈಮುಗಿಯುತ್ತ ಬರುತ್ತಿರಲು ಆ ಪಟ್ಟಣದ ಶಿವಭಕ್ತರೆಲ್ಲರೂ ಕೂಡಿಕೊಂಡು ಬಹು ಸಡಗರದಿಂದ ಬಸವೇಶ್ವರನನ್ನು ಇದಿರ್ಗೊಂಡು ಬಂದು ಸರ್ವರೂ ಸಂಗಮೇಶ್ವರನ ದೇವಾಲಯದ ಹೊರಭಾಗದಲ್ಲಿ ನಿಂತುಕೊಂಡಿರಲು ಆ ದೇವಾಲಯವು ಚಿನ್ನದ ಗೋಪುರದಿಂದಲೂ, ಚಂದ್ರಕಾಂತ ಶಿಲೆಯ ಪ್ರಾಕಾರದಿಂದಲೂ, ರತ್ನಖಚಿತವಾದ ಸುವರ್ಣಕಲಶಗಳಿಂದಲೂ, ರತ್ನದ ದೀಪಗಳಿಂದಲೂ, ಮೇಲೆ ಕಟ್ಟಿರುವ ವೃಷಭ ಧ್ವಜಗಳಿಂದಲೂ, ಧೂಪದ ಪರಿಮಳದಿಂದಲೂ, ಹೂಮಾಲಿಕೆಗಳಿಂದಲೂ, ಭೇರಿ, ಮೃದಂಗ, ಕಹಳೆ ಮೊದಲಾದ ವಾದ್ಯಗಳ ಧ್ವನಿಯಿಂದಲೂ ಕಂಗೊಳಿಸುತ್ತಿರುವದನ್ನು ಸಮಸ್ತ ಶಿವಗಣಂಗಳೊಡನೆ ನಿರೀಕ್ಷಿಸುತ್ತ ಮುಂದಕ್ಕೆ ಬರುತ್ತಿರಲು ಸಂಗಮನಾಥನು ತನ್ನ ಮಗನು ಬಂದನೆಂದು ಸಂತೋಷದಿಂದ ಮುಗುಳುನಗೆ ನಗುತ್ತ ಹಣೆಯಲ್ಲಿ ಭಸ್ಮತ್ರಿಪುಂಡ್ರ

ವನ್ನೂ, ಕಂಠದಲ್ಲಿ ರುದ್ರಾಕ್ಷಿ ಮಾಲೆಯನ್ನೂ, ಶಿರಸ್ಸಿನಲ್ಲಿ ಜಡೆಯನ್ನೂ, ಕೊರಳಲ್ಲಿ ಶಿವಲಿಂಗದ ಕರಡಿಗೆಯನ್ನೂ, ಕಾಷಾಯ ವಸ್ತ್ರಗಳನ್ನು ಧರಿಸಿ ಕೊಂಡು ಬಸವೇಶ್ವರನು ಜನಿಸಿದಾಗ ಗುರುಗಳಾಗಿ ಬಂದ ವೇಷ ಭೂಷಣ ಗಳಿಂದಲೇ ಈಗಲೂ ಸಹ ಗುರುರೂಪದಿಂದ ಪ್ರತ್ಯಕ್ಷನಾದನು. ಆಗ ಬಸವೇಶ್ವರನು ಸಂಗಮನಾಥನನ್ನು ಕಂಡು ಉತ್ಸಾಹಭರಿತನಾಗಿ ಕಣ್ಣಲ್ಲಿ ಆನಂದಾಶ್ರುಗಳು ತುಂಬಿರಲು ನಮಸ್ಕರಿಸಿ ನಾನಾವಿಧವಾಗಿ ಸ್ತೋತ್ರಮಾಡಿ ಹೇ ಶಂಕರಾ, ಸರ್ವೇಶ್ವರಾ, ಸಂಗಮೇಶ್ವರಾ, ನಿನ್ನ ಪಾದಕಮಲಗಳನ್ನು ಕಂಡು ನಾನು ಕೃತಾರ್ಥನಾದೆನೆಂದು ಭಕ್ತಿಯಿಂದ ಕೊಂಡಾಡುತ್ತಿರಲು ಶಂಕ ರನು ಆತನನ್ನು ಪ್ರೀತಿಯಿಂದ ಕೃಪಾ ರಸಭರಿತವಾದ ದೃಷ್ಟಿಯಿಂದ ನಿರೀಕ್ಷಿಸಿ ತೆಗೆದು ಬಿಗಿದಪ್ಪಿಕೊಂಡು ಸಮಾಧಾನಗೊಳಿಸಿ ಹಣೆಗೆ ಭಸ್ಮವನ್ನು ಧರಿಸಿ ಆಶೀರ್ವದಿಸಿ ಏಕಾಂತ ಸ್ಥಳದೊಳು ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡು ಎಲೈ ಮಗನೇ, ನಿನ್ನ ಅಪೇಕ್ಷೆಯೇನು? ಹೇಳೆನಲು ಬಸವೇಶ್ವರನು— ಹೇ ಜಗದೀಶ್ವರನೇ, ನಿನ್ನ ಪಾದಭಕ್ತಿಯೇ ನನಗೆ ಬೇಕಾದ ವರವು ಅಂತಹ ಸದ್ಭಕ್ತಿಯು ಸದಾಚರಣೆಯನ್ನು ಕೃಪೆಮಾಡಿ ನನಗೆ ಬೋಧಿಸಬೇಕೆಂದು ಪ್ರಾರ್ಥಿಸಲು ಪರಶಿವನು ಮೆಚ್ಚಿ ಕೃಪೆಯಿಂದ— ಎಲೈ ಬಸವೇಶ್ವರನೇ, ನನ್ನ ಪಾದಭಕ್ತಿಯು ವಿಷ್ಣು ಬ್ರಹ್ಮಾದಿ ದೇವತೆಗಳಿಗೂ ಸಹ ದುರ್ಲಭವು. ಇದು ಸಕಲ ಪುರುಷಾರ್ಥಗಳಿಗೂ ತವರುಮನೆಯು. ಮೋಕ್ಷವೆಂಬ ಉಪ್ಪರಿಗೆಗೆ ಈ ನನ್ನ ಭಕ್ತಿಯು ಸೋಪಾನವಾಗಿರುವದು. ಶಿವಪೂಜೆ, ಶಿವಕಥಾ ಓದ್ರು ವದು. ಶಿವಕಥಾಶ್ರವಣ ಮಾಡುವದು. ಗುರುಪಾದಪೂಜಾ ಸ್ತೋತ್ರ ಮಾಡುವದು. ನಮಸ್ಕಾರ, ಶಿವನೇ ಸರ್ವೋತ್ತಮನೆಂದು ನಂಬುವದು. ಆತ್ಮ ಸಮರ್ಪಣೆ, ಶಿವನ ಸನ್ನಿಧಿಯಲ್ಲಿ ವಾಸಮಾಡುವದು ಹೀಗೆ ಭಕ್ತಿಯು ನವವಿಧವಾಗಿರುವದು. ಯಾವದಾದರೂ ಒಂದು ವಸ್ತುವಿನಲ್ಲಿ ಧೃಢವಾಗಿ ಇಡುವ ಪ್ರೀತಿಯಂತೆ ನನ್ನಲ್ಲಿ ಇಡುವ ವಿಶ್ವಾಸವೇ ಭಕ್ತಿ ಎನಿಸುವದು. ನನ್ನ ಪಾದಗಳಲ್ಲಿ ಭಕ್ತಿಯುಳ್ಳವನಿಗೆ ಸಮುದ್ರವು ಮೊಳಕಾಲುದ್ದವಾಗುವದು. ಉರಿಯುವ ಅಗ್ನಿಯು ತಣ್ಣಗಾಗುವದು ಮೃತ್ಯುದೇವತೆಯು ದಾಸಿಯಾಗು ವಳು. ಭಯಂಕರವಾದ ಸಿಡಿಲು ಹೂವಿನ ಹಾರವಾಗುವದು. ಹಾಲಾಹಲ ವಿಷವು ಅಮೃತದಂತಾಗುವದು. ಮಾಯಾಪಾಶವು ಕಮಲದದೇಟನೊಳಗಿ

ರುವ ನೂಲಿನ ಎಳೆಯಂತಾಗುವದು. ಹಣೆಯ ಬರೆಹವು ನೀರಮೇಲಿನ ಗುಳ್ಳೆಯಾಗುವದು. ಮನ್ಮಥನು ಹುಲ್ಲಿಗೆ ಸಮಾನನಾಗುವನು. ಅಣಿ ಮಾದಿ ಅಷ್ಟಮಹಾ ಸಿದ್ಧಿಗಳು ಕ್ಷುದ್ರವೆನಿಸುವವು. ಎಲೈ ಬಸವೇಶ್ವರನೇ, ಎರಡನೆಯವರ ದೂಷಣೆಯನ್ನೂ, ಅನ್ಯರ ವಸ್ತು, ಪರಸ್ತ್ರೀಯರಲ್ಲಿ ಆಶೆ ಯನ್ನೂ ಬಿಟ್ಟು ಯಾವಾಗಲೂ ಅನ್ಯದೇವರನ್ನು ನೆನೆಯದೆ ಆಶೆಯನ್ನು ಬಿಟ್ಟು ಗುರುಗಳಿಗೆ ದೇಹವನ್ನೂ, ಲಿಂಗಕ್ಕೆ ಮನಸ್ಸನ್ನೂ, ಜಂಗಮ ಮೂರ್ತಿಗೆ ಧನವನ್ನೂ ಸಮರ್ಪಿಸಿ ಶೋಭಿಸುವವನೇ ಶಿವಭಕ್ತನು. ತಾನಾಗಿ ಬಂದ ಜಂಗಮನಲ್ಲಿ ಕುಲ, ರೂಪ, ಶೀಲ, ಸೌಂದರ್ಯಾದಿಗಳನ್ನೂ, ವಿದ್ಯಾ, ವಿನಯಗಳನ್ನೂ ನೋಡದೆ ಆತನು ಸಾಕ್ಷಾತ್ ಶಿವನೆಂದು ನಂಬಿ ಅವನನ್ನು ತೃಪ್ತಿಪಡಿಸಿ ಅವನ ಭಕ್ತಿಯನ್ನೂ, ಪ್ರಸಾದವನ್ನೂ ಸಂಗ್ರಹಿಸುವದು ಭಕ್ತಿ ಯೆನಿಸುವದು. ಎಲೈ ಭಕ್ತ ಶಿಖಾಮಣಿಯೇ, ನೀನೂ ಸಹ ಈ ಮಾರ್ಗದಿಂದ ನಡೆದು ವೀರಶೈವ ಮತವನ್ನು ಉದ್ಧಾರ ಮಾಡು. ಶತ್ರುಗಳಾಗಿರುವ ಅನ್ಯ ಮತದವರನ್ನು ನಿಗ್ರಹ ಮಾಡು. ಶ್ರೇಷ್ಠವಾದ ಕೀರ್ತಿಯನ್ನು ಭೂಮಂಡ ಲದಲ್ಲಿ ಪ್ರಕಾಶಪಡಿಸಿ ಜಂಗಮನು ಕೇಳಿದ್ದನ್ನು ಕಡೆಯಿಲ್ಲದೆ ಸ್ಥಿರಮನಸ್ಸಿ ನಿಂದ ಕೊಡು. ನಿನಗೆ ಬೇಕಾದಷ್ಟು ತೊಂದರೆಗಳುಂಟಾದರೂ ಜಂಗಮ ಪಾದವನ್ನು ಬಿಡದಿರು. ಇದೇ ನಿನಗೆ ಸನ್ಮಾರ್ಗವು. ಪ್ರತಿದಿವಸ ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿಕೊಂಡು ಗುರುಪಾದ ಸ್ಮರಣೆಮಾಡಿ, ಇಷ್ಟಲಿಂಗಾ ರ್ಚನೆ ಮಾಡಿ, ಜಂಗಮ ಪಾದಸೇವೆಯನ್ನು ಕೈಕೊಂಡು ಅವರಿಂದ ತೀರ್ಥ ಪ್ರಸಾದವನ್ನು ಪಡೆದುಕೊಂಡು ಷಡಕ್ಷರಿ ಮಂತ್ರವನ್ನು ಜಪಿಸು. ಇದೇ ನಿನಗೆ ನನ್ನ ಉಪದೇಶವು. ಎಂದು ಹೇಳಿ ಜಂಗಮ ರೂಪಿಯಾದ ಸಂಗಮ ನಾಥನು ದೇವಾಲಯವನ್ನು ಪ್ರವೇಶಿಸಿ ಲಿಂಗದಲ್ಲಿ ಐಕ್ಯನಾದನು. ಸುತ್ತಲೂ ನೆರೆದಿದ್ದ ಶಿವಭಕ್ತರು ಇದನ್ನೆಲ್ಲ ಆಶ್ಚರ್ಯದಿಂದ ನೋಡುತ್ತ ಬಸವೇಶ್ವರನ ಮಹಿಮೆಯನ್ನು ಪುನಃ ಪುನಃ ಸ್ತುತಿಸುತ್ತಾ ನಮಸ್ಕರಿಸುತ್ತಿದ್ದರು. ಬಸವೇ ಶ್ವರನು ಸಹ ಜಂಗಮ ರೂಪಿಯಾದ ಪರಮೇಶ್ವರನು ತನಗೆ ಉಪದೇಶ ಮಾಡಿದ ಮಾತುಗಳನ್ನು ಸದಾ ಧ್ಯಾನಮಾಡುತ್ತಾ ಸಂತೋಷದಿಂದ ಇದ್ದನು.

## ಗಂಗಾಂಬಿಕೆಗೆ ಶಿವದೀಕ್ಷಾ ಸಂಸ್ಕಾರವು

ಈ ಭೂಮಂಡಲಕ್ಕೆ ಮೂಲಾಧಾರವಾಗಿರುವ ಮೇರು ಪರ್ವತದ ದಕ್ಷಿಣ ಭಾಗದೊಳು ಭೂದೇವಿಯ ಬೈತಲೆಯ ಮಣಿಯಂತೆ ಕರ್ನಾಟಕ ದೇಶವು ಶೋಭಿಸುತ್ತಿರುವದು. ಆ ದೇಶದಲ್ಲಿ ಯಾವ ಕಡೆಗೆ ನೋಡಿದರೂ ಬೆಳೆಗಳಿಂದ ತುಂಬಿದ ಹೊಲ, ಗದ್ದೆಗಳೂ, ಹೂ, ಕಾಯಿ, ಹಣ್ಣುಗಳಿಂದ ತುಂಬಿದ ಫಲವೃಕ್ಷಗಳೂ, ಚಿಗುರು, ಮೊಗ್ಗೆ, ಹೂಗಳಿಂದ ಕೂಡಿದ ಹೂವಿನ ಬಳ್ಳಿಗಳೂ, ನಿರ್ಮಲವಾದ ಜಲದಿಂದ ಕೂಡಿದ ಸರೋವರಗಳೂ, ಸಿಂಹ, ಶಾರ್ದೂಲಾದಿ ವನ್ಯ ಮೃಗಗಳಿಂದ ಕೂಡಿದ ಪರ್ವತಗಳೂ, ಮುಗಿಲನ್ನು ಮುಟ್ಟುತ್ತಿರುವ ಹಾಗೂ ತಪಸ್ವಿಗಳಿಂದ ತುಂಬಿದ ಶಿಖರಗಳೂ, ಪ್ರಯಾಣಿಕರಿಗೆ ನೀರಡಿಕೆಯನ್ನು ನಿವಾರಿಸುವ, ನೋಡುವದಕ್ಕೆ ಸುಂದರವಾಗಿ ಮನ್ಮಥನ ವಸಂತ ವನದಂತೆ ಶೋಭಿಸುವ ಕಬ್ಬಿನ ಗದ್ದೆಗಳೂ ಚಂದ ಕಾಣುತ್ತಿರುವವು. ಇಂತಹ ಆ ದೇಶದ ಜನರು ವಿದ್ಯಾ-ವಿನಯ ಸಂಪನ್ನರೂ, ಸತ್ಯವಾಕ್ಯ ಪರಿಪಾಲಕರೂ, ಶಿವಭಕ್ತಾಗ್ರೇಸರರೂ, ಆಶ್ರಮ ಧರ್ಮ ನಿರತರೂ ಆಗಿ ಯಾವಾಗಲೂ ಭಗವಧ್ಯಾನಾಸಕ್ತರಾಗಿ ಜೀವಿಸುತ್ತಿದ್ದರು. ಈ ಜನರಲ್ಲಿ ಕಳವು, ಮೋಸ, ಕೊಲೆ, ಕೆಟ್ಟಕೆಲಸ, ವ್ಯಭಿಚಾರ, ಮತ್ಸರ, ಅಹಂಕಾರ ಜೂಜು, ಉಪಕಾರ ಮಾಡಿದ್ದನ್ನು ಮರೆಯುವದು ಮೊದಲಾದ ದುರ್ಗುಣಗಳು ಶಶವಿಷಾಣದಂತಿರುವವು. ಈ ದೇಶದ ಮಧ್ಯದಲ್ಲಿ ಹರಿಯುತ್ತಿರುವ ಮಹಾನದಿ ಕಾವೇರಿಯು ಅಲ್ಲಲ್ಲಿಗೆ ತೋರುತ್ತಿರುವ ತಾವರೆಗಳಿಂದಲೂ, ಪುಳಿನಸ್ಥಳದಲ್ಲಿ ಸಂಚರಿಸುತ್ತಿರುವ ಹಂಸ ಪಕ್ಷಿಗಳಿಂದಲೂ, ದಂಡೆಗಳಲ್ಲಿ ಬೆಳೆದಿರುವ ಫಲವೃಕ್ಷಗಳಿಂದಲೂ, ಆ ವೃಕ್ಷಗಳಲ್ಲಿ ಗೂಡುಕಟ್ಟಿ ಮರಿಮಾಡಿ ಹಣ್ಣುಗಳ ರಸವನ್ನು ಸಾಕಷ್ಟು ಕುಡಿದು ಮಧುರವಾಗಿ ಹಾಡುತ್ತಿರುವ ಕೋಗಿಲೆ ಮೊದಲಾದ ಪಕ್ಷಿಗಳಿಂದಲೂ, ಎರಡೂ ಕಡೆಗಳಲ್ಲಿ ಹಚ್ಚನೆ ಹಸುರಾಗಿ ಕಂಗೊಳಿಸುತ್ತಿರುವ ಗದ್ದೆಗಳಿಂದಲೂ ಕೂಡಿ ತನ್ನ ಐಶ್ವರ್ಯವನ್ನು ತೋರ್ಪಡಿಸುವದಕ್ಕಾಗಿ :ರತ್ನಗರ್ಭೆಯು ಹೊರಗೆ ಹಾಕಿದ ಪಚ್ಚರತ್ನಗಳೆಂಬ ಹಾಗೆ ಹೊಳೆಯುತ್ತಿರುವದು. ಸರ್ವ ಜೀವಿಗಳೂ ತನ್ನ ತೀರ್ಥದಲ್ಲಿಯೇ ಇರುವವೆಂದು ಸೂಚಿಸುವದೋ ಎನ್ನುವ ಹಾಗೆ ಈ ನದಿಯಲ್ಲಿ ಅನೇಕ ಪ್ರಕಾರವಾದ ಜಲಚರ ಪ್ರಾಣಿಗಳೂ ಕಂಗೊಳಿಸುವವು. ಗದ್ದೆಗಳಲ್ಲಿ ಕೆಲಸ ಮಾಡುತ್ತ ಕಾಳು

ಗಳನ್ನು ತಿನ್ನುವದಕ್ಕೆ ಬಂದ ಗಿಳಿಗಳನ್ನು ಓಡಿಸುತ್ತಿರುವ ಒಕ್ಕಲಗಿತ್ತಿಯರು ಕಾಮನ ವಿಜಯ ಧ್ವಜದಂತೆ ಕಂಗೊಳಿಸುತ್ತಿರುವರು. ಮೂರು ಲೋಕಗಳನ್ನು ಗೆದ್ದು ಸ್ವಾಧೀನ ಪಡಿಸಿಕೊಳ್ಳುವೆನೆಂದು ಪ್ರಯತ್ನಿಸುತ್ತಿರುವ ಮನ್ಮಥನಿಗೆ ಬೇಕಾದಷ್ಟು ಬಿಲ್ಲುಗಳನ್ನು ಸಿದ್ಧಗೊಳಿಸಿರುವಳೋ ಎಂಬಂತೆ ಭೂದೇವಿಯು ಕಬ್ಬಿನ ಗದ್ದೆಗಳನ್ನು ಬೆಳೆಯಿಸಿರುವಳು. ಅವುಗಳ ಪಕ್ಕದಲ್ಲಿಯೇ ತೆಂಗಿನ ತೋಟಗಳಲ್ಲಿ ಮಂಗಗಳು ಕೆಡವಿದ ಎಳಗಾಯಿಗಳ ನೀರು ಮಡುವು ಆಗಿ ನಿಂತಿರಲು ಅವುಗಳನ್ನು ಆನೆಗಳು ಕುಡಿದು ಸಂತೋಷಪಡುತ್ತಿದ್ದವು. ಇಂತಹ ಹೊಲಗದ್ದೆಗಳ ಮಧ್ಯಭಾಗದಲ್ಲಿ ಭೂಮಿಯೆಂಬ ಸುಂದರ ಸ್ತ್ರೀ ಮುಖಕ್ಕೆ ತಿಲಕದಂತೆ ಎರಡೂ ಕಡೆಗಳಲ್ಲಿ ಬಾಳೆಯ ಕಂಬಗಳನ್ನು ನೆಟ್ಟು, ಮಾವಿನ ಚಿಗುರೆಲೆಗಳನ್ನು ಹಾಸಿ, ಶ್ರೀಗಂಧದ ಚಿಗುರುಗಳನ್ನು ಹೊದಿಸಿ, ಹೂವಿನ ಸರಗಳನ್ನು ಕಟ್ಟಿ, ಲಾವಂಚದ ಗೋಡೆಯನ್ನು ಸುತ್ತಲೂ ಬಿತ್ತಬಿತ್ತರಿಸಿ, ಅದರ ಮೇಲೆ ತಾಳೆಯ ಹೂಗಳನ್ನು ಕೂಡ್ರಿಸಿ ಅಲ್ಲಲ್ಲಿ ತಾವರೆ, ಕಮಲಗಳನ್ನೂ, ಹೊಂಬಾಳೆಗಳನ್ನೂ ಬಿಗಿದಿರುವ ಅರವಟ್ಟಿಗೆಗಳಲ್ಲಿ ಸುತ್ತಲೂ ಚಿಗುರೆಲೆಗಳನ್ನು ಹರವಿ ಮಧ್ಯದಲ್ಲಿ ಮಳಲನ್ನು ಹಾಸಿ ಅದರ ಮೇಲೆ ಚಂದ್ರಕಾಂತದ ಹರವಿಗಳನ್ನಿಟ್ಟು ಅವುಗಳಲ್ಲಿರುವ ತಣ್ಣಗಿರುವ ತಿಳಿ ನೀರನ್ನು ಗಿಂಡಿಗಳಿಂದ ತುಂಬಿ ದಾರಿಕಾರರಿಗೆ ನೀರು ಹನಿಸುತ್ತಿರುವ ಅರವಿಂದ ವದನೆಯರ ಮಂಡಲಿಗಳು ರಾರಾಜಿಸುತ್ತಿರುವವು. ಇಂತಹ ವೈಖರಿಯಿಂದ ಒಪ್ಪುತ್ತಿರುವ ಆ ದೇಶದಲ್ಲಿ ಕಲ್ಯಾಣ ಪಟ್ಟಣವೆಂಬ ರಾಜಧಾನಿಯು ರತ್ನ ಖಚಿತವಾದ ಉಪ್ಪರಿಗೆಗಳಿಂದಲೂ, ಹೃದಯಂಗಮವಾದ ರಾಜಬೀದಿಗಳಿಂದಲೂ, ಯಾವಾಗಲೂ ನಿತ್ಯೋತ್ಸವಗಳಿಂದ ಕೂಡಿದ ಮನೆಗಳಿಂದಲೂ ಸಮಸ್ತ ವಿಧ ಸಂಪತ್ತುಗಳಿಂದ ಕೂಡಿ ಅಮರಾವತಿ, ಅಲಕಾವತಿ, ಭೋಗವತಿ ಎಂಬ ಮೂರು ಲೋಕದ ಪಟ್ಟಣಗಳನ್ನು ತನ್ನ ಸಂಪತ್ತಿನಿಂದ ನಿಂದಿಸುತ್ತಿರುವಂತೆ ಹೊಳೆಯುತ್ತಿರುವದು. ಆ ಕಲ್ಯಾಣ ಪಟ್ಟಣದ ಹೊರಭಾಗದ ತೋಟಗಳಲ್ಲಿ ಮಾವು, ಮಾದಳ, ಜೇಲ, ಬಾಳೆ, ನಿಂಬೆ, ದಾಳಿಂಬ, ಅತ್ತಿ, ಕಿತ್ತಳೆ, ಸುರಗಿ, ಮಲ್ಲಿ, ಅಡಿಕೆ, ತೆಂಗು, ಸುರಹೊನ್ನೆ, ಗೋರಂಟೆ, ಅಶೋಕ, ಚಂದನ, ಬಿಲ್ಪ, ಮಲ್ಲಿಗೆ, ಸಂಪಿಗೆ, ಸೇವಂತಿಗೆ, ಪಾದರಿ ಮೊದಲಾದ ಫಲ-ಪುಷ್ಪ ವೃಕ್ಷಗಳು ಬೀಗಿ ಬೆಳೆದು ವನದೇವತೆಯ ಓಲಗ ಶಾಲೆ

ಯಂತೆ ಶೋಭಿಸುತ್ತಿರುವವು. ಗಿಳಿ, ನವಿಲು, ಕೋಗಿಲೆ ಮೊದಲಾದ ಪಕ್ಷಿಗಳು ಹೂ-ಕಾಯಿ-ಹಣ್ಣುಗಳನ್ನು ತಿಂದು ಸಂತೋಷದಿಂದ ಗಾನ ಮಾಡುತ್ತಿರುವವು. ಈ ಪ್ರಕಾರ ಇರುವ ತೋಟಗಳಲ್ಲಿ ತಾವರೆ, ಕನ್ನೈದಿಲೆ ಮೊದಲಾದ ಹೂಗಳಿಂದ ಕೂಡಿದ ತಿಳಿನೀರಿನ ಸರೋವರಗಳೂ, ಶೈತ್ಯ, ಸೌರಭ್ಯ ಮಾಂದ್ಯ ಯುಕ್ತವಾದ ಮಂದ ಮಾರುತನೂ ಪ್ರಕಾಶಿಸುತ್ತಿರುವನು. ಆ ತೋಟದ ಮಧ್ಯದಲ್ಲಿರುವ ಕಂದಕವು ನಗರನಾರಿಯು ಧರಿಸಿರುವ ಒಡ್ಯಾಣದಂತೆ ಹೊಳೆಯುತ್ತಿರುವದು. ಆ ಕಂದಕದಲ್ಲಿ ಆದಿಶೇಷನು ಈಸಾಡಿ ಕೋಟೆಯ ಮೇಲೆ ಏರಿ ಅಮೃತವನ್ನು ಕುಡಿಯುವದಕ್ಕಾಗಿ ಚಂದ್ರನನ್ನು ಹಿಡಿದುಕೊಳ್ಳುವದಕ್ಕೆ ಪ್ರಯತ್ನಿಸಿ ಒಳಗಿರುವ ಜಿಂಕೆಯನ್ನು ಕಂಡು ಭಯದಿಂದ ಹಿಂದೆ ಸರಿಯುವನು. ಈ ಪ್ರಕಾರ ಶೋಭಿಸುತ್ತಿರುವ ಆ ಕೋಟಿಕೊತ್ತಳಗಳ ಮಧ್ಯದಲ್ಲಿ ಸುತ್ತುವರಿದಿರುವ ಕಲ್ಯಾಣ ಪಟ್ಟಣವು ರತ್ನಖಚಿತವಾದ ಉಪ್ಪರಿಗೆಗಳ ಮೇಲೆ ಇರುವ ಧ್ವಜ ರೂಪವಾದ ಕಪ್ಪು ಬಟ್ಟೆಯನ್ನು ಸೂರ್ಯನು ನೋಡಿ ಭಯದಿಂದ ಹಿಂದಕ್ಕೂ, ಮುಂದಕ್ಕೂ ಅಲೆದಾಡಿದ ಪ್ರಯುಕ್ತ ದಕ್ಷಿಣೋತ್ತರಾಯಣಗಳಾದವು. ಆ ಪಟ್ಟಣದಲ್ಲಿ ಅರಸನ ಓಲಗ ಸಾಲೆಗೆ ಹೋಗುತ್ತಿರುವ ಸಾಮಂತರಾಜರ ಮುಂದೆ ಮೊಳಗುತ್ತಿರುವ ವಾದ್ಯಗಳೂ, ನೀರು ಕುಡಿಯುವದಕ್ಕಾಗಿ ಕೆರೆಗೆ ಹೋಗುತ್ತಿರುವ ಆನೆ ಕುದುರೆಗಳ ಘಂಟೆಯ ಧ್ವನಿಯೂ, ವೇಶ್ಯಾ ಸ್ತ್ರೀಯರ ಮನೆಗಳಲ್ಲಿ ಸುಖಹೊಂದಿ ಬಂದ ವಿಟ ಪುರುಷರ ಮೈಸುವಾಸನೆಗೆ ಅವರನ್ನು ಬೆನ್ನಟ್ಟಬರುತ್ತಿರುವ ಭ್ರಮರಗಳ ಝೇಂಕಾರ ಧ್ವನಿಯೂ ನಿಬಿಡವಾಗಿರುವದು. ಆ ಪಟ್ಟಣದಲ್ಲಿರುವ ಕಂಚುಗಾರರ ಬೀದಿಯನ್ನು ಲಕ್ಷ್ಮಿಯು ತನ್ನ ಒಡಹುಟ್ಟಿದವನಾದ ಚಂದ್ರನಿಗೆ ಶತ್ರುವಿನಂತೆ ತೋರುವ ಸೂರ್ಯನನ್ನು ಗೆಲ್ಲುವದಕ್ಕಾಗಿ ಅನೇಕ ಜನ ಸೂರ್ಯರನ್ನು ಪಡೆದುಕೊಂಡಿರುವಂತೆ ಪ್ರಕಾಶಿಸುತ್ತಿರುವದು. ಪಾತಾಳ ಲೋಕದಲ್ಲಿರುವ ನಾಗರತ್ನವನ್ನೂ, ಜಲದಲ್ಲಿ ಮುಳುಗಿ ಹೋಗಿರುವ ಕೌಸ್ತುಭ ಮಣಿಯನ್ನೂ, ಕಣ್ಣಿಗೆ ಕಾಣದಿರುವ ಚಿಂತಾಮಣಿಯನ್ನೂ, ತಮ್ಮ ಕಾಂತಿಗಳಿಂದ ಹೀಯಾಳಿಸುತ್ತಿರುವ ರತ್ನಗಳಿಂದ ತುಂಬಿಕೊಂಡಿರುವ ಚಿನ್ನಗಾರ (ಸರಾಫ)ರ ಅಂಗಡಿಗಳು ಹೊಳೆಯುತ್ತಿರುವವು. ಕಪ್ಪು ಕಮಲದ ಸುವಾಸನೆಯಿಂದ ಕೂಡಿದ ಬೆಳದಿಂಗಳೂ, ಕೆಂಪು ಕಮಲದ ವಾಸನೆಯನ್ನು ಹೊಂದಿ

ರುವ ಬಿಸಿಲೂ, ಮೊಗ್ಗೆ-ಮಲ್ಲಿಗೆ-ಹೂಗಳ ವಾಸನೆಯನ್ನೊಳಗೊಂಡಿರುವ ಕತ್ತಲೆಯೂ, ಅನ್ಯೋನ್ಯವಾಗಿ ಕಾದಾಡುವಂತೆ ಗುಡ್ಡೆ ಮಾಡಿರುವ ಪಚ್ಚ ಕರ್ಪೂರ, ಕೇಸರಿ, ಕಸ್ತೂರಿಗಳ ರಾಶಿಗಳು ಒಪ್ಪುತ್ತಿರುವವು ಅಲ್ಲಿಂದ ಮುಂದೆ ಇರುವ ಹೂಗಳ ಬಾಜಾರದಲ್ಲಿ ಒಬ್ಬ ಹೂವಾಡಗಿತ್ತಿಯು ಸುವಾಸನೆಗಾಗಿ ಮುತ್ತಿಕೊಂಡಿರುವ ತುಂಬಿಗಳುಳ್ಳ ಹೂಸರವನ್ನು ನೋಡಿದರೆ ರತಿಯು ಪುಷ್ಪ ಬಾಣವನ್ನು ಮನ್ಮಥನಿಗೆ ಎತ್ತಿಕೊಡುವಂತೆ ಕಾಣಿಸುತ್ತಿರುವದು. ಈ ಪ್ರಕಾರ ಇರುವ ನಾನಾವಿಧ ಅಂಗಡಿಗಳ ಮಧ್ಯದಲ್ಲಿ ಲಕ್ಷ್ಮಿಯ ಜನ್ಮಸ್ಥಾನವೆನಿಸಿದ ಅರಮನೆಯು ಕಂಗೊಳಿಸುತ್ತಿರುವದು. ಅದರಲ್ಲಿ ಶತ್ರುಗಳೆಂಬ ಆನೆಗಳಿಗೆ ಸಿಂಹ ಸದೃಶನೂ, ದಶದಿಕ್ಕುಗಳಲ್ಲಿ ಹಬ್ಬಿಕೊಂಡಿರುವ ಕೀರ್ತಿಯುಳ್ಳವನೂ, ದೇವೇಂದ್ರನಿಗೆ ಸಮಾನವಾದ ಐಶ್ವರ್ಯವುಳ್ಳವನೂ, ಸೂರ್ಯವಂಶದಲ್ಲಿ ಹುಟ್ಟಿದವನೂ ಆದ ಬಿಜ್ಜಳನೆಂಬ ಮಹಾ ರಾಜಾಧಿರಾಜನು ಮೆರೆಯುತ್ತಿರುವನು. ಅವನು ದಾತೃತ್ವದಲ್ಲಿ ಕಲ್ಪವೃಕ್ಷದಂತೆಯೂ, ಐಶ್ವರ್ಯದಲ್ಲಿ ಲಕ್ಷ್ಮಿಯಂತೆಯೂ, ರೂಪದಲ್ಲಿ ಮನ್ಮಥನಂತೆಯೂ, ಶತ್ರುಗಳಿಗೆ ಅರ್ಜುನನಂತೆಯೂ, ಪಾಂಡಿತ್ಯದಲ್ಲಿ ಬ್ರಹ್ಮನಂತೆಯೂ ಇರುವನು. ಯುದ್ಧದಲ್ಲಿ ಆ ರಾಜನು ಝಳಪಿಸುತ್ತಿರುವ ಖಡ್ಗದ ಕಾಂತಿಯು ಶತ್ರುಗಳಾದ ತಮೋರೂಪರನ್ನು ಕ್ಷಣಮಾತ್ರದಲ್ಲಿ ನಿವಾರಣೆ ಮಾಡುವದನ್ನು ನೋಡಿ ಖಡ್ಗವೆಂಬ ಮುದಿಗುಂಟಣಿಯು ಶತ್ರುರಾಜರನ್ನು ದೇವಲೋಕಕ್ಕೆ ಕಳುಹಿಸಿ ದೇವತಾ ಸ್ತ್ರೀಯರಿಂದ ಸುಖಪಡುವ ವರನ್ನಾಗಿ ಮಾಡಿ ಶತ್ರುರಾಜರ ಮಸ್ತಕ ರಕ್ತವೆಂಬ ಪುಷ್ಪಮಾಲಿಕೆಯನ್ನು ತಾನು ಸಂಪಾದಿಸುವಳು. ಇಂತಹ ಪ್ರತಾಪ ಶಾಲಿಯಾದ ಆ ರಾಜನಿಗೆ ನೀತಿ ಸಂಪನ್ನನೂ, ಚತುಃಶಾಸ್ತ್ರಗಳನ್ನು ಬಲ್ಲವನೂ, ರಾಜತಂತ್ರ ಪ್ರವೀಣನೂ, ದುಷ್ಟ ನಡತೆಯನ್ನು ಸ್ವಪ್ನದಲ್ಲಿ ಸಹ ಕಾಣದವನೂ, ಸತ್ಕುಲದಲ್ಲಿ ಹುಟ್ಟಿದವನೂ, ಉದಾರಿಯೂ, ಶಕ್ತಿ, ಭಕ್ತಿಗಳಿಂದ ಕೂಡಿದವನೂ, ಗಂಭೀರ ಸ್ವಭಾವದವನೂ ಆದ ಬಲದೇವನೆಂಬ ಮಂತ್ರಿಶ್ರೇಷ್ಠನು ಇದ್ದನು. ಈತನೇ ಮಾದಲಾಂಬಿಕಾದೇವಿಯ ಹಿರಿಯಣ್ಣನು. ಈತನಿಗೆ ಮತ್ತಗಜಗಾಮಿನಿಯೂ, ಚಕೋರೇಕ್ಷಣೆಯೂ, ಸರ್ವಾಂಗ ಸುಂದರಳೂ, ನವಯೌವ್ವನ ಭರಿತಳೂ, ಆದ ಗಂಗಾಬಿಕೆಯೆಂಬ ಒಬ್ಬ ಮಗಳಿದ್ದಳು. ನಮಗೆ ಒಡೆಯನಾದ ಚಂದ್ರನನ್ನು ನಿನ್ನ ಮುಖದ ಕಾಂತಿಯಿಂದ

ಸೋಲಿಸಬೇಡ ಎಂದು ಕೇಳಿಕೊಳ್ಳುವಂತೆ ಗಂಗಾಬಿಕೆಗೆ ನಮಸ್ಕಾರ ಮಾಡು ತ್ತಿರುವ ನಕ್ಷತ್ರಗಳೇ ಉಗುರುಗಳಾಗಿದ್ದವು. ಈ ಸ್ತ್ರೀ ರತ್ನದ ತೊಡೆಗಳ ಸೌಭಾಗ್ಯವನ್ನು ಹೊಂದಬೇಕೆಂದು ಬಾಳೆಯ ಕಂಬಗಳು ನಾರು ಮಡಿಯನ್ನುಟ್ಟುಕೊಂಡು ಯಾವಾಗಲೂ ನೀರನ್ನೇ ಕುಡಿಯುತ್ತ ಈಗಲೂ ಕಾಡಿನಲ್ಲಿಯೇ ಇರುವವು. ಆ ಸುಂದರಿಯ ಜಡೆಯೆಂಬ ಯಮುನಾನದಿಯ ಮಳಲು ದಿಣ್ಣೆಯಂತೆ ನಿತಂಬಗಳು ಶೋಭಿ ಸುತ್ತಿದ್ದವು, ಮೂರು ಲೋಕಗಳನ್ನು ಗೆಲ್ಲುವುದಕ್ಕಾಗಿ ಮನ್ಮಥನು ಒರೆ ಯಿಂದ ಕತ್ತಿಯನ್ನು ತೆಗೆದು ಪೂಜಿಸುವದಕ್ಕಾಗಿ ಇಟ್ಟಂತೆ ಲೋಮರಾಜಿ ಯಿಂದ ಕೂಡಿದ ಬಡನಡುವು ಕಂಗೊಳಿಸುತ್ತಿರುವದು. ಸ್ತನಾಗ್ರಗಳಲ್ಲಿ ಲೇಪಿಸಿರುವ ಕುಂಕುಮ, ಕೇಸರಿಯು ಉದುರಿ ಹೊಕ್ಕಳ ಮೇಲೆ ಸಿಂತಿರಲು ಸೂರ್ಯನ ಕಿರಣದಿಂದ ಅರಳಿದ ಬಂಗಾರದ ಕಮಲದಂತೆ ಹೊಳೆಯುತ್ತಿರು ವದು. ಕಂಠಗತವಾದ ಮುಕ್ತಾಹಾರವೆಂಬ ಅಮೃತಧಾರೆಯನ್ನು ಪಾನ ಮಾಡಲು ಹೊಕ್ಕಳವೆಂಬ ಹುತ್ತದಿಂದ ಹೊರಟ ಕೃಷ್ಣ ಸರ್ಪದ ಮರಿಯಂತೆ ಕಾಣುತ್ತಿರುವದು. ನೋಡುವವರ ದೃಷ್ಟಿ ತಾಕಿ ಬಡವಾಗದೆ ಇರಲೆಂದು ಮನ್ಮಥನು ಹೂಧೂಳಿಯೆಂಬ ಭಸ್ಮದಿಂದ ಮೂರು ಕಟ್ಟಿಗಳನ್ನು ಕಟ್ಟಿರು ವನೋ ಎನ್ನುವ ಹಾಗೆ ತ್ರಿವಳಿಗಳು ಕಾಣುತ್ತಿರುವವು. ಆಕೆಯ ಕುಚಗಳ ಸೌಂದರ್ಯವನ್ನು ಅಪೇಕ್ಷಿಸಿದ ಕಮಲದ ಮೊಗ್ಗೆಗಳು ಜಲಸ್ನಾನ ವನ್ನು ಮಾಡಿ ಭ್ರಮರಗಳೆಂಬ ಕಾರಣದಿಂದ ಧ್ವನಿ ಮಾಡುತ್ತ ತಪೋ ನಿಯಮವನ್ನು ಹೊಂದಿದವು. ತೋಳುಗಳ ಕೋಮಲತನವನ್ನು ಸಂಪಾದಿ ಸುವದಕ್ಕಾಗಿ ಕಮಲದದೇಟುಗಳು ಬ್ರಹ್ಮನಲ್ಲಿ ಮೊರೆ ಇಟ್ಟವು. ಪರಮೇಶ್ವ ರನು ನಮ್ಮನ್ನು ಕೊನೆಗಣ್ಣಿನಿಂದ ಸಹ ನೋಡುವದಿಲ್ಲವಾದ್ದರಿಂದ ನಾವು ಈ ಗಂಗಾಬಿಕೆಯನ್ನು ಸೇವಿಸಿಕೊಂಡು ಶಿವಪೂಜೆಯನ್ನು ಮಾಡಬೇಕೆಂದು ಕೈ ಬೆರಳುಗಳನ್ನು ಸೇರಿದವೋ ಎಂಬಂತೆ ಉಗುರುಗಳು ಹೊಳೆಯುತ್ತಿರುವವು. ಗಂಗಾಂಬಿಕೆಯ ಚಂದ್ರನಂತಹ ಮುಖಕಾಂತಿಗೆ ಸೋತ ಕಮಲವು ನೀರಿನಲ್ಲಿ ಮುಳುಗಿ ಪೂರ್ಣ ಚಂದ್ರೋದಯವಾದ ಕೂಡಲೆ ಆಕೆಯ ಮುಖಕಮಲ ವನ್ನು ನೆನೆದು ಈಗಲೂ ಅರಳದೆ ಮೊಗ್ಗೆಯಾಗಿ ದುಃಖಿಸುತ್ತ ಜಲದಲ್ಲಿಯೇ ಮುಳುಗಿಕೊಂಡಿರುವದು. ಮದನರಾಜನು ದಿಗ್ವಿಜಯಾರ್ಥವಾಗಿ ಈ

ಸುಂದರಿಯ ಮುಖಚಂದ್ರನನ್ನು ಪೂಜಿಸಿದ ಬಂದುಗೆಯಂತೆ ತೊಂಡೆಹಣ್ಣಿನಂತೆ ಕೆಂಪಾದ ತುಟಿಗಳು ಒಪ್ಪುತ್ತಿದ್ದವು. ಈ ಲೋಕದಲ್ಲಿ ಕಂದಿ ಹೋಗುತ್ತಿರುವ ಮಲ್ಲಿಗೆ ಹೂವಿನ ಮೊಗ್ಗೆಯನ್ನು ಕುಂದದ ಮೊಗ್ಗೆಯೆಂದು ಕರೆಯುವದು ಅನುಚಿತವಲ್ಲದೆ ಸದಾ ಕುಂದದಿರುವ ಈ ಗಂಗಾಂಬಿಕೆಯ ಮುಗುಳ್ನಗೆಯೆಂಬ ಪ್ರಸೂನಗಳನ್ನು ಕುಂದದೆ ಇರುವ ಮೊಗ್ಗೆಗಳೆಂದು ಕರೆಯುವದು ಉಚಿತವೆಂಬಂತೆ ತೋರುತ್ತಿರುವದು ನಿಜವಾದ ಹೊಳಪಿನಿಂದ ಕೂಡಿದ ಆಕೆಯ ಗಲ್ಲಗಳು ಮೂರು ಕಾಲಗಳಲ್ಲಿ ಮೂರು ವಿಧವಾದ ಬೆಳಕನ್ನು ಹೊಂದುವ ಚಂದ್ರನನ್ನು ತಿರಸ್ಕರಿಸುತ್ತಿರುವವು. ಆ ಬಾಲೆಯ ಮೂಗಿನ ಸೌಂದರ್ಯವನ್ನು ಹೊಂದಬೇಕೆಂದು ಸಂಪಿಗೆ ಗಿಡವು ಎಷ್ಟು ಹೂಗಳನ್ನು ಬಿಟ್ಟರೂ ಅವುಗಳಲ್ಲಿ ಒಂದೂ ಸರಿ ಹೋಗದ್ದರಿಂದ ಈಗಲೂ ಹೂಗಳನ್ನು ಬಿಡುತ್ತಿರುವದು. ಎಲೈ ಕಿವಿಯೇ, ನಾವು ನಿನಗೆ ಆಭರಣವಾಗುವೆವು. ನೀನು ಕನ್ನೈದಿಲೆಯ ಆಭರಣವನ್ನು ಬಿಟ್ಟು ಬಿಡು ಎಂದು ಹೇಳುವಂತೆ ಕಣ್ಣುಗಳು ಆಕರ್ಣಪೂರಿತವಾದವು. ಆ ಮಂಗಳಾಂಗಿಯ ಲಾವಣ್ಯವೆಂಬ ಜಲದಲ್ಲಿ ಎಳೆತೆರೆಯು ರೆಪ್ಪೆಗಳ ತುದಿಯಲ್ಲಿ ಬಂದು ಸೇರಿದಂತೆ ಹುಬ್ಬುಗಳು ಅಂದವಾಗಿರುವವು. ಜಡೆಯೆಂಬ ಮೋಡಗಳ ತೆರೆಯಲ್ಲಿ ಹುಟ್ಟಿ ಅರ್ಧಭಾಗ ಹೊರಗೆ ಬಂದಿರುವ ಚಂದ್ರನಂತೆ ಆಶೋಭನಾಂಗಿಯ ಹಣೆಯು ಕಾಣುತ್ತಿರುವದು. ಆಕೆಯು ಜಡೆಯನ್ನು ಕಟ್ಟಿದಾಗ ಆ ಜಡೆಯನ್ನು ನವಿಲುಗಳು ನೋಡಿ ಅವನ್ನು ಕಡಿಯಲು ಶಕ್ತಿ ಸಾಲದೆ ಅವನ್ನೇ ಹೋಲುತ್ತಿರುವ ಸರ್ಪಗಳನ್ನು ಆಗ್ರಹದಿಂದ ಕಡಿಯಲು ಈಗಲೂ ಹಾತೊರೆಯುತ್ತಿರುವವು. ಇಂತಹ ರೂಪ–ಲಾವಣ್ಯಗಳಿಂದ ಕೂಡಿದ ಗಂಗಾಂಬಿಕೆಯು ತನಗೆ ತಕ್ಕಂತಹ ಸದ್ಗುಣಗಳನ್ನು ಹೊಂದಿದ್ದಳು. ಒಂದು ದಿವಸ ಆಕೆಯ ರೂಪ–ಲಾವಣ್ಯಗಳನ್ನೂ, ಯೌವನೋದಯವನ್ನೂ ತಂದೆಯು ನೋಡಿ ಈಕೆಗೆ ತಕ್ಕವರನನ್ನು ಎಲ್ಲಿನೋಡಲಿ? ಎಂದು ಹೆಂಡತಿಯೊಡನೆ ಯೋಚನೆಮಾಡುತ್ತಿರುವ ಸಮಯಲ್ಲಿ ತನ್ನಿಷ್ಟಕ್ಕೆ ತಾನೇ ಜ್ಞಾಪಕಕ್ಕೆತೆಗೆದುಕೊಂಡು ಮಾದಲಾಂಬಿಕೆಯ ಹೊಟ್ಟೆಯಲ್ಲಿ ಹುಟ್ಟಿರುವ ಒಬ್ಬ ಸತ್ಪುತ್ರನು ಸಂಗಮನಾಥನ ಅನುಗ್ರಹಹೊಂದಿ ಅಮೋಘ ಸದ್ಗುಣಗಳನ್ನು ಪಡೆದು ಕಪ್ಪಡಿಯಲ್ಲಿ ವಾಸಮಾಡಿಕೊಂಡಿದ್ದಾನೆ. ಅವನೇ ನನಗೆ ಅಳಿಯನಾಗಲು ತಕ್ಕವನೆಂದು ಆಲೋಚಿಸಿ ಆ ಬಲದೇವ

ಮಂತ್ರಿಯು ಮುಂದೆ ತುಸು ದಿವಸಗಳಲ್ಲಿಯೇ ಸಮಸ್ತ ರಾಜವೈಭವದೊಂದಿಗೆ ಕಪ್ಪಡಿಗೆ ಬಂದನು. ಅಲ್ಲಿ ಶಿವಗಣ ಸಮೂಹ ಮಧ್ಯದಲ್ಲಿ ವಿರಾಜಮಾನ ನಾಗಿರುವ ಬಸವೇಶ್ವರನನ್ನು ನೋಡಿ ಸಂತೋಷಾತಿಶಯದಿಂದ ಪುಲಕಿತ ನಾಗಿ ನಮಸ್ಕರಿಸಿ ಆತನಿಗೆ ವೀಳ್ಯವನ್ನು ಕೊಟ್ಟು ತನ್ನ ಮಗಳನ್ನು ಪರಿಗ್ರಹಿ ಸಬೇಕೆಂದು ಬೇಡಿಕೊಂಡು ಆತನ ಒಪ್ಪಿಗೆ ಪಡೆದು ಬಲದೇವನು ತನ್ನ ಪಟ್ಟಣವನ್ನ ಸೇರಿ ಪ್ರಸಿದ್ಧರಾದ ಶಿವಶಿಲ್ಪಿಗಳಿಂದ ವಿವಾಹ ಮಂಟಪವನ್ನು ಸಿದ್ಧಗೊಳಿಸಿ ಲಗ್ನದ ಇತರ ಸಿದ್ಧತೆಯ ಕಾರ್ಯಗಳಲ್ಲಿ ಎಡೆಬಿಡದೆ ತೊಡಗ್ದು ವವನಾದನು. ಇತ್ತ ಬಸವೇಶ್ವರನು ಬಲದೇವನು ತನಗೆ ಅರ್ಪಿಸುತ್ತೇ ನೆಂದು ಹೇಳಿದ ಗಂಗಾಬಿಕೆಗೆ ಗುರುಗಳಾದ ಸಂಗಮನಾಥನಲ್ಲಿ ಪ್ರಾರ್ಥನಾ ಪೂರ್ವಕವಾಗಿ ಶಿವದೀಕ್ಷೆಯನ್ನು ಮಾಡಿಸಿ ಈಶ್ವರರೂಪಿಯಾದ ಸಂಗಮ ನಾಥನ ಪಾದಪೂಜೆಯಲ್ಲಿ ನೆಲೆಗೊಂಡ ಮನಸ್ಸುಳ್ಳವನಾಗಿ ಸಂತೋಷ ದೊಂದಿಗೆ ಸ್ಥಿರಮನಸ್ಕನಾಗಿದ್ದನು.

## ಬಸವೇಶ್ವರ ಗಂಗಾಂಬಿಕೆಯರ ವಿವಾಹವು

ಇತ್ತಲ್ ಆ ಕಲ್ಯಾಣ ಪಟ್ಟಣದಲ್ಲಿ ಬಲದೇವ ಮಂತ್ರಿಯು ತನ್ನ ಮಗ ಳಾದ ಗಂಗಾಂಬಿಕಾದೇವಿಗೆ ಪರಿಣಯವನ್ನೆಸಗಲೆಳಿಸಿ ರತ್ನಗಳನ್ನು ಕೆತ್ತಿದ ಚಂದ್ರಕಾಂತದ ಗೋಡೆಗಳಿಂದಲೂ, ಮರಕತದ ಜಗುಲಿಗಳಿಂದಲೂ, ನೀಲ ಮಣಿಯ ಕಂಬಗಳಿಂದಲೂ, ಸುವರ್ಣದಿಂದ ನಿರ್ಮಿತವಾದ ಪುತ್ಥಳಿಗ ಳಿಂದಲೂ, ಮುತ್ತಿನ ಕುಚ್ಚಿನಿಂದಲೂ, ಮಧುರ ಪುಷ್ಪಭರಿತವಾದ ಲತೆ ಗಳಿಂದ ಕೂಡಿದ ಪಟ್ಟೆಯ ಮಡಿಯ ಮೇಲ್ಕಟ್ಟಿನಿಂದಲೂ, ರತ್ನದಿಂದ ಕೆತ್ತ ನೆಯ ಕೆಲಸವನ್ನು ಮಾಡಿದ ಶ್ವೇತಧ್ವಜಗಳಿಂದಲೂ, ಪಚ್ಚೆಮಣಿಯ ಸಾರಣೆ ಯಿಂದಲೂ, ಹವಳದ ರಂಗವಲ್ಲಿಗಳಿಂದಲೂ, ನವರತ್ನ ಶೋಭಿತವಾದ ಹಸೆಯ ಜಗುಲಿಯಿಂದಲೂ, ಹೊಳೆಯುತ್ತಿರುವ ಮಂಟಪವನ್ನು ಉಚಿತ ಮಂತ್ರಿಗಳಿಂದ ಮಾಡಿಸಿ, ಮದುವೆಗಾಗಿ ಬರುವ ಬೀಗರೇ ಮೊದಲಾದ ಇತರ ಜನಗಳಿಗೆ ತಕ್ಕಂತೆ ಬೇರೆ ಬೇರೆ ಬಿಡಾರಗಳನ್ನು ನಿಬಿಡವಾಗಿ ರಚಿಸಿ, ವಿವಾಹ ಸಾಮಗ್ರಿಗಳಾದ ಅರಿಸಿಣ, ಕುಂಕುಮ, ಸುಗಂಧ ದ್ರವ್ಯಗಳು, ಗಂಧ, ಪುಷ್ಪ ದರ್ಭೆ, ಹೊಂಬಾಳೆ, ಜಾಗರ, ಬಾಸಿಂಗ, ಹಾಲು, ಮೊಸರು, ತುಪ್ಪ, ಜೇನು

ತುಪ್ಪ, ರತ್ನಕಲಶಗಳು, ಗೋರೋಜನ, ಕೇಸರಿ, ಛತ್ತ್ರದ ಅರಳು, ಮಡಿ, ಪೀತಾಂಬರಗಳು ಮೊದಲಾದ ಸಮಸ್ತ ಸಾಮಗ್ರಿಗಳನ್ನುಸಿದ್ಧ ಪಡಿಸಿಕೊಂಡನು. ಪುರನಿವಾಸಿಗಳು ಮಂತ್ರಿಪುತ್ರಿಯ ವಿವಾಹಕ್ಕೋಸುಗ ಪಟ್ಟಣವನ್ನು ಸುಣ್ಣ, ಬಣ್ಣ, ಪನ್ನೀರುಗಳಿಂದ ಸಾರಿಸಿ, ಕಸ್ತೂರಿಯನ್ನು ಚೆಲ್ಲಿ, ಕುಂಕುಮ, ಕೇಸರಿ ಗಳಿಂದ ರಂಗವಲ್ಲಿಯನ್ನು ರಚಿಸಿ, ಬಾಳೆಯ ಕಂಬಗಳಿಂದಲೂ, ಮಾವಿನ ಚಿಗುರುಗಳಿಂದಲೂ, ಕಲಶ, ಕನ್ನಡಿಗಳಿಂದಲೂ, ಹೀಗೆ ನಾನಾವಿಧವಾಗಿ ನೋಟಕರ ಕಣ್ಮನಗಳನ್ನು ಆಕರ್ಷಿಸುವ ನಯನ ಮನೋಹರವಾದ ಚಿತ್ರ ಗಳಿಂದ ಅಲಂಕರಿಸಿ ಮಂಗಲಕರವಾದ ಸಮಸ್ತ ಸಂತೋಷ ವಾಕ್ಯಗಳನ್ನು ಪರಸ್ಪರರೊಂದಿಗೆ ಸಂಭಾಷಣೆ ಮಾಡುತ್ತಾ ಗಂಗಾಂಬಿಕೆಯ ವರನಾದ ಬಸ ವೇಶ್ವರನ ಆಗಮನವನ್ನು ನಿರೀಕ್ಷಿಸಲು ಕುತೂಹಲವುಳ್ಳವರಾಗಿರುತ್ತಿರಲು ಬಲದೇವನು ಬಂಧು-ಬಾಂಧವರು ಪರಿವಾರ ಸಮೇತ ಶೈವ ಭಕ್ತಸಮೂಹ ದೊಡನೆ ಕಪ್ಪಡಿಗೆ ಬಂದು ಬಸವೇಶ್ವರನನ್ನು ಕಂಡು ಸನ್ಮಾನ ಮಾಡಿ ವಿವಾ ಹಾರ್ಥವಾಗಿ ಕಲ್ಯಾಣ ಪಟ್ಟಣಕ್ಕೆ ದಯಮಾಡಿಸಬೇಕೆಂದು ಬಿನ್ನವಿಸಿಕೊಂಡು ಸರ್ವಾಲಂಕಾರದೊಡನೆ ಸಿದ್ಧಗೊಳಿಸಿ ಜೊತೆಯಲ್ಲಿ ತಂದಿದ್ದ ಆನೆಯ ಮೇಲೆ ಬಸವೇಶ್ವರನನ್ನೂ, ಗಂಗಾಂಬಿಕೆಯನ್ನೂಕುಳ್ಳಿರಿಸಿ, ಮುಂದೆ ನಡೆಯುತ್ತಿರುವ ವಾರ ನಾರಿಯರು ಇಂಪಾಗಿ ಹಾಡುತ್ತ, ನರ್ತನಮಾಡುತ್ತಿರಲು, ವಂದಿ ಮಾಗಧರು ಸ್ತುತಿಸುತ್ತಿರಲು, ಭೇರಿ, ಪಟಹ, ಕಹಳೆ, ಶಂಖ, ಜಾಗಟೆ, ಮದ್ದಳೆ, ಮೊದಲಾದ ಮಂಗಳ ವಾದ್ಯಗಳು ಮೊಳಗುತ್ತಿರಲು ತಾನೂ, ತನ್ನ ಆಪ್ತೇಷ್ಟರೂ ಉಚಿತವಾಹನಗಳಲ್ಲಿ ಮಂಡಿಸಿ ರಾಜಧಾನಿಯಾದ ಕಲ್ಯಾಣ ಪುರವನ್ನು ಸೇರುತ್ತಿರಲಾಗಿ ಆ ಪುರದ ಜನರು ತಮ್ಮ ಕೆಲಸ ಜೊಗಸೆಗಳನ್ನು ತೊರೆದು ಶಿವಭಕ್ತನಾದ ಬಸವೇಶ್ವರನ ದರ್ಶನವನ್ನು ಸಂಭ್ರಮದಿಂದ ಮಾಡಿಕೊಳ್ಳುತ್ತಿದ್ದರು ಇಂತಹ ಜನರು ಉಪ್ಪರಿಗೆಗಳ ಮೇಲೂ, ಮನೆಯ ಮಾಳಿಗೆಗಳ ಮೇಲೆಯೂ, ಮುಂಭಾಗದ ಜಗುಲಿಗಳಲ್ಲಿಯೂ, ರಾಜಬೀದಿಗ ಳಲ್ಲಿಯೂ ಕಿಕ್ಕಿರಿದು ನೆರೆದು ನೋಡುತ್ತಿದ್ದರು. ಆಗ ಆ ಮೃಡಭಕ್ತನನ್ನು ಸಡಗರದೊಂದಿಗೆ ನೋಡಲು ಬಂದ ಸುಂದರಿಯೊಬ್ಬಳು ಗಡಬಿಡಿಯಿಂದ ಶಿರಸ್ಸಿನಲ್ಲಿ ಧರಿಸುವ ಪುಷ್ಪಹಾರವನ್ನು ಕೊರಳಿಗೂ, ಕಂಠದಲ್ಲಿ ಧರಿಸುವ ಮುತ್ತಿನಸರವನ್ನು ತಲೆಗೂ, ಹಣೆಗೆ ಅಲಂಕಾರಮಾಡಿಕೊಳ್ಳುವ ಕಸ್ತೂರಿ

ಯನ್ನು ಕಣ್ಣಿಗೂ, ಕಣ್ಣಿಗಾಭರಣವಾದ ಕಾಡಿಗೆಯನ್ನು ಹಣೆಗೂ ಅಲಂಕರಿಸಿ ಕೊಂಡಿರುವದನ್ನು ನೋಡಿ ನೆರೆಹೊರೆಯವರು ಕಿರುನಗೆಯೊಡನೆ ಹಾಸ್ಯ ಮಾಡುತ್ತಿರಲು ಅದನ್ನು ಲಕ್ಷಿಸದೆ ಪರಮಾನಂದದಿಂದ ಬಸವೇಶ್ವರನನ್ನು ನೋಡುತ್ತಿದ್ದಳು. ಹೀಗೆ ರಾಜಬೀದಿಗಳಲ್ಲಿ ಮೆರವಣಿಗೆಯೊಂದಿಗೆ ಬರುತ್ತಿರುವ ಬಸವೇಶ್ವರನಿಗೆ ಹಿಡಿದಿರುವ ಬಿಳಿಯ ಕೊಡೆಯು ತನ್ನ ಗುರುವಾದ ಪರಶಿವನು ಅರ್ಧ ಚಂದ್ರನನ್ನು ಧರಿಸಿರುವಾಗ ಅವನಿಗಿಂತಲೂ ಮಹಿಮಾತಿಶಯನಾದ ಇವನು ಪೂರ್ಣ ಚಂದ್ರನನ್ನೇ ಧರಿಸಿಕೊಂಡಿರುವನು ಎಂಬಂತೆ ಕಂಗೊಳಿಸುತ್ತಿದ್ದನು. ಇಂತಹ ವೃಷಭೇಶ್ವರನನ್ನು ಇದಿರುಗೊಳ್ಳುವದಕ್ಕಾಗಿ ಮಂಗಲಾಕ್ಷತೆಗಳಿಂದ ಕೂಡಿದ ಆರತಿಗಳನ್ನೂ, ಕನ್ನಡಿ-ಕಲಶಗಳನ್ನೂ ಹಿಡಿದುಕೊಂಡು ಬರುತ್ತಿರುವ ಪುರಂಧ್ರಿನಿಕಾಯವನ್ನು ಬಸವೇಶ್ವರನು ಕರುಣಾಕಟಾಕ್ಷದಿಂದ ನೋಡಿ ಮಾವನಾದ ಬಲದೇವನ ಹಸ್ತಲಾಘವವನ್ನು ಪಡೆದು ಕನ್ಯಾಸಮೇತನಾಗಿ ಮದುವೆಯ ಮನೆಯನ್ನು ಪ್ರವೇಶಿಸಿ ಶಿವಗಣ, ಶಿವಭಕ್ತರಿಂದ ಪ್ರಾರ್ಥಿತನಾಗಿ ಮಂಗಲ ಸ್ನಾನವನ್ನು ನೆರವೇರಿಸಿ ಶಿವಪೂಜೆಯನ್ನು ಮಾಡಿ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಸುಖದಿಂದ ಇರುತ್ತಿದ್ದನು.

ಇತ್ತ ಬಲದೇವ ಮಂತ್ರಿಯ ಅಪ್ಪಣೆಯಂತೆ ಸಖಿಯರು ಗಂಗಾಂಬಿಕೆಯ ಬಳಿಗೆ ಬಂದು ದೇವಸುಂದರಿಯರು ಕಲ್ಪವೃಕ್ಷಕ್ಕೆ ಕಾಮಧೇನುವಿನ ಹಾಲನ್ನು ಎರೆಯುವಂತೆ ಸುಗಂಧ ಪರಿಮಳ ಪೂರಿತ ಜಲದಿಂದ ಮಂಗಳ ಸ್ನಾನವನ್ನು ಮಾಡಿಸಿ, ಧನಲಕ್ಷ್ಮಿಯು ಸೂರ್ಯಕಿರಣವನ್ನು ಅಲಂಕರಿಸುವಂತೆ ಪೀತಾಂಬರವನ್ನು ನೀರಿಗೆವಿಡಿದು ಉಡಿಸಿ, ಮುಂಗಾರಿನ ಹಸಿಗಳನ್ನು ದೇಹದಲ್ಲಿ ಧರಿಸುವ ಸೋಗೆ ನವಿಲಂತೆ ಮಲ್ಲಿಗೆಯ ಹೂಗಳನ್ನು ತಲೆಯಲ್ಲಿ ಮುಡಿದುಕೊಂಡು, ಕುಚಗಳೆಂಬ ಚಕ್ರವಾಕಗಳಿಗೆ ಮುಖವೆಂಬ ಚಂದ್ರನಿಂದ ಭಯವುಂಟಾಗದಂತೆ ಎಳೆಬಿಸಿಲಿನ ಮೇಲುಹೊದಿಕೆಯನ್ನು ಹೊಂದಿಸುವಂತೆ ಜರತಾರಿ ಕುಪ್ಪಸವನ್ನು ತೊಡಿಸಿ, ಮುಂಗುರುಳೆಂಬ ತುಂಬಿಗಳಿಗೆ ತಾವರೆಯ ಮಕರಂದವನ್ನು ಕೊಡುವಂತೆ ಬೈತಲೆಯಲ್ಲಿ ಚಂದ್ರವನ್ನಲಂಕರಿಸಿ, ಮುಖವೆಂಬ ಕಮಲವು ಶತ್ರುವಾದ ಬಾಲಚಂದ್ರನನ್ನು ಸೆರೆಹಿಡಿದಿರುವದೋ ಎಂಬಂತೆ ಹಣೆಯಲ್ಲಿ ವಿಭೂತಿಯನ್ನು ಧರಿಸಿ, ಕೆನ್ನೆಗಳೆಂಬ ಚಂದ್ರನನ್ನು

ನಕ್ಷತ್ರಗಳು ಓಲೈಸುತ್ತಿರುವಂತೆ ಕಿವಿಯ ಹೊಳಲೆಗಳಲ್ಲಿ ರತ್ನದೋಲೆಗಳನ್ನು
ಧರಿಸಿ, ಕಡೆಗಣ್ಣ ನೋಟದ ಕಾಂತಿಯೆಂಬ ಬಳ್ಳಿಯು ದಪ್ಪವಾದ ವೊಗೆ
ಯನ್ನು ಬಿಟ್ಟಂತೆ ಮುತ್ತಿನ ಬಾವಲಿಯನ್ನು ತುದಿಗಿವಿಗೆ ಸಿಕ್ಕಿಸಿಕೊಂಡು,
ಚಿಗುರಿನಂತಿರುವ ಸಂಜೆಗೆಂಪಿನ ತುಟಿಯ ಹೊಳಪಿನಲ್ಲಿ ಹೊಸದಾಗಿ ಹುಟ್ಟಿದ
ಶುಕ್ರನೋ ಎಂಬಂತೆ ಮೂಗಿನಲ್ಲಿ ಮುತ್ತಿನ ಬುಲಾಕನ್ನು ಅಳವಡಿಸಿಕೊಂಡು,
ಮುಖವು ಚಂದ್ರನನ್ನು ಗೆದ್ದು ತನ್ನ ಕೆಳಭಾಗದಲ್ಲಿಟ್ಟುಕೊಂಡಿರುವಂತೆ ಕೊರ
ಳಿಗೆ ರತ್ನದ ತಾಲಿಯನ್ನು ಕಟ್ಟಿ, ನೀರುತುಂಬಿದ ಕೊಡವನ್ನು ಮಲ್ಲಿಗೆ
ಹೂವಿನ ಸರಗಳಿಂದ ಪೂಜಿಸುವ ಹಾಗೆ ಎರಡೂ ಕುಚಗಳ ಮೇಲೆ ಮುತ್ತಿನ
ಹಾರವನ್ನು ವಿಸ್ತರಿಸಿ, ಅರಳಿದ ಕೆಂಪು ಕಮಲವು ಸುತ್ತಲೂ ನೆರೆಯಿಂದ
ಸುತ್ತುವರೆದಿರುವದೋ ಎಂಬಂತೆ ಮುಂಗೈಗಳಲ್ಲಿ ಮುತ್ತಿನ ಕಡಗವನ್ನಿರಿಸಿ,
ಚಿನ್ನದಿಂದ ಮಾಡಿದ ಮನ್ಮಥನ ಬಾಣಗಳಿಗೆ ರತ್ನದ ಅಣಸುಗಳನ್ನು ಇಡು
ವಂತೆ ಬೆರಳಿಗೆ ರತ್ನದ ಉಂಗುರವನ್ನು ತೊಡಿಸಿ, ರೋಹಣ ಪರ್ವತವು ರತ್ನ
ಗಳಿಂದ ಅಲಂಕೃತವಾದಂತೆ ನಡುವಿಗೆ ರತ್ನಖಚಿತವಾದ ಒಡ್ಯಾಣವನ್ನು
ಧರಿಸಿ, ತೊಡೆಗಳೆಂಬ ಬಾಳೆಯ ಕಂಬಗಳಿಗೆ ಕುಂಕುಮ, ಕೇಸರಿಯ ಪಾತೆ
ಗಳನ್ನು ಮಾಡಿದಂತೆ ಕಾಲುಗಳಿಗೆ ರತ್ನಖಚಿತವಾದ ಚಿನ್ನದ ಪಾಡಗವನ್ನು
ಧರಿಸಿ ಕುಳ್ಳಿರಿಸಿರಲು,ರತ್ನರೂಪವಾದ ಫಲವನ್ನು ಬಿಟ್ಟಿರುವ ಕಲ್ಪವೃಕ್ಷದಂತೆ
ಶೋಭಿಸುತ್ತಿದ್ದಳು. ಆಕೆಯ ರೂಪ, ರೇಖಾ, ಲಾವಣ್ಯಗಳಿಗನುಸಾರ ಪರಮ
ಶ್ರೇಷ್ಠವಾದ ತೇಜೋರೂಪವಾದ ಕಾಂತಿಯೂ, ಅಧಿಕವಾದ ಶಿವಭಕ್ತಿಯೂ
ಪ್ರಕಾಶಿಸುತ್ತಿದ್ದಿತು. ಬಳಿಕ ವಿವಾಹ ನಿಮಿತ್ತವಾದ ಗಣಪತಿ ಪೂಜಾ,
ಸ್ವಸ್ತಿ ಪುಣ್ಯಾಹ ವಾಚನ, ನಾಂದಿ ಸಮಾರಾಧನ, ಅಂಕುರಾರ್ಪಣ, ಮಂಟಪ
ಪೂಜಾ ಪಂಚಕಲಶ ಸ್ಥಾಪನಾದಿಗಳು ನಡೆದನಂತರ ಬಸವೇಶ್ವರನು ಮದು
ವೆಯ ಜುಗುಲಿಯನ್ನಲಂಕರಿಸಲು ಬಲದೇವ ಮಂತ್ರಿಯು ಸೌಭಾಗ್ಯ ದೇವತೆ
ಯಂತಿರುವ ಮಗಳನ್ನು ಕರೆತಂದು ಆಕೆಯನ್ನು ಜಗುಲಿಯ ಮೇಲೆ ಕೂಡ್ರಿಸಿ
ಮಂಗಲ ವಾದ್ಯಗಳು ಮೊಳಗುತ್ತಿರಲು ಪುರೋಹಿತರು ವೇದಪಾಠಗಳನ್ನು
ಸ್ತುತಿಸುತ್ತಿರಲು, ಬಂಧು-ಬಳಗವು ಸಂತೋಷದಿಂದ ನೋಡುತ್ತಿರಲು,
ಸಂಕಲ್ಪ ಪೂರ್ವಕನಾಗಿ ಗಂಗಾಂಬಿಕೆಯನ್ನು ಬಸವೇಶ್ವರನಿಗೆ ಧಾರೆಯನ್ನೆ
ರೆದು ಸಮರ್ಪಿಸಿದನು. ಬಸವೇಶ್ವರನು ತನ್ನಿಂದ ಪೂಜಿಸಲ್ಪಟ್ಟ ಮಾಂಗಲ್ಯ

ವನ್ನು ಗಂಗಾಂಬಿಕೆಯ ಕೊರಳಲ್ಲಿ ಧಾರಣಮಾಡಿದನು. ಗುರುಪುಂಗವರು ಮಂತ್ರ ಪೂರಿತವಾದ ಪವಿತ್ರ ನದಿಗಳ ಜಲವನ್ನು ವಧೂವರರ ಉತ್ತಮಾಂಗ ಗಳಲ್ಲಿ ಸಂಪ್ರೋಕ್ಷಣೆ ಮಾಡಿದರು. ನೆರೆದ ಭಕ್ತ ಮಾಹೇಶ್ವರರು ಮಂಗಳಾ ಷ್ಟಕವನ್ನು ಪಠಿಸುತ್ತಿರುವಾಗ ಸಮಸ್ತ ಪರಿವಾರದವರೂ ವಧೂವರರಿಗೆ ಅಕ್ಷತಾರೋಪಣವನ್ನು ಮಾಡಿ ಶುಭವಾಗಲೆಂದು ಹಾರೈಸಿದರು. ನಂತರ ಸಪ್ತಪದಿ, ನಾಸಿಕಾಭರಣ, ಫಲಪೂಜಾದಿ ಕರ್ಮಗಳು ಸಾಂಗವಾಗಿ ನೆರವೇರಿ ದವು. ಮಂತ್ರಿಯು ನೆರೆದಿದ್ದ ಸಮಸ್ತ ಜನಗಳಿಗೆ ಫಲಪುಷ್ಪ ತಾಂಬೂಲಾದಿ ಗಳನ್ನೂ, ಗುರುಗಳಿಗೆ, ವೈದಿಕಮಂಡಲಿಯವರಿಗೆ ಅವರ ಇಷ್ಟಾನುಸಾರವಾಗಿ ಗೋವು, ಭೂಮಿ, ಬಂಗಾರ, ದಕ್ಷಿಣೆಗಳನ್ನೂ ದಾನವಾಗಿ ಇತ್ತು ಅವರನ್ನು ತೃಪ್ತಿಪಡಿಸಿ ಸಮಸ್ತ ಸಡಗರದಿಂದೊಪ್ಪುತ್ತಿರುವ ಸಂತರ್ಪಣೆಯಿಂದ ಶಿವ ಮಹಾಗಣಂಗಳಿಗೆ ಆರಾಧನೆಯನ್ನು ನಡೆಸಿದನು. ಬಸವೇಶ್ವರನು ಶಿವಗಣಂ ಗಳ ಪಾದವನ್ನು ಕಿರೀಟವನ್ನಾಗಿಯೂ, ಶಿವವ್ರತವನ್ನು ಕಂಕಣವನ್ನಾಗಿಯೂ, ಸದ್ಗುಣಗಳನ್ನು ಆಭರಣವನ್ನಾಗಿಯೂ, ಶಿವಭಕ್ತಿಯನ್ನು ಖಡ್ಗವನ್ನಾಗಿಯೂ, ಸಂಸಾರವೆಂಬ ತೆರೆಯ ಬಂಧನವು ತೊಲಗಿ ಹೋಗಲಾಗಿ ಶಿವಭಕ್ತರ ದಯಾ ಜಲದಿಂದ ಮಾಡಿದ ಶಿವಭಕ್ತಿಯೆಂಬ ಪತ್ನಿಯನ್ನು ಧಾರಾಪೂರ್ವಕವಾಗಿ ಪಾಣಿಗ್ರಹಣ ಮಾಡಿ ದ್ವಿತೀಯ ವಿವಾಹವಾದವನಂತೆ ಹೊಳೆದು ಗಂಗಾಂಬಿಕೆ ಯೊಡನೆ ಕೂಡಿ ಶಿವಗಣಸಮೇತನಾಗಿ ಕಪ್ಪಡಿಗೆ ದಯಮಾಡಿಸಿ ತನ್ನ ಗುರು ವಾದ ಸಂಗಮನಾಥನಿಗೆ ನಮಸ್ಕರಿಸಿ ಆತನ ಪಾದಪೂಜೆಯನ್ನು ಮಾಡುತ್ತ ಸುಖದಿಂದ ಇದ್ದನು.

## ಬಸವೇಶ್ವರನಿಗೆ ಮಂತ್ರಿಪದ ಪ್ರಾಪ್ತಿಯು

ಅನಂತರ ತನ್ನ ಮಗಳ ಮದುವೆಯ ವೈಭವವನ್ನು ಶಿವನಿಗೆ ಅರುಹಿ ಬರುವದಕ್ಕಾಗಿ ಕೈಲಾಸಕ್ಕೆ ಹೋದನೋ ಎಂಬಂತೆ ಬಲದೇವ ಮಂತ್ರಿಯು ವಿವಾಹವಾದ ತುಸು ದಿವಸಗಳಲ್ಲಿಯೇ ಶಿವಸನ್ನಿಧಿಯನ್ನು ಸೇರಿದನು. ಮಂತ್ರಿಶ್ರೇಷ್ಠನಾದ ಬಲದೇವನ ವಿಯೋಗದಿಂದ ದುಃಖಿತನಾದ ಬಿಜ್ಜಳನು ತನ್ನ ದರ್ಬಾರವನ್ನು ಕೂಡಿಸಿ ಎಲೈ ಸಭಿಕರೇ, ರಾಜತಂತ್ರ ಪ್ರವೀಣನೂ, ಶಿವಾಚಾರಸಂಪನ್ನನೂ, ಸದ್ಗುಣಶೀಲನೂ, ಶಕ್ತಿತ್ರಯಯುಕ್ತನೂ ಆದ

ಬಲದೇವ ಮಂತ್ರಿಯನ್ನು ಕಳೆದುಕೊಂಡ ನಮಗೆ ಈ ರಾಜ್ಯದಿಂದ ಫಲವೇನು? ಅಂತಹ ಸಮರ್ಥ ಮಂತ್ರಿಯು ನಮಗೆ ಇನ್ನು ದೊರಕುವದು ದುಸ್ಸಾಧ್ಯವು. ಎಂದು ಚಿಂತಾಕ್ರಾಂತನಾಗಿ ನುಡಿಯಲು ಸಮೀಪದಲ್ಲಿಯೇ ಇದ್ದ ವಿದ್ವಾಂಸರು ಎದ್ದು ನಿಂತು ಎಲೈ ರಾಜಾಧಿರಾಜನೇ, ನಮ್ಮ ಬಿನ್ನಹವನ್ನು ಚಿತ್ತೈಸಬೇಕು. ಬಲದೇವ ಮಂತ್ರಿವರ್ಯರ ಅಳಿಯಂದಿರಾದ ಬಸವೇಶ್ವರನೆಂಬವರೊಬ್ಬರು ಸರ್ವ ವಿದ್ಯೆಗಳನ್ನು ಬಲ್ಲವರೂ, ಸದ್ಗುಣಶಾಲಿಯೂ, ಕಾರ್ಯಗಳನ್ನು ನೆರವೇರಿಸುವದರಲ್ಲಿ ಅತ್ಯಂತ ದಕ್ಷನೂ, ಈಶ್ವರಾನುಗ್ರಹವನ್ನು ಪಡೆದವರಾಗಿಯೂ ಇದ್ದು ಈಗ ಕಪ್ಪಡಿಯಲ್ಲಿ ವಾಸಿಸುತ್ತಿರುವರು. ಆತನನ್ನು ತಮ್ಮ ಮಂತ್ರಿಯನ್ನಾಗಿ ನಿಯಮಿಸಿಕೊಂಡರೆ ತಮ್ಮ ರಾಜ್ಯವು ಮೊದಲಿಗಿಂತಲೂ ಉತ್ತಮ ಸ್ಥಿತಿಗೆ ಬರುವದಲ್ಲದೆ ನಮ್ಮ ಈ ದೇಶದ ಸೌಭಾಗ್ಯಕ್ಕೂ ಎಣೆಯಿಲ್ಲದಂತಾಗುವದು. ಎಂದು ಹೇಳಲು ಬಸವೇಶ್ವರನ ಮಹಿಮೆಯನ್ನು ಮೊದಲಿನಿಂದ ಕೊನೆಯತನಕ ತಿಳಿದುಕೊಂಡ ಬಿಜ್ಜಳನು ಆತನನ್ನು ಕೂಡಲೇ ಕರೆದುಕೊಂಡು ಬರಲು ಆ ಪಂಡಿತರನ್ನು ಕಪ್ಪಡಿಗೆ ಕಳುಹಿಸಿದನು. ಅವರು ಬಸವೇಶ್ವರನನ್ನುಕಂಡು ನಮಸ್ಕರಿಸಿ ಬಿಜ್ಜಳನ ಅಪೇಕ್ಷೆಯನ್ನು ತಿಳಿಸಿ ಆತನನ್ನು ಒಡಂಬಡಿಸಿ ಸಕಲ ವಸ್ತ್ರ ಮಾಲ್ಯಾದಿ ಅಲಂಕರಣಗಳಿಂದ ಆ ಬಸವೇಶ್ವರನನ್ನು ಅಲಂಕರಿಸಿ ರಾಜಯೋಗ್ಯವಾದ ಪಟ್ಟದಾನೆಯ ಮೇಲೆ ಕುಳ್ಳಿರಿಸಿಕೊಂಡು ಕಲ್ಯಾಣಪಟ್ಟಣಕ್ಕೆ ಕರೆತರುತ್ತಿರಲಾಗಿ ರಾಜಬೀದಿಗಳಲ್ಲಿ ಪನ್ನೀರನ್ನು ಚಲ್ಲಿ, ಮುತ್ತಿನ ರಂಗವಲ್ಲಿಯನ್ನು ಬರೆದು,ರನ್ನಗನ್ನಡಿಯಿಂದ ತೋರಣವನ್ನು ಕಟ್ಟಿ ನಾನಾವಿಧವಾಗಿ ಅಲಂಕರಿಸುತ್ತ ಬಹು ಮನೋಹರವಾಗಿ ಮಾಡಿದ್ದರು. ಮುಂಭಾಗದಲ್ಲಿ ಬರುತ್ತಿರುವ ನಂದಿಧ್ವಜದಿಂದಲೂ, ನಾನಾವಿಧವಾದ ಮಂಗಲವಾದ್ಯಗಳಿಂದಲೂ, ಹೊಗಳುತ್ತಿರುವ ಸ್ತುತಿಪಾಠಕರಿಂದಲೂ, ಚಾಮರವನ್ನು ಹಿಡಿದಿರುವ ವಿದ್ವಾಂಸರುಗಳಿಂದಲೂ ಬರುತ್ತಿರುವ ಬಸವೇಶ್ವರನನ್ನು ಬಿಜ್ಜಳನು ಮಧ್ಯಮಾರ್ಗದಲ್ಲಿಯೇ ಎದುರುಗೊಂಡು ಉತ್ಸಾಹದಿಂದ ಕೂಡಿದವನಾಗಿ ಕುಶಲವಾರ್ತೆಯನ್ನು ಕೇಳಿ ತನ್ನ ಅರಮನೆಗೆ ಕರೆದು ಸಭಾಮಂಟಪದ ಸೆಜ್ಜೆಮನೆಯಲ್ಲಿರುವ ಭದ್ರಾಸನದಲ್ಲಿ ಕುಳ್ಳಿರಿಸಿ ತಾನು ಸಿಂಹಾಸನಾರೂಢನಾಗಿ ಒಡ್ಡೋಲಗವನ್ನು ನೆರೆಯಿಸಿದನು. ಆಗ ಶಂಭುವಿನ ಪ್ರೇರಣೆಯಿಂದ ಆ ಸಭಾಮಧ್ಯದಲ್ಲಿ ಒಂದು ಪತ್ರಿಕೆಯು ಆಕಾಶದಲ್ಲಿಂದ

ಹಾರಿಬಂದು ಬಿದ್ದಿತು. ಅದನ್ನು ಬಿಜ್ಜಳನು ಅತ್ಯಾಶ್ಚರ್ಯದಿಂದ ತೆಗೆದು ಕೊಂಡು ನೋಡಲು ವಿಚಿತ್ರವಾದ ಯಾವದೋ ಒಂದು ಭಾಷೆಯಲ್ಲಿ ಅದು ಬರೆದಿದ್ದಿತು. ಪಂಡಿತ ಮಂಡಲಿಯಲ್ಲಿ ನಾನಾಲಿಪಿಗಳನ್ನು ಬಲ್ಲವರಿಗೆ ಆ ಓಲೆಯನ್ನು ತೋರಿಸಲು ಅದನ್ನು ಯಾರಿಂದಲೂ ಓದಲು ಸಾಧ್ಯವಾಗಲಿಲ್ಲ. ಹೀಗೆ ಎಲ್ಲರಿಗೂ ಅಸಾಧ್ಯವಾದ ಆ ಲಿಪಿಯನ್ನು ಬ್ರಹ್ಮ, ವಿಷ್ಣು, ಈಶ್ವರ, ದೇವಗುರು ಸೇನಾನಿ ಇವರುಗಳಲ್ಲದೆ ಬೇರಾರೂ ಓದಲಾರರು. ಇದು ಶಿವಲಿಪಿ ಎಂದು ಬಸವೇಶ್ವರನು ಹೇಳಲು ಬಿಜ್ಜಳನು ಈ ಲಿಪಿಯನ್ನು ಓದಿದವರಿಗೆ ತನ್ನ ರಾಜ್ಯದಲ್ಲಿ ಸರ್ವಾಧಿಕಾರವನ್ನು ಕೊಡುವೆನೆಂದು ಸಾರಿ ಹೇಳಿದನು. ಆಗ ಬಸವೇಶ್ವರನು ಆ ಪತ್ರಿಕೆಯನ್ನು ತೆಗೆದುಕೊಂಡು ತುಸು ಹೊತ್ತು ಮಸ್ತಕದ ಮೇಲಿರಿಸಿಕೊಂಡು ಶಿವನಲ್ಲಿ ಭಕ್ತಿಯುಳ್ಳವನಾಗಿ ಪುನಃ ಹಸ್ತದಲ್ಲಿ ರಿಸಿ ಸ್ವಲ್ಪವೂ ತಡೆಯಿಲ್ಲದೆ ಸರಳವಾಗಿ ಓದಿಬಿಟ್ಟನು. "ಎಲೈರಾಜನೇ, ನಿನ್ನ ಈ ಸಿಂಹಾಸನದ ಕೆಳಭಾಗದಲ್ಲಿ ಸುವರ್ಣರಾಶಿ ಇದೆ" ಎಂದು ಅದರಲ್ಲಿ ಬರೆದಿದ್ದಿತು. ಕೂಡಲೆ ಆ ಸ್ಥಳವನ್ನು ಅಗಿಯುಸಿ ತೆಗೆದುನೋಡಲಾಗಿ ಕೋಟಿ ಸೂರ್ಯರಂತೆ ಹೊಳೆಯುತ್ತಿರುವ ಬಂಗಾರದ ಗುಡ್ಡೆಯನ್ನು ನೋಡಿ ಬಿಜ್ಜಳನು ಆಶ್ಚರ್ಯಚಕಿತನಾದನು. ನೆರೆದ ಸಭಿಕರೂ ಪರಮಾಶ್ಚರ್ಯ ಭರಿತರಾದರು. ಚಾಲುಕ್ಯರಾಜರಿಂದ ಸ್ಥಾಪಿತವಾಗಿದ್ದ ಆನಿಕ್ಷೇಪದ ಹಣ ವನ್ನು ಬಸವೇಶ್ವರನು ತನ್ನ ಹಸ್ತಗಳಿಂದ ಸ್ಪರ್ಶಮಾಡಲು ಆ ಧನವು ಇಮ್ಮಡಿ ಯಾಯಿತು. ಇಂತಹ ಪ್ರಭಾವವನ್ನು ನೋಡಿ ಬಿಜ್ಜಳನು ತನ್ನ ಆಪ್ತ ಮಂತ್ರಿಗಳನ್ನು ಕುರಿತು— ಎಲೈ ಸಚಿವರೇ, ಈ ಬಸವೇಶ್ವರನು ನಮ್ಮ ಅರಮನೆಯನ್ನು ಪ್ರವೇಶಿಸಿದ ಕೂಡಲೇ ನಮಗೆ ಇಂತಹ ಶುಭಸೂಚ ನೆಯಾಯಿತು. ಇನ್ನು ಮುಂದೆ ಈತನಿಂದ ನಮಗೆ ಹಾಗೂ ನಮ್ಮ ರಾಜ್ಯಕ್ಕೆ ಉಂಟಾಗತಕ್ಕ ಮಂಗಲೋದಯವು ಹೇಗಿರುವದೋ ಹೇಳಲು ಬರಲಾರದು. ಎಂದು ಹೇಳಿ ಬಸವೇಶ್ವರನನ್ನು ಕುರಿತು ಎಲೈ ದೇವನೇ, ನೀನು ಪ್ರಪಂಚ ವನ್ನು ಉದ್ಧರಿಸಲು ಮಾನವ ರೂಪದಿಂದ ಅವತರಿಸಿದ ಈಶ್ವರನೇ ಹೊರತು ಬೇರೆಯಲ್ಲ. ನನ್ನ ಪೂರ್ವಾರ್ಜಿತ ಪುಣ್ಯ ವಿಶೇಷದಿಂದ ನೀನು ದೊರಕಿ ರುವೆ. ಆದುದರಿಂದ ನೀನು ಈ ಸಾಮ್ರಾಜ್ಯದ ದಂಡನಾಯಕಾಧಿಕಾರ ವನ್ನು ವಹಿಸಿಕೊಳ್ಳಬೇಕೆಂದು ಬೇಡಿಕೊಂಡು ಆತನನ್ನು ಬಡಂಬಡಿಸಿ ಮಹಾ

ಮಂತ್ರಿ ಪಟ್ಟವನ್ನು ಕಟ್ಟಿದರು. ಆಗ; ಬಿಜ್ಜಳನು ಬಸವೇಶ್ವರನನ್ನು ಕುರಿತು— ಎಲೈ ಬಸವೇಶ್ವರನೇ, ವಂಶಪಾರಂಪರ್ಯವಾಗಿ ಬಂದ ನನ್ನ ರಾಜ್ಯಪಾಡಳಿತದಲ್ಲಿ ಏಳು ಸಾವಿರ ಆನೆಗಳೂ, ಹನ್ನೆರಡು ಸಾವಿರ ಕುದುರೆ ಗಳೂ, ಹನ್ನೆರಡು ಲಕ್ಷ ಕಾಲಾಳುಗಳೂ, ಶತ್ರುಗಳಿಗೆ ದುಸ್ಸಾಧ್ಯವಾದ ನೂರು ಕೋಟೆಗಳೂ, ಮೂವತ್ತುಕೋಟಿ ವರಹಗಳೂ, ಲೆಖ್ಖವಿಲ್ಲದಷ್ಟು ಧಾನ್ಯ ರಾಶಿಗಳೂ ಇರುವವು. ಇವಲ್ಲದೆ ಅಮೂಲ್ಯವಾದ ರತ್ನಗಳೂ, ವಂಶಕ್ರಮದಿಂದ ಬಂದ ಹನ್ನೆರಡು ಜನ ಮಂತ್ರಿಗಳೂ ಇರುವರು. ಇವರೆಲ್ಲ ರನ್ನು ಈ ದಿವಸ ನಿನ್ನ ಅಂಕಿತದಲ್ಲಿ ಒಪ್ಪಿಸಿರುತ್ತೇನೆ. ನಿಮ್ಮ ಮಾವನಾದ ಬಲದೇವ ಮಂತ್ರಿಯು ಸಂರಕ್ಷಿಸುತ್ತಿದ್ದಂತೆಯೇ ನೀನೂ ಸಹ ಇವರುಗಳನ್ನು ಕಾಪಾಡಿಕೊಂಡು ನನ್ನ ಮನಸ್ಸಿಗೆ ಸಂತೋಷವನ್ನೂ, ಪ್ರಜೆಗಳಿಗೆ ವಿಶ್ವಾಸ ವನ್ನೂ ತೋರ್ಪಡಿಸಬೇಕೆಂದು ಭಿನ್ನವಿಸಿ ಸರ್ವಾಧಿಕಾರವನ್ನು ಆತನಿಗೆ ಒಪ್ಪಿಸಿ ರಾಜೋಚಿತ ಸಕಲ ಮರ್ಯಾದೆಗಳನ್ನು ಮಾಡಿದ ಬಳಿಕ ಬಿಜ್ಜಳ ಮಹಾರಾಜನನ್ನು ಕುರಿತು ಬಸವೇಶ್ವರನು— ಎಲೈ ರಾಜಾಧಿರಾಜನೇ, ಸಮಸ್ತ ಲೋಕಗಳನ್ನು ಸಂರಕ್ಷಿಸುವ ಪರಮೇಶ್ವರನಿಗೆ ತಮ್ಮ ರಾಜ್ಯವನ್ನು ಕಾಪಾಡುವದು ಆಗಲಾರದೇ ? ಆದರೆ ತಾವು ಶಿವಭಕ್ತರಲ್ಲಿ ಭಕ್ತಿಯಿಂದ ಇರುವವಾದರೆ ಜಗದೀಶ್ವರನು ತಮ್ಮನ್ನು ನಿಶ್ಚಯವಾಗಿ ಕಾಪಾಡುವನು. ಒಂದು ವೇಳೆ ಶಿವಭಕ್ತರು ಮುನಿದರೆ ಸಮುದ್ರವನ್ನು ಕುಡಿಯಬಲ್ಲರು ? ಅಗ್ನಿಯನ್ನು ನುಂಗುವರು, ಬೆಟ್ಟವನ್ನು ಪುಡಿಮಾಡುವರು. ಸೂರ್ಯ-ಚಂದ್ರರ ಗತಿಯನ್ನು ನಿಲ್ಲಿಸುವರು. ಆಕಾಶದಲ್ಲಿ ತೂತು ಮಾಡುವರು. ಅವರು ಬಹು ಸಮರ್ಥರು. ಬ್ರಹ್ಮ, ವಿಷ್ಣು, ಇಂದ್ರಾದಿಗಳನ್ನುಸಹ ಗಣನೆ ಮಾಡತಕ್ಕವರಲ್ಲ. ಆದುದರಿಂದ ನೀನು ಅವರಲ್ಲಿ ಅಹಂಕಾರವನ್ನು ತೋರಿಸ ಬೇಡ, ಪ್ರಜೆಗಳಲ್ಲಿ ದಯೆಯನ್ನೂ, ಶತ್ರುಗಳಲ್ಲಿ ಕೋಪವನ್ನೂ ಸಜ್ಜನರಲ್ಲಿ ವಿನಯವನ್ನೂ, ವಿದ್ವಾಂಸರಲ್ಲಿ ಗೌರವವನ್ನೂ, ಯುದ್ಧದಲ್ಲಿ ಶೂರತನವನ್ನೂ ಶಿವನಲ್ಲಿ ಭಕ್ತಿಯನ್ನೂ, ದುಷ್ಟರಲ್ಲಿ ನಿಗ್ರಹವನ್ನೂ ಸದಾ ತೋರುತ್ತಿರಬೇಕು. ಎಂದು ಹಿತೋಪದೇಶವನ್ನು ಮಾಡಿ ಬಿಜ್ಜಳನನ್ನು ಅಂತಃಪುರಕ್ಕೆ ಕಳುಹಿಸಿ ನೆರೆದ ಸಭಿಕರಿಂದ ಬೀಳ್ಕೊಂಡು ಬಲದೇವ ಮಂತ್ರಿಯ ಮನೆಯನ್ನು ಸೇರಿ ಗಂಗಾಂಬಿಕಾಸಮೇತನಾಗಿ ಶಿವಗಣಂಗಳ ಪೂಜೆಮಾಡುತ್ತ ಗಣಕರನ್ನು

ಕರೆಯಿಸಿ ಅವರಿಂದ ರಾಜ್ಯದ ಸಮಸ್ತ ಆಡಳಿತವನ್ನು ತಿಳಿದುಕೊಂಡು ಉತ್ತಮಜನರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಆಯಾ ಕಾರ್ಯಗಳಲ್ಲಿ ನಿಯೋಜಿಸಿ ಸಮಸ್ತ ಅಧಿಕಾರವನ್ನು ವಹಿಸಿಕೊಂಡು ಲೋಕದಲ್ಲಿ ಶಿವನೊಬ್ಬ ನಲ್ಲದೆ ಅನ್ಯದೇವರು ಇಲ್ಲವೆಂದು ಸಿದ್ಧಾಂತಮಾಡಿ ಶಿವಭಕ್ತರನ್ನು ಈಶ್ವರ ನೋಪಾದಿಯಲ್ಲಿ ಕಾಣುತ್ತ ಸಣ್ಣವರು, ದೊಡ್ಡವರು ಎಂಬ ತಾರತಮ್ಯವಿಡದೆ ಜಂಗಮರು ಕೇಳಿದ್ದನ್ನುಕೊಟ್ಟು ಶೈವಮತದವರನ್ನು ಉತ್ಸಾಹಿಸುತ್ತ ಇತರ ಮತದವರನ್ನು ಸಹಿಷ್ಣುತೆಯಿಂದ ಕಾಣುತ್ತ ಜಂಗಮವೇ ಪ್ರಾಣವೆಂದು ತಿಳಿದು ಆಚರಿಸುತ್ತ ಶಿವಶರಣರ ದೂಷಣೆಯನ್ನು ಸ್ವಪ್ನದಲ್ಲಿ ಸಹ ಕೇಳದೆ ಶಿವಭಕ್ತಿಯನ್ನು ಅಭಿವೃದ್ಧಿಗೊಳಿಸಿ ಆಡಿದಮಾತನ್ನು ತಪ್ಪದೆ, ಮುಂದೆ ಇಟ್ಟ ಆಡಿಯನ್ನು ಹಿಂದಿಡದೆ ಅತ್ಯಂತ ಮಹಿಮಾನ್ವಿತನಾಗಿ ಒಪ್ಪುತ್ತಿದ್ದನು. ಈ ಪ್ರಕಾರ ಇರುತ್ತಿರುವ ಬಸವೇಶ್ವರನ ಮಹಾತ್ಮೆಯನ್ನು ಕೇಳಿ ಅಂಗ, ವಂಗ, ಕಳಿಂಗ, ಕಾಶ್ಮೀರ, ಜಂಬೀರ, ಘೂರ್ಜರ, ಐಗುಪ್ತ, ಕೇರಳ, ಪಾಂಡ್ಯ, ಪದ್ಮ ದೇಶ ಮೊದಲಾದ ಸಮಸ್ತದೇಶಗಳ ಶಿವಭಕ್ತರು ವಿಭೂತಿ, ರುದ್ರಾಕ್ಷಿ, ಶಿವಲಿಂಗ, ಕಾಷಾಯವಸ್ತ್ರ, ಜಂಗು, ಜೋಳಿಗೆ ಮೊದಲಾದ ಶಿವಚಿನ್ಹಗಳನ್ನು ಧರಿಸಿಕೊಂಡು ಬಸವೇಶ್ವರನ ದರ್ಶನ ಪಡೆಯುವದಕ್ಕಾಗಿ ಕಲ್ಯಾಣಪಟ್ಟಣಕ್ಕೆ ಬರುತ್ತಿರಲಾಗಿ ಬಸವೇಶ್ವರನು ಅವರ ಆಗಮನವನ್ನು ತಿಳಿದುಕೊಂಡು ತಾನೇ ಎದುರುಗೊಂಡು ಸ್ವಾಗತಿಸಿ ಅರಮನೆಗೆ ಕರೆದುತಂದು ಸತ್ಕಾರಮಾಡಿ ಪಾದ ಪೂಜೆಯನ್ನೆಸಗಿ ತೀರ್ಥ, ಪ್ರಸಾದವನ್ನು ಸ್ವೀಕರಿಸಿ ಅವರನ್ನು ರತ್ನಖಚಿತ ವಾದ ಪೀಠದಲ್ಲಿ ಕುಳ್ಳಿರಿಸಿ ಅವರ ಅಪೇಕ್ಷೆಗನುಸರಿಸಿ ವಸ್ತ್ರಾಭರಣಗಳನ್ನು ಕೊಟ್ಟು ಷಡ್ರಸೋಪೇತವಾದ ಸುಖಭೋಜನದಿಂದ ಅವರನ್ನು ಸಂತೋಷ ಪಡಿಸುತ್ತ ಗಂಧ, ಪುಷ್ಪ, ತಾಂಬೂಲಾದಿಗಳನ್ನೂ, ಅವರ ವಿನೋದಕ್ಕೆ ಅನು ಕೂಲವಾದ ಇತರ ಪದಾರ್ಥಗಳನ್ನೂ ಸಿದ್ಧಮಾಡಿಕೊಡುತ್ತ ತನ್ನ ತನು, ಮನ, ಪ್ರಾಣಗಳನ್ನು ಅವರ ಅಧೀನಮಾಡಿ ಅವರ ಲೀಲೆಗಳನ್ನು ನೋಡುತ ಆನಂದಪಡುತ್ತ ಅವರ ಅಂತಃಕರಣವನ್ನು ಸಂಪಾದಿಸಿಕೊಂಡಿದ್ದನು. ಇಂತಹ ಬಸವೇಶ್ವರನ ಬಳಿಯಲ್ಲಿ ಹನ್ನೆರಡುಸಾವಿರ ಜಂಗಮರು, ಇಷ್ಟಭೋಜನಾದಿ ಗಳನ್ನು ಮಾಡಿ ತಮ್ಮ ಪ್ರೀತಿಗೆ ಪಾತ್ರರಾದ ಸತ್ನಿಯರೊಡನೆ ರಮಿಸುತ್ತ ಇರುತ್ತಿದ್ದರು. ಇವರಲ್ಲದೆ ಉಳಿದವರ ಸಂಖ್ಯೆಯನ್ನು ಎಣಿಸುವದು ಅಸಾಧ್ಯ

ವಾಗಿತ್ತು. ಇಷ್ಟು ಜನ ಶಿವಭಕ್ತರಿಗೆ ಬಸವೇಶ್ವರನು ಕಲ್ಪವೃಕ್ಷದಂತೆ ಅವರ ಇಷ್ಟಾರ್ಥಗಳನ್ನು ಕೊಡುತ್ತ ಕೀರ್ತಿಕಾಂತೆಯ ಬೈತಲೆ ಮಣಿಯನ್ನು ಅಲಂಕರಿಸಿದ ದೇಹವುಳ್ಳವನಾಗಿ ಮೆರೆಯುತ್ತಲಿದ್ದನು. ಇತ್ತ ಬಸವೇಶ್ವರನ ಸಹೋದರಿಯಾದ ನಾಗಲಾಂಬೆಯು ಶಿವಶರಣರ ಮಿಕ್ಕ ಪ್ರಸಾದದಿಂದ ಗರ್ಭವನ್ನು ಧರಿಸಿ ಅಣ್ಣನ ಉಪದೇಶವನ್ನು ಪಡೆದುಕೊಳ್ಳುತ್ತ ಚನ್ನಬಸವೇಶ್ವರನೆಂಬ ಪುತ್ರನನ್ನು ಪಡೆದಳು. ಆ ಕೂಸು ಶುಕ್ಲಪಕ್ಷದ ಚಂದ್ರನಂತೆ ಬೆಳವಣಿಗೆ ಹೊಂದಿ ಪರವಾದಿಗಳನ್ನು ತನ್ನ ಕುಶಾಗ್ರಬುದ್ಧಿಯಿಂದ ಜಯಿಸಿ, ಅತ್ಯಂತ ಮಹಿಮೆಯುಳ್ಳವನಾಗಿ ಇಂದ್ರಿಯ ಗುಣಗಳನ್ನು ಗೆದ್ದು, ಶಿವಭಕ್ತರಲ್ಲಿ ವಿಶ್ವಾಸವುಳ್ಳವನಾಗಿ ಮೋಹರಹಿತನೂ, ದಯಾಶಾಲಿಯೂ, ಯೋಗಿಜನವಂದ್ಯನೂ ಆಗಿ ಲಿಂಗಾಂಗ ಸಾಮರಸ್ಯ ಧುರೀಣನಾಗಿ ತನ್ನ ಗುರುವೂ ಸೋದರಮಾವನೂ ಆದ ಬಸವೇಶ್ವರನ ಪಾದಗಳಿಗೆ ನಮಸ್ಕರಿಸುತ್ತ ಸಂಪೂರ್ಣವಾದ ಶಿವಭಕ್ತಿಯ ಮಹಿಮೆಯಿಂದ ಪ್ರಕಾಶಿಸುತ್ತಿದ್ದನು.

## — ಅಲ್ಲಮಪ್ರಭುದೇವರ ಆಗಮನವು —

ಬಸವೇಶ್ವರನು ಒಂದು ದಿವಸ ಸ್ನಾನವನ್ನು ಮಾಡಿ ವಿಭೂತಿ, ರುದ್ರಾಕ್ಷಿ, ಬಿಲ್ವಪತ್ರಿಗಳಿಂದ ದೇಹವನ್ನು ಅಲಂಕರಿಸಿಕೊಂಡು "ಶಿವಭಕ್ತಿ" ಎಂಬ ಪುಷ್ಪವನ್ನು ಹೃದಯವೆಂಬ ಶಿವನಿಗೆ ಸಮರ್ಪಿಸಿ ಅನಂತರ ಷೋಡಶೋಪಚಾರಗಳಿಂದ ಇಷ್ಟಲಿಂಗವನ್ನು ಪೂಜಿಸಿ ಅನಿಮಿಷನೇತ್ರದಿಂದ ಇಷ್ಟಲಿಂಗವನ್ನು ದೃಷ್ಟಿಸಿ ನೋಡುತ್ತ ಧ್ಯಾನಾಸಕ್ತನಾಗಿ ಕುಳಿತಿರಲು ಹಸ್ತದಲ್ಲಿದ್ದ ಇಷ್ಟಲಿಂಗದೊಳಗೆ ಒಂದು ಅವ್ಯಕ್ತರೂಪವು ಹೊಳೆದು ತೋರುತ್ತಿದ್ದಂತೆ ಎಲ್ಲರೂ ವಿಭ್ರಮೆಯಿಂದ ನೋಡುತ್ತಿದ್ದರು. ಆ ಕಾಲದಲ್ಲಿಯೇ ಒಬ್ಬ ದೂತನು ಓಡಿಬಂದು ಬಸವೇಶ್ವರನಿಗೆ ನಮಸ್ಕರಿಸಿ, ಸ್ವಾಮೀ! ತಲೆಯನ್ನು ಕೆದರಿಕೊಂಡು ಹರಕುಬಟ್ಟೆಯನ್ನು ಉಟ್ಟು ಕೆಂಧೂಳಿಯಿಂದ ತುಂಬಿದ ದೇಹವುಳ್ಳವನಾಗಿ, ಸದಾ ಸಂತೋಷ ಭಾಷ್ಪವನ್ನು ಕಣ್ಣಿನಿಂದ ಸುರಿಸುತ್ತ, ಕೈಯಲ್ಲಿರುವ ಲಿಂಗವನ್ನು ಚಂಚಲವಿಲ್ಲದ ನೋಟದಿಂದ ನೋಡುತ್ತ, ತನ್ನ ಸಂಗಡ ನಡೆದು ಬರುತ್ತಿರುವ ಆನೆ, ಕುದುರೆ, ಒಂಟೆ, ಕಾಲಾಳು, ಮುಂದಿ-ಮಾರ್ಬಲಗಳಿಂದ ಕಾಣಿಸದೆ ಇರುವ ನೆರಳು ಉಳ್ಳವನಾಗಿದ್ದುಕೊಂಡು, ಅವುಗಳನ್ನು ದೂರದ

ಲ್ಲಿಯೇ ನಿಲ್ಲಿಸಿ ತನ್ನ ಪಾದಧೂಳಿಯಿಂದ ತಿರುಗಾಡಿದ ಸ್ಥಳಗಳನ್ನು ಪವಿತ್ರ ವನ್ನಾಗಿ ಮಾಡುತ್ತ ಕಟಾಕ್ಷ ದೃಷ್ಟಿಯಿಂದಲೇ ಸರ್ವಭಕ್ತರ ಅಜ್ಞಾನವನ್ನು ನಾಶಮಾಡಿ ಜ್ಞಾನವೆಂಬ ತೇಜಸ್ಸುಳ್ಳವನಾಗಿ ಇರುವ ಒಬ್ಬ ಶಿವಯೋಗಿಯು ಬಾಗಿಲಲ್ಲಿ ಬಂದು ನಿಂತಿರುವನು ಎಂದು ಬಿನ್ನವಿಸಲು ಆ ಶಿವಯೋಗಿಯ ದರ್ಶನಕ್ಕಾಗಿ ಪಟ್ಟಣದಲ್ಲಿ ಗುಡಿ–ತೋರಣಗಳನ್ನು ಕಟ್ಟಿದಂತೆ ಮೈಯಲ್ಲಿ ರೋಮಾಂಚನವಾಗಲು, ಶಿವಭಕ್ತಿಯೆಂಬ ಸಮುದ್ರವು ಮೇರೆದಪ್ಪಿ ಹರಿಯು ತ್ತಿರುವದೆಂದು ಸೂಚಿಸುವಂತೆ ಆನಂದಭಾಷ್ಪವು ಉಕ್ಕುತ್ತಿರಲು ಭಕ್ತಿಯಿಂದಾ ಗುವ ಸುಖಕ್ಕೆ ಸಮಾನವಾದುದು ಮತ್ತಾವುದೂ ಇಲ್ಲವೆಂದು ಸೂಚಿಸುವಂತೆ ಕೈಕಾಲುಗಳು ನಡುಗುತ್ತಿರಲು ಇಂತಹ ಸತ್ಪುರುಷನೆದುರಿಗೆ ದೇಹಾಭಿಮಾನ ದಿಂದ ಪ್ರಯೋಜನವೇನು ? ಎಂದು ತಿಳಿಸುವಂತೆ ಆನಂದಭರಿತನಾಗಿ ಆ ಯೋಗಿವರ್ಯನನ್ನು ಎದುರುಗೊಂಡು ಕರೆತರಲು ಶಿವಗಣ ಸಮೂಹದೊಡನೆ ಬಂದು ಮುಂದೆ ಇದ್ದ ಯೋಗಿಶ್ರೇಷ್ಠನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಸಮಸ್ತದೇವ ಮರ್ಯಾದೆಗಳಿಂದ ಆತನನ್ನು ತನ್ನ ಅರಮನೆಗೆ ಕರೆದುಕೊಂಡು ಬಂದು ಶ್ರೇಷ್ಠ ಆಸನದಲ್ಲಿ ಕೂಡ್ರಿಸಿ, ಗಂಧ, ಪುಷ್ಪ, ಧೂಪ, ದೀಪ ಮೊದ ಲಾದ ಸಮಸ್ತ ಉಪಕರಣಸಮೇತನಾಗಿ ಭಕ್ತಿಯೆಂಬ ಕಿರೀಟವನ್ನು ಧರಿಸಿ ಆತನ ಪಾದಪೂಜೆಯನ್ನು ಮಾಡಿ ತೀರ್ಥಪ್ರಸಾದಗಳನ್ನು ಪರಿಗ್ರಹಿಸಿ ನೆರೆದಿದ್ದ ಜನರಿಗೂ ಕೊಡಿಸಿ ಭೋಜನಕ್ಕಾಗಿ ಚಿನ್ನದ ಬಟ್ಟಲನ್ನುತಂದು ಮುಂದಿಟ್ಟು ಶಾಲ್ಯಾನ್ನ, ಸೂಪ, ಘೃತ, ವ್ಯಂಜನಗಳು, ಪಲ್ಯ, ಹುಳಿ, ಪಳದ್ಯ ಮೊದ ಲಾದ ನಾನಾವಿಧ ಭಕ್ಷ್ಯ–ಭೋಜ್ಯಾದಿಗಳನ್ನು ಎಡೆಮಾಡಲು ಆತನು ಎರಡು ಲಕ್ಷ, ಹನ್ನೆರಡುಸಾವಿರ ಜಂಗಮರಿಗೆ ಸಿದ್ಧವಾಗಿದ್ದ ಭೋಜನವನ್ನು ತಾನೇ ಶಿವಾರ್ಪಣೆಮಾಡಿದನು. ಇದನ್ನುನೋಡಿ ಸಮಸ್ತ ಶಿವಭಕ್ತರೂ, ಶಿವಗಣ ಗಳೂ ಆಶ್ಚರ್ಯಪಡುತ್ತಿದ್ದರು. ಮೂರು ಲೋಕಗಳನ್ನು ನುಂಗಿ ನಾಲ್ಕು ಸಮುದ್ರಗಳನ್ನು ಕುಡಿಯುವನೋ ಎಂಬಂತೆ ಊಟಮಾಡುತ್ತಿರುವ ಗುರು ವನ್ನು ಯಾವರೀತಿಯಿಂದ ತೃಪ್ತಿಪಡಿಸಬೇಕು ಎಂಬುದಾಗಿ ಬಸವೇಶ್ವರನು ಭಯ, ಆಶ್ಚರ್ಯಗಳಿಂದ ಕೂಡಿದವನಾಗಿರಲು ಚನ್ನಬಸವೇಶ್ವರನು ತನ್ನ ಗುರುವಾದ ಬಸವೇಶ್ವರನಬಳಿಗೆ ಬಂದು ನಮಸ್ಕರಿಸಿ, ಎಲೈ–ಗುರುವರ್ಯನೇ! ಹದಿನಾಲ್ಕು ಲೋಕಗಳನ್ನು ಏಕಕಾಲದಲ್ಲಿ ನುಂಗಲು ಸಮರ್ಥನಾದ ಕ

ಗುರುವಿಗೆ ತಮ್ಮ ಅಲ್ಪವಾದ ಈ ಎಡೆಯಿಂದ ತೃಪ್ತಿಯಾದೀತೇ ? ಎಂದಿಗೂ ಸಾಧ್ಯವಿಲ್ಲ. ಆದರೆ ನಾನು ಉಪ್ಪಿನಕಾಯಿಯೂ, ನೀನು ಅನ್ನವೂ ಆದರೆ ಮಾತ್ರ ಈತನು ತೃಪ್ತಿಪಡುವನು ಎಂದು ನುಡಿಯಲಾಗಿ ಅವರಿಬ್ಬರೂ ಅದೇ ರೀತಿಯಾಗಿ ನೆರವೇರಿಸಲು ಗುರುದೇವನು ಸಂತುಷ್ಟನಾದನು. ಸಕಲದೇವತೆಗಳಿಗೆ ಸಮರ್ಪಿಸಬೇಕಾದ ಹವಿಸ್ಸನ್ನು ಅಗ್ನಿದೇವನು ಒಬ್ಬನೇ ಗ್ರಹಿಸುವದರಿಂದ ಸಮಸ್ತ ದೇವಸಮೂಹವು ತೃಪ್ತಿಗೊಳ್ಳುವಂತೆ ಈ ಶಿವಯೋಗಿಯು ಊಟಮಾಡಿದುದರಿಂದ ಎಲ್ಲ ಶಿವಗಣಂಗಳು ತೃಪ್ತರಾಗಿ, ಹೊಟ್ಟೆತುಂಬಿದವರಂತೆ ತೇಗುತ್ತಿದ್ದರು. ಈತನ ಹೊಟ್ಟೆಯಲ್ಲಿ ಬ್ರಹ್ಮಾಂಡವೆಲ್ಲವೂ ಇರುವದರಿಂದ ಲೋಕಗಳೆಲ್ಲವೂ ತೃಪ್ತಿಹೊಂದಿದವು. ಆಮೇಲೆ ಪ್ರಭುದೇವನು ಬಸವೇಶ್ವರ, ಚನ್ನಬಸವೇಶ್ವರನನ್ನು ಅಪ್ಪಿಕೊಂಡು ಆಲಂಗಿಸಿ ಸಂತೋಷದಿಂದ ಎಲೈ—ನಿನ್ನಲ್ಲಿರುವ ಭಕ್ತಿಯೂ, ದಯೆಯೂ, ಸಂತೋಷವೂ, ಗಾಂಭೀರ್ಯವೂ, ಸದ್ಗುಣವೂ, ಮೃದುವಾಕ್ಯವೂ, ನನ್ನನ್ನು ಬಹುವಾಗಿ ತೃಪ್ತಿಪಡಿಸಿದವು. ಸುವರ್ಣದಲ್ಲಿ ಮೆರಗು, ರನ್ನದಲ್ಲಿ ಬಣ್ಣ, ಚಂದ್ರನಲ್ಲಿ ಬೆಳದಿಂಗಳು ಇರುವಂತೆ ನಿನ್ನಲ್ಲಿ ಭಕ್ತಿರಸವು ತುಂಬಿರುವದು. ಶಿವನಿಗೆ ಸಮಾನನಾದ ದೇವರೂ, ಶಿವಭಕ್ತಿಗೆ ಸಮಾನವಾದ ಸುಖವೂ, ಶಿವಮಂತ್ರಕ್ಕಿಂತ ಅಧಿಕವಾದ ಮಂತ್ರವೂ, ಈ ಪ್ರಪಂಚದಲ್ಲಿ ಇಲ್ಲದಿರುವಂತೆ ಈ ಭೂಲೋಕದಲ್ಲಿ ನಿನಗಿಂತ ದೊಡ್ಡವನಾದ ಶಿವಭಕ್ತನು ಇಲ್ಲ. ವೀರಶೈವ ಮತವೆಂಬ ಕಲ್ಪವೃಕ್ಷಕ್ಕೆ ನೀನು ಬೀಜಪ್ರಾಯನೆಂದರೆ ಅತಿಶಯೋಕ್ತಿಯಲ್ಲ. ಹಾಗು ಶಿವಭಕ್ತಿಯೆಂಬ ಸೂರ್ಯನಿಗೆ ಉದಯಾಚಲನಾಗಿಯೂ, ಶೈವಕೀರ್ತಿಯೆಂಬ ಹೂಗೊಂಚಲಿಗೆ ಸುಗಂಧವನ್ನು ಕೊಡುವವನೂ, ಶೈವಾಗಮಗಳೆಂಬ ಕಪ್ಪು ಕಮಲಗಳಿಗೆ ತಿಳಿನೀರಿನ ಸರೋವರನೂ ಆಗಿರುವೆಯೆಂದು ನಾನಾವಿಧವಾಗಿ ಆ ಬಸವೇಶ್ವರನನ್ನು ಹೊಗಳಿದನಂತರ ಚನ್ನಬಸವೇಶ್ವರನನ್ನು ಕುರಿತು—. ಬಸವೇಶ್ವರನ ಪ್ರಸಾದವೆಂಬ ಸಮುದ್ರದಲ್ಲಿ ಹುಟ್ಟಿದ ಚನ್ನಬಸವೇಶ್ವರನೆಂಬ ಚಂದ್ರನು ಶಿವಜ್ಞಾನವೆಂಬ ಬೆಳದಿಂಗಳನ್ನು ಹರಡುತ್ತಿರಲಾಗಿ ಶಿವಶರಣರ ಹೃದಯವೆಂಬ ಕಪ್ಪುಕಮಲಗಳು ಅರಳುವವು. ಬಸವೇಶ್ವರನನ್ನೇ ಸ್ವಾಧೀನಪಡಿಸಿಕೊಂಡಿರುವ ನಿನ್ನ ಸದ್ಗುಣಗಳ ವರ್ಣನೆಯನ್ನು ಸಾವಿರ ನಾಲಿಗೆಗಳುಳ್ಳ ಆದಿಶೇಷನು ಸಹ ಮಾಡಲಾರನು ಎಂದು ಇಬ್ಬರನ್ನೂ ಹೊಗಳಿ ತಮ್ಮ ದೇಹ

ಗಳನ್ನೇ ಗುರುಪಾದಗಳಲ್ಲಿ ಸಮರ್ಪಣೆಮಾಡಿದ ಇಂತಹ ಶಿವಶರಣರು ಈ ಲೋಕದಲ್ಲಿ ಮತ್ತೆ ಯಾರಾದರೂ ಇರುವರೋ? ಎಂದು ಸುತ್ತಲೂ ನೆರೆದಿದ್ದ ಶಿವಗಣಂಗಳನ್ನು ಕೇಳಿ ಸಂತೋಷಸಮುದ್ರದಲ್ಲಿ ಮುಳುಗಿರಲು ಬಸವೇಶ್ವರನು ಆ ಶಿವಯೋಗಿಯನ್ನು ಕುರಿತು– ಓ ಸ್ವಾಮೀ, ಜಗತ್ತನ್ನೇ ಕುಕ್ಷಿಯಲ್ಲಡಗಿಸಿಕೊಂಡು ಅದನ್ನು ಕಾಪಾಡುತ್ತಿರುವ ತಮ್ಮನ್ನು ತೃಪ್ತಿಪಡಿಸಲು ನಾನೆಷ್ಟರವನು! ಎಂಬುದಾಗಿ ಹೇಳುತ್ತ ಸಮಯೋಚಿತವಾದ ಒಂದು ಪೂರ್ವ ಕಥೆಯನ್ನು ಹೇಳಿದನು. ಅದು ಏನೆಂದರೆ— ಪೂರ್ವದಲ್ಲಿ ಒಂದು ದಿವಸ ಪರಮೇಶ್ವರನು ಕೈಲಾಸಪರ್ವತದಲ್ಲಿ ಸಮಸ್ತ ಶಿವಗಣಂಗಳಿಂದ ಸಮೇತವಾದ ತನ್ನ ಒಡ್ಡೋಲಗ ಮಧ್ಯದಲ್ಲಿ ಕುಳಿತು ಸಭೆಯನ್ನು ನಡೆಯಿಸುತ್ತಿರುವ ಸಮಯದಲ್ಲಿ ಉಮೆಯು ಪತಿಯ ಪಾದಸೇವೆಯನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಸಭೆಯನ್ನು ಪ್ರವೇಶಿಸಿ ನೋಡುತ್ತಿರಲು ಸಮಸ್ತರೂ ಪರಶಿವನ ರೂಪದಿಂದ ಕುಳಿತಿರಲು ತನ್ನ ಪತಿಯು ಇಂಥವನೇ ಎಂದು ಗುರುತಿಸಲಾರಥೆ ತೊಂದರೆಗೊಳಗಾದಳು. ಆಗ ಪಾರ್ವತಿಯ ಮನೋಭಿಲಾಷೆಯನ್ನು ತಿಳಿದ ಶಿವಗಣಂಗಳು ತಮ್ಮ ತಮ್ಮ ರೂಪಗಳನ್ನು ಮರೆಮಾಚಿ, ಸಿಂಹ ಹುಲಿ, ಕರಡಿ, ಆನೆ, ಕುದುರೆ, ಒಂಟೆ, ಮೊದಲಾದ ವನ್ಯಮೃಗಗಳ ರೂಪವನ್ನು ಧಾರಣಮಾಡಲು ಪಾರ್ವತಿಯು ಸಂತೋಷ ಭರಿತಳಾಗಿ ಪತಿಪಾದಸೇವೆಯನ್ನು ನೆರವೇರಿಸಿ ತನಗೆ ಸಹಾಯ ಮಾಡಿದ ಶಿವಗಣಂಗಳಿಗೆ ಆರಾಧನೆಯನ್ನು ಮಾಡಿಸಬೇಕೆಂದು ಈಶ್ವರನ ಒಪ್ಪಿಗೆಯನ್ನು ಕೇಳಲು ಈ ಕೆಲಸವು ಅಸಾಧ್ಯವು. ನೀನು ಇದಕ್ಕೆ ಪ್ರಯತ್ನಮಾಡಬೇಡ. ಎಂದು ಬಹುಪರಿಯಿಂದ ಹೇಳಿದ ಪತಿಯ ವಾಕ್ಯವನ್ನು ಕೇಳದೆ ಪಾರ್ವತಿಯು ಶಿವಗಣಂಗಳಿಗೆ ಆರಾಧನೆಯನ್ನು ಮಾಡಲು ನಿಶ್ಚಯಿಸಿ ಲಕ್ಷ್ಮಿ, ಸರಸ್ವತಿದೇವಿಯರ ಸಹಾಯದಿಂದ ಶಿವಗಣಂಗಳಿಗೆ ಫಲ ತಾಂಬೂಲ ಪೂರ್ವಕವಾಗಿ ಔತಣವನ್ನು ಕೊಟ್ಟು ಅಡಿಗೆ ಮಾಡುವದಕ್ಕಾಗಿ ದೇವಗಂಗೆಯನ್ನೂ, ವನದೇವತೆಯನ್ನೂ, ಕಾಮಧೇನು, ದೇವತಾ ಸ್ತ್ರೀಯರನ್ನೂ, ಇಂದ್ರ, ಅಗ್ನಿ, ಕುಬೇರ ಮೊದಲಾದ ದಿಕ್ಪಾಲಕರನ್ನೂ, ಬರಮಾಡಿಕೊಂಡು ಅವರಿಗೆ ತಕ್ಕ ಉದ್ಯೋಗಗಳನ್ನು ಗೊತ್ತುಮಾಡಿಕೊಡಲು ದೇವಗಂಗೆಯು ಅಮೃತ ಸಮಾನವಾದ ಪಾಯಸವನ್ನೂ, ವನದೇವತೆಯು ಮಧುರವಾದ ಕಾಯಿಪಲ್ಲೆ, ಹಣ್ಣುಕಾಯಿಗಳನ್ನೂ,

ಕಾಮಧೇನುವು ಹಾಲು, ಮೊಸರು, ತುಪ್ಪಗಳನ್ನೂ, ದೇವತಾ ಸ್ತ್ರೀಯರು ಷಡ್ರಸೋಪೇತವಾದ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯಗಳೇ ಮೊದಲಾದ ಪಾಕಸಾಮಗ್ರಿಗಳನ್ನೂ ಸಿದ್ಧಪಡಿಸಲು, ವಸಂತರಾಜನು ಶೈತ್ಯ, ಸೌರಭ್ಯ, ಮಾಂದ್ಯಗತಿಗಳಿಂದ ಬೀಸುವ ವಾಯುದೇವನ ಸಹಾಯದಿಂದ ಇಂಪಾದ ತಂಪಿನ ಚಪ್ಪರವನ್ನು ತಯಾರಿಸಿದನು. ಋಷಿಪತ್ನಿಯರು ಭೋಜನ ಶಾಲೆಯನ್ನು ಸಜ್ಜು ಮಾಡಿದರು. ಪಾಕಶಾಲೆಯಲ್ಲಿ ಸುರಿದಿರುವ ಅನ್ನದ ರಾಶಿಯು ಕೈಲಾಸ ಪರ್ವತವನ್ನೂ, ಭಕ್ಷ್ಯ–ಭೋಜ್ಯಾದಿಗಳ ಸಮೂಹವು ಮೇರು ಪರ್ವತವನ್ನೂ, ನಂಜುವ ಪದಾರ್ಥಗಳ ರಾಶಿಯು ವಿಂಧ್ಯ ಪರ್ವತವನ್ನೂ, ಪಾಯಸಾದಿಗಳ ಸಮೂಹವು ಕ್ಷೀರ ಸಮುದ್ರವನ್ನೂ ಅಲ್ಲೀಕರಿಸುತ್ತಿದ್ದವು. ಆ ಪಾಕಶಾಲೆಯಿಂದ ಹೊರಡುವ ಮನೋಲ್ಲಾಸಕರವಾದ ವಾಸನೆಯ ಕಂಪು ಬ್ರಹ್ಮಾಂಡವನ್ನು ವ್ಯಾಪಿಸಿಕೊಂಡಿರಲು ಮೂರು ಲೋಕಗಳಲ್ಲಿರುವ ಎಲ್ಲ ಪ್ರಾಣಿ ಸಮೂಹವು ಮಧುರ ಆಹಾರವಾದ ಅಮೃತವನ್ನು ಭಕ್ಷಿಸಿದವರಂತೆ ತೃಪ್ತರಾದರು. ಆಗ ಪಾರ್ವತಿಯು ಅಲ್ಲಿ ನೆರೆದಿದ್ದ ಗಣಸಮೂಹದಲ್ಲಿ ಬಹು ಚಿಕ್ಕವನಾದ ಒಬ್ಬ ಬಾಲ ಗಣನಾಥನನ್ನು ನೋಡಿ ಕರೆದುಕೊಂಡು ಬಂದು ಪಾಕಶಾಲೆಯನ್ನು ತೋರಿಸಲು ಆತನು ಅಮ್ಮಾ! ನನ್ನ ಪ್ರಾಣಲಿಂಗವು ಹಸಿವಿನಿಂದ ತಲ್ಲಣಿಸುತ್ತಿದೆ. ಆದುದರಿಂದ ಸ್ವಲ್ಪ ಅನ್ನವನ್ನು ಉಣಬಡಿಸಿದರೆ ತೃಪ್ತನಾಗುವೆನೆಂದು ಹೇಳಿದನು. ಬಳಿಕ ಪಾರ್ವತಿಯು ಸಿದ್ಧಮಾಡಿದ್ದ ಅಡಿಗೆಯನ್ನು ಆತನಿಗೆ ಊಟ ಮಾಡಿಸಲಿಕ್ಕೆ ಪ್ರಾರಂಭಿಸಲು ಆ ಬಾಲ ಗಣನಾಥನು ಮೇರು ಶಿಖರದಂತಹತುತ್ತುಗಳನ್ನು ನುಂಗುತ್ತ ಮಾಡಿದ್ದ ಅಡಿಗೆ ಎಲ್ಲವನ್ನೂ ಮುಗಿಸಿ ಬಿಟ್ಟನು. ಪಾರ್ವತಿಯು ಇದನ್ನು ನೋಡಿ ಆಶ್ಚರ್ಯಭರಿತಳಾಗಿ ಶಿವಗಣಂಗಳಿಗೆಲ್ಲ ಸಿದ್ಧಪಾಡಿದ್ದ ಅಡಿಗೆಯನ್ನು ಈ ಬಾಲಗಣನಾಥನು ನುಂಗಿಬಿಟ್ಟ ಮೇಲೆ ಉಳಿದ ಗಣಂಗಳನ್ನು ತೃಪ್ತಿಬಡಿಸುವಬಗೆ ಹೇಗೆಂದು ಖಿನ್ನಮನಸ್ಕಳಾಗಿ ಪರಶಿವನ ಸಮೀಪಕ್ಕೆಬಂದು ನಾಚಿಕೆಯಿಂದ ತಲೆಬಾಗಿಸಿ ಭಯಭಕ್ತಿಯಿಂದ ಕೂಡಿದವಳಾಗಿ ಸ್ವಾಮೀ! ಸಮಸ್ತ ಶಿವಗಣಂಗಳಿಗೆಂದು ಸಿದ್ಧಮಾಡಿದ್ದ ಅಡಿಗೆಯನ್ನೆಲ್ಲ ಒಂದು ಅಗುಳು ಸಹ ಬಿಡದಂತೆ ಚಿಕ್ಕವನಾದ ಬಾಲಗಣನಾಥನು ಒಬ್ಬನೇ ನುಂಗಿಬಿಟ್ಟನು. ಈಗ ಮುಂದೇನು ಮಾಡಬೇಕೆಂಬುದನ್ನು ನಾನು ಅರಿಯೆನು ಎಂದು ಬೇಡಿಕೊಳ್ಳಲು,

ಪರಮೇಶ್ವರನು ನಕ್ಕು, ಆವಳನ್ನು ಪ್ರೀತಿಯಿಂದ ತೊಡೆಯಮೇಲೆ ಕುಳ್ಳಿರಿಸಿ ಕೊಂಡು ಎಲೈ ಪಾರ್ವತಿಯೇ, ಆ ಪ್ರಮಥಗಣಂಗಳು ನಿತ್ಯತೃಪ್ತರೂ, ನಿರುಪಾಯರೂ, ನಿರ್ದುಷ್ಟರೂ, ನಿಷ್ಕಳಂಕರೂ, ನಿರ್ಭಯರೂ, ಬ್ರಹ್ಮಾದಿಗ ಳಿಂದ ಸೇವಿಸಲ್ಪಡತಕ್ಕವರೂ, ಅಸಾಧಾರಣವಾದ ಮಹಿಮಾಶಾಲಿಗಳೂ, ನಿತ್ಯಮುಕ್ತರೂ, ಅಪಾಂಗದೃಷ್ಟಿಯಿಂದ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡ ತಕ್ಕವರೂ ಆಗಿರುವರು. ಇಂಥವರು ಸಾಮಾನ್ಯರೇ ! ಬ್ರಹ್ಮಾಂಡವನ್ನು ಉರುಳಿಸುವರು, ಅಗ್ನಿಯನ್ನು ನುಂಗುವರು, ಸಪ್ತಸಮುದ್ರಗಳನ್ನು ಕುಡಿಯು ವರು, ಯಮನನ್ನು ದಂಡಿಸುವರು, ಮನ್ಮಥನನ್ನು ಸುಡುವರು, ಬ್ರಹ್ಮನಿಗೆ ಬುದ್ಧಿಗಲಿಸುವರು, ಸೂರ್ಯನನ್ನು ಸೆರೆಹಿಡಿಯುವರು, ಪರ್ವತಗಳನ್ನು ಪುಡಿ ಮಾಡುವರು, ಅಂತಹ ಆ ಶಿವಗಣಂಗಳಿಗೆ ನಾನೂ, ನನಗೆ ಆ ಪ್ರಮಥಗಣಂ ಗಳೂ ಪ್ರಾಣರೂಪರಾಗಿರುವರು. ಸಮಸ್ತಬ್ರಹ್ಮಾಂಡಗಳು ನಾಶವಾದರೂ ಆ ಶಿವಶರಣರಿಗೆ ಹಾನಿಯಿಲ್ಲ ಎಂದು ಶಿವನು ಹೇಳಲು ಪಾರ್ವತಿಯು ಆ ಶಿವಶರಣರ ಮಹಿಮೆಯನ್ನು ಕೇಳಿ ಸಂತೋಷಪಡುತ್ತ ತನ್ನ ಮನೋ ಭ್ರಾಂತಿಯನ್ನು ಬಿಟ್ಟು ಸುಖದಿಂದ ಇದ್ದಳು. ಆದುದರಿಂದ ಜಗನ್ಮಾತೆಯಾದ ಆ ಪಾರ್ವತಿದೇವಿಯೇ ಚಿಕ್ಕವನಾದ ಆ ಬಾಲಗಣನಾಥನನ್ನು ತೃಪ್ತಿಗೊಳಿ ಸಲು ಅಸಾಧ್ಯವೆಂದು ಹಿಮ್ಮೆಟ್ಟಿದವಳಾದಾಗ ತ್ರಿಲೋಕಗಳೇ ಕುಕ್ಷಿಯಾಗಿ ರುವ ನಿನ್ನನ್ನು ತೃಪ್ತಿಪಡಿಸುವದಕ್ಕೆ ನಾನು ಎಂತು ಸಮರ್ಥನಾಗುವೆನು ? ಸ್ವಾಮೀ, ನನ್ನನ್ನು ಕಾಪಾಡಬೇಕೆಂದು ಬಸವೇಶ್ವರನು ಅಡಿಗೆರಗಲು ಪ್ರಭು ದೇವರು ಎಲೈ— ಬಸವೇಶ್ವರನೇ, ಮೊದಲೇ ನೀನು ನಿನ್ನನ್ನು ನನಗೆ ಕೊಟ್ಟಿ ರುವದರಿಂದ ಈಗ ನಾನು ನನ್ನನ್ನು ನಿನಗೆಕೊಟ್ಟಿರುವೆನು. ನಿನಗೆ ಸಮಾನ ರಾದ ದಯಾಶಾಲಿಗಳು ಈ ಭೂಲೋಕದಲ್ಲಿ ಯಾರೂಇಲ್ಲ. ಎಂದು ಹೊಗಳಿ ಸ್ವರ್ಗವಾಸಿಗಳಾದ ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳು ಬಸವೇಶ್ವರನ ಮನೆಯಲ್ಲಿ ವಾಸವಾಗಿರುವಂತೆ ವರವನ್ನು ಕೊಟ್ಟು ವಾಕ್‌ಸಿದ್ಧಿ, ಮನಸ್ ಸಿದ್ಧಿ ಮೊದಲಾದ ಸಿದ್ಧಿಗಳನ್ನು ಅನುಗ್ರಹಿಸಿ ಮೊದಲಿನ ಶಿವಭಕ್ತಿಯು ಇನ್ನೂ ಹೆಚ್ಚುವಂತೆ ಮಾಡಿ ಅತ್ಯಂತ ಸಂತೋಷದಿಂದ ಆತನನ್ನು ಮುದ್ದಾಡಿ ಪಾದಗಳಿಗೆರಗುತ್ತಿರುವ ಚನ್ನಬಸವೇಶ್ವರನನ್ನು ಎತ್ತಿ ತಬ್ಬಿಕೊಂಡು ಮಡಿ ವಾಳ ಮಾಚಿದೇವ ಮೊದಲಾದ ಶಿವಶರಣರಿಗೆ ಸಂತೋಷವನ್ನುಂಟುಮಾಡಿ

ಸರ್ವರಿಗೂ ಪರಮಾನಂದವನ್ನು ತೋರಿಸಿ, ಮುಳುಗಿಸಿ, ತೇಲಿಸಿ ಆ ಪ್ರಭು ದೇವನು ಮಾಯವಾದನು. ಹೀಗಿರುತ್ತಿರಲು ಬಸವೇಶ್ವರನು ಆ ಪ್ರಭುದೇವನ ಪಾದಕಮಲವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಶಿವನ ಹಾಗೂ ಶಿವಭಕ್ತರ ಸೇವೆಯನ್ನು ತಪ್ಪದೆ ನೆರವೇರಿಸುತ್ತ ಸದಾ ಶಿವಧ್ಯಾನಾಸಕ್ತನಾಗಿ ಸುಖದಿಂದ ಇರುತ್ತಿದ್ದನು.

## — ಚೋರರ ಕಥೆಯು —

ಈ ಪ್ರಕಾರ ಬಸವೇಶ್ವರನು ಪ್ರಭುದೇವರ ಪ್ರಸಾದಾನುಗ್ರಹದಿಂದ ಸಕಲಸಂಪತ್ತಿನೊಡನೆ ಕೂಡಿ ಸುಖದಿಂದಇರಲು ಕ್ಷುಲ್ಲಕರಾವ ಕೆಲವು ನೀಚರು ಅವನ ಮನೆಯನ್ನು ಹೊಕ್ಕು ಕಳವುಮಾಡಬೇಕೆಂದು ಆಲೋಚಿಸಿ ಶಿವಭಕ್ತ ರಲ್ಲದವರು ಆತನ ಮನೆಯೊಳಗೆ ಹೋಗುವದಕ್ಕೆ ಭಯಪಡುತ್ತಿದ್ದ ಕಾರಣ ದಿಂದ ತಮ್ಮ ಶರೀರಕ್ಕೆಲ್ಲ ಭಸ್ಮಲೇಪನಮಾಡಿಕೊಂಡು ಕೊರಳಲ್ಲಿ ರುದ್ರಾಕ್ಷಿ ಯನ್ನೂ, ಲಿಂಗಕ್ಕೆಬದಲು ಸಣ್ಣ ಕರಿಯಬದನೇಕಾಯಿಯನ್ನೂ, ಕೆಂಪುವಸ್ತ್ರ ದಲ್ಲಿ ಕಟ್ಟಿ ಕೃತ್ರಿಮಲಿಂಗವನ್ನು ಧಾರಣೆಮಾಡಿಕೊಂಡು ಕಾವಿಯ ಬಟ್ಟೆ ಯನ್ನು ಧರಿಸಿ ಬಸವಣ್ಣನ ಮನೆಯನ್ನು ಹೊಕ್ಕರು. ಅಲ್ಲಿ ಶಿವಗಣಸಮೂಹ ದಿಂದ ಕೂಡಿ ಶಿವಧ್ಯಾನದಲ್ಲಿರುವ ಬಸವೇಶ್ವರನನ್ನು ಕಂಡು ತಮ್ಮ ಮೋಸವು ತಿಳಿದುಹೋಯಿತಲ್ಲಾ ಎಂದು ಚಿಂತಾಕ್ರಾಂತರಾಗಿ ನಾಚಿಕೆಯಿಂದ ತಲೆತಗ್ಗಿಸಿ ನಿಂತುಕೊಂಡರು. ಆಗ ಬಸವೇಶ್ವರನು ವೇಷಧಾರಿಗಳಾಗಿ ಬಂದಿರುವ ಆ ಭವ ಬಂಧಿಗಳನ್ನು ಊಹಾಬಲದಿಂದ ತಿಳಿದವನಾಗಿ ಈ ಭವಿಗಳು ನಮ್ಮಂಥವರ ಮನೆಗೆ ಬರತಕ್ಕವರಲ್ಲ. ಈಗ ಹೇಗೆ ಬಂದಿರುವರೋ ತಿಳಿಯದು. ಇದನ್ನು ನೋಡಿದರೆ ಇವರು ಪೂರ್ವಜನ್ಮದಲ್ಲಿ ಮಾಡಿದ್ದ ಪುಣ್ಯವು ಇಂದು ಫಲಿಸಿ ದಂತಿದೆ. ಇಲ್ಲದೆ ಇವರು ಸರ್ವಥಾ ನಮ್ಮ ಮನೆಗೆ ಬರುತ್ತಿರಲಿಲ್ಲ. ಎಂದು ಯೋಚಿಸಿ ಅವರನ್ನು ಕುರಿತು ಕುಶಲ ಸಮಾಚಾರಕೇಳಿ ಇಗೋ ಇಲ್ಲಿ ಗಂಧ, ಪತ್ರಿ, ಪುಷ್ಪ, ಧೂಪ, ದೀಪ ಇತ್ಯಾದಿ ಸಕಲ ಪೂಜಾಸಾಮಗ್ರಿಗಳು ಇರು ವವು. ಇವುಗಳನ್ನು ತೆಗೆದುಕೊಂಡು ಆಕಡೆಯಲ್ಲಿರುವ ದರ್ಭಾಸನಗಳಲ್ಲಿ ಕುಳಿತು ನಿಮ್ಮ ಇಷ್ಟಾನುಸಾರವಾಗಿ ಶಿವಪೂಜೆಯನ್ನು ಮಾಡಿರಿ ಎಂದು ಹಿತವಚನಗಳಿಂದ ಸತ್ಕರಿಸಿದನು. ಆಗ ಕಳ್ಳರು ಬಸವೇಶ್ವರನ ಮಾತುಕೇಳಿ

ಬೆರಗಾಗಿ ಭಯದಿಂದ ಶೋಕವುಳ್ಳವರಾಗಿ ದೇಹವೆಲ್ಲ ಬೆವರಿಸಿಂದ ಕೂಡಿರಲು ಇಂದು ನಮ್ಮ ಆಯುಷ್ಯವು ಪೂರ್ಣವಾಗಿ ಮುಗಿಯಿತು ಎಂದು ತಿಳಿದು ನಾವು ಶಿವಪೂಜೆಯನ್ನು ಮಾಡಲು ಲಿಂಗವನ್ನು ಎಲ್ಲಿಂದ ತರೋಣ ಪೂಜೆಮಾಡದಿದ್ದರೆ ಶಿಕ್ಷೆಯಾಗುವದಂತೂ ತಪ್ಪದು ಎಂದು ಭಯಗ್ರಸ್ತರಾಗಿ ಸಾವಕಾಶವಾಗಿ ತಮ್ಮ ತಮ್ಮ ವಸ್ತ್ರದಗಂಟು ಬಿಚ್ಚಿ ನೋಡಲಾಗಿ ಅದರಲ್ಲಿದ್ದ ಬದನೆಕಾಯಿಗಳು ಬಸವೇಶ್ವರನ ಇಚ್ಛೆಯಂತೆ ಶಿವಲಿಂಗಗಳಾಗಿದ್ದವು. ಕಳ್ಳರು ಇದನ್ನು ನೋಡಿ ಆಶ್ಚರ್ಯಗೊಂಡು ತಮ್ಮ ದಿಗಿಲನ್ನುಬಿಟ್ಟು ಲಿಂಗಗಳನ್ನು ಪೂಜಿಸಿ ಸಂತೋಷಹೊಂದಿ ತಮ್ಮ ದುಷ್ಟನಡತೆಯನ್ನು ಬಿಟ್ಟು ಸುಖವಾಗಿದ್ದರು. ಅಲ್ಲಿದ್ದ ಶಿವಭಕ್ತರು ಇದನ್ನು ಸಂಪೂರ್ಣ ನೋಡಿ, ಕೇಳಿ ಶಿವಭಕ್ತರ ಮಹಿಮಾ ಬಲದಿಂದ ಹೀಗಾಗುವದು ದೊಡ್ಡದಲ್ಲ ಎಂದು ನುಡಿದರು.

## — ಮಲ್ಲಪ್ಪಶೆಟ್ಟಿಯ ಕಥೆಯು —

ಪೂರ್ವಕಾಲದಲ್ಲಿ ಮೈಲಾಪುರ ಎಂಬ ಹೆಸರಿನ ಒಂದು ಪಟ್ಟಣವಿತ್ತು. ಆ ಪಟ್ಟಣದಲ್ಲಿ ಸತ್ಯಸಂಧನೂ, ಸದ್ಗುಣ ಸಂಪನ್ನನೂ, ವಿದ್ಯಾವಂತನೂ, ಶಿವಭಕ್ತಿಯುತನೂ ಆದ ಮಲ್ಲಪ್ಪಶೆಟ್ಟಿ ಎಂಬ ಒಬ್ಬ ವ್ಯಾಪಾರಸ್ಥನಿದ್ದನು. ಆವನು ಪ್ರತಿದಿವಸ ಭಕ್ತಿಯಿಂದ ಶಿವಲಿಂಗವನ್ನು ಷೋಡಶೋಪಚಾರಗಳಿಂದ ಪೂಜಿಸಿ ಶಿವಭಜನೆಯನ್ನು ಮಾಡಿ ಈಶ್ವರನ ತೀರ್ಥ, ಪ್ರಸಾದಗಳನ್ನು ಸ್ವೀಕರಿಸದ ಹೊರತು ಭೋಜನ ಮಾಡುತ್ತಿದ್ದಿಲ್ಲ. ಹೀಗಿರುತ್ತಿರಲು ಆತನು ಒಮ್ಮೆ ವ್ಯಾಪಾರ ನಿಮಿತ್ತವಾಗಿ ತನ್ನ ಬಂಧುಜನರಿಂದಲೂ, ಸೇವಕರಿಂದಲೂ ಕೂಡಿಕೊಂಡು ಎತ್ತುಗಳಮೇಲೆ ಧಾನ್ಯಗಳ ಹೇರುಗಳನ್ನುಹೇರಿಸಿಕೊಂಡು ಅನ್ಯದೇಶಕ್ಕೆ ಪ್ರಯಾಣಮಾಡಿದನು. ಆದರೆ ಮಲ್ಲಪ್ಪಶೆಟ್ಟಿಯು ಪ್ರಯಾಣಮಾಡುವ ಹಾದಿಯಲ್ಲಿ ಎಲ್ಲಿಯೂ ಶಿವಲಿಂಗವು ದೊರೆಯಲಿಲ್ಲ. ಆದುದರಿಂದ ಆತನು ನಾಲ್ಕು, ಐದು ದಿನಗಳವರೆಗೆ ಊಟವನ್ನೇ ಮಾಡಲಿಲ್ಲ. ಆಗ ಅವನು ಹಸಿವಿನಿಂದ ಬಳಲುತ್ತಿರುವದನ್ನು ಆತನ ಬಂಧುಗಳು ನೋಡಿ ಈ ಮಲ್ಲಪ್ಪಶೆಟ್ಟಿಯು ಪೂರ್ಣ ವೃದ್ಧನಾಗಿರುವನು. ಹಾಗೂ ಮೈಯಲ್ಲಿ ರೋಗವೂ ಇದೆ. ಹೀಗಿದ್ದು ಈ ದಿವಸ ಊಟಮಾಡದಿದ್ದರೆ ಈತನು ಸಾಯುವದೇ ನಿಜವೆಂದು ಯೋಚಿಸಿ ಅಲ್ಲಲ್ಲಿ ಶಿವಾಲಯಗಳನ್ನು ಹುಡುಕಿ ಎಲ್ಲಿಯೂ ಸಿಗದೆ

ರಲು ಮೆಲ್ಲನೆ ಹುಲ್ಲಿನಿಂದ ಒಂದು ಗುಡಿಯನ್ನು ಕಟ್ಟಿ ಅಲ್ಲಿ (ಕಾಳು ಅಳೆಯುವ ಸಾವು) ಬಳ್ಳವನ್ನು ಜೋರಲು ಹಾಕಿ ನಾನಾವಿಧ ಕಾಡು ಹೂಗಳಿಂದ ಅದನ್ನು ಪೂಜಿಸಿ ಮಲ್ಲಪ್ಪಶೆಟ್ಟಿಯ ಹತ್ತಿರ ಬಂದು ಅಯ್ಯಾ ಶೆಟ್ಟರೇ, ನಿಮ್ಮ ಪುಣ್ಯದಬಲದಿಂದ ಈ ಕಾಡಿನಲ್ಲಿ ಒಂದುಕಡೆಗೆ ಶಿವಾಲಯವು ದೊರೆತಿದೆ. ನೀವು ಸಂತೋಷದಿಂದ ಶಿವಪೂಜೆಯನ್ನು ಮಾಡಿ ಸುಖವಾಗಿ ಊಟಮಾಡಬಹುದು ಎಂದುಹೇಳಲು ಮಲ್ಲಪ್ಪಶೆಟ್ಟಿಯು ಶುಚಿರ್ಭೂತನಾಗಿ ಆಗುಡಿಸಲನ್ನು ಪ್ರವೇಶಿಸಿ ಶುದ್ಧಮನಸ್ಸಿನಿಂದ ಶಿವನಲ್ಲಿ ಭಕ್ತಿಯುಳ್ಳವನಾಗಿ ಷೋಡಶೋಪಚಾರಗಳಿಂದ ಆ ಶಿವಲಿಂಗವನ್ನು ಪೂಜಿಸಿ, ಭಜಿಸಿ, ನಮಸ್ಕರಿಸಿ ಆನಂದದಿಂದ ಆ ಲಿಂಗದ ಎದುರಿಗೆ ಕುಣಿದು, ಕುಪ್ಪಳಿಸಿ, ತೃಪ್ತನಾಗಿ ಸ್ವಸ್ಥಾನವನ್ನು ಸೇರಿ ಭೋಜನಮಾಡಿ ಸುಖದಿಂದ ಇದ್ದನು. ಆ ಮಲ್ಲಪ್ಪನ ಭಕ್ತಿಗನುಸಾರವಾಗಿ ಆ ಬಳ್ಳವೂ ಲಿಂಗವಾಯಿತು. ಹೀಗಿರಲು ಅವನ ಆಪ್ತರಲ್ಲಿ ಒಬ್ಬನಾದ ಭಾವ ಮೈದುನನು ಮಲ್ಲಪ್ಪಶೆಟ್ಟಿಯನ್ನು ನೋಡಿ ಹಾಸ್ಯದಿಂದ ನಮ್ಮ ಭಾವನ ನಿಯಮ ಆಶ್ಚರ್ಯವಾದುದು. ತಲೆ ಕೆಳಗೆಮಾಡಿ ನೆಟ್ಟಿರುವ ಬಳ್ಳವನ್ನು ಶಿವಲಿಂಗವೆಂದು ಪೂಜಿಸಿ ಊಟಮಾಡಿದ್ದು ಬಲು ಚನ್ನಾಯಿತು. ಎಂದು ಹೇಳುತ್ತಾ ಸೇವಕರನ್ನು ಕರೆದು ಧಾನ್ಯ ಅಳೆಯಲಿಕ್ಕೆ ಆ ಬಳ್ಳವನ್ನು ತೆಗೆದುಕೊಂಡು ಬನ್ನಿರಿ ಎಂದು ಹೇಳಿ ಗಹಗಹಿಸಿನಕ್ಕನು. ಇದನ್ನು ಕೇಳಿ ಮಲ್ಲಪ್ಪಶೆಟ್ಟಿಯು ಅತ್ಯಂತ ಕೋಪದಿಂದ ಅವನನ್ನು ಕುರಿತು— ಎಲೈ ನೀಚನೇ, ಶಿವಲಿಂಗವನ್ನು ತುಚ್ಛವಾಗಿ ನುಡಿದು ಬಳ್ಳ ಎಂದು ಹೇಳುತ್ತೀಯಾ ? ಎಂದು ಅವನನ್ನು ತಿರಸ್ಕರಿಸಿ ಇತರ ಜನಗಳ ಸಂಗಡ ಆ ಸ್ಥಳಕ್ಕೆ ಹೋಗಿ ಬಳ್ಳವನ್ನು ಅಲ್ಲಾಡಿಸಿ ನೋಡಲು ಅದು ಶಿವಲಿಂಗವಾಗಿದ್ದಿತು. ಆಗ ಎಲ್ಲರೂ ಆಶ್ಚರ್ಯಚಕಿತರಾಗಿ ಮಲ್ಲಪ್ಪಶೆಟ್ಟಿಯನ್ನು ಗೌರವಿಸಿ ಈತನು ಮಹಾಮಹಿಮನೆಂದು ಹೊಗಳಿ ಪೂಜಿಸುತ್ತ ಆತನಿಂದ ಶಿವಮಹಾತ್ಮೆಯನ್ನು ಕೇಳಿ, ಕೇಳಿ ಪರಮ ಸಂತೋಷದಿಂದ ಇರುತ್ತಿದ್ದರು. ಈಗಲೂ ಆ ಸ್ಥಳದಲ್ಲಿ ಬಳ್ಳೇಶ್ವರ ಎಂಬ ಲಿಂಗವು ಪ್ರಸಿದ್ಧವಾಗಿರುವದು. ಇದೂ ಅಲ್ಲದೆ ಇಂತೆಂದರು.

## — ಕಾಟಕೋಟ ಗೊಲ್ಲನ ಕಥೆಯು —

ಪೂರ್ವ ಕಾಲದಲ್ಲಿ ಕಾಟಕೋಟನೆಂಬ ಒಬ್ಬ ಗೊಲ್ಲರವನಿದ್ದನು.

ಅವನಿಗೆ ಈಶ್ವರನಲ್ಲಿ ಅತ್ಯಂತ ಭಕ್ತಿಯು. ಕಂಡಕಂಡ ಪದಾರ್ಥಗಳೆಲ್ಲ ಶಿವನೆಂದು ನಮಸ್ಕರಿಸುತ್ತ ಯಾವಾಗಲೂ ಶಿವಕಥಾಲಾಪನೆಯನ್ನು ಮಾಡುತ್ತ ಇದ್ದನು. ಹೀಗೆ ಇರುತ್ತಿರಲು ಒಂದು ದಿವಸ ಅವನು ಒಂದು ಆಡಿನ ಹಿಕ್ಕೆಯನ್ನು ಕಂಡು ಶಿವಲಿಂಗವೆಂದು ತಿಳಿದು ಅದನ್ನು ತಂದು ಸ್ಥಾಪಿಸಿ ಆಕಳ ಹಾಲಿನಿಂದ ಅಭಿಷೇಕ ಮಾಡುತ್ತ ನಾನಾವಿಧ ಹೂಗಳಿಂದ ಮನ ವೊಪ್ಪುವ ಹಾಗೆ ಪ್ರತಿನಿತ್ಯವೂ ಭಕ್ತಿಭರದಿಂದ ತಪ್ಪದೆ ಪೂಜಿಸುತ್ತಿದ್ದನು. ಇದನ್ನು ನೋಡಿ ಅವನ ತಂದೆಯು ಪ್ರತಿದಿನವೂ ಅನ್ಯಾಯವಾಗಿ ಹಾಲನ್ನು ಹಾಳು ಮಾಡುವನಲ್ಲ ಎಂದು ಕೋಪಿಸಿಕೊಂಡು ಅವನನ್ನು ಗದ್ದರಿಸಿ ಬೈದು ಆ ಹಿಕ್ಕೆಯ ಲಿಂಗವನ್ನು ಕಾಲಿನಿಂದ ಒದೆದು ಹಾಳು ಮಾಡಿದನು. ಇದನ್ನು ನೋಡಿ ಆ ಕಾಟಕೋಟ ಗೊಲ್ಲನು ಕಾಲಯಮನಂತೆ ಕೋಪಾವೇಶ ದಿಂದ ತನ್ನ ಕೈಯ್ಯಲ್ಲಿದ್ದ ಕೊಡಲಿಯಿಂದ ತಂದೆಯ ತಲೆಯು ಎರಡು ಹೋಳಾಗುವಂತೆ ಮಾಡಿದನು. ಪರಮಪಾವನನಾದ ಆ ಶಿವಭಕ್ತನ ಕೈಗಳು ಸೋಂಕಿದ್ದರಿಂದ ಅವನ ತಂದೆಯು ತನ್ನ ಪಾಪಗಳನ್ನು ನೀಗಿ ಶಿವಲೋಕ ವನ್ನು ಹೊಂದಿ ಸಮಸ್ತ ಸುಖವನ್ನು ಅನುಭವಿಸುವವನಾದನು. ಜಗದೀಶ ನಾದ ಪರಶಿವನು ಸರ್ವಾಂತರ್ಯಾಮಿಯೆಂದು ತೋರ್ಪಡಿಸಿಕೊಳ್ಳುವ ದಕ್ಕಾಗಿ ಆ ಹಿಕ್ಕೆಯ ಲಿಂಗದಲ್ಲಿ ಉದ್ಭವಿಸಿ ಅದನ್ನು ಶಿವಲಿಂಗವನ್ನಾಗಿ ಮಾಡಿದನು. ಹಾಗೂ ಬಾಹೂರ ಬೊಮ್ಮದೇವನೆಂಬ ಒಬ್ಬ ಶಿವಭಕ್ತನು ಜೋಳದ ರಾಶಿಯನ್ನು ಮುತ್ತುಗಳ ರಾಶಿಯನ್ನಾಗಿ ಮಾಡಿದನು. ಇವ ನಂತೆಯೇ ಬಸವೇಶ್ವರನು ಕಳ್ಳರು ಲಿಂಗವೆಂದು ಕೊರಳಲ್ಲಿ ಕಟ್ಟಿಕೊಂಡಿದ್ದ ಬದನೆಕಾಯಿಗಳನ್ನು ತನ್ನ ಶಿವಭಕ್ತಿ ಪ್ರಭಾವದಿಂದಲೂ, ಶಿವಶರಣರ ಸೇವಾ ಬಲದಿಂದಲೂ ಲಿಂಗಗಳನ್ನಾಗಿಮಾಡಿ ಆ ಕಳ್ಳರನ್ನು ಶಿವಭಕ್ತರನ್ನಾಗಿ ಮಾಡಿ ಅವರ ಪಾಪಗಳನ್ನು ನಾಶಮಾಡಿದನು. ಹೀಗೆ ಬಸವೇಶ್ವರನು ಮಾಡಿದುದು ಏನೂ ದೊಡ್ಡದಲ್ಲವೆಂದು ಅಲ್ಲಿದ್ದ ಭಕ್ತರೆಲ್ಲರೂ ಹೇಳಿಕೊಳ್ಳುತ್ತ ಸಂತೋಷ ದಿಂದ ಇದ್ದರು.

ಒಂದು ದಿವಸ ಬಸವೇಶ್ವರನು ಶಿವಲಿಂಗಕ್ಕೆ ಅಭಿಷೇಕವನ್ನು ಮಾಡಿದ್ದ ಎಣ್ಣೆಯನ್ನುತೆಗೆದುಕೊಂಡು ತಾನು ಅಭ್ಯಂಜನಮಾಡಿಕೊಳ್ಳುತ್ತಿರಲು ಆಸ್ಥಳಕ್ಕೆ ಒಬ್ಬ ಜಂಗಮನು ಬಂದು ಸ್ವಾಮೀ, ಪ್ರತಿದಿವಸವೂ ಶಿವಪೂಜೆಯನ್ನು

ಮಾಡುವ ಸ್ಥಳದಲ್ಲಿ ಮುತ್ತಿನ ರಂಗವಲ್ಲಿಯನ್ನು ಇಡುವದಕ್ಕಾಗಿ ಹತ್ತು ಖಂಡಗ ಮುತ್ತುಗಳನ್ನು ಕೊಡಿಸಬೇಕೆಂದು ಕೇಳಿಕೊಂಡನು. ಆಗ ಬಸವೇಶ್ವರನು ಹತ್ತು ಖಂಡಗ ಮುತ್ತುಗಳನ್ನು ಎಲ್ಲಿಂದ ತರಬೇಕು ? ಶಿವ ಭಕ್ತ ಸಂಪನ್ನರಿಗೆ ಸಹಾಯ ಮಾಡಬೇಕಾದುದು ನನ್ನ ಕರ್ತವ್ಯವು. ಆದರೆ ಏನು ಮಾಡಲಿ ? ಎಂದು ಭಕ್ತಿಯಿಂದ ಈಶ್ವರನನ್ನು ಧ್ಯಾನಿಸಿ ಶಿವಭಕ್ತಿಯ ಮಹಿಮೆಯಿಂದಲೂ, ಶಿವಜ್ಞಾನ ದೃಷ್ಟಿಯಿಂದಲೂ ತನ್ನ ಪಕ್ಕದಲ್ಲಿ ಹಾಕಿದ್ದ ಜೋಳದ ರಾಶಿಯನ್ನು ಮುತ್ತುಗಳ ರಾಶಿಯನ್ನಾಗಿ ಮಾಡಿದನು. ಆಗ ಅಲ್ಲಿದ್ದ ಭಕ್ತರೆಲ್ಲರೂ ಬಸವೇಶ್ವರನನ್ನು ಹೊಗಳಿ ಈಶ್ವರನ ಮಹಿಮೆಯು ಅಸಾಧಾರಣವಾದುದೆಂದು ಹೇಳುತ್ತಿರಲಾಗಿ ಬಸವೇಶ್ವರನು ಆ ಜಂಗಮನನ್ನು ಬರಮಾಡಿಕೊಂಡು ಹತ್ತು ಖಂಡಗ ಮುತ್ತುಗಳನ್ನು ಅಳತೆಮಾಡಿಕೊಟ್ಟನು. ಇವುಗಳನ್ನು ತೆಗೆದುಕೊಂಡು ಹೋಗಿ ಶಿವಾರ್ಪಣೆ ಮಾಡಬಹುದೆಂದು ಹೇಳಿ ನಮಸ್ಕರಿಸಿ ಬೀಳ್ಕೊಟ್ಟನು. ಇದನ್ನು ನೋಡಿ ಅಲ್ಲಿದ್ದ ಭಕ್ತರು ಈ ಪ್ರಕಾರ ಹೇಳಿದರು.

## — ನೊರಟೆದ ಬಂಕಯ್ಯನ ಕಥೆಯು —

ಹಿಂದಿನ ಕಾಲದಲ್ಲಿ ಕುಂದದಭಕ್ತಿಯಿಂದ ಇಂದುಧರನನ್ನು ಪೂಜಿಸುತ್ತ ಶಿವಶರಣರ ಪಾದಸೇವೆಯಲ್ಲಿ ಪರಮ ಪ್ರೀತಿಯುಳ್ಳವನಾದ ನೊರಟೆದ ಬಂಕಯ್ಯನೆಂಬ ಒಬ್ಬ ಶಿವಭಕ್ತನಿದ್ದನು. ಒಮ್ಮೆ ಒಬ್ಬ ಜಂಗಮನು ಮಧ್ಯ ರಾತ್ರಿಯಲ್ಲಿ ಆವನ ಮನೆಯನ್ನು ಹುಡುಕಿಕೊಂಡು ಬಂದನು. ಆಗ ಬಂಕಯ್ಯನು ಆತನನ್ನು ಅತ್ಯಂತ ಆದರದಿಂದಕಂಡು ತನ್ನ ಮನೆಯಲ್ಲಿ ಈಗ ಶಿವಾರ್ಚನೆಯನ್ನು ಮಾಡಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಆ ಜಂಗಮನು ಎಲೈ ಭಕ್ತನೇ, ಒಣಗಿಹೋದ ಬಿಲ್ವವೃಕ್ಷದಲ್ಲಿ ಚಿಗುರಿದ ಬಿಲ್ವಪತ್ರಿಯನ್ನೂ, ಗೊಡ್ಡಿಯಾದ ಹಸುವಿನಹಾಲನ್ನೂ ತಂದುಕೊಟ್ಟರೆ ನಿನ್ನ ಮನೆಯಲ್ಲಿ ಶಿವಾರ್ಪಣೆಯನ್ನು ಮಾಡುವೆನು ಇಲ್ಲವಾದರೆ ಶಿವಾರ್ಪಣೆಯೆಂಬ ಮಾತನ್ನು ಸ್ವಪ್ನದಲ್ಲಿಯೂ ಸಹ ನೆನಪುಮಾಡುವದಿಲ್ಲವೆಂದು ಹೇಳಲು ಆ ಬಂಕಯ್ಯನು ಅತ್ಯಂತ ಭಕ್ತಿಪೂರ್ವಕವಾಗಿ ಆ ಜಂಗಮನ ಪಾದಪೂಜೆಯನ್ನು ಮಾಡಿ ಆ ತೀರ್ಥವನ್ನು ತೆಗೆದುಕೊಂಡು ಮನೆಯ ಅಂಗಳದಲ್ಲಿ ಕಟ್ಟಿದ್ದ ಒಂದು ಬರಡು

ಆಕಳ ಮೈಮೇಲೆ ಸಿಂಪಡಿಸಲು ಆ ಬರಡುಆಕಳು ಕರುವಿಲ್ಲದೆ ಹಾಲನ್ನು ಕ
ಯಿತು. ಮತ್ತು ಮನೆಯಮುಂಭಾಗದಲ್ಲಿದ್ದ ಒಣಗಿದ ಒಂದು ಬಿಲ್ವದಕೊರಡಿ
ಮೇಲೆ ಆ ತೀರ್ಥವನ್ನು ಚಿಮುಕಿಸಲು ಆ ಕೊರಡು ಚಿಗಿತು ಮನೋಹರವಾ
ಯಿತು. ಅವೆರಡನ್ನೂ ತಂದು ಆ ಜಂಗಮನಿಗೆಕೊಟ್ಟು ಆತನಶಿವಪೂಜೆಯನ್ನು
ಮಾಡಿಸಿದನು. ಈ ಕಾಲದಲ್ಲಿ ಜೋಳದರಾಶಿಯನ್ನು ಮುತ್ತುಗಳಾಗಿ ಮಾ
ಬೇಡಿದ ಜಂಗಮನಿಗೆ ಕೊಟ್ಟ ಬಸವೇಶ್ವರನ ಮಹಿಮೆಯನ್ನು ನಾವು ಕಣ್ಣಾ
ನೋಡಿದೆವು ಎಂಬುದಾಗಿ ಶಿವಭಕ್ತರೆಲ್ಲರೂ ಹೊಗಳುತ್ತಿರಲು ಬಸವಣ್ಣನು
ತನ್ನ ಉದಾರಗುಣವನ್ನು ಇನ್ನೂ ಅತಿಶಯವಾಗಿ ಪ್ರಕಾಶಪಡಿಸುತ್ತಿದ್ದನು.

ಒಂದುದಿವಸ ಸಂಗಮನಾಥನು ಜಂಗಮರೂಪವನ್ನು ಧರಿಸಿ ಬಸವೇ
ಶ್ವರನ ಮನೆಗೆಬಂದು ಆತನನ್ನುಕಂಡು ಕುಶಲಪ್ರಶ್ನೆಗಳನ್ನು ಮಾಡಿ ಎಲೈ—
ದಯಾಳುವಾದ ಬಸವರಾಜನೇ, ನಿನ್ನ ಉದಾರಗುಣವನ್ನು ಕೇಳಿ ಇಲ್ಲಿಗೆ
ಬಂದಿದ್ದೇನೆ. ಶಿವಶರಣರು ಬೇಡಿದ ಇಷ್ಟಾರ್ಥಗಳನ್ನು ಕೊಡುವ ಕಲ್ಪವೃಕ್ಷ
ದಂತೆ ನೀನು ಇರುವೆ. ಆದರಂತೆ ನನ್ನ ಇಷ್ಟಾರ್ಥವನ್ನೂ ಪೂರ್ಣಗೊಳಿಸುವಿ
ಯೆಂಬ ಅಪೇಕ್ಷೆಯಿಂದ ಬಂದಿದ್ದೇನೆ. ಅದೇನೆಂದರೆ— ನನಗೆ ಫಾಲನೇತ್ರವು
ಬೇಕು. ಈ ಒಂದು ವರವನ್ನು ಕೊಟ್ಟು ನನ್ನ ಆಶೆಯನ್ನು ಪೂರ್ಣಗೊಳಿಸ
ಬೇಕು. ಇದಕ್ಕೆ ಹಿಂಜರಿಯಬಾರದು ಎಂದು ಹೇಳಲು ಬಸವೇಶ್ವರನು ಆ
ಜಂಗಮರೂಪಿ ಪರಮೇಶ್ವರನನ್ನು ಕುರಿತು— ಎಲೈ ಸ್ವಾಮಿಯೇ, ನಿನ್ನ
ಮಹಿಮೆಯನ್ನು ನಾನು ಚನ್ನಾಗಿ ತಿಳಿದವನಾಗಿರುವೆನು. ನಿನಗೆ ನಾನು
ಹೆದರುವವನಲ್ಲ. ಎಂದು ಹೇಳಿ ಒಂದು ರನ್ನಗನ್ನಡಿಯನ್ನು ತರಿಸಿ ಆ
ಜಂಗಮನ ಮುಖದಎದುರಿಗೆ ಹಿಡಿಯಲು ಆತನು ತನ್ನೆದುರು ಹಿಡಿದಿರುವ
ಕನ್ನಡಿಯಲ್ಲಿ ತನ್ನ ಪ್ರತಿಬಿಂಬದ ಹಣೆಗಣ್ಣನ್ನು ನೋಡಿ ತಲೆತಗ್ಗಿಸಿ ಏನನ್ನೂ
ಹೇಳದೆ ಹೊರಟು ಹೋಗುತ್ತಿರುವ ಜಂಗಮ ಮೂರ್ತಿಯನ್ನು ಕುರಿತು
ಬಸವೇಶ್ವರನು— ಓ ಶಿವಶರಣರೇ, ಏತಕ್ಕೆ ಸುಮ್ಮನೆ ಹೊರಟು ಹೋಗುವಿರಿ?
ನಿಮಗೆ ಬೇಕಾದುದನ್ನು ಕೇಳಿದರೆ ಅದನ್ನು ಆದರದಿಂದ
ತಂದು ತಮಗೆ ಒಪ್ಪಿಸುವೆನು. ಮೊದಲಿನಿ ಮಾತನಾಡಿ ನಾನು ನಿಮ್ಮಲ್ಲಿ
ಏನನ್ನೂ ಬೇಡುವದಿಲ್ಲ. ಚೋಳ ರಾಜನಂತೆ ಚಿನ್ನದ ಮಳೆಯನ್ನೂ,
ಸುಂದರ ನಂಬಿಯಣ್ಣನಂತೆ ಸೂಳೆಯ ಮನೆಗೆ ತಿರುಗುವದನ್ನೂ, ಸಿರಿಯಾಳ

ಸೆಟ್ಟಿಯಂತೆ ಹೋದ ಬಾಲಕನ ಪ್ರಾಣವನ್ನೂ, ಅಭ್ರಾಳಕದಾಸನ ಹಾಗೆ ಅಪರಿಮಿತವಾದ ಐಶ್ವರ್ಯವನ್ನೂ, ಗುಂಡಯ್ಯನ ಹಾಗೆ ಒಳ್ಳೆಯಪ್ರಾಯದ ಯೌವನವನ್ನೂ ಬಯಸತಕ್ಕವನಲ್ಲ. ಎಲೈ, ಜಗತ್ಕರ್ತನಾದ ಸ್ವಾಮಿಯೇ, ನೀನು ಕೊಡುವ ಸ್ವರ್ಗ ಸುಖವೂ, ಮುಕ್ತಿಕಾಂತೆಯು ಐಶ್ವರ್ಯವೂ ಬೇಡ ! ನಿನ್ನ ಭಕ್ತರಾದ ಶಿವಶರಣರು ಭುಂಜಿಸಿ ಕಳೆದುಬಿಟ್ಟಿರುವ ಪ್ರಸಾದವು ಬಹಳ ವಾಗಿರುವದು ಅದನ್ನು ಉಂಡು ನಾನು ಬಹಳವಾಗಿ ಆನಂದಿಸುವೆನು. ಅಲ್ಲದೆ ಮತ್ತಾವ ಇಷ್ಟಾರ್ಥವನ್ನೂ ಬೇಡುವವನಲ್ಲ. ಯಾಕಂದರೆ—ಅಮೃತವನ್ನು ಅಕ್ಕರತೆಯಿಂದ ಸವಿದು ಸೊಕ್ಕಿದ ತೃಪ್ತಿಯನ್ನು ಹೊಂದಿದವನು ಒಕ್ಕಣ್ಣಿ ನಿಂದ ರಾಶಿ ಮಾಡಿದ ಅಕ್ಕಿಯನ್ನು ತೊಳೆದ ನೀರನ್ನು ಪಾನ ಮಾಡುವದಕ್ಕೆ ಬಯಸುತ್ತಾನೆಯೋ ! ಎಲೈ ಸ್ವಾಮಿಯೇ, ಸ್ನಾನ ಮಾಡಿಸು ವ ಪರಿಚಾರ ಕನು ಕಾಟಕೋಟನು, ಹೂಮಾಲೆಯನ್ನು ತಂದುಕೊಡುವ ಪುಣ್ಯಾತ್ಮನು ಪುಷ್ಪದತ್ತನು, ಹೂಸರವನ್ನು ಕಟ್ಟಿಕೊಡುವ ಲೇಚವ್ವೆಯು, ಭಕ್ತಿಯಿಂದ ಪೂಜಿಸುವ ಅರ್ಚಕನೇ ಕಣ್ಣಪ್ಪನು, ಆರತಿಯನೆತ್ತುವ ಊಳಿಗದವನೇ ದೀಪದ ಕಲಿಯೆಂಬವನು, ದೀವಟಿಗೆಯನ್ನು ಹಿಡಿಯುವ ಪುಣ್ಯಪುರುಷನು ಕಡವಲನು, ಸಂತೋಷದಿಂದ ಹಾಡಿ ಮುತ್ತಿನಾರತಿಯನ್ನೆತ್ತಿ ಚಿತ್ತವನ್ನು ವಶಮಾಡಿ ಕೊಳ್ಳುವ ಭಕ್ತನೇ ಸೋಮಿದೇವನು, ವಿಭೂತಿಯನ್ನು ಲೇಪಿಸಿ ಜಯಧ್ವನಿ ಯನ್ನು ಮಾಡುವ ಶರಣನು ತಿರುಜ್ಞಾನ ಸಂಬಂಧಿಯು, ಗಂಧವನ್ನು ಲೇಪಿಸ ತಕ್ಕವನು ಅಣುಮೂರ್ತಿಯು, ಧೂಪವನ್ನು ಸಮರ್ಪಿಸುವವನು ವಾಚಿ ದೇವನು, ನಿನ್ನ ಸಾನಿಧ್ಯದಲ್ಲಿ ಗಂಟೆಯನ್ನುಬಾರಿಸಿ ಪಾಪವಿಮುಕ್ತನಾದವನು ಓಹಿಲಯ್ಯನು, ಭುಕ್ತಿಯೆಂಬ ನೈವೇದ್ಯವನ್ನು ತಂದುಕೊಡುವವನು ಅರಿವೋಳ ಯ್ಯನು, ತಾಂಬೂಲವನ್ನು ತಂದುಕೊಡತಕ್ಕವನು ಲೇಚಣ್ಣನು, ಹಾಲನ್ನು ಕರೆವವನು ಬಂಕಿದೇವನು, ಅದನ್ನು ಕಾಸಿಕೊಡತಕ್ಕವಳು ಕೊಡಗೂಸು ಎಂಬವಳು, ಶಂಕರದಾಸನೆಂಬುವನೇ ನಿಮ್ಮ ವಜೀರನು, ಮಂಚಣ್ಣ ಪಂಡಿ ತನೇ ಪ್ರೇಮದಳಿಳು, ಅಡಿಗೆಯನ್ನು ಮಾಡುವವಳೇ ಚಂಗಳಾದೇವಿಯು, ಅಡಿಗೆ ಮಾಡತಕ್ಕವನು ಸಿರಿಯಾಳನು, ನೀರಿನ ಗಿಂಡಿಯನ್ನು ಹಿಡಿದು ಉಪಚರಿ ಸತಕ್ಕವನು ಹೊನ್ನಯ್ಯನು, ಉತ್ತರ ನೀರಾಜನವನ್ನು ಎತ್ತತಕ್ಕವಳು ಸೋಮವ್ವೆಯು, ಮಾರಯ್ಯನು ಕಟ್ಟಿಗೆಯನ್ನು ಹಿಡಿಯುವನು, ಚೆನ್ನಯ್ಯನು

ಪಾಕದಸವಿಯನ್ನು ತಿಳಿಸುವವನು, ಚೋಳರಾಜನು ಊಟಮಾಡುವ ಬಟ್ಟಲನ್ನು ಕೊಡುವವನು, ಸುಂಕದವನು ಬಂಕಯ್ಯನು, ರುಚಿಯಾದ ಆಹಾರವನ್ನು ಉಣಬಡಿಸತಕ್ಕವಳು ಚೋಳವ್ವೆಯು, ಹೇಳಿದ್ದನ್ನು ಮಾಡುವ ಊಳಿಗದವನೇ ಶಿವರಾತ್ರಿಯ ಸಂಕಯ್ಯನು, ಹಾಡುಗಾರಿಕೆಯವನು ಶಂಕರಯ್ಯನು, ನಿಮ್ಮ ಹಾಸ್ಯಗಾರನಾದ ವಿಕಟಕವಿಯೇ ಕವಿಕಂಪನೆಂಬ ಹೆಸರಿನವನು, ನಿಮ್ಮನ್ನು ಹೊಗಳುವ ಬೋಯಿಯೇ ಬ್ರಹ್ಮನು, ಸಕಲೇಶ ಮಾದರಸನೇ ವೀಣಾಗಾರನು, ಮಲ್ಲಿಕಾರ್ಜುನಪಂಡಿತನೇ ಕವಿಶ್ರೇಷ್ಠನು, ಸಾಮವೇದಿಯೇ ಪುರೋಹಿತನು, ಮಲ್ಲಶೆಟ್ಟಿಯೇ ಕಟ್ಟಿಗೆಯವನು, ಬಿರುದನ್ನು ಹೊಗಳತಕ್ಕ ಪಂಡಿತನು ಉದ್ಭಟಾರ್ಯನು, ನಿಮ್ಮ ದನಗಳನ್ನು ಕಾಯತಕ್ಕವನು ಚಂಡಯ್ಯನು, ಕಲ್ಲಿದೇವನೇ ನಿಮ್ಮ ಗಾರುಡಿಗನು, ಬೊಮ್ಮಯ್ಯನು ಬೇಟೆಗಾರನು, ನಾಟ್ಯನಮಿತ್ತಂಡನೇ ವೈದ್ಯನು, ನಂಬಿಯು ನಿಮ್ಮ ಒಡನಾಡಿಯು, ಭೋಗಯ್ಯನು ಪ್ರೀತಿಪಾತ್ರನಾದ ಸ್ನೇಹಿತನು, ಕಣಜವನ್ನು ಕಾಯುವವನು ದೇವರದಾಸಯ್ಯನು, ಕಲಿಗಣನಾಥನೇ ಮುಖ್ಯಮಂತ್ರಿಯು, ಮಾಯಿದೇವನು ಪುರಾಣಿಕನು, ಜಗದೇವಯ್ಯನು ಶಿಕ್ಷಾನಿಯಮನ ಅಧಿಕಾರಿಯು, ಏಣಾದಿನಾಥನು ನಿಮ್ಮ ಶೂರಭಟನು, ಚೇರಮಾಂಕನು ದಳಪತಿಯು, ಅಮ್ಮವ್ವೆಯು ದಾದಿಯು, ಮೃತ್ಯುಂಜಯಮಂತ್ರವನ್ನು ಉಪದೇಶಮಾಡತಕ್ಕವನು ರುದ್ರಪಶುಪತಿಯು, ಮುದ್ರೆಯನ್ನು ಒತ್ತುವ ಅಧಿಕಾರಿಯು ಕಿನ್ನರ ಬ್ರಹ್ಮಯ್ಯನು, ಮಲಯರಾಜನು ನಿಮ್ಮ ಆಶ್ರಿತನು, ಮಡಿಯನ್ನು ಹಿಡಿಯತಕ್ಕವನು ಮಡಿವಾಳ ಮಾಚದೇವನು, ಏಕಾಂತದವನು ರಾಮಯ್ಯನು, ನಿಮ್ಮ ಬಿಚ್ಚುಗತ್ತಿಯ ಆಳು ಚೇಡಯ್ಯನು, ನಿಮಗೆ ಸರ್ವಾಧಿಕಾರಿಯಾದವನೇ ಅಲ್ಲಮಪ್ರಭುವು, ಬಾಗಿಲನ್ನು ಕಾಯುವವನೇ ಹಲಾಯುಧಯ್ಯನು, ತಲೆಬಾಗಿಲನ್ನು ಕಾಯುವವನು ಕುರುಳಕೇತಯ್ಯನು, ನಿಮ್ಮ ಪ್ರಸಾದವುಳ್ಳವನು ಬಿಬ್ಬಬಾಚಯ್ಯನು, (ವೇಳೆ) ಕಾಲವನ್ನು ತಿಳಿಸತಕ್ಕವನು ಕಕ್ಕಯ್ಯನು, ಗುಂಡಯ್ಯನು ಕುಂಬಾರನಾಗಿರುವವನು, ನಿಮ್ಮ ಕುದುರೆಯ ವಜೀರನು ಆರೂರ ಚಿಕ್ಕಯ್ಯನು, ಇರಿವತ್ತಯ್ಯನೇ ಆನೆಯ ಮಾವುತನು, ಬಸವಯ್ಯನೆಂಬುವನೇ ನಿಮ್ಮ ಕಂಚುಕಿಯು ಈಪ್ರಕಾರ ಸೇವಿಸುತ್ತಿರುವ ನಮ್ಮ ಪೂರ್ವಿಕರಾದ ಶಿವಶರಣರು ಇರುತ್ತಿರಲಾಗಿ ತಮ್ಮ ದೊರೆತನಕ್ಕೆ ಯಾವದು ಕೊರತೆಯುಂಟು ? ನಾನಾ

ವರೂ ಆ ಪೂರ್ವಿಕರಾದ ಶಿವಶರಣರಿಗೆ ಕಿಂಕರನಾಗಿರುವೆನು, ಆದುದರಿಂದ ನನಗೆ ದುರ್ಲಭವಾದುದು ಯಾವದೂ ಇಲ್ಲ. ಮೂರನೆಯ ಕಣ್ಣು ಬೇಕಾದರೂ, ನಾಲ್ಕನೆಯ ಕಣ್ಣು ತೋರಿಸಿದರೂ, ಆರು ಮುಖಗಳನ್ನು ಅಪೇಕ್ಷಿಸಿದರೂ, ಕೊಡುತ್ತೇನೆ. ಇದಕ್ಕೆ ನಾನೆಂದಿಗೂ ಹೆದರತಕ್ಕವನಲ್ಲ. ನಿನ್ನ ಅಷ್ಟದೇಹಗಳೂ, ಬ್ರಹ್ಮ, ವಿಷ್ಣು, ದೇವತೆಗಳ ಜನ್ಮವೂ ಹುಟ್ಟುವದಕ್ಕೆ ಮೊದಲೇ ನಾನು ನಿನ್ನ ಆಳಾಗಿರುವೆ. ಹೀಗಿರುತ್ತಿರಲು ವಿಚಾರ ಮಾಡತಕ್ಕದ್ದು ಏನಿದೆ ? ಎಂದು ಬಸವೇಶ್ವರನು ನುಡಿಯಲು ಸಂಗಮನಾಥನು ಆ ಭಕ್ತನ ಮಾತುಗಳನ್ನು ಕೇಳಿ ಭಕ್ತಿಗೆ ಮೆಚ್ಚಿ ಕರುಣಾಕಟಾಕ್ಷದಿಂದ ಆತನನ್ನು ಸತ್ಕರಿಸಿ ಅಲ್ಲಿಯೇ ಅಂತರ್ಧಾನ ಹೊಂದಿದನು. ಈ ರೀತಿಯಾಗಿ ಬಸವೇಶ್ವರನು ಮೂರನೆಯ ಕಣ್ಣುಕೊಟ್ಟು ಶಿವನ ಕಟಾಕ್ಷಕ್ಕೆ ಪಾತ್ರನಾಗಿ ಸಮಸ್ತ ಶಿವಶರಣರ ಪಾದಪೂಜೆಯನ್ನು ಮಾಡುತ್ತ ಮಾಯೆಯೆಂಬ ಕತ್ತಲೆಯನ್ನು ಭಕ್ತಿಯೆಂಬ ಬೆಳಕಿನಿಂದ ಗೆದ್ದು ಸುಖವಾಗಿದ್ದನು.

## — ಗೋವಳಗಿತ್ತಿಯ ಕಥೆಯು —

ಒಂದು ದಿವಸ ಕಲ್ಯಾಣ ಪಟ್ಟಣದ ಅರಸನಾದ ಬಿಜ್ಜಳನು ಸಕಲರಾಜ ಮರ್ಯಾದೆಗಳಿಂದ ಓಲಗಕ್ಕೆ ಬಂದು ರತ್ನ ಸಿಂಹಾಸನದಲ್ಲಿ ಕುಳಿತು ಸಭೆಯನ್ನು ಅಲಂಕರಿಸಿದ್ದನು. ಆಗ ಸಭೆಯಲ್ಲಿ ಕುಳಿತಿದ್ದ ಬಸವೇಶ್ವರನು ಇದ್ದಕ್ಕಿದ್ದ ಹಾಗೆಯೇ ಒಮ್ಮೆಲೇ ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ "ಬೀಳಬೇಡ ಬೀಳಬೇಡನವ್ವಾ ! ನಿಲ್ಲು ! ನಿಲ್ಲು ! ಎಂಬುದಾಗಿ ಗಟ್ಟಿಯಾಗಿ ಕೂಗಿದನು. ಇದನ್ನು ನೋಡಿ ಸಭೆಯಲ್ಲಿದ್ದವರೆಲ್ಲರೂ ದಿಗ್ಭ್ರಾಂತರಾದರು. ಆಗ ಬಿಜ್ಜಳನು ಬಸವೇಶ್ವರನನ್ನು ಕುರಿತು— ಎಲೈ ಮಂತ್ರಿವರ್ಯನೆ, "ಜೊಟ್ಟು ಭಸ್ಮವನ್ನು ಧರಿಸಿದವನಿಗೆ ಬೆಟ್ಟದಷ್ಟು ಹುಚ್ಚುತನ" ಎಂಬ ಗಾದೆಯ ಮಾತು ಇಂದು ನಿನ್ನಲ್ಲಿ ಕಂಡು ಬಂದಿತು. ಸಭಾಮಂಟಪದಲ್ಲಿ ರಾಜಕಾರ್ಯದಲ್ಲಿ ತೊಡಗಿದ್ದ ನೀನು ಸುಮ್ಮನೇ ಹುಚ್ಚನಂತೆ ಹೀಗೆ ಏಕೆ ಕೂಗಿದೆ ? ಎಂದು ಕೇಳಿದನು. ಆಗ ಬಸವೇಶ್ವರನು— ದೊರೆಯೇ, ಆ ಸಂಗತಿಯನ್ನು ಹೇಳಿದರೆ ನೀವೆಲ್ಲರೂ ನಂಬುವದಿಲ್ಲ. ಹೇಳದಿದ್ದರೆ ಅದರ ಗೂಢವನ್ನು ತಿಳಿಯದೆ ಹುಚ್ಚನೆನ್ನುತ್ತೀರಿ. ಆದ್ದರಿಂದ ಅನಿವಾರ್ಯವಾಗಿ ಹೇಳಬೇಕಾಗಿದೆ. ಕೇಳಿರಿ:— ಎಲೈ ಮಹಾರಾಜನೇ, ತಮ್ಮ ಕಲ್ಯಾಣ

ಪಟ್ಟಣದಲ್ಲಿರುವ ತ್ರಿಪುರಾಂತಕೇಶ್ವರನ ದೇವಾಲಯದ ಪೂರ್ವದಿಕ್ಕಿನಲ್ಲಿ ಅರ್ಧ ಗಾವುದ ದೂರದಲ್ಲಿ ಕಪಿಲೇಶ್ವರ ಎಂಬ ಒಂದು ಶಿವಲಿಂಗವಿದೆ. ಆ ಲಿಂಗಕ್ಕೆ ಸಮರ್ಪಣೆ ಮಾಡುವದಕ್ಕಾಗಿ ಒಬ್ಬ ಋಷಿಯು ಸಹಸ್ರ ಕುಂಭಾಭಿಷೇಕ ಮಾಡಿಸುವದಾಗಿ ಸಂಕಲ್ಪ ಮಾಡಿಕೊಂಡು ಸಾವಿರ ಬಿಂದಿಗೆ ಹಾಲನ್ನು ತರಿಸಿ ಮಹಾ ಅಭಿಷೇಕವನ್ನು ಮಾಡಿಸಲಾಗಿ ಆ ಕ್ಷೀರಧಾರೆಯು ದಾರಿಯಲ್ಲಿ ಹರಿದು ಕೆಸರಾಗಿ ಜನರಿಗೆ ತಿರುಗಾಡುವದಕ್ಕೆ ತೊಂದರೆಯಾಗಿರುವದು. ಅದೇ ಮಾರ್ಗದಿಂದ ಮೊಸರು ಮಾರುವದಕ್ಕಾಗಿ ಮಣ್ಣಿನ ಮಡಿಕೆ ಯನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗುತ್ತಿರುವ ಸ್ತ್ರೀಯೊಬ್ಬಳು ತಾನು ಜಾರಿ ಬೀಳುತ್ತಿರುವಾಗ ನನ್ನನ್ನು ನೆನೆದು ಬಸವಾ ! ಬಸವಾ ! ಎಂದು ಕೂಗಿದಳು. ಆದುದರಿಂದ ಮಡಿಕೆ ಬೀಳುವದಕ್ಕೆ ಮೊದಲೇ ನಾನು ಅವಳನ್ನು ಹಿಡಿದು ಎತ್ತಿದೆನು. ಎಂದು ಹೇಳಲಾಗಿ ಅರಸನು ಬಹಳ ಆಶ್ಚ ರ್ಯವನ್ನು ಹೊಂದಿ ಇದನ್ನು ಪರೀಕ್ಷಿಸಬೇಕೆಂದು ಗುಪ್ತಚಾರರನ್ನು ಕರೆದು ಆ ಮೊಸರಿನವಳನ್ನು ಹುಡುಕಿ ಕರೆತರುವಂತೆ ಹೇಳಿ ಕಳಿಸಿದನು. ಗೂಢ ಚಾರರು ಅವಳನ್ನು ಹುಡುಕಿ ಸಭೆಯಲ್ಲಿ ಕರೆದುತಂದು ನಿಲ್ಲಿಸಲು ತುರುಬಿನಲ್ಲಿ ಮುಡಿದಿದ್ದ ಹೂಗಳು ಜಾರಿಬಿದ್ದು ಹೋಗಿದ್ದವು. ಎಡಗೈ ಕೆಸರಾಗಿದ್ದಿತು. ಹಣೆಯಲ್ಲಿ ಧರಿಸಿದ್ದ ವಿಭೂತಿಯು ಬೆವರಿನಿಂದ ನಾಶವಾಗಿದ್ದಿತು. ಸೀರೆಗೆ ಕೆಸರಿ ನಿಂದ ಕೂಡಿದ ಹನಿಗಳು ಅಂಟಿಕೊಂಡಿದ್ದವು. ಕೊರಳಲ್ಲಿಯ ರುದ್ರಾಕ್ಷಿಯು ಮುದುಡಿಕೊಂಡಿತ್ತು. ಈ ರೀತಿಯಾಗಿರುವ ಗೌಳಿಗರ ಸ್ತ್ರೀಯು ಸಭೆಯಲ್ಲಿ ರುವ ಅರಸನಿಗೂ, ಮಂತ್ರಿಯಾದ ಬಸವೇಶ್ವರನಿಗೂ ನಮಸ್ಕರಿಸಿ ನಿಂತಿರು ವಾಗ ಬಿಜ್ಜಳನು ಎಲೈ, ಗೋಪಿಕಾ ಸ್ತ್ರೀಯಳೇ, ನೀನು ಇಂದು ಕಲ್ಯಾಣಕ್ಕೆ ಬರುವಾಗ ಹಾದಿಯಲ್ಲಿ ನಡೆದ ಸಂಗತಿಯನ್ನು ಸ್ವಲ್ಪವೂ ಬಿಡದೆ ವಿಸ್ತಾರ ವಾಗಿ ಹೇಳು ಎನ್ನಲು ಆ ಗೊಲ್ಲತಿಯು ಬಸವೇಶ್ವರನು ಹೇಳಿದ ಮಾತುಗಳಿಗೆ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ನಡೆದ ಸಂಗತಿಯನ್ನು ಹೇಳಿ ಸುಮ್ಮನಾದಳು. ಆಗ ಅರಸನು— ಎಲೈ ಗೋಪಿಕಾ ಸ್ತ್ರೀಯೇ, ನನ್ನ ಸಭೆಯಲ್ಲಿ ಕುಳಿತು ಕೊಂಡಿದ್ದ ಬಸವೇಶ್ವರನು ಮೊಸರು ಮಾರುವದಕ್ಕಾಗಿ ದಾರಿಯಲ್ಲಿ ಹೋಗು ವಾಗ ಬೀಳುತ್ತಿರುವ ನಿನ್ನನ್ನು ಹೇಗೆ ಎತ್ತಿದನು ? ಎಂದು ಕೇಳಲಾಗಿ ಆ ಸ್ತ್ರೀಯಳು ಒಂದಾನೊಂದು ಕಥೆಯನ್ನು ಹೇಳತೊಡಗಿದಳು ಅದೇನೆಂದರೆ—

## — ಪೊನ್ನಾಂಬಲನಾಥನ ಕಥೆಯು —

ಪೂರ್ವಕಾಲದಲ್ಲಿ ಪೊನ್ನಾಂಬಲ ಎಂಬ ಹೆಸರಿನ ಒಂದು ಗ್ರಾಮವಿತ್ತು. ಆ ಊರಲ್ಲಿ ಪೊನ್ನಾಂಬಲನಾಥನೆಂಬ ಒಬ್ಬ ಮಹಾ ಶಿವಭಕ್ತನಿದ್ದನು. ಅತನು ಪ್ರತಿದಿವಸವೂ ಪರಮೇಶ್ವರನಿಗೆ ಸಹಸ್ರ ಪುಷ್ಪಗಳಿಂದ ಪೂಜೆ ಮಾಡುವ ನಿಯಮವನ್ನು ಕೈಕೊಂಡಿದ್ದನು. ಒಂದು ದಿವಸ ಆತನು ಪ್ರಾತಃ ಕಾಲದಲ್ಲಿ ಎದ್ದು ಶಿವಪೂಜೆಗಾಗಿ ಮೊಲ್ಲೆ, ಮಲ್ಲಿಗೆ, ಜಾಜಿ, ಸಂಪಿಗೆ, ಸುರ ಹೊನ್ನೆ, ಸುರಗಿ, ಸೌಗಂಧಿಕ ಮೊದಲಾದ ನಾನಾಬಗೆಯ ಹೂಗಳನ್ನು ಕೊಯ್ದು ಬುಟ್ಟಿಯತುಂಬ ತೆಗೆದುಕೊಂಡು ಬರುತ್ತಿರುವಾಗ ದಾರಿಯಲ್ಲಿ ಕೆಸರಿ ನೊಳಗೆ ಕಾಲುಜಾರಿ ಬೀಳುತ್ತಿರಲು ದಿಗಿಲುಗೊಂಡು ಶಂಭೋ! ದಯಾಸಿಧೇ! ಭಕ್ತವತ್ಸಲಾ ! ಅನಾಥರಕ್ಷಕಾ ! ಎಂದು ಬಗೆಬಗೆಯಾಗಿ ಮೊರೆಯಿಡಲು ದಯಾವತ್ಸಲನಾದ ಶಂಕರನು ಆತನನ್ನು ಬೀಳಗೊಡದಂತೆ ರಕ್ಷಿಸಿದನು. ಅದ ರಂತೆ ಈ ಬಸವೇಶ್ವರನು ಸಹ ನನ್ನನ್ನು ಹಿಡಿದೆತ್ತಿದನು .ಈತನ ಮಹಿಮೆಯನ್ನು ವರ್ಣಿಸುವದು ನನ್ನಿಂದ ಸಾಧ್ಯವಿಲ್ಲ. ಆದುದರಿಂದ ಇದೇ ವಿಷಯಕ್ಕಾಗಿ ಮತ್ತೊಂದು ಕಥೆಯನ್ನು ಹೇಳುತ್ತೇನೆ ಕೇಳಿರಿ ಎಂದು ಹೇಳತೊಡಗಿದಳು.

## — ಸಿದ್ಧರಾಮ ಶಿವಯೋಗಿಯ ಕಥೆಯು —

ಬಹುದಿವಸಗಳ ಹಿಂದೆ ಸ್ವರ್ಣವಲ್ಲಿ ಎಂಬ ಒಂದು ಪಟ್ಟಣವಿತ್ತು. (ಈಗ ಅದು ಸೊಲ್ಲಾಪೂರ ಆಗಿದೆ) ಆ ಪಟ್ಟಣದಲ್ಲಿ ಇಂದ್ರಿಯಗಳನ್ನು ಗೆದ್ದ ವನೂ, ಭವಬಂಧನವನ್ನು ಹರಿದವನೂ, ಪರಮ ಶಿವಭಕ್ತನೂ, ಆಧ್ಯಾತ್ಮ ವಿಚಾರದಲ್ಲಿ ನಿಪುಣನೂ ಆದ ಸಿದ್ಧರಾಮ ಶಿವಯೋಗಿ ಎಂಬ ಒಬ್ಬ ಜಂಗಮನು ನಿದ್ದನು. ಪರಮ ಶಿವಭಕ್ತನಾದ ಆತನು ಸಾವಿರಾರು ಕಡೆಗಳಲ್ಲಿ ಸಹಸ್ರಾರು ಶಿವದೇವಾಲಯಗಳನ್ನು ನಿರ್ಮಿಸಿ ಸಾಕ್ಷಾತ್ ಮಲ್ಲಿಕಾರ್ಜುನ ಸ್ವಾಮಿಯನ್ನೇ ಅಲ್ಲಿಗೆ ಬರಮಾಡಿಸಿ ಅತ್ಯಂತ ಮಹಿಮಾನ್ವಿತನಾಗಿ ತೇಜೋ ರಾಶಿಯಂತೆ ಹೊಳೆಯುತ್ತಿದ್ದನು. ಒಂದು ದಿವಸ ಆತನು ಗಣಂಗಳ ಸಮೂಹದಲ್ಲಿ ಕುಳಿ ತಿರುವಾಗ ಸಮಸ್ತ ಜಂಗಮರೂ ಆತನನ್ನು ಕುರಿತು— ಎಲೈ ಸಿದ್ಧರಾಮ ಶಿವಯೋಗೀಶಾ, ನೀನು ಪ್ರತಿದಿವಸ ಕೈಲಾಸದಲ್ಲಿ ನಡೆಯುತ್ತಿರುವ ಪರಶಿವನ ಸಭೆಯನ್ನು ಅಲಂಕರಿಸುತ್ತಿರುವೆ ! ಅಲ್ಲಿ ಪ್ರಮಥಗಣ ಸಮೂಹದಲ್ಲಿ ಬಸವೇ

ಶ್ವರನನ್ನು ನೋಡಿರುವೆಯಾ ? ಎಂದು ಕೇಳಿದರು. ಅದಕ್ಕೆ ಆತನು ಬಸವೇ
ಶ್ವರನು ಆ ಸಭೆಯಲ್ಲಿರುವ ವರ್ತಮಾನವನ್ನು ಈಗಲೇ ತಿಳಿದುಕೊಂಡು ಬಂದು
ಹೇಳುವೆನೆಂದು ನುಡಿದು ದಿವ್ಯತೇಜೋಭರಿತವಾದ ದೇಹದಿಂದ ಕೋಟಿ
ಸೂರ್ಯರನ್ನು ಧಿಃಕರಿಸುತ್ತ ಆಕಾಶಮಾರ್ಗದಿಂದ ಹೊರಟು ಸಮಸ್ತದೇವ
ಗಂಧರ್ವರಿಂದ ಸೇವೆಯನ್ನು ಸ್ವೀಕರಿಸುತ್ತ ಕೈಲಾಸ ಪರ್ವತವನ್ನು ಸೇರಿ ಪ
ಮೇಶ್ವರನ ಸನ್ನಿಧಿಯಲ್ಲಿ ಸಾಷ್ಟಾಂಗ ಪ್ರಣಾಮವನ್ನು ಸಮರ್ಪಿಸಿ ಮುಂಭಾ
ದಲ್ಲಿ ನಿಂತಿರಲು ಪರಶಿವನು ಕರುಣಾದೃಷ್ಟಿಯಿಂದ ನೋಡಿ ಬಾರಯ್ಯಾ!
ಸಿದ್ಧರಾಮಾ, ಕ್ಷೇಮದಿಂದ ಇರುವೆಯಾ ಬಂದಕಾರಣವೇನು ? ಭೂಲೋಕ
ದಲ್ಲಿ ಸಕಲರೂ ಸುಖವಾಗಿರುವರೋ ? ಶಿವಭಕ್ತರು ನಿರಾತಂಕವಾಗಿ ಸುಖ
ದಿಂದ ಇರುವರೋ ? ಹೇಳು ಎಂದು ಕೇಳಲು ಸಿದ್ಧರಾಮೇಶ್ವರನು ಮಹಾ
ಪ್ರಭೋ, ಭೂಲೋಕದಲ್ಲಿರುವ ಸಮಸ್ತಜನರೂ ಸೌಖ್ಯದಿಂದ ಇದ್ದಾರೆ
ಶಿವಭಕ್ತರು, ಶಿವಶರಣರು, ಶಿವಗಣಂಗಳು, ಸಕಲ ಶಿವಯೋಗಿಗಳು ಯಾ
ಕೊರತೆಯೂ ಇಲ್ಲದೆ ಸೌಖ್ಯವಾಗಿದ್ದಾರೆ. ಆದರೆ ಅವರು ಶಿವಲೋಕದಲ್ಲಿ
ಬಸವೇಶ್ವರನು ಇದ್ದಾನೋ, ಇಲ್ಲವೋ ತಿಳಿದುಕೊಂಡು ಬರುವಂತೆ ನನ್ನನ್ನ
ಇಲ್ಲಿಗೆ ಕಳಿಸಿದ್ದಾರೆ. ಎಂದು ಹೇಳಲು ಶಂಕರನು ಮುಗುಳುನಗೆಯಿಂದ ಸರ್ವ
ವ್ಯಾಪಿಯೂ, ಭಕ್ತಾಗ್ರಗಣ್ಯನೂ, ಪರಮಪಾವನನೂ ಆದ ಬಸವೇಶ್ವರನು
ಇಲ್ಲದಿರುವ ಸ್ಥಳವು ಯಾವುದಿದೆ? ಆದರಲ್ಲಿಯೂ ಆತನು ವಿಭೂತಿ, ರುದ್ರಾಕ್ಷಿ
ಗಳಾದಿಯಾಗಿ ಅಷ್ಟಾವರಣಗಳಲ್ಲಿಯೂ, ಶಿವಭಕ್ತಿ ಪರಾಯಣರಾದ ಜಂಗಮ
ರಲ್ಲಿಯೂ, ಶಿವಯೋಗಿಗಳಲ್ಲಿಯೂ, ಪ್ರಮಥಗಣಂಗಳಲ್ಲಿಯೂ ಮತ್ತು ನನ್ನ
ಲ್ಲಿಯೂ ಯಾವಾಗಲೂ ವಾಸವಾಗಿರುವನು. ಇದನ್ನು ಚತುರನಾದ ನಿನಗೆ
ತಿಳಿಸಬೇಕೇ? ಎಂದು ಹೇಳಿ ತನ್ನ ಹೃದಯವನ್ನು ತೆರೆದು ಒಳಗೆ ಶಿವಯೋಗ
ದಲ್ಲಿ ಸುಖದಿಂದ ಕುಳಿತಿರುವ ವೃಷಭೇಶ್ವರನನ್ನು ತೋರಿಸಿದನು. ಆಗ
ಬಸವೇಶ್ವರನು ಶಿವನ ಹೃದಯ ಮಧ್ಯದಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡು
ದಿವ್ಯ ಶರೀರಧಾರಿಯಾಗಿ ಜಂಗಮರಾದ ಶಿವಶರಣರಿಗೆ ನಮಸ್ಕಾರವೆಂದು
ಹೇಳುತ್ತ ಸರ್ವಾಂಗದಲ್ಲಿಯೂ ಭಸ್ಮವನ್ನು ಧರಿಸಿ, ಕಂಠವು ರುದ್ರಾಕ್ಷಿಗಳಿಂದ
ಅಲಂಕೃತವಾಗಿರಲು ಶಿವಧ್ಯಾನದಿಂದ ಉಂಟಾದ ಆನಂದದಿಂದ ಆನಂದಭಾಷ್ಪ
ಸುರಿಯುತ್ತಿರಲು, ಅರ್ಧ ತೆರೆದ ಕಣ್ಣುಗಳಿಂದ ಹಸ್ತದಲ್ಲಿರುವ ಲಿಂಗದಲ್ಲಿ ನೆಟ್ಟ

ದೃಷ್ಟಿಯುಳ್ಳವನಾಗಿ ಕಂಗೊಳಿಸಿದನು. ಸಿದ್ಧರಾಮ ಶಿವಯೋಗಿಯು ಬಸವೇಶ್ವರನನ್ನು ನೋಡಿ ಆನಂದದಿಂದ ಅಡಿಗಡಿಗೂ ಶರಣು ! ಶರಣು ! ಎಂದು ಹೇಳುತ್ತಿದ್ದನು. ಇವನ್ನು ನೋಡಿ ಇಂದ್ರಾದಿ ದೇವತೆಗಳು ಆಶ್ಚರ್ಯಗೊಂಡು ನಲಿಯುತ್ತಿದ್ದರು. ಹೀಗಿರುತ್ತಿರಲು ಪರಮೇಶ್ವರನು ಪಾರ್ವತಿಯನ್ನು ಓರೆ ನೋಟದಿಂದ ಬಾರಿಬಾರಿಗೂ ನೋಡುತ್ತ— ಎಲೈ ಪಾರ್ವತಿಯೇ, ಈ ಬಸವೇಶ್ವರನ ಭಕ್ತಿಭಾವವನ್ನೂ, ಮಹಿಮೆಯನ್ನೂ, ವಿಲಾಸವನ್ನೂ ನೋಡಿದೆಯಾ ! ಪ್ರಪಂಚದ ಉದ್ಧಾರಕ್ಕಾಗಿ ಧರ್ಮರೂಪಿಯಾದ ನಂದೀಶ್ವರನೇ ಬಸವೇಶ್ವರನಾಗಿ ಅವತರಿಸಿದ್ದಾನೆ. ಆತನು ನನಗೆ ಪ್ರಾಣಸ್ವರೂಪನು. ಇವನೇ ಈ ಭೂಮಂಡಲಕ್ಕೆ ಆದಿಯಾದವನು. ಸಮಸ್ತ ವಸ್ತುಗಳಿಗೂ ಇವನು ಮೂಲಕಾರಣನು. ನಾನು ಈ ಪ್ರಪಂಚಕ್ಕೆ ಗುರುವು. ಈತನು ಮಹಾದಾಸಿಯು. ನಾನು ಲೋಕವನ್ನು ಶಿಕ್ಷಿಸತಕ್ಕವನು. ಈತನು ರಕ್ಷಿಸತಕ್ಕವನು. ನಾನು ಮುಕ್ತಿದಾತನು. ಈತನು ಭಕ್ತಿದಾತನು. ನಾನು ಭಕ್ತವತ್ಸಲನು. ಈತನು ಭಕ್ತಿಯ ಖಣಿಯು. ನಾನು ಭಕ್ತದೇಹಿಯು. ಈತನು ಭಕ್ತಪ್ರಾಣವು. ನಾನು ಈ ಲೋಕದಲ್ಲಿ ಲಿಂಗವು. ಈತನು ಜಂಗಮವು. ನಾನು ಶಂಭುವು. ಈತನು ಎರಡನೇಶಿವನು. ಸಮಸ್ತರಿಗೆ ನನ್ನ ಭಕ್ತಿಯಿಂದ ದೊರೆಯತಕ್ಕ ಮುಕ್ತಿಯು ಈತನ ಸ್ಮರಣಮಾತ್ರದಿಂದ ಲಭಿಸುವದು. ಲೋಕದ ಭಕ್ತರು ತಮ್ಮ ತನು, ಮನ, ಧನಗಳನ್ನು ಕದಾಚಿತ್ ನನಗೆ ಒಪ್ಪಿಸಬಹುದು. ಆದರೆ ಈ ಬಸವನು ತನ್ನ ತನು, ಮನ, ಧನಗಳನ್ನು ಸದಾ ಸಮರ್ಪಿಸಿದ್ದಾನೆ. ಆದ್ದರಿಂದ ಈ ಪುಣ್ಯಪುರುಷನ ಮಹಿಮೆಯನ್ನು ನಾನೇ ಬಲ್ಲೆನು. ಮತ್ತು ನನ್ನ ಮಹಿಮೆಯನ್ನು ಅವನೊಬ್ಬನೇ ಬಲ್ಲನು. ಯಾವ ಮಾನವನ ಮುಖದಿಂದ ಬಸವ ಎಂಬ ನಾಮೋಚ್ಚಾರಣೆ ಯಾಗುವದೋ ಅಲ್ಲಿ ನಾನೂ, ನನ್ನ ಭಕ್ತರೂ, ಪ್ರಮಥಗಣರೂ ವಾಸಮಾಡುವರು. ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಈ ಅಷ್ಟಾವರಣಗಳಿಂದ ಕೂಡಿದ ಮಾನವನು ಬಸವೇಶ್ವರನ ಅಂಶೀಭೂತನು. ಬಸವೇಶ್ವರನು ನನ್ನ ಹೃದಯದಲ್ಲಿ ವಾಸಿಸಿರುವಂತೆ ನಾನು ಅವನ ಹೃದಯದಲ್ಲಿ ವಾಸಮಾಡುವೆನು. ಎಂದು ಪಾರ್ವತಿಗೆ ಹೇಳುತ್ತ ಹೃದಯಕಮಲದಲ್ಲಿ ಹೊಳೆಯುತ್ತಿರುವ ವೃಷಭೇಶ್ವರನನ್ನು ನೋಡಿ ಭೂಮಂಡಲದಲ್ಲಿ ಶಿವಭಕ್ತರು ಎಷ್ಟುಜನ

ರಿದ್ದಾರೆ ? ಎಂದು ಕೇಳಲು ಬಸವನು ದೀರ್ಘದಂಡ ಪ್ರಣಾಮವನ್ನು ಮಾಡಿ ಎಲೈ ಸ್ವಾಮಿಯೇ, ಭೂಲೋಕದಲ್ಲಿ ಭಕ್ತರೊಬ್ಬರೂ ಇಲ್ಲ. ನಾನೊಬ್ಬನೇ ನಿನ್ನ ಭಕ್ತನು, ಹೇಗಂದರೆ— ನಿನ್ನ ಭಕ್ತರೆಲ್ಲರೂ ನಿನಗೆ (ಪರಶಿವನಿಗೆ) ಸಮಾನರು. ನಾನು ಅವರೆಲ್ಲರ ಭಕ್ತನು. ಆದುದರಿಂದ ನಾನೊಬ್ಬನೇ ಭಕ್ತನಲ್ಲದೆ ಮತ್ತಾರೂ ಅಲ್ಲ; ಜಗತ್ಪೂಜ್ಯನಾದ ಎಲೈ ಶಂಭುವೇ, ಮಾನವ ಜೀವಿಗಳು ಯಾವ ಜನ್ಮದಲ್ಲಿ ಹುಟ್ಟಿದರೂ ಆತನು, ಗುರು, ಲಿಂಗ ಜಂಗಮರ ತೀರ್ಥ ಪ್ರಸಾದಗಳಿಂದ ಮುಕ್ತರಾಗುವರು, ಹಾಗು ಮೃಗಗಳು, ಪಕ್ಷಿಗಳು ಕ್ರಿಮಿಕೀಟಕಾದಿಗಳು ಜಂಗಮರು ಉಂಡುಉಳಿದ ಮಿಕ್ಕ ಪ್ರಸಾದವನ್ನು ಸೇವಿಸಿದರೆ ಅವುಗಳ ಭವಬಂಧನವೂ ಹರಿದು ಪರಮಗತಿಯಾಗುವದು ಎಂದು ಬಸವೇಶ್ವರನು ಹೇಳಲು ಶಿವಸಭೆಯಲ್ಲಿದ್ದವರೆಲ್ಲ ಭಕ್ತಿಪೂರ್ಣ ಅಂತಃಕರಣವುಳ್ಳವರಾಗಿ ಸಂತೋಷಹೊಂದಿದರು. ನಂತರ ಸಿದ್ಧರಾಮಶಿವಯೋಗಿಯು ಪರಶಿವನಿಗೆ ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ಆತನ ಅಪ್ಪಣೆಯನ್ನು ಪಡೆದು ಹರುಷಚಿತ್ತನಾಗಿ ಹಿಂದಿರುಗಿ ಭೂಲೋಕಕ್ಕೆ ಬಂದು ಶಿವಸನ್ನಿಧಿಯಲ್ಲಿ ನಡೆದ ಸಮಾಚಾರವನ್ನು ಶಿವಗಣಂಗಳಿಗೆ ವಿವರಿಸಿ ಹೇಳಿದನು. ಆಗ ಆ ಸಭಿಕರು ಸಂಶಯವುಳ್ಳವರಾಗಿ ಬಸವೇಶ್ವರನು ಶಿವನ ಹೃದಯದಲ್ಲಿ ಹೇಗೆ ವಾಸಿಸುತ್ತಿದ್ದಾನೆ ಎಂದು ನುಡಿಯಲು ಸಿದ್ಧರಾಮ ಶಿವಯೋಗಿಯು ಇಗೋ ಈ ಪ್ರಕಾರ ವಾಸಮಾಡಿದ್ದಾನೆಂದು ತನ್ನ ಹೃದಯಕಮಲವನ್ನು ಬಿಚ್ಚಿ ಬಸವೇಶ್ವರನ ದಿವ್ಯ ಮಂಗಳ ಮೂರ್ತಿಯನ್ನು ತೋರಿಸಲು ಸಮಸ್ತರು ಆಶ್ಚರ್ಯಚಕಿತರಾಗಿ ಹೊಗಳುತ್ತಾ ಇದ್ದರು. ಎಲೈ ಬಿಜ್ಜಳ ಮಹಾರಾಜನೇ ನಾನು ಈ ಬಸವೇಶ್ವರನ ವರ್ತಮಾನವನ್ನು ಸಿದ್ಧರಾಮಶಿವಯೋಗಿಯಿಂದ ಕೇಳಿ ತಿಳಿದಿದ್ದೇನೆ. ಇಂತಹ ಮಹಿಮಾಶಾಲಿಯಾದ ಬಸವೇಶ್ವರನು ನಿನ್ನ ಸಭೆಯಲ್ಲಿ ಕುಳಿತಿದ್ದರೂ ಸಹ ಜಾರಿ ಬೀಳುತ್ತಿದ್ದ ನನ್ನನ್ನು ಹಿಡಿದು ಎತ್ತುವದು ಏನಾಶ್ಚರ್ಯವು! ಎಂದು ಬಸವೇಶ್ವರನ ಚರಿತ್ರೆಯನ್ನು ಹೇಳಿದ ಗೊಲ್ಲಗಿತ್ತಿಗೆ ಬಿಜ್ಜಳನು ಸಂತೋಷದಿಂದ ಅಮೂಲ್ಯ ವಸ್ತ್ರಾಭರಣಗಳನ್ನು ಕೊಟ್ಟು ಗೌರವಿಸಿ ಕಳುಹಿಸಿಕೊಟ್ಟನು. ಮತ್ತು ಈ ಬಸವೇಶ್ವರನು ಮಹಿಮಾ ಪುರುಷನಿದ್ದಾನೆಂದು ಹೊಗಳಿ, ಸಮಸ್ತ ಮರ್ಯಾದೆಗಳಿಂದ ಸತ್ಕರಿಸಿ ರತ್ನಾಭರಣಗಳನ್ನು ಕಾಣಿಕೆಯಾಗಿ ಕೊಟ್ಟು ಅರಮನೆಗೆ ಕಳುಹಿಸಿಕೊಡಲು ವೃಷಭೇಶ್ವರನು ತನ್ನ ಮನೆ

ಯನ್ನು ಸೇರಿ ಸಂತೋಷಚಿತ್ತನಾಗಿ ಎಂದಿನಂತೆ ಶಿವಕಥಾ, ಶಿವಧ್ಯಾನ, ಶಿವ ಶರಣರ ಸೇವಾನಿರತನಾಗಿ ಸುಖದಿಂದ ಕಾಲಕಳೆಯುತ್ತಿದ್ದನು.

## — ವಿಟಜಂಗಮರ ಕಥೆಯು —

ಹೀಗೆ ಇರುತ್ತಿರಲಾಗಿ ಒಂದು ದಿವಸ ಬಸವೇಶ್ವರನು ತನ್ನ ಸಹಾಯಕ ಮಂತ್ರಿಗಳೊಡನೆ ಸೈನಿಕರಿಗೆ ಸಂಬಳವನ್ನು ಹಂಚುತ್ತಿದ್ದನು. ಆಗ ಅಲ್ಲಿಗೆ ಒಬ್ಬ ವಿಟಜಂಗಮನು ಬಂದು ಬಸವೇಶ್ವರನನ್ನು ಕುರಿತು— ಅಯ್ಯಾ, ಶಿವ ಭಕ್ತ ಕಲ್ಪತರುವೇ, ಈಗ ತಮ್ಮಲ್ಲಿರುವ ಎಲ್ಲ ಹಣವನ್ನು ನನಗೆ ತಡ ಮಾಡದೆ ಕೊಡಬೇಕೆಂದು ಕೇಳಲು ಬಸವೇಶ್ವರನು ಸ್ವಲ್ಪವೂ ಯೋಚಿಸದೆ ಹಣದಿಂದ ತುಂಬಿದ ಎಲ್ಲ ಪೆಟ್ಟಿಗೆಗಳನ್ನು ಆತನಿಗೆ ಒಪ್ಪಿಸಿ ಶಾಸು ನಿಧಿ ಯನ್ನು ಕಂಡ ಬಡವನಂತೆ ಸಂತೋಷಚಿತ್ತನಾಗಿ ಸುಮ್ಮನೆ ಕುಳಿತು ಕೊಂಡನು. ಇದನ್ನೇ ಹೊಂಚುಹಾಕಿಕೊಂಡು ನೋಡುತ್ತಿದ್ದ ಮೈಲಾರ ಜೋಳಿಯಣ್ಣ, ಕುಂದತಮ್ಮಿ, ಕೇಶವಕಾಳಿ ಮುಸರ ಮೊದಲಾದ ಚಾಡಿಕೋ ರರು ಕೂಡಲೇ ಬಿಜ್ಜಳನಲ್ಲಿಗೆ ಹೋಗಿ ಕೈಮುಗಿದು— ಸ್ವಾಮೀ, ಕ್ಷಮಿಸ ಬೇಕು. ತಮಗೆ ಕೋಪಬರುವಂತಹ ಒಂದು ಸಂಗತಿಯು ಈಗ ನಡೆದಿದೆ. ಅದ ಕ್ಕಾಗಿ ಭಯಪಟ್ಟು ಸನ್ನಿಧಿಗೆ ಅರಿಕೆ ಮಾಡಿಕೊಳ್ಳುತ್ತಿದ್ದೇವೆ. ತಮ್ಮ ಖಜಾ ನೆಯಲ್ಲಿಯ ಎಲ್ಲ ಧನವನ್ನು ಬಸವೇಶ್ವರನು ಒಬ್ಬ ಜಂಗಮನಿಗೆ ಕೊಟ್ಟು ಸೂರೆಮಾಡಿದ್ದಾನೆ ಎಂದು ಬಿನ್ನವಿಸಲು ದೊರೆಯು ಕೂಡಲೇ ಬಸವೇಶ್ವರ ನನ್ನು ಕರೆಯಿಸಿ ಬಹಳ ಕೋಪಾವಿಷ್ಟನಾಗಿ ಕೆಂಡದಂತಹ ಕೆಂಪಾದ ಕಣ್ಣುಗ ಳುಳ್ಳವನಾಗಿ— ಎಲೈ ಬಸವೇಶ್ವರನೇ, ನೀನು ಸತ್ಯಸಂಧನೆಂದೂ, ಪರಧನ ಪರಸ್ತ್ರೀಯರಲ್ಲಿ ವಿರಕ್ತನೆಂದೂ ನಿನ್ನನ್ನು ಮುಖ್ಯ ಮಂತ್ರಿಯೆಂದು ನಿಯಮಿಸ ಲಾಯಿತು. ಆದರೆ ನೀನು ನನ್ನ ಭಾಂಡಾರದಲ್ಲಿಯ ಹಣವನ್ನೆಲ್ಲ ಒಬ್ಬ ವಿಟಜಂಗಮನಿಗೆ ಕೊಡಬಹುದೇ ? ಲೋಕದಲ್ಲಿ ನಿನ್ನಂತಹದಾನಿಯು ಮತ್ತಾ ರಿರುವರು ! "ಅಗಸರ ಕತ್ತೆಯು ಡೊಂಬರವನಿಗೆ ಬೇಡ" ಎಂಬ ಗಾದೆಯ ಮಾತಿನಂತೆ ಈ ದಿವಸ ರಾಜಭಾಂಡಾರವನ್ನು ಕೇಳಿದ ಜಂಗಮನಿಗೆ ಕೊಟ್ಟೆ. ನಾಳೆ ಬೇರೊಬ್ಬನು ರಾಜ್ಯವನ್ನು ಬೇಡಿದರೂ ಕೊಟ್ಟುಬಿಡುವೆ. ರಾಜನನ್ನು ಕೇಳದಿದ್ದರೆ ಎಲ್ಲಿ ಕೋಪಮಾಡುವನೋ ಎಂಬ ಭಯವೂ, ಅನ್ಯರ ಹಣ

ವನ್ನು ದಾನಮಾಡಿದರೆ ಲೋಕದ ಜನರು ಹಾಸ್ಯಮಾಡುವರೆಂಬ ಅಪವಾದ ಭಯವೂ ಇಲ್ಲದವನಾಗಿ ನಮ್ಮ ಭಾಂಡಾರವನ್ನು ಅನ್ಯಾಯವಾಗಿ ಹಾಳು ಮಾಡಿದೆ ಎಂದು ಸಿಟ್ಟಿನಿಂದ ನುಡಿಯಲು ಬಸವೇಶ್ವರನು— ಎಲೈ ರಾಜನೇ, ನ್ಯಾಯಮಾರ್ಗವನ್ನು ತಿಳಿದು ಅಲ್ಲಸಲ್ಲದ ಅನೇಕ ಮಾತುಗಳನ್ನಾಡಿ ಏಕೆ ಆಯಾಸಪಡುತ್ತೀರಿ. ಲೋಕಪೂಜ್ಯ ಪರಶಿವನ ಭಕ್ತರು ಅನ್ಯರ ಹಣಕ್ಕೆ ಆಸೆ ಮಾಡುವರೇ ! ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳಿಂದಲೂ ಕೊಡುವದಕ್ಕೆ ಅಸಾಧ್ಯವಾದ ಐಶ್ವರ್ಯವನ್ನು ಕೊಡುವ ಸಂಪತ್ತುಳ್ಳ ಶಿವ ಭಕ್ತರು ಅನ್ಯರ ಹಣವನ್ನು ಕಣ್ಣಿನಿಂದ ಸಹ ನೋಡಲಾರರು. ಮಾವಿನ ಚಿಗುರೆಲೆಗಳನ್ನು ತಿಂದು ಜೀವಿಸುವ ಕೋಗಿಲೆಯು ಬಿದುರಿನ ಚಿಗುರನ್ನು ತಿನ್ನುವದೇ ? ಪ್ರತಿದಿವಸ ಶಿವಪ್ರಸಾದವನ್ನು ಸ್ವೀಕರಿಸಿ ಸುಖಪಡುವ ಶಿವ ಭಕ್ತನು ಪರರ ಹಣವನ್ನು ಸೂರೆ ಮಾಡುವನೇ? ಸೂರ್ಯನು ತಣ್ಣಗಾ ಗಲಿ. ಸಮುದ್ರವು ಬತ್ತಿಹೋಗಲಿ, ಚಂದ್ರನು ಅಗ್ನಿಯಾಗಲಿ, ಅಗ್ನಿಯು ಶೀತಲವಾಗಲಿ, ಧೂಳಿಯು ಪರ್ವತವಾಗಲಿ, ಪರ್ವತವು ಧೂಳಿಯಾಗಲಿ, ಎಲ್ಲ ಲೋಕಗಳು ಮುಳುಗಿ ಹೋಗಲಿ, ವೇದವಾಕ್ಯಗಳು ಸುಳ್ಳಾಗಲಿ, ಜಗತ್ತಿನಲ್ಲಿ ಅವಬಗೆಯ ಕೇಡುಗಳು ಬೇಕಾದರೂ ಆಗಲಿ, ಶಿವಭಕ್ತರು ಹೆರವರ ಒಡವೆಗೆ ಆಶೆಪಡುವವರಲ್ಲ ಇದು ನಿಜವಾದ ಮಾತು. ಬೇಕಾದರೆ ನಿನ್ನ ಭಾಂಡಾರದ ಲೆಕ್ಕವನ್ನು ತೆಗೆಯಿಸಿ ನೋಡು. ಒಂದು ಕಾಸು ಕಡಿಮೆ ಯಾಗಿದ್ದರೆ ನಾನೆಂದಿಗೂ ಶಿವಭಕ್ತನಲ್ಲ. ಅವರ ಹಣವನ್ನು ಅವರಿಗೆ ಕೊಟ್ಟಿರುವೆನೋ ಹೊರತು ರಾಜ್ಯ ಭಾಂಡಾರದ ಒಂದು ಕಾಸೂ ಸಹ ಮುಟ್ಟಿಲ್ಲ. ಈ ಸಂಗತಿಯನ್ನು ಶಿವನೇ ಬಲ್ಲ. ಶಿವಶರಣರು ಮತ್ತೊಬ್ಬರ ಹಣವನ್ನು ಹೇಗೆ ತೆಗೆದುಕೊಂಡಾರು ? ನಾನು ಬೊಕ್ಕಸದ ಹಣವನ್ನು ಕೊಡುವದಕ್ಕೆ ಹೇಗೆ ಸಮರ್ಥನಾದೇನು ? ನಿಮ್ಮ ಸಂಶಯವನ್ನು ಈಗಾಗಲೇ ಪರಿಹಾರ ಮಾಡುವೆನು ಎಂದು ಖಜಾನೆಯ ಅಧಿಕಾರಿಗಳನ್ನು ಬರಹೇಳಿ ಹಣದ ಲೆಕ್ಕವನ್ನು ಬರೆಯುವ ಗಣಕರನ್ನು ಕರೆಯಿಸಿ ಭಾಂಡಾರದ ಬೀಗ ವನ್ನು ತೆಗೆಯಿಸಿ ನೋಡಲು ಮೊದಲಿಗಿಂತಲೂ ಬಂಗಾರವು ಹೆಚ್ಚಾಗಿರುವ ದನ್ನು ಲೆಕ್ಕಮಾಡಿ ಗಣಕರು ರಾಜನಿಗೆ ತಿಳಿಸಲು ಆತನು ಅತ್ಯಂತ ಭಕ್ತಿ ಯಿಂದ ಬಸವೇಶ್ವರನಲ್ಲಿ ಕ್ಷಮಾಪಣೆಯನ್ನು ಕೇಳಿಕೊಂಡು ಕ್ಷುದ್ರವನ್ನು ಹೇಳಿದ

ಚಾಡಿಖೋರನನ್ನು ಬೈದು, ಗದ್ದರಿಸಿ ಇನ್ನು ಮೇಲೆ ಬಸವೇಶ್ವರನ ಮೇಲೆ ಚಾಡಿಯನ್ನು ಹೇಳುವ ಮೂಢಜನರ ನಾಲಿಗೆಯನ್ನು ಸೀಳಿಸಿ ಬಿಡುವೆನೆಂದು ಗರ್ಜಿಸಿ ಆತನ ಮಹಿಮೆಯನ್ನು ಕೊಂಡಾಡಿ ಹೊಗಳುತ್ತಿರಲು ಅದೇ ಸ್ಥಳದಲ್ಲಿದ್ದ ಒಬ್ಬ ಶಿವಶರಣನಾದ ಜಂಗಮನು— ಎಲೈ ಮಹಾರಾಜನೇ, ಕೇಳು. ಪೂರ್ವ ಕಾಲದಲ್ಲಿ ಆರೂರ ಚೊಕ್ಕನಾಥನೆಂಬ ಶಿವಭಕ್ತ ಶಿರೋಮಣಿಯು ಪಾಂಡ್ಯರಾಜನ ಆಸ್ಥಾನದಲ್ಲಿ ಮಂತ್ರಿಯಾಗಿದ್ದನು. ಆತನು ಶಿವಭಕ್ತಿಪರಾಯಣನಾಗಿ ಶಿವಶರಣರಾದ ಜಂಗಮರಿಗೆ ತನ್ನ ಪ್ರಾಣವನ್ನೇ ಒಪ್ಪಿಸುತ್ತಿದ್ದನು. ಹೀಗಿರಲು ಪಾಂಡ್ಯರಾಜನು ಕುದುರೆಗಳನ್ನು ಕೊಳ್ಳುವದಕ್ಕಾಗಿ ಮಂತ್ರಿಯ ಕಡೆಗೆ ಅಪಾರವಾದ ಹಣವನ್ನು ಕೊಟ್ಟು ಉತ್ತಮವಾದ ಕುದುರೆಗಳನ್ನು ಕೊಳ್ಳಲು ತಿಳಿಸಿದನು. ಆ ಮಂತ್ರಿಯು ಆ ಹಣವನ್ನೆಲ್ಲ ಶಿವಶರಣರಿಗೆ ದಾನಮಾಡಿಬಿಟ್ಟನು. ಇದನ್ನು ತಿಳಿದು ರಾಜನು ಕುದುರೆಗಳನ್ನು ತಂದುಕೊಡುವಂತೆ ಒತ್ತಾಯ ಮಾಡಲು ಆ ಮಂತ್ರಿಯು ನರಿಗಳನ್ನು ಹಿಡಿತರಿಸಿ ತನ್ನ ಶಿವಭಕ್ತಿ ಮಹಿಮೆಯಿಂದ ಅವುಗಳನ್ನು ಕುದುರೆಗಳನ್ನಾಗಿ ಮಾಡಿದನು. ಅದರಿಂದ ಅವನಿಗೆ ರಾಜಬಾಧೆಯು ತೊಲಗಿತು. ಆದಕಾರಣ ಶಿವಭಕ್ತರಿಗೆ ದೊಡ್ಡದಾದ ಕಾರ್ಯವು ಯಾವದೂ ಇಲ್ಲ. ಎಂದು ಹೇಳಲು ದೊರೆಯು ಸಂತೋಷದಿಂದ ಸೂರ್ಯನಿಗೆ ದೀಪಾರಾಧನೆ ಮಾಡುವಂತೆ ಬಸವೇಶ್ವರನಿಗೆ ರತ್ನಾಭರಣಗಳನ್ನು ಕೊಟ್ಟು ಮನೆಗೆ ಕಳುಹಿಸಿದನು.

## — ವಿಟಜಂಗಮನಿಗೆ ವಸ್ತ್ರದಾನವು —

ಮತ್ತೊಬ್ಬ ಜಂಗಮನು ತಾನು ಸೂಳೆಯ ಮನೆಯಲ್ಲಿ ಕುಳಿತುಕೊಂಡಿರುವಾಗ ಮನೆಯಲ್ಲಿ ಅಕ್ಕಿಯಿಲ್ಲದಿರಲು ಬಸವೇಶ್ವರನನ್ನು ಕೇಳಿ ತನಗೋಸ್ಕರ ಹಣವನ್ನು ತೆಗೆದುಕೊಂಡು ಬರುವಂತೆ ಗೌಡಿಯೊಬ್ಬಳನ್ನು ಕಳುಹಿಸಿದನು. ಅವಳು ಬಸವೇಶ್ವರನ ಮನೆಗೆ ಹೋಗಲು ಅಲ್ಲಿ ಬಸವಣ್ಣನವರ ಪತ್ನಿ ಗಂಗಾಂಬಿಕೆಯು ಉಟ್ಟುಕೊಂಡಿದ್ದ ಪೀತಾಂಬರವನ್ನು ನೋಡಿ ಬೆರಗಾಗಿ ಹಣ ಕೇಳುವದನ್ನು ಮರೆತು ಮನೆಗೆ ಬಂದು ಒಡತಿಯನ್ನು ಕುರಿತು ಅಮ್ಮಾ, ಬಸವೇಶ್ವರನ ಹೆಂಡತಿಯಾದ ಗಂಗಾಂಬಿಕೆಯು ಒಂದು ಸೀರೆಯನ್ನು ಉಟ್ಟಿರುವಳು. ಅದರ ಸೊಬಗನ್ನೂ, ಅಂದಚಂದವನ್ನೂ, ಮಿರುಗುವ ಗರಗರಿಕೆ

ಯನ್ನೂ, ಹೊಳೆಯುವ ಲಾವಣ್ಯವನ್ನೂ ಎಷ್ಟೆಂದು ಹೇಳಲಿ. ನೀನು ಈ ವರೆಗೆ ಸಂಪಾದಿಸಿರುವ ಪಟ್ಟಾವಳಿ, ನೇತ್ರಾವಳಿ, ಸೂತ್ರಾವಳಿ, ಹಂಸಾವಳಿ, ದೇವತಾವಳಿ, ಶುಕಾವಳಿ, ಅಂಜನಲೇಖೆ, ಘೂರ್ಜಾವಳಿ ಮೊದಲಾದ ಯಾವ ಸೀರೆಗಳೂ ಅದಕ್ಕೆ ಸಮನಾಗಲಾರವು. ನಿನ್ನಾಣೆಯಾಗಿಯೂ ನಾನು ಸುಳ್ಳು ಹೇಳುವದಿಲ್ಲ. ಹೇಗಾದರೂ ಮಾಡಿ ನೀನು ಭಾವನವರನ್ನು ಕಳುಹಿಸು. ಅವರು ಆ ಸೀರೆಯನ್ನು ಕೊಡಬೇಕೆಂದು ಬಸವೇಶ್ವರನನ್ನು ಕೇಳಿದರೆ ಅವರು ನಿಶ್ಚಯವಾಗಿ ಕೊಡುವರು, ನಂತರ ಅದು ನಿನ್ನ ರೂಪಕ್ಕೆ ತಕ್ಕದಾದ ಸೀರೆ ಯಾಗುವದು ಎಂದು ಹೇಳಲು ಆ ವೇಶ್ಯೆಯು ಸಂತೋಷದಿಂದ ಆ ವಿಟಜಂಗ ಮನಲ್ಲಿಗೆ ಬಂದು ಅವನಿಗೆ ಮೋಹಕತೆಯುಂಟಾಗುವಂತೆ ಒಯ್ಯಾರಮಾಡುತ್ತ ಚಂಚಲವಾದ ಓರೆನೋಟದಿಂದ ಅವನನ್ನು ನೋಡುತ್ತ ಮುಖವನ್ನು ಮುದ್ದಾಡಿ ಎಲೈ ಪ್ರಿಯನೇ, ನನ್ನಲ್ಲಿ ನಿನಗೆ ಪ್ರೀತಿಯಿದ್ದರೆ ಈ ದಿವಸ ಬಸ ವೇಶ್ವರನ ಹೆಂಡತಿಯಾದ ಗಂಗಾಂಬಿಕೆಯು ಉಟ್ಟಿರುವ ಪಟ್ಟೆಯ ಮಡಿ ಯನ್ನು ನನಗೆ ತಂದುಕೊಡಬೇಕು. ಆ ಸೀರೆಯನ್ನು ಉಟ್ಟುಕೊಂಡು ನಿನ್ನ ಸಂತೋಷವನ್ನು ಪರಿಗ್ರಹಿಸಬೇಕೆಂದು ಆಶೆ ಇದೆ. ಎನ್ನಲು ಆ ವಿಟಜಂಗ ಮನು ಇದೆಷ್ಟರ ಮಾತು. ಈಗಲೇ ಬಸವೇಶ್ವರನನ್ನು ಕಂಡು ಆ ಸೀರೆಯನ್ನು ತೆಗೆದುಕೊಂಡು ಬರುವೆನೆಂದು ಸಮಾಧಾನ ಮಾಡಿ ಸಭಾ ಮಂಟಪದಲ್ಲಿ ಕುಳಿ ತಿದ್ದ ಬಸವೇಶ್ವರನನ್ನು ಕುರಿತು— ಎಲೈ ಬಸವರಾಜನೇ, ಈ ದಿವಸ ತಮ್ಮ ಪತ್ನಿಯಾದ ಗಂಗಾಬಿಕೆಯು ಉಟ್ಟುಕೊಂಡಿರುವ ಸೀರೆಯನ್ನು ನನಗೆ ಕೊಡಿಸ ಬೇಕು. ಎಂದು ಕೇಳಲು ಆ ಜಂಗಮನನ್ನು ಬಸವಣ್ಣನವರು ಸತ್ಕರಿಸಿ ಪಾದಗಳಿಗೆರಗಿ ಸ್ವಲ್ಪ ವೇಳೆ ಕುಳಿತುಕೊಳ್ಳಲು ಹೇಳಿ ತಮ್ಮ ಪತ್ನಿಯನ್ನು ಸಭೆಗೆ ಬರಮಾಡಿಸಿಕೊಂಡು— ಎಲೈ ಎನ್ನ ಪ್ರಾಣಪದಕಳಾದ ಶಿವಭಕ್ತಿ ಪರಾಯಣಳೇ, ಇಲ್ಲಿ ಕುಳಿತಿರುವ ಈ ಜಂಗಮರಿಗೆ ನೀನು ಉಟ್ಟುಕೊಂಡಿರುವ ಈ ಸೀರೆಯನ್ನು ತಡಮಾಡದೆ ಕೊಟ್ಟುಬಿಡು ಎಂದು ಹೇಳುತ್ತ ಭಕ್ತಿಭರಿತನಾಗಿ ನಾಚಿಕೆಯನ್ನು ಬಿಟ್ಟು ಗಂಗಾಂಬಿಕೆಯು ಉಟ್ಟಿದ್ದ ಸೀರೆಯನ್ನುತಾನೇ ಹಿಡಿದು ಕೊಂಡು ಹೊದ್ದುಕೊಳ್ಳುವ ಸೆರಗಿನ ಕಡೆಯಿಂದ ಸೆಳೆಯಹತ್ತಲು ಆ ಸೀರೆಯು ಬಸವೇಶ್ವರನ ಹಸ್ತಸ್ಪರ್ಶದಿಂದ ಎಷ್ಟೆಷ್ಟು ಎಳೆದರೂ ಮತ್ತೆ ಮತ್ತೆ ಅದು ಬೆಳೆದು ಮೇರು ಪರ್ವತದಂತೆ ರಾಶಿಯಾಗಿ ಬಿದ್ದುದನ್ನು ಸಭಿಕರು ನೋಡಿ ಆಶ್ಚರ್ಯ

ಪಡುತ್ತ ಶಿವಶರಣರಿಗೆ ಯಾವದು ತಾನೆ ದೊಡ್ಡದು ? ಎಂದು ತಮ್ಮತಮ್ಮೊಳಗೆ ಮಾತಾಡುತ್ತಿದ್ದರು. ಪೂರ್ವಕಾಲದಲ್ಲಿದ್ದ ಸಿಡುಗುಡಿನಾಥನೆಂಬವನು ತನ್ನ ಹೆಂಡತಿಯು ಉಟ್ಟಿದ್ದ ಹೊಸಸೀರೆಯನ್ನು ಬೇಡಿದ ಜಂಗಮಮೂರ್ತಿಗೆ ಕೊಡಲಿಲ್ಲವೇ ? ಹನ್ನೆರಡು ವರ್ಷಗಳವರೆಗೆ ನೆಯ್ದು ಸಿದ್ಧಮಾಡಿದ್ದ ವಸ್ತ್ರವನ್ನು ಬೇಡರದಾಸಯ್ಯನು ಜಂಗಮರೂಪಿಯಾಗಿ ಬಂದ ಈಶ್ವರನಿಗೆ ಸಮರ್ಪಿಸಲಿಲ್ಲವೇ? ಮಾನಕಂಜರಾಜನು ಹಸೆಯ ಮೇಲೆ ನಿಂತಿದ್ದ ತನ್ನ ಮಗಳ ಮುಡಿಗಟ್ಟನ್ನು ಬೇಡಿದ ಒಬ್ಬ ಜಂಗಮನಿಗೆ ಅವನ್ನು ಕೂಡಲೇ ಕೊಯ್ದು ಕೊಡಲಿಲ್ಲವೇ ? ಮೊನೆಯ ಧನನೆಂಬವನು ತನ್ನನ್ನು ಬೇಡಿದ ಜಂಗಮ ಮೂರ್ತಿಗೆ ಆಸೆತೀರುವಷ್ಟು ಹಣವನ್ನು ಕೊಡಲಿಲ್ಲವೇ? ಇಡುಗುಡಿ ಮಾರಯ್ಯನೆಂಬವನು ಬರಗಾಲದಲ್ಲಿ ಬಂದುಬೇಡಿದ ಶಿವಶರಣನಿಗೆ ತನ್ನಲ್ಲಿದ್ದ ಧಾನ್ಯಗಳನ್ನೆಲ್ಲ ಕೊಡಲಿಲ್ಲವೇ ? ಎಂದು ಹೊಗಳುತ್ತಿದ್ದರು.

ಬಳಿಕ ಆ ವಿಟಜಂಗಮನು ಆ ಸೀರೆಯನ್ನು ತೆಗೆದುಕೊಂದು ಬಸವೇಶ್ವರನನ್ನು ಹರಸಿ ಸಭಿಕರಿಂದ ಅಪ್ಪಣೆಪಡೆದು ವೇಶ್ಯೆಯ ಮನೆಗೆ ಬಂದನು. ಇತ್ತ ಸತಿಶಿರೋಮಣಿಯಾದ ಗಂಗಾಂಬಿಕೆಯು ತನ್ನ ಮರ್ಯಾದೆಗೆ ಸ್ವಲ್ಪವೂ ಕುಂದುಬಾರದಂತೆ ಮಡಿಸೀರೆಯನ್ನು ತೋರ್ಪಡಿಸಿ ಪತಿಯ ಆಜ್ಞೆಯನ್ನು ಪಡೆದು ತನ್ನ ಅಂತಃಪುರವನ್ನು ಸೇರಿದಳು. ನಂತರ ಬಸವೇಶ್ವರನೂ ಸಭೆಯಿಂದ ಹೊರಟು ಶಿವಪೂಜೆಯನ್ನು ಮಾಡಿ ಆರೋಗಿಸಿದ ನಂತರ ಅಂತಃಪುರದಲ್ಲಿ ಪ್ರವೇಶಿಸಿ ತನ್ನ ಪತ್ನಿಯಾದ ಗಂಗಾಂಬಿಕೆಯೊಡನೆ ಕುಳಿತ ಸಮಯದಲ್ಲಿ ಒಬ್ಬ ವಿಟನಾದ ಜಂಗಮನು ಅಲ್ಲಿಗೆ ಬಂದು ಬಸವೇಶ್ವರನನ್ನು ಹೊಗಳಿ, ಕೊಂಡಾಡಿ ಗಂಗಾಂಬಿಕೆಯ ಕಿವಿಯಲ್ಲಿರುವ ಓಲೆಗಳನ್ನು ಬೇಡಲಾಗಿ ಬಸವೇಶ್ವರನು ಕೂಡಲೇ ಅವನ ಅಪೇಕ್ಷೆಯನ್ನು ನೆರವೇರಿಸಿ ತೃಪ್ತಿಪಡಿಸಿ ಕಳಿಸಿಕೊಟ್ಟನು. ಅಷ್ಟರಲ್ಲಿ ಸಂಧ್ಯಾಕಾಲವಾಯಿತು. ಈ ಬಸವೇಶ್ವರನು ತನ್ನ ದಾನಗುಣದಿಂದ ನನ್ನ ಮಗನಾದ ಕರ್ಣನನ್ನೂ, ತೇಜೋರಾಶಿಯಿಂದ ನನ್ನನ್ನೂ ಗೆದ್ದಿರುವನೆಂದು ನಾಚಿಕೆಯಿಂದ ಪಶ್ಚಿಮ ಸಮುದ್ರದಲ್ಲಿ ಮುಳುಗುವನೆಂಬಂತೆ ಸೂರ್ಯನು ಅಸ್ತಂಗತನಾದನು. ಆಕಾಶವೆಂಬ ನಾರಾಯಣನು ಸಂಧ್ಯಾರಾಗವೆಂಬ ಕೆಂಪು ಕಮಲಗಳಿಂದ ಪಶ್ಚಿಮಾದ್ರಿಯೆಂಬ ಶಿವಲಿಂಗವನ್ನು ಪೂಜಿಸುತ್ತಿರುವಾಗ ಅಸ್ತಂಗತನಾದ ಸೂರ್ಯನೆಂಬ ನೇತ್ರಕಮಲ

ದಿಂದ ಪೂಜಿಸುತ್ತಿದ್ದು ಶಿವಪ್ರಸಾದ ಬಲದಿಂದ ಪಡೆದ ಚಕ್ರಾಯುಧವೆಂಬ
ಚಂದ್ರಬಿಂಬವು ಹೊಳೆಯುತ್ತಿದ್ದಿತು. ಇಂತಹ ರಾತ್ರಿಕಾಲದಲ್ಲಿ ವೇಶ್ಯಾಲೋ
ಟರಾಗಿ ಸೂಳಗೇರಿಗೆ ಹೋಗುತ್ತಿರುವ ವಿಟಜಂಗಮರಿಗೆ ಬಸವೇಶ್ವರ
ನಾನಾವಿಧವಾದ ಸುಗಂಧ, ಪರಿಮಳ ದ್ರವ್ಯಗಳನ್ನೂ, ಪುಷ್ಪ, ಕಸ್ತೂ
ಕುಂಕುಮ, ಕೇಸರಿ ಮೊದಲಾದ ವಿಲಾಸವಸ್ತುಗಳನ್ನೂ, ಕರ್ಪೂರದಿ
ಕೂಡಿದ ತಾಂಬೂಲವನ್ನೂ, ಪಟ್ಟೆಪೀತಾಂಬರ, ರತ್ನಾಭರಣಗಳನ್ನ
ಕೊಟ್ಟು ಸರ್ವವಿಧದಿಂದ ಅವರ ಮನಸ್ಸನ್ನು ಸಂತೋಷಪಡಿಸುತ್ತ ಅತ್ಯ
ಕೀರ್ತಿಯುಳ್ಳವನಾಗಿ ಸರ್ವರಿಂದಲೂ ಹೊಗಳಿಸಿಕೊಳ್ಳುತ್ತಿದ್ದನು.

## — ಮುಗ್ಧ ಸಂಗಾರ್ಯನ ಕಥೆಯು —

ಮಹಾವಿರಕ್ತನೂ, ಲೌಕಿಕ ಮಾರ್ಗವನ್ನು ತಿಳಿಯದವನೂ ಆ
ಮುಗ್ಧ ಸಂಗಾರ್ಯನೆಂಬ ಶಿವಶರಣನು ವಿಟಜಂಗಮರು ಹೂವು, ಗಂ
ಪರಿಮಳ ದ್ರವ್ಯಗಳನ್ನು ತೆಗೆದುಕೊಂಡು ಸೂಳೆಯರ ಮನೆಗೆ ಹೋಗುತ್ತಿ
ವದನ್ನು ನೋಡಿ ಅವರು ಶಿವಪೂಜೆಗಾಗಿ ಹೋಗುತ್ತಿರುವರೆಂದು ತಿಳಿ
ಬಸವೇಶ್ವರನಲ್ಲಿಗೆ ಬಂದು ತಾನೂ ಸೂಳೆಯರ ಮನೆಗೆ ಹೋಗಬೇಕೆಂ
ಕೇಳಿದನು. ಎಂದೂ ಸೂಳೆಯರ ಸಂಗವನ್ನೇ ಅರಿಯದ ಈತನ ಮು
ಭಾವಕ್ಕೆ ಬಸವೇಶ್ವರನು ಮುಗುಳುನಗೆ ನಕ್ಕು ದಿವ್ಯವಾದ ವಸ್ತ್ರಾ
ಣಗಳಿಂದಲೂ, ಹೂ-ಗಂಧಗಳಿಂದಲೂ ಆತನನ್ನು ತಾನೇ ಅಲಂಕ
ನೀತಿ ಸಂಪನ್ನನಾದ ಚಾಕರನನ್ನು ಕರೆದು ಈ ಜಂಗಮ ಜ
ಮೂರ್ತಿಯನ್ನು ಭಕ್ತಿಸಂಪನ್ನಳೂ, ಉತ್ತಮ ಗುಣಭರಿತಳೂ ಆ
ಒಬ್ಬ ವೇಶ್ಯೆಯ ಮನೆಗೆ ಕರೆದುಕೊಂಡು ಹೋಗೆಂದು ಹೇಳಿ ಕಳಿಸಿದನು
ಮುಗ್ಧ ಸಂಗಾರ್ಯನು ಅಧಿಕ ಸಂತೋಷದಿಂದ ಆಚಾಕರನೊಡನೆ ದಾ
ಯಲ್ಲಿ ಬರುತ್ತಿರುವಾಗ ಮಾರ್ಗದಲ್ಲಿ ಸಂಚರಿಸುವ ಎಳೆಯ ಹೆಣ್ಣು ಹುಡು
ಯರ ಒಡ್ಯಾಣದಲ್ಲಿಯ ಕಿರುಗೆಜ್ಜೆಯ ನಾದವನ್ನೂ, ನೂಪುರಗಳ ಧ್ವ
ಯನ್ನೂ, ತಲೆಯಲ್ಲಿ ಹೊಳೆಯುತ್ತಿರುವ ಹೂವಿನ ಪರಿಮಳಕ್ಕೆ ಮುಸುಕು
ರುವ ಘುರಿದುಂಬಿಗಳ ಇಂಪಾದ ಸೊಂಪಿನ ಇಂಚರವನ್ನೂ ಕೇಳುತ್ತ ಸೂ
ಗೇರಿಯನ್ನು ಹೊಕ್ಕನು. ಆ ಸೂಳಗೇರಿಯಲ್ಲಿ ಸ್ಫಟಿಕದ ಗೋಡೆಗಳಿಂದಲೂ

ವಜ್ರಗಳನ್ನು ಕೆತ್ತಿದ ಉಪ್ಪರಿಗೆಗಳಿಂದಲೂ, ಚಂದ್ರಕಾಂತದ ಹಾಸುಗಲ್ಲುಗಳಿಂದಲೂ, ಇಂದ್ರನೀಲಮಣಿಯ ಜಗುಲಿಯಿಂದಲೂ, ಪಚ್ಚೆಯ ಬಿಸಿಲು ಮುಚ್ಚುಗಳಿಂದಲೂ, ಪದ್ಮರಾಗದ ಕಲಶಗಳಿಂದಲೂ, ಬಂಗಾರದ ಗಂಟೆಗಳಿಂದಲೂ, ಹವಳದ ತೋರಣಗಳಿಂದಲೂ, ಕೂಡಿದ ವೇಶ್ಯಾಗೃಹಗಳು ಕಂಗೊಳಿಸುತ್ತಿದ್ದವು. ಆ ಮನೆಗಳಲ್ಲಿ ವಾಸಿಸುವ ಮುದಿಗುಂಟಣಿಯರು ಎಳೆ ಹರೆಯದ ಹೆಣ್ಣು ಹುಡುಗಿಯರಿಗೆ ಕಾಮಸಂಮೋಹನ ಶಾಸ್ತ್ರವನ್ನು ಉಪದೇಶಿಸುವಂತೆ ಕಿವಿಗೆ ಇಂಪಾಗಿ ಹಾಡಿ, ಕೇಳಿದಷ್ಟು ಹಣವನ್ನು ಕೊಡುವವನೊಡನೆ ಗರ್ವ ಮಾಡಬೇಡಿರಿ. ಕಪಟ ಅನುರಾಗದಿಂದ ಪುರುಷರನ್ನು ಮೆಚ್ಚಿಸಿ ಅವರು ಮನಸೋತಿರುವದನ್ನು ತಿಳಿದುಕೊಂಡು ಅವರ ಸರ್ವಸ್ವವನ್ನು ಸೆಳೆಯಿರಿ. ಒಬ್ಬನಲ್ಲಿಯೇ ಅನುರಾಗವನ್ನು ಎಂದಿಗೂ ಇಡಬೇಡಿರಿ. ಕಡೆಗಣ್ಣಿನಿಂದ ನೋಡಿ ಅವರಿಗೆ ಮೋಹವನ್ನುಂಟುಮಾಡಿ ಮತ್ತೊಂದು ಸಾರೆ ನೋಡವಲ್ಲಳಲ್ಲಾ ಎಂಬುದಾಗಿ ಕುತೂಹಲ ಉಂಟಾಗುವಂತೆ ಓರೆಸೆರಗನ್ನು ಮೇಲುಮಾಡಿ ವಿಟರ ಮನಸ್ಸನ್ನು ಅಪಹಾರ ಮಾಡಿ, ವ್ಯಾಜದಿಂದ ಓರೆನೋಟ ಬೀರಿ ಅವರ ಮನಸ್ಸನ್ನು ಸೂರೆಮಾಡಿರಿ. ಜಿಪುಣನನ್ನೂ ಕೃತ್ರಿಮಿಯನ್ನೂ ನಂಬಬೇಡಿರಿ. ಎಂದು ನಾನಾವಿಧವಾಗಿ ಕಾಮಶಾಸ್ತ್ರದ ಮಹಾವಾಕ್ಯಗಳನ್ನು ತಿದ್ದಿ ಕಲಿಸುತ್ತಿದ್ದರು. ಮುಗ್ಧ ಸಂಗಾರ್ಯನು ಇದೆಲ್ಲವನ್ನು ನೋಡುತ್ತ ಚಾಕರನು ತೋರಿಸಿದ ನಾರಿಮಣಿಯಾದ 'ವಿಚಾರನಾರಿ' ಎಂಬ ವೇಶ್ಯೆಯಮನೆಯನ್ನು ಹೊಕ್ಕು ನೋಡಲಾಗಿ ಅಲ್ಲಿ ಕಮಲದಂತೆ ವಿಶಾಲವಾದ ಕಣ್ಣುಗಳೂ, ಸಂಪಿಗೆ ಹೂವಿನಂತಹ ಮೂಗೂ, ಸಿಂಹದ ನಡುವಿನಂತೆ ಬಡವಾದ ಮಧ್ಯಭಾಗವೂ, ಚಂದ್ರಮಂಡಲದಂತೆ ಹೊಳೆಯುತ್ತಿರುವ ಮುಖವೂ, ಅಮೃತಕಲಶಗಳಂತೆ ವಿರಾಜಿಸುತ್ತಿರುವ ಕುಚಗಳೂ, ಕೆಂಪು ಕಮಲಗಳ ಸೊಬಗನ್ನು ಹೀಯಾಳಿಸುವ ಕೈಕಾಲುಗಳೂ, ಮಿಂಚಿನಂತೆ ಆಗಾಗ ಆನಂದವನ್ನು ಬೀರುವ ಮುಗುಳು ನಗೆಯೂ ಉಳ್ಳವಳಾದ ಒಬ್ಬ ಯುವತಿಯು ಬಂದು ಮುಗ್ಧ ಸಂಗಾರ್ಯನ ಪಾದಗಳನ್ನು ತೊಳೆದು ಪೂಜಿಸಿ ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿ ಪ್ರಸಾದವನ್ನು ಮುಡಿದು ಹಸ್ತಲಾಘವವನ್ನು ಕೊಟ್ಟು ಆಶೀರ್ವಾದವನ್ನು ಪಡೆದು ಸಂಗಡ ಬಂದಿದ್ದ ಚಾಕರನನ್ನು ಮನೆಗೆ ಕಳುಹಿಸಿ ಜಂಗಮ ರೂಪಿಯಾದ ಮುಗ್ಧ ಸಂಗಾರ್ಯನನ್ನು ತನ್ನ ಏಕಾಂತ ಗೃಹಕ್ಕೆ

ಕರೆದುಕೊಂಡು ಹೋಗಿ ಕುಳ್ಳಿರಿಸಲು ಆತನು ಆ ಶಯ್ಯಾಗೃಹದ ಸೊಬಗನ್ನು ನೋಡಿ ಬೆರಗಾದನು. ಬಂಗಾರದ ಪಂಜರಗಳಲ್ಲಿದ್ದುಕೊಂಡು ಬಣ್ಣಿಸ್ಸು ಮೆಲುನುಡಿಗಳಿಂದ ನೋಡುವವರ ಮನಸ್ಸನ್ನು ಸಂಪೂರ್ಣವಾಗಿ ಸಂತೋಷ ಪಡಿಸುತ್ತಿರುವ ರಾಜಗಿಳಿಗಳಿಂದಲೂ, ನಾನಾವಿಧ ರತ್ನದ ಗೊಂಚ ಲಿಂದಲೂ, ಜೋತಾಡುತ್ತಿರುವ ಮುತ್ತುಗಳ ಸರಗಳಿಂದಲೂ, ಹೊಳೆಯುತ್ತಿ ರುವ ನಿಲುಗನ್ನಡಿಗಳಿಂದಲೂ, ಕರ್ಪೂರ ಸಹಿತವಾಗಿ ತಾಂಬೂಲವನ್ನು ಸಿದ್ಧ ಮಾಡಿಟ್ಟಿರುವ ರತ್ನದ ತಟ್ಟೆಗಳಿಂದಲೂ, ತಂಪಾಗಿಯೂ, ಮನಸ್ಸಿಗಿಂಪಾ ಗಿಯೂ, ಸೆಂಪಿನ ಪಾನೀಯಗಳನ್ನು ತುಂಬಿರುವ ಬಂಗಾರದ ಕಲಶ ಲಿಂದಲೂ, ಕಸ್ತೂರಿ, ಕುಂಕುಮ, ಕೇಸರಿ, ಪಚ್ಚಕರ್ಪೂರ, ಯಾಲಕ್ಕಿ ಲವಂಗ, ಜಾಜೀಕಾಯಿ, ಪುನುಗು, ಗೋರೋಜನ ಮೊದಲಾದ ಪರಿಮ ದ್ರವ್ಯಗಳಿಂದ ತುಂಬಿರುವದಂತದಭರಣಿಗಳಿಂದಲೂ, ಖರ್ಜೂರ, ದ್ರಾಕ್ಷಿ, ದಾಳಿಂಬ, ಬಾಳೆ, ಕಿತ್ತಳೆ, ಮಾದಳ, ಬೇಲ ಮೊದಲಾದ ಫಲಗಳಿಂ ತುಂಬಿದ ತಾಟುಗಳಿಂದಲೂ, ಪಗಡೆ, ಚದುರಂಗ ಮೊದಲಾದ ಆಟ ಸಾಮಗ್ರಿಗಳಿಂದಲೂ, ಕೂಡಿರುವ ಶಯ್ಯಾಗೃಹವು ಅತ್ಯಂತ ಮನೋಹ ವಾಗಿದ್ದಿತು. ಈ ಪ್ರಕಾರ ಇರುವ ಶಯ್ಯಾಗೃಹದ ಮಧ್ಯದಲ್ಲಿ ಹೊಳೆಯುತ್ತಿ ರುವ ಜರತಾರಿಯ ಮೇಲ್ಕಟ್ಟಿನಿಂದಲೂ, ಪಟ್ಟೆಮಡಿಯ ಸುತ್ತುಪರ ಯಿಂದಲೂ, ಹಂಸ ತೂಲಿಕೆಯ ಹಾಸಿಗೆಯಿಂದಲೂ, ಅಲ್ಲಲ್ಲಿ ನೇತಾಡುತ್ತಿ ರುವ ಮುತ್ತಿನ ಸರಗಳಿಂದಲೂ, ಹೊಳೆಯುತ್ತಿರುವ ಮಂಚವನ್ನು ಮುಗ್ಧ ಸಂಗಾರ್ಯನು ನೋಡಿ ಆಶ್ಚರ್ಯದಿಂದ ಪರಮಾನಂದವನ್ನು ಹೊಂದಿ ಅದು ಶಿವಪೂಜಾಮಂಟಪವೆಂದು ತಿಳಿದು ಅದರಲ್ಲಿ ಕುಳಿತುಕೊಳ್ಳದೆ ಪಕ್ಕದಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಕುಳಿತುಕೊಂಡಿರಲು, ವಿಭೂತಿಯನ್ನು ಧರಿಸಿ, ರುದ್ರಾಕ್ಷಿಗಳನ್ನು ಅಲಂಕರಿಸಿಕೊಂಡು, ಜಡೆಗಳನ್ನೆತ್ತಿ ಕಟ್ಟಿಕೊಂಡು ಸಮೀಪದಲ್ಲಿ ವಿನಯದಿಂದ ಕೈಮುಗಿದು ನಿಂತಿರುವ ಸೂಳೆಯನ್ನು ನೋಡಿ ಎಲೈ ಭಕ್ತಾಮಣಿಯೇ, ನೀನು ಹಳದಿ ಬಣ್ಣದ ಭಸ್ಮವನ್ನೇಕೆ ಧರಿಸಿರುವೆ? ಜಡೆಗಳನ್ನೇಕೆ ಕಟ್ಟುವದಿಲ್ಲ? ಬಿಳಿಯ ರುದ್ರಾಕ್ಷಿ ಮಾಲೆಯನ್ನು ಏಕೆ ಧರಿಸಿರುವೆ? ಎಂದು ಕೇಳಲು ಆಕೆಯು ಇವರ ಮುಗ್ಧಭಾವಕ್ಕೆ ನಸುನಕ್ಕು ಓ— ಸ್ವಾಮಿಗಳಿರಾ, ಪರಮೇಶ್ವರನ ಪತ್ನಿಯಾದ ಪಾರ್ವತಿಯಿಂದ ಧರಿಸ

ಲ್ಪಡುವ ಜೇರೆ ದ್ವೀಪದಿಂದ ತರಿಸಲ್ಪಟ್ಟಿರುವ ಹಳದಿ ಬಣ್ಣದ ವಿಭೂತಿಯನ್ನು (ಅರಿಸಿಣವನ್ನು) ಧರಿಸಿಕೊಂಡಿರುವೆನು ಶಿವಪ್ರಸಾದವನ್ನು ಧರಿಸುವದಕ್ಕೆ ಅನುಕೂಲವಾಗುವಂತೆ ಜಡೆಯನ್ನು ಒಂದೇ ಕೂವಲಾಗಿ ಹೆಣೆದು ಕಟ್ಟಿರುವೆನು. ಬೆನ್ನಿನಲ್ಲಿ ಜೋತಾಡುತ್ತಿರುವ ಜಡೆಯನ್ನೂ, ಬಿಟ್ಟುಬಿಬ್ಬ ವಿಟ ಜಂಗಮನು ತಂದುಕೊಟ್ಟಂತಹ ಕ್ಷೀರ ಸಾಗರದಲ್ಲಿ ಹುಟ್ಟಿರುವ ಮೂಲಕ ಬಿಳುಪಾಗಿರುವ ಈ ಬಿಳಿಯ ರುದ್ರಾಕ್ಷಿಗಳನ್ನೂ, ಮುತ್ತಿನ ಸರವನ್ನೂ ಧರಿಸಿಕೊಂಡಿರುವೆನು ಎಂದು ಸಂಗಾರ್ಯನು ಒಪ್ಪುವಂತೆ ಹೇಳಿದಳು. ನಂತರ ನಾಸಾಪುಟದಲ್ಲಿ ಹೊಳೆಯುವ ಮುತ್ತಿನ ಬುಲಾಕನ್ನು ನೋಡಿ ತಲೆಯಮೇಲೆ ಒಂದು ರುದ್ರಾಕ್ಷಿಯನ್ನು ಧರಿಸುವದು ಶ್ರೇಷವೆಂದು ಕೇಳಿದ್ದೆನು. ಆದರೆ ನಿನ್ನಂತೆ ಮೂಗಿನ ಮೇಲೆ ರುದ್ರಾಕ್ಷಿಯನ್ನು ಧರಿಸಿದವರನ್ನು ನಾನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ ಇದರ ವಿಚಾರವೇನು ? ಎಂದು ಕೇಳಲು ಈ ರುದ್ರಾಕ್ಷಿಯು ವೇದಾತೀತವಾದುದು. ಇದರ ಮಹಿಮೆಯನ್ನು ಕೈಲಾಸವಾಸಿಯೇ ಬಲ್ಲನಲ್ಲದೆ ಇತರರಿಗೆ ತಿಳಿಯದು ಎಂದು ಹೇಳಿದಳು. ಇಂತಹ ಪರಮಭಕ್ತೆಯಾದ ನೀನು ಕೌಪೀನವನ್ನೇಕೆ ಧರಿಸಲಿಲ್ಲ? ಎಂದು ಸಂಗಾರ್ಯನು ಕೇಳಲು ಎಲೈ ಸ್ವಾಮಿಯೇ, ದುಷ್ಟರಾದ ಭವಬಂಧಿಗಳ ನೋಟವು ನನ್ನ ಮೇಲೆ ಬೀಳಬಾರದೆಂದು ಮೈಗೆಲ್ಲಾ ಬಟ್ಟೆಯನ್ನು ಧರಿಸಿರುವೆನು. ಎಂದು ಉಟ್ಟಿದ್ದ ಸೀರೆಯನ್ನು ತೋರಿಸಲು ಈರೀತಿಯಾಗಿ ಅಪೂರ್ವ ಶಿವಲಾಂಛನಗಳನ್ನು ಆಕೆಯು ಧರಿಸಿರುವದನ್ನು ಮುಗ್ಧ ಸಂಗಾರ್ಯನು ಕೇಳಿ, ನೋಡಿ ಆಶ್ಚರ್ಯಚಕಿತನಾಗಿ ಎಲೈ, ಸ್ತ್ರೀಯಳೇ, ಈ ಪ್ರಕಾರ ಹೊಸ ಲಾಂಛನಗಳನ್ನು ಧರಿಸುವಂತೆ ನಿನಗೆ ಉಪದೇಶ ಮಾಡಿದ ಗುರುವು ಯಾರು ? ಆ ಗುರುವು ಯಾವ ಆಶ್ರಮದಲ್ಲಿದ್ದಾನೆ. ನಿನ್ನ ಆಚಾರವೇನು ? ನಿಯಮವು ಯಾವದು ? ನೀನು ಯಾವ ಜನರೊಡನೆ ಸಂಭಾಷಣೆ ಮಾಡುತ್ತಿರುವೆ ? ಏನುತಿಂದು ಜೀವಿಸುತ್ತಿರುವೆ? ಇದೆಲ್ಲವನ್ನು ವಿಸ್ತಾರವಾಗಿ ನನಗೆ ತಿಳಿಸು ಎಂದು ಕೇಳಲು ಆ ವಿಚಾರ ನಾರಿಯು ನಸುನಗುತ್ತಾ— ಎಲೈ ಸ್ವಾಮಿಯೇ, ಪೂರ್ವದಲ್ಲಿ ಹಿಮಾಲಯ ಪರ್ವತದೊಳಗೆ ತಪೋನಿಷ್ಠೆಯಾಗಿದ್ದ ಪಾರ್ವತಿಯು ವಾಮದೇವನೆಂಬ ಋಷಿಯಿಂದ ಈ ತೆರನಾದ ಶಿವದೀಕ್ಷೆಯನ್ನು ಕೈಕೊಂಡು ಕೈಲಾಸವಾಸಿಯಾದ ಪರಮೇಶ್ವರನನ್ನು ಮೆಚ್ಚಿಸಿ

ಆತನ ಅರ್ಧಾಂಗವನ್ನು ಸೂರೆಗೊಂಡಳು. ಜನಸ್ಮೋಹಕವಾದ ನಮ್ಮ ಶಿ ಲಾಂಛನಗಳು ಜಗನ್ಮಾತೆಯಾದ ಪಾರ್ವತಿಯಿಂದ ನಮಗೆ ಕೊಡಲ್ಪಟ್ಟಿ ವವು. ಆ ರುದ್ರಾಣಿಯೇ ನಮಗೆ ಮಾತೆಯು. ನಾವು ಆವರ ಸಂತತಿಯ ವರು. ನಮಗೆ ಆಕೆಯೇ ಗುರುವು. ಶಿವಭಕ್ತರು ಅಕ್ಕರೆಯಿಂದ ತಂದುಕೊಟ್ಟ ಹಣ್ಣು-ಹಂಪಲು, ಕಾಯಿ-ಕಸರುಗಳನ್ನು ಪ್ರೀತಿಯಿಂದ ಪರಿಗ್ರಹಿಸಿ ಶಿವಾರ್ಪಣೆ ಯನ್ನು ಮಾಡಿ ಆ ಪ್ರಸಾದವನ್ನು ಆರೋಗಿಸುತ್ತ ಸರ್ವವಿಧದಲ್ಲಿಯೂ ಜಂಗ ಮರೇ ಗತಿಯೆಂದು ನಂಬಿ ಅವರ ಪಾದಸೇವೆಯನ್ನು ಮಾಡುತ್ತ ಮನೋವಾ ಕ್ಕಾಯಗಳಲ್ಲಿ ಆವರನ್ನು ತೃಪ್ತಿಪಡಿಸುವದೇ ವ್ರತವಾಗಿ, ಗುರುಲಿಂಗ ಜಂಗ ಮಕ್ಕೆ ತನು-ಮನ-ಧನಗಳನ್ನು ಒಪ್ಪಿಸುತ್ತ ಅವರ ಅಂತರಂಗ ಸಂಗದಲ್ಲಿದ್ದು ಸೇವೆಮಾಡುವ ನಮ್ಮಂತಹ ಕಾಮಿನಿಯರು ಶ್ರೀಶೈಲ ಮೊದಲಾದ ಪರ್ವತಗ ಳಲ್ಲಿಯೂ, ಸಮಸ್ತ ಶೈವಕ್ಷೇತ್ರಗಳಲ್ಲಿಯೂ ಅನೇಕರು ವಾಸಮಾಡುತ್ತಿರುವರು. ಎಂದು ಚತುರತನದಿಂದ ಅವಳು ನುಡಿಯಲು ಇದನ್ನು ಕೇಳಿದ ಮುಗ್ಧ ಸಂಗಾರ್ಯನು ಆಹಾ! ಈಕೆಯ ಶಿವಲಾಂಛನವೂ, ಭಕ್ತಿಯೂ, ನಡತೆಯೂ, ಆಚಾರವೂ ಅಮೋಘವಾದುದು ಎಂದು ಆಶ್ಚರ್ಯಭರಿತನಾಗಿ ಶಿವಪೂಜೆ ಯನ್ನು ಮಾಡುವದಕ್ಕೆ ಕುತೂಹಲವುಳ್ಳವನಾಗಿ ಸಿದ್ಧನಾಗಲು ಆತನ ಮನೋ ಭಾವನೆಯನ್ನು ತಿಳಿದವಳಾದ ಆ ಚದುರೆಯಾದ ವಿಚಾರನಾರಿಯು ಈ ಜಂಗಮ ಲಿಂಗಕ್ಕೆ ಹೇಗಾದರೂ ಮಾಡಿ ತೃಪ್ತಿಯನ್ನುಂಟು ಮಾಡುವದೇ ತನ್ನ ಕೆಲಸ ವೆಂದು ತಿಳಿದು ಆತನ ಶಿವಪೂಜೆಗೆ ಬೇಕಾಗುವ ಸಾಮಗ್ರಿಗಳನ್ನು ಒದಗಿಸು ವಂತೆ ತನ್ನ ದಾದಿಯರಿಗೆ ಆಜ್ಞೆಮಾಡಲು ಕೂಡಲೇ ಒಬ್ಬಳು ಕಸ್ತೂರಿಯಿಂದ ಸಾರಣೆಯನ್ನೂ, ಮತ್ತೊಬ್ಬಳು ಮುತ್ತಿನಿಂದ ರಂಗವಲ್ಲಿಯನ್ನೂ, ಇನ್ನೊ ಬ್ಬಳು ತಂಪಾದ ಸುಗಂಧ ನೀರನ್ನೂ, ಬೇರೊಬ್ಬಳು ಹೂವಿನ ಬಟ್ಟಲನ್ನೂ, ಮತ್ತೊಬ್ಬಳು ನೈವೇದ್ಯದ ತಟ್ಟೆಯನ್ನೂ, ಅನ್ಯಳೊಬ್ಬಳು ಮಂಗಳಾರತಿ ಯನ್ನೂ, ಮತ್ತೋರ್ವಳು ಅಕ್ಷತೆಯ ಬಟ್ಟಲನ್ನೂ ಸಿದ್ಧಪಡಿಸಿದರು. ಈ ತೆರನಾದ ಸಾಮಗ್ರಿಗಳನ್ನು ತೆಗೆದುಕೊಂಡು ಸಂಗಾರ್ಯನು ಶಿವಪೂಜೆ ಮಾಡ ತೊಡಗಲು ಒಬ್ಬಳು ನೀರಾಜನವನ್ನೆತ್ತಿದಳು. ಇನ್ನೊಬ್ಬಳು ಸಂಗೀತವನ್ನು ಹಾಡಿದಳು, ಅನ್ಯಳೊಬ್ಬಳು ಗಂಟೆಯನ್ನು ಬಾರಿಸಿದಳು, ಮತ್ತೊಬ್ಬಳು ಜಾಗ ಟೆಯನ್ನು ಧ್ವನಿಗೈದಳು. ಬೇರೊಬ್ಬಳು ಚಾಮರವನ್ನು ಹಿಡಿದಳು. ಇನ್ನೊ

ಒಬ್ಬಳು ನಾಟ್ಯವನ್ನು ಮಾಡಿದಳು, ಪೆರತೊಬ್ಬಳು ಚಾಮರಿಯನ್ನು ಬೀಸಿದಳು. ಈ ಪ್ರಕಾರ ನಾನಾವಿಧ ಉಪಚಾರಗಳು ನಡೆಯುತ್ತಿರಲು ಮುಗ್ಧ ಸಂಗಾರ್ಯನು ಎಂದೂ ಮಾಡದಿದ್ದ ಹೊಸದಾದ ಈ ಶಿವಪೂಜೆಯನ್ನು ಪರಮಸಂತೋಷ ದಿಂದ ನೆರವೇರಿಸುತ್ತಿರಲು ಅಷ್ಟರೊಳಗೆ ಭವಬಂಧಿಗಳನ್ನು ಎಚ್ಚರಿಸಿ ಮುಗ್ಧ ಸಂಗಾರ್ಯನ ಶಿವಪೂಜೆಯನ್ನು ತಿಳಿಸುವಹಾಗೆ ಪ್ರಕಟಗೊಳಿಸುವಂತೆ ಕೋಳಿ ಕೂಗಿತು. ಶಿವಭಕ್ತಿಯಿಂದ ಅಂಧತಮವು ನಾಶವಾಗುವದೇ ನಿಜವೆಂದು ಪ್ರಪಂಚದ ಜನರಿಗೆ ತೋರಿಸುವಂತೆ ಬೆಳಕುಹರಿಯಿತು. ಶಿವಭಕ್ತರಲ್ಲದವರು ಜನನ–ಮರಣವೆಂಬ ದುಃಖರೂಪವಾದ ರಥದಲ್ಲಿ ಹತ್ತಿ ಸದಾ ಸುತ್ತುತ್ತಿರು ವದೇ ನಿಜವೆಂದು ತೋರಿಸುವಂತೆ ಅರುಣನೂ ಉದಯಿಸಿದನು. ಸಂಗಾ ರ್ಯನು ಅತ್ಯಂತ ಸಂತೋಷದಿಂದ ಪ್ರಾತಃಕಾಲದ ಶಿವಪೂಜೆಯನ್ನು ನೆರವೇ ರಿಸಿ ಆ ಸೂಳೆಯನ್ನು ಬೀಳ್ಕೊಟ್ಟು, ಬಸವೇಶ್ವರನ ಮನೆಗೆ ಬಂದು ಆವನ ಬಳಿ ಯಲ್ಲಿರುವ ಶಿವಗಣಂಗಳ ಸಭಾಮಧ್ಯದಲ್ಲಿ ಕುಳಿತುಕೊಳ್ಳಲು ಅವರಲ್ಲಿ ಒಬ್ಬನು ನಿನ್ನೆ ರಾತ್ರಿ ಸೂಳೆಯ ಮನೆಯಲ್ಲಿ ನಡೆದ ವಿಶೇಷ ವರ್ತಮಾನ ವೇನು ? ಎಂದು ಕೇಳಲು ಮುಗ್ಧ ಸಂಗಾರ್ಯನು ಅಯ್ಯಾ, ಸೂಳೆಗಾರಿಕೆಯ ಸುಖವನ್ನು ಎಷ್ಟೆಂದು ಹೇಳಲಿ. ನನ್ನೊಡನೆ ನೀನೂ ಬಂದಿದ್ದರೆ ಸ್ವತಃ ಗೊತ್ತಾಗುತ್ತಿತ್ತು. ನಾನು ನಿನ್ನನ್ನು ಆ ಕಾಲದಲ್ಲಿ ಸ್ಮರಿಸುತ್ತಿದ್ದೆ. ಆದರೆ ಆ ಸೂಳೆಯ ಭಕ್ತಿಯು ಬಹು ಆಶ್ಚರ್ಯಕರವಾದದ್ದು. ಆ ಮನೆಯಲ್ಲಿ ನಿನ್ನೆ ರಾತ್ರಿಯೆಲ್ಲಾ ಹಿಂದೆಂದೂ ಅನುಭವಿಸದಂತಹ ಸಂತೋಷದಿಂದ ಸೂಳೆಗಾರಿಕೆ ಯನ್ನು ಮಾಡಿದೆನು. ಅಯ್ಯಾ ! ಬಸವೇಶ್ವರನೇ, ಹಗಲು ರಾತ್ರಿಯೆನ್ನದೆ ಇಂತಹ ಸೂಳೆಗಾರಿಕೆಯನ್ನು ಮಾಡಿಕೊಂಡಿರುವ ಭಕ್ತರಿಗೆ ಬೇರೆ ಸುಖ ಬೇಕೇ? ನೀನು ಅನೇಕ ಜನ್ಮಗಳಲ್ಲಿ ಇಂಥ ಸೂಳೆಗಾರಿಕೆಯನ್ನು ಮಾಡಿ ಮಾಡಿ ಸಂಪಾ ದಿಸಿದ ಪುಣ್ಯದಿಂದಲೇ ನಿನಗೆ ಇಂತಹ ಪದವಿದೊರೆತಿದೆ. ಇಲ್ಲವಾದರೆ ಎಂದಿಗೂ ಸಾಧ್ಯವಿಲ್ಲ. ಎಂದು ಹೇಳಿದ ಸಂಗಾರ್ಯನ ಮಾತನ್ನು ಕೇಳಿ ವಿಟಜಂಗಮ ರೆಲ್ಲರೂ ಘೊಳ್ಳನೆ ನಕ್ಕರು. ಬಸವಣ್ಣನಾದರೂ ಮುಗುಳುನಗೆ ನಗುತ್ತ ಚನ್ನಬಸವೇಶ್ವರನ ಮುಖವನ್ನು ನೋಡಿ ಈ ಮಹಾತ್ಮನು ಮನೋ ವಾಕ್ಕಾ ಯಗಳಿಂದಲೂ, ಶಿವಭಕ್ತಿ, ಶಿವಪೂಜೆ, ಶಿವಕಥಾದಿಗಳನ್ನು ನೆನೆಯುವನಲ್ಲದೆ ಮತ್ತೊಂದನ್ನು ಕಾಣದವನು. ಆದ್ದರಿಂದ ಈತನ ಸ್ವಭಾವವು ಆಶ್ಚರ್ಯವಾ

ದುದೇ ಹೌದೆಂದು ಆತನನ್ನು ಹೊಗಳಿ ಸತ್ಕರಿಸಿದರು. ಆಗ ಚನ್ನಬಸವೇಶ್ವರನು ಪುರಾತನ ಶರಣರಲ್ಲಿಯೂ ಇಂತಹ ಮುಗ್ಧರಿದ್ದರೇ ಎಂದು ಕೇಳಲು ಬಸವೇಶ್ವರನು ಪೂರ್ವದಲ್ಲಿಯೂ ಇದ್ದರು ಎಂದು ಹೇಳಿ ಅವರ ಕಥೆಯನ್ನು ಹೇಳತೊಡಗಿದನು.

## — ರುದ್ರಪಶುಪತಿಯ ಕಥೆಯು —

ಎಳಿಪೂರು ಎಂಬ ಗ್ರಾಮದಲ್ಲಿ ರುದ್ರಪಶುಪತಿ ಎಂಬ ಹೆಸರಿನ ಒಬ್ಬ ಶಿವಭಕ್ತನಿದ್ದನು. ಅವನು ಶಿವನಿಗಾಗಿ ಪ್ರಾಣವನ್ನೂ ಸಹ ಕೊಡುವಷ್ಟು ಗಾಢವಾದ ಭಕ್ತಿಯುಳ್ಳವನಿದ್ದನು. ಆ ಊರ ಶಿವದೇವಾಲಯದಲ್ಲಿ ಪ್ರತಿದಿವಸ ಒಬ್ಬ ಪುರಾಣಿಕನು ಶಿವಪುರಾಣವನ್ನು ಹೇಳುತ್ತಿದ್ದನು. ಪುರಾಣ ಕೇಳಲು ಪ್ರತಿದಿನವೂ ರುದ್ರಪಶುಪತಿಯು ಹೋಗುತ್ತಿದ್ದನು. ಒಂದು ದಿವಸ ಪುರಾಣಿಕನು "ದೇವತೆಗಳೂ, ರಾಕ್ಷಸರೂ ಕೂಡಿ ಅಮೃತಕ್ಕಾಗಿ ಸಮುದ್ರವನ್ನು ಕಡೆಯುತ್ತಿರಲಾಗಿ ಹಾಲಾಹಲ ವಿಷವು ಹುಟ್ಟಲು ಅದು ಪ್ರಪಂಚವನ್ನೆಲ್ಲ ಸುಡಹತ್ತಲು ಅದನ್ನು ಅಡಗಿಸುವದಕ್ಕೆ ಸಾಧ್ಯವಾಗದೆ ಎಲ್ಲ ದೇವತೆಗಳೂ ಓಡಿಹೋದರು. ಇದನ್ನು ನೋಡಿದ ಪರಮೇಶ್ವರನು ಆ ವಿಷವನ್ನು ತೆಗೆದುಕೊಂಡು ಹಾಲಿನಂತೆ ಕುಡಿದುಬಿಟ್ಟನು" ಎಂದು ಹೇಳಿದನು, ಇದನ್ನು ಕೇಳಿದ ರುದ್ರಪಶುಪತಿಯು ಶಿವಶಿವಾ ! ಕೆಟ್ಟೆನು, ನನಗೆ ಇನ್ನು ಯಾರು ಗತಿ? ಅಂತಹ ಕೆಟ್ಟ ವಿಷವನ್ನು ಕುಡಿದ ಈಶ್ವರನು ಬದುಕುವದು ಹೇಗೆ? ಹೀಗೆ ಏಕೆ ಹುಚ್ಚುತನವನ್ನು ಮಾಡಿದನೋ ನಾನು ಕಾಣೆ? ನಾನು ಅವನ ಪಾದವನ್ನೇ ಈ ವರೆಗೆ ನಂಬಿಕೊಂಡಿದ್ದೆನಲ್ಲಾ ! ಎಲೈ ಪುರಾಣಿಕರೇ, ನಿಜವನ್ನು ಹೇಳಿರಿ. ಶಿವನು ವಿಷವನ್ನು ಖಂಡಿತವಾಗಿಯೂ ಕುಡಿದನೇ? ಎಂದು ಕೇಳಿದನು. ಅದಕ್ಕೆ ಅವನು ನಿಜವಾಗಿಯೂ ಈಶ್ವರನು ವಿಷವನ್ನು ಕುಡಿದನು. ಈ ಮಾತು ವೇದಸಮ್ಮತವಾದದ್ದು. ಎಂದು ಹೇಳಲು ಆ ರುದ್ರಪಶುಪತಿಯು ಹೌಹಾರಿ, ಬೆದರಿ, ಅಯ್ಯಯ್ಯೋ ! ಎಂದು ನಾನಾವಿಧವಾಗಿ ಹಂಬಲಿಸಿ ಚೀರುತ್ತಾ, ಕೋಮಲ ಶರೀರದವನಾದ ಆ ಪರಶಿವನೆಲ್ಲಿ, ಅಂತಹ ಘೋರವಾದ ವಿಷವೆಲ್ಲಿ; ಹಾಲನ್ನು ಕುಡಿಯುವ ಹಂಸಪಕ್ಷಿಯೆಲ್ಲಿ, ಕೆಂಡವನ್ನು ನುಂಗುವ ಅಗ್ನಿಪಕ್ಷಿಯೆಲ್ಲಿ; ಆ ಪರಶಿವನು ವಿಷವನ್ನು ಕುಡಿಯುವಾಗ ವಿಷದ ಅಗ್ನಿಯಿಂದ ಸುಡು

ತ್ತಿದ್ದ ಅವನ ತುಟಿ, ಬಾಯಿ, ಕಣ್ಣುಗಳು ಹೇಗೆ ಇದ್ದವೋ ! ಅವು ಎಷ್ಟು ಕಂದಿ, ಬೆಂದು ಹೋಗಿದ್ದವೋ !! ನುಂಗಿದಾಗ ಗಂಟಲೂ, ಅಂಗಳವೂ ಏನಾದವೋ !!! ಹೊಟ್ಟೆಗೆ ಹೋದಾಗ ಎಷ್ಟು ಸಂಕಟವಾಯಿತೋ, ಅಮ್ಮಾ, ಗೌರಿಯೇ, ನಿನ್ನ ಗಂಡನು ವಿಷ ಕುಡಿಯುವಾಗ ನೀನು ಹೇಗೆ ಸುಮ್ಮನಿದ್ದೆ ? ಹೇ, ಪ್ರಮಥಗಣರೇ, ನಿಮ್ಮೊಡೆಯನು ವಿಷ ಕುಡಿಯುವಾಗ ನೀವೆಲ್ಲಿದ್ದಿರಿ ? ಏನು ಮಾಡುತ್ತಿದ್ದಿರಿ ? ಎಲೈ ಷಣ್ಮುಖ-ಗಣಪತಿಯರೇ, ನಿಮ್ಮ ತಂದೆಯು ವಿಷಪಾನಮಾಡುವವನ್ನು ನೋಡಿ ಬೇಡವೆಂದು ಹೇಳದೆ ಏಕೆ ಸುಮ್ಮನಿದ್ದಿರಿ ? ಎಲೈ ವೀರಭದ್ರನೇ, ಎಲ್ಲವನ್ನೂ ನೋಡಿದ ನೀನು ಹೇಗೆ ಸುಮ್ಮನಿದ್ದೆ ? ಎಲೈ ಪರಮೇಶ್ವರನೇ, ಉಳಿದ ದೇವತೆಗಳು ಸತ್ತರೂ ಅಡ್ಡಿ ಇದ್ದಿಲ್ಲ. ಯಾಕಂದರೆ ಅವರು ಪುನಃ ಹುಟ್ಟುವರು ಅಭವನಾದ ನೀನು ಮತ್ತೆ ಹುಟ್ಟುವದುಂಟೇ ? ಅಯ್ಯೋ ! ನಿನಗೆ ಮುಪ್ಪು, ಮರಣ, ಬೇನೆಗಳು ಬಾರದಿರಲೆಂದು ನಾನು ನಿತ್ಯವೂ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತಿದ್ದೆನಲ್ಲಾ ! ಹೀಗೆ ಇರುವಾಗ ನೀನು ವಿಷವನ್ನು ಕುಡಿದದ್ದು ಕೇಳಿ ನಾನು ಹೇಗೆ ಜೀವಿಸಲಿ ! ಎಂದು ಬಗೆಬಗೆಯಾಗಿ ಹಂಬಲಿಸಿ ನನ್ನ ಸ್ವಾಮಿಯು ವಿಷ ಕುಡಿದ ಮೇಲೆ ನಾನು ಬದುಕುವದರಿಂದ ಏನೂ ಪ್ರಯೋಜನವಿಲ್ಲೆಂದು ಬಗೆದು ರುದ್ರಪಶುಪತಿಯು ದೊಡ್ಡದಾದ ಒಂದು ಹಾಳುಬಾವಿಯಲ್ಲಿ ಬೀಳಲು ಅವನ ಮೂಢಭಕ್ತಿಗೆ ಪರಶಿವನು ಮೆಚ್ಚಿ ಪ್ರಮಥರೊಡನೆ ಅಲ್ಲಿಗೆ ಧಾವಿಸಿ ಬಂದು ಬಾವಿಯಲ್ಲಿ ಬೀಳುತ್ತಿರುವ ಭಕ್ತನನ್ನು ಹಿಡಿದೆತ್ತಿ ಅವನ ತಲೆಯಮೇಲೆ ಕೈಯಾಡಿಸುತ್ತ ರುದ್ರಪಶುಪತಿಯೇ, ನಾನು ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ಬೇಕಾದ ವರ ಬೇಡು ಕೊಡುವೆನೆಂದು ಹೇಳಲು ಆ ಭಕ್ತನು ಶಿವನ ಪಾದಗಳಿಗೆ ನಮಸ್ಕರಿಸಿ ಎಲೈ— ಸ್ವಾಮಿಯೇ, ನನಗೆ ಯಾವ ವರವೂ ಬೇಕಾಗಿಲ್ಲ. ನೀನು ಕುಡಿದಿರುವ ವಿಷವನ್ನು ಉಗುಳಿಬಿಟ್ಟರೆ ಸಾಕು. ನನಗೆ ಸಕಲ ಇಷ್ಟಾರ್ಥಗಳನ್ನು ಕೊಟ್ಟಂತಾಗುವದು ಎಂದು ಹೇಳಿದನು. ಆಗ ಅಲ್ಲಿದ್ದವರು ಪರಶಿವನು ವಿಷವನ್ನು ಉಗುಳಿದರೆ ಜಗತ್ತಿನ ಗತಿ ಏನು ? ಎಂದು ಹೆದರಿದರು. ಪರಮೇಶ್ವರನು ಭಕ್ತನನ್ನು ಕುರಿತು— ಹೇ ರುದ್ರಪಶುಪತಿಯೇ, ನಾನು ಹೇಳುವದನ್ನು ಕೇಳು. ನನಗೆ ವಿಷಭಯವಿಲ್ಲ. ಉಂಟು ಎಂದು ಕನಸಿನಲ್ಲಿಯೂ ನೆನೆಯಬೇಡ, ಇಗೋ, ಈ ಕುತ್ತಿಗೆಯಲ್ಲಿರುವ ವಿಷವನ್ನು ನೋಡು, ಇದು

ನನಗೇನೂ ತೊಂದರೆಕೊಡಲಾರದು, ಎಂದು ಕುತ್ತಿಗೆಯಲ್ಲಿಯ ವಿಷವನ್ನು ತೋರಿಸಲು ಅವನು— ಸ್ವಾಮೀ, ಈ ವಿಷವು ಕಾಲಾಂತರದಲ್ಲಿಯಾದರೂ ನಿನ್ನನ್ನು ಕೊಲ್ಲದೆ ಬಿಡುವದೇ ? ಆದ್ದರಿಂದ ಈಗಲೇ ಉಗುಳಿಬಿಡು; ಇದನ್ನು ನಾನು ನೋಡಿ ಸಹಿಸಿಕೊಳ್ಳಲಾರೆನು. ಎಂದು ತನ್ನ ಕೈಯಲ್ಲಿ ಕತ್ತಿಯನ್ನು ತೆಗೆದುಕೊಂಡನು, ಆಗ ಪರಮೇಶ್ವರನು ಈ ಭಕ್ತನು ವಿಷ ಉಗುಳಿಸದೆ ಬಿಡಲಾರನು. ಉಗುಳಿದರೆ ಎಲ್ಲ ಲೋಕಗಳು ನಾಶವಾಗುವವು. ಇದಕ್ಕೆ ಏನು ಉಪಾಯ ಮಾಡಲಿ? ಎಂದು ಬಗೆದು ಭಕ್ತನಿಗೆ ಹಿತವನ್ನೂ, ಲೋಕದ ಸಂರಕ್ಷಣೆಯನ್ನೂ ನೆನೆದು ಅವನಿಗೆ ಒಂದೆರಡು ಮಾತು ಹೇಳಿದನು. ಭಕ್ತನೇ, ನಿನ್ನಾಣೆಯಾಗಿ, ಈ ನನ್ನ ಪ್ರಾಣಪದಕರಾದ ಪ್ರಮಥರಾಣೆಯಾಗಿ ಈ ವಿಷದಿಂದ ನಾನು ಸಾಯುವದಿಲ್ಲ, ಇದನ್ನು ನೀನು ನಂಬು ಎಂದು ಹೇಳಲು ಆ ಭಕ್ತನು ನಂಬಲಿಲ್ಲ. ಆಗ ಶಂಕರನು— ಎಲೈ ರುದ್ರಪಶುಪತಿಯೇ, ಮುಂಜಿನ ಹಸಿಯು ಬಡಬಾಗ್ನಿಯನ್ನು ನಂದಿಸುವದಿಲ್ಲ. ಆದರೂ ನೀನು ನನ್ನ ಬಲ ತೊಡೆಯ ಮೇಲೆ ಕುಳಿತುಕೊಂಡು ಯಾವಾಗಲೂ ನನ್ನ ಕುತ್ತಿಗೆಯನ್ನೇ ನೋಡುತ್ತಿರು. ವಿಷವು ಎಂದಿಗೂ ನನ್ನ ಹೊಟ್ಟೆಗೆ ಇಳಿಯುವದಿಲ್ಲ. ಒಂದು ವೇಳೆ ಹೊಟ್ಟೆಗಿಳಿದರೆ ಕೂಡಲೇ ಪ್ರಾಣವನ್ನು ಕಳೆದುಕೋ ಎಂದು ಕೈಯಲ್ಲಿ ಕತ್ತಿಯನ್ನು ಕೊಟ್ಟು ತನ್ನ ತೊಡೆಯ ಮೇಲೆ ಕೂಡ್ರಿಸಿಕೊಂಡಿರುವನು. ಈತನಲ್ಲದೆ ಇನ್ನೊಬ್ಬ ಭಕ್ತನ ಚರಿತ್ರೆಯನ್ನು ಹೇಳುತ್ತೇನೆ ಕೇಳು ಎಂದು ಬಸವೇಶ್ವರನು ಚನ್ನಬಸವೇಶ್ವರನಿಗೆ ಹೇಳತೊಡಗಿದನು.

## — ನಕ್ಕ ನೆಯ್ನಾರ ಕಥೆಯು —

ದ್ರಾವಿಡ ದೇಶದಲ್ಲಿ ತಿರುನೀಲ ನಕ್ಕದ ನೆಯ್ನಾರ ಎಂಬ ಶಿವಭಕ್ತನು ಪರಮ ಪತಿವ್ರತೆಯಾದ ಶಿವಭಕ್ತಿ ಎಂಬ ಸುಶೀಲೆಯಾದ ಹೆಂಡತಿಯೊಡನೆ ವಾಸವಾಗಿದ್ದನು. ಆ ದಂಪತಿಗಳು ಒಂದು ದಿವಸ ಶಿವಾಲಯದಲ್ಲಿ ಶಿವಪೂಜೆ ಮಾಡುತ್ತಿರುವಾಗ ಒಂದು ಜೇಡಹುಳವು ಲಿಂಗದ ಮೇಲೆ ಹರಿದಾಡುತ್ತಿರುವದನ್ನು ಶಿವಭಕ್ತಿಸಂಪನ್ನಳಾದ ಆ ಸುಶೀಲೆಯು ನೋಡಿ ಈ ಹುಳವು ಲಿಂಗದ ಮೇಲೆ ಹತ್ತಿ ಲಿಂಗವನ್ನು ಅಪವಿತ್ರ ಮಾಡಿದೆ ಎಂದು ಕೋಪದಿಂದ ಅದನ್ನು ಬಾಯಿಯಿಂದ ಊದಿದಳು. ಇದನ್ನು ನೆಯ್ನಾರನು ನೋಡಿ ತಾನು ಪೂಜೆ

ಮಾಡುವ ಲಿಂಗದ ಮೇಲೆ ನನ್ನ ಹೆಂಡತಿಯು ಉಗುಳಿ ಕೆಡಿಸಿದಳೆಂದು ಕೋಪಗೊಂಡು ಅವಳನ್ನು ಬೈದು, ಶಿಕ್ಷಿಸಿ, ತಿರಸ್ಕಾರದಿಂದ ಕೀಳಾಗಿ ನುಡಿದು ದೇವಾಲಯದ ಹೊರಗಡೆ ತಳ್ಳಿ ಬಂದು ಲಿಂಗವನ್ನು ದೃಷ್ಟಿಸಿನೋಡಲು ಸುಶೀಲೆಯು ಉಗುಳಿದ ಭಾಗದ ಹೊರತು ಉಳಿದ ಲಿಂಗದ ಭಾಗವು ಬೆಳ್ಳಗಾಗಿತ್ತು. ಹಾಗೂ ಬಿಳಿಯ ಸಣ್ಣ ಸಣ್ಣ ಗುಳ್ಳೆಗಳೂ ಇದ್ದವು. ಅದನ್ನು ಕಂಡು ಭಯದಿಂದ ಬೆರಗಾಗಿ ನಿಟ್ಟುಸುರುಬಿಟ್ಟು ಕೆಟ್ಟೆನಲ್ಲಾ ! ಉಗುಳಿ ಉಗುಳಿ ಲಿಂಗಕ್ಕೆ ಹಿತವನ್ನು ಮಾಡುತ್ತಿದ್ದ ಶಿವಭಕ್ತಿ ಸಂಪನ್ನಳನ್ನು ಹೊಡೆದು ನೂಕಿದ್ದು ಅವಿವೇಕವಾಯಿತು. ಎಂದು ನಾನಾವಿಧವಾಗಿ ಅಂಗಲಾಚಿ ಹೆಂಡತಿಯ ಬಳಿಗೆ ಬಂದು ಎಲೈ ಪರಮಪಾವನಳಾದ ಶಿವಭಕ್ತೆಯೇ, ನಿನ್ನ ರೀತಿಯನ್ನು ತಿಳಿಯದೆ ನಿನ್ನನ್ನು ಬೈದು ಹೊಡೆದು ಹೊರಕ್ಕೆ ಹಾಕಿದೆ. ನನ್ನಂತಹ ನೀಚರು ಈ ಲೋಕದಲ್ಲಿ ಯಾರೂ ಇಲ್ಲ. ನೀನು ಉಗುಳಿದ ಸ್ಥಳದ ಹೊರತು ಉಳಿದ ಕಡೆಯಲ್ಲಿ ಲಿಂಗವು ಬಿಳಿಯ ಗುಳ್ಳೆಗಳಿಂದ ಕೂಡಿದೆ. ಆದ್ದರಿಂದ ಪುನಃ ಬಂದು ಉಗುಳಿ ಆ ಗುಳ್ಳೆಗಳನ್ನು ಹೋಗಲಾಡಿಸಬೇಕೆಂದು ಹೇಳಿದ ಪತಿಯ ವಾಕ್ಯವನ್ನು ಕೇಳಿ ಆ ಸತೀಮಣಿಯು ಅಯ್ಯೋ ಆ ಶಿವಲಿಂಗಕ್ಕೆ ಎಷ್ಟು ನೋವಾಗಿದೆಯೋ? ನನ್ನನ್ನು ಹೊಡೆದರೂ ಸಹ ಸಹಿಸಿಕೊಂಡು ಶಿವಸೇವೆ ಮಾಡಬೇಕಾಗಿತ್ತು. ಕೆಟ್ಟೆನು ! ಹಾ ಶಿವನೇ ! ಪರಮೇಶ್ವರಾ !! ಎಂದು ಗೋಳಿಡುತ್ತ ದಂಪತಿಗಳಿಬ್ಬರೂ ದೇವಾಲಯಕ್ಕೆ ಬಂದು ಲಿಂಗವನ್ನು ನೋಡಿ ನೋಡಿ ಬಹಳ ಗೋಳಾಡಿದರು. ಆ ಭಕ್ತನು ನನ್ನ ಅವಿವೇಕದಿಂದಲೇ ಈ ಅಪರಾಧವಾಯಿತು. ಅದಕ್ಕಾಗಿ ತನ್ನ ಕೊರಳನ್ನು ಕೊಯ್ದುಕೊಳ್ಳುವದೇ ಸರಿಯಾದ ಶಿಕ್ಷೆಯೆಂದು ಗೊತ್ತು ಮಾಡಿ ಕತ್ತಿಯನ್ನು ತೆಗೆದುಕೊಂಡು ಕುತ್ತಿಗೆಗೆ ಹೊಡೆದುಕೊಂಡನು. ಅಷ್ಟರಲ್ಲಿ ಆ ಭಕ್ತನ ಮೂಢಭಕ್ತಿಗೆ ಮೆಚ್ಚಿ ಪರಮೇಶ್ವರನು ಪ್ರಮಥಗಣ ಸಮೇತನಾಗಿ ದರ್ಶನವನ್ನು ಕೊಟ್ಟು ಎಲೈ— ಭಕ್ತನೇ, ನಿನ್ನ ಭಕ್ತಿಗೆ ಮೆಚ್ಚಿ ನಾನು ಸಂತುಷ್ಟನಾಗಿದ್ದೇನೆ. ಬೇಕಾದ ವರವನ್ನು ಬೇಡು ಕೊಡುವೆನೆನ್ನಲು ಸ್ವಾಮಿಯೇ, ನೀನು ಸುಖವಾಗಿರುವದೇ ನಮಗೆ ಬೇಕಾದ ವರವು ನೀನೂ, ನಿನ್ನ ಭಕ್ತರೂ, ಪ್ರಮಥ ಗಣಂಗಳೂ ಸುಖವಾಗಿರುವದನ್ನು ನೋಡುತ್ತ ಕಲ್ಯಾಣ ಗುಣಸಂಪನ್ನನಾದ ನಿನ್ನ ಹಾಗೂ ಭಕ್ತರ ಚರಿತ್ರೆಯನ್ನು ಕೇಳು

ವದೇ ನನ್ನ ಸಕಲ ಇಷ್ಟಾರ್ಥವು. ಪರಶಿವನು ಈ ಭಕ್ತರನ್ನು ಉದ್ಧರಿಸ ಬೇಕೆಂದು ಯೋಚಿಸಿ ಕರುಣಾ ಕಟಾಕ್ಷದಿಂದ ನೋಡಿ ಅವರಿಗೆ ಮುಕ್ತಿ ಸಾಮ್ರಾಜ್ಯವನ್ನಿತ್ತನು. ಇದಲ್ಲದೆ ಇನ್ನೂ ಒಬ್ಬ ಶಿವಭಕ್ತನ ಮಹಿಮೆಯನ್ನು ವಿವರಿಸುತ್ತೇನೆ ಸಾವಧಾನದಿಂದ ಕೇಳು ಎಂದು ಬಸವೇಶ್ವರನು ತನ್ನ ಸೋದರಳಿಯನಾದ ಚನ್ನಬಸವಣ್ಣನಿಗೆ ಹೇಳುವದಕ್ಕೆ ಆರಂಭಿಸಿದನು.

— ಕೋಳೂರ ಕೊಡಗೂಸಿನ ಕಥೆಯು —

ಹಿಂದಿನ ಕಾಲದಲ್ಲಿ ಕೋಳೂರು ಎಂಬ ಪಟ್ಟಣವಿತ್ತು. ಆ ಪಟ್ಟಣದಲ್ಲಿ ಶಿವದೇವನೆಂಬ ಈಶಭಕ್ತನು ತನ್ನ ಹೆಂಡತಿಯೊಡನೆ ವಾಸಿಸುತ್ತಿದ್ದನು. ಈ ಶಿವದೇವನಿಗೆ ರೂಪವತಿಯೂ, ಸದ್ಗುಣಶಾಲಿಯೂ, ವಿನಯವಂತೆಯೂ, ಚತುರಳೂ ಆದ ಕೊಡಗೂಸು ಎಂಬ ಮಗಳಿದ್ದಳು. ಒಮ್ಮೆ ಶಿವದೇವನು ದೇವರ ಸೇವೆಗಾಗಿ ಹೆಂಡತಿ ಸಹಿತವಾಗಿ ನೆರೆಯ ಊರಿಗೆ ಹೋಗಬೇಕಾಗಿ ಬಂದಿತು. ಆಗ ಆತನು ಜಾಣೆಯಾದ ತನ್ನ ಮಗಳನ್ನು ಕರೆದು ಮೈಯನ್ನು ಸವರಿ ಮುದ್ದು ಮಾತುಗಳಿಂದ ಗಲ್ಲವನ್ನು ಹಿಡಿದು ಬೆಲ್ಲದಂತೆ ಮೃದುವಾದ ಮಧುರ ವಚನಗಳನ್ನಾಡಿ ಲಲ್ಲೆಗೈದು ಅಮ್ಮಾ, ನಾವು ಜಾತ್ರೆಗಾಗಿ ನೆರೆಯೂರಿಗೆ ಹೋಗಿಬರುತ್ತೇವೆ. ಯಾವಾಗಲೂ ಸುಮ್ಮನೆ ಬೀದಿಯಲ್ಲಿ ಆಡುತ್ತಿರಬೇಡ. ಹಿತ್ತಿಲ ಕಡೆಯಲ್ಲಿ ಒಬ್ಬಳೇ ಸಂಚರಿಸಬೇಡ. ಮನೆಯನ್ನು ಎಚ್ಚರಿಕೆಯಿಂದ ನೋಡಿಕೋ. ಬಹಳ ದಿವಸದಿಂದ ನಡೆಯಿಸಿಕೊಂಡು ಬಂದಿರುವ ಕಲ್ಲೇ ದೇವರಿಗೆ ದಿನಕ್ಕೊಮ್ಮೆ ಒಂದು ಬಟ್ಟಲು ಹಾಲನ್ನು ಕೊಡುವ ವ್ರತವನ್ನು ಮರೆಯಬೇಡ. ಸಕಲ ವಿಧದಿಂದಲೂ ಎಚ್ಚರಿಕೆಯಿಂದ ನಡೆದುಕೊಂಡು ಜಾಣೆಯೆಂಬ ಹೆಸರನ್ನು ಸಾರ್ಥಕ ಮಾಡಿಕೋ. ನಾನು ಬರುವಾಗ ಪಟ್ಟೆಯ ಸೀರೆಯನ್ನೂ, ಕೈಗೆಉತ್ತಮ ಬಳೆಗಳನ್ನೂ, ನಡುವಿಗೆ ಪಟ್ಟೆಯನ್ನೂ, ಸಿಹಿತಿಂಡಿ ತಿನುಸುಗಳನ್ನೂ, ತೆಗೆದುಕೊಂಡು ಬರುತ್ತೇನೆ. ಎಂದು ಹೇಳಿ ಒಡಂಬಡಿಸಿ ದಂಪತಿಗಳಿಬ್ಬರೂ ಜಾತ್ರೆಗೆ ಹೋದರು. ಇತ್ತ ಆ ಬಾಲೆಯು ಬಂಗಾರದ ತಂಬಿಗೆಯಲ್ಲಿ ಹಸುವಿನ ಹಾಲನ್ನು ಕರೆದು ಕೆಂಪಗೆ ಕಾಸಿ ಮಧುರವಾದ ಕಲ್ಲುಸಕ್ಕರೆ, ಬದಾಮಿ, ಕೇಸರಿಗಳನ್ನು ಹಾಕಿ ಬಂಗಾರದ ಬಟ್ಟಲದಲ್ಲಿ ಒಂದು ಬಳ್ಳಹಾಲನ್ನು ಅಳತೆಮಾಡಿ ಹಾಕಿ ಅದರ ಮೇಲೆ ಶುಭ್ರವಾದ ನುಡಿಯನ್ನು ಹೊದಿಸಿ ತಾನು ಸ್ನಾನಮಾಡಿ ಮಡಿಬಟ್ಟೆಗಳನ್ನು ಧರಿಸಿಕೊಂಡು

ಹಣೆಯಲ್ಲಿ ವಿಭೂತಿಯನ್ನು ಧರಿಸಿ ಶಿವನಾಮ ಸ್ಮರಣೆಯನ್ನು ಮಾಡುತ್ತ ದೇವಸ್ಥಾನಕ್ಕೆ ಬಂದು ಕಲ್ಲಿನಾಥನನ್ನು ಪೂಜಿಸಿ ನಮಸ್ಕರಿಸಿ ಸ್ವಾಮೀ, ತಡವಾಯಿತು ಇಂದು ನಿನಗೆ ತುಂಬ ಹಸಿವಾಗಿರಬಹುದು. ಈ ಹಾಲನ್ನು ಕುಡಿದು ತೃಪ್ತಿಹೊಂದು ಎಂದು ಹೇಳಿ ದೃಷ್ಟಿಯಾದೀತೆಂದು ಒಂದು ಕಂಬದ ಮರೆಗೆ ನಿಂತುಕೊಂಡಳು. ತುಸು ಹೊತ್ತಿನ ನಂತರ ತಿರುಗಿ ಬಟ್ಟಲನ್ನು ನೋಡಿದಳು. ಹಾಲು ಹಾಗೆಯೇ ಇದ್ದಿತು. ಇದನ್ನು ಕೊಡಗೂಸು ನೋಡಿ ಮನಸ್ಸಿನಲ್ಲಿ ನೊಂದುಕೊಂಡು ಎಲೈ- ಶಂಕರನೇ, ನೀನು ಹಾಲನ್ನು ಏಕೆ ಕುಡಿಯಲೊಲ್ಲೆ ! ತಿಳಿಯದ ಎಳೆಯ ಹುಡುಗಿಯೆಂದು ನನ್ನ ಮೇಲೆ ತಿರಸ್ಕಾರವೇ ! ಅಥವಾ ಹಸಿವೆಯಾಗಿರುವದಿಲ್ಲವೇ ! ಅಥವಾ ಹಾಲು ಹೊಗೆ ಸುತ್ತಿ ಸುವಾಸನೆ ಇಲ್ಲದಿರುವವೇ ! ಅಥವಾ ಬಿಸಿಯಾಗಿ ಸುಡುತ್ತಿರುವವೇ ! ಇಲ್ಲವೆ ಕುಡಿಯಲಿಕ್ಕೆ ಆಗದಷ್ಟು ತಣ್ಣಾಗಿವೆಯೇ ! ಬೇರೆ ಜನಗಳ ದೃಷ್ಟಿ ತಾಕಿರುವದೇ ! ಕೆನೆಗಟ್ಟಿ ಕಾದಿಲ್ಲವೇ ! ಮಡಿಯಲ್ಲಿ ಏನಾದರೂ ಕೆಟ್ಟಿರುವದೇ ! ನಾನು ತರುವದಕ್ಕೆ ತಡಮಾಡಿದೆನೇ! ಅಥವಾ ನನ್ನ ಕಣ್ಣು ತಾಕಿರುವದೇ ! ಅಯ್ಯೋ ನಾನು ಮರೆಯಾಗಿದ್ದೆನಲ್ಲಾ ! ಕೆನೆಯನ್ನು ತೆಗೆದಿಟ್ಟು ಬರಿಯ ಹಾಲನ್ನು ತಂದಿರುವಳೆಂದು ಕೋಪವೇ ! ಇಲ್ಲವೆ ಇನ್ನೇನಾದರೂ ಅಪರಾಧವುಂಟೇ ! ಏನು ಕಾರಣ ಹಾಲನ್ನು ಕುಡಿಯಲೊಲ್ಲೆ ! ಜಾಗ್ರತೆ ಕುಡಿದು ಬಿಡು. ಆರಿದರೆ ಚನ್ನಾಗಿ ಇರುವದಿಲ್ಲ. ನಿನಗೆ ಇನ್ನು ಎಷ್ಟು ಬೇಕಾದರೂ ಈಗಲೇ ತಂದುಕೊಡುತ್ತೇನೆ. ತುಸು ಅವೆಯೆಂದು ಕೋಪಿಸಿಕೊಳ್ಳಬೇಡ. ನಮ್ಮ ಮನೆಯಲ್ಲಿ ಕರಿಗಡಬು, ಲಾಡು, ಚಿರೋಟಿ, ಪೇಣಿ, ಸಕ್ಕರೆ, ತುಪ್ಪ, ಜೇನುತುಪ್ಪ, ಬಾಳೆಹಣ್ಣು, ಅಂಜೂರ, ಕಿತ್ತಳೆ, ದ್ರಾಕ್ಷಿ ಮೊದಲಾದ ತಿನಿಸು ಅವೆ. ಇವುಗಳಲ್ಲಿ ಯಾವವು ಬೇಕಾಗಿದ್ದರೂ ತಂದು ಕೊಡುವೆನು. ಈ ಸಣ್ಣ ಹುಡುಗಿ ಸುಳ್ಳುಹೇಳುವಳೆಂದು ತಿಳಿಯಬೇಡ. ಈ ಹಾಲನ್ನು ಕುಡಿದರೆ ನಾಳೆ ನಡೆಯುವ ವೀರಭದ್ರನ ಉತ್ಸವಕ್ಕೆ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ಸ್ವಾಮೀ, ನನ್ನನ್ನು ಪರೀಕ್ಷಿಸಿ ನೋಡು. ನಾನು ಎಂದಿಗೂ ಸುಳ್ಳು ಹೇಳುವದಿಲ್ಲ. ನಾಳೆ ನಮ್ಮ ತಂದೆಯು ನನಗೆ ತಂದುಕೊಡುವ ಸೀರೆ, ಕುಪ್ಪಸ, ಉಂಗುರ, ಆಟದ ಗೊಂಬೆಗಳನ್ನು ನಿನಗೇ ಕೊಟ್ಟುಬಿಡುತ್ತೇನೆ. ಬೇಗನೆ ಕುಡಿದುಬಿಡು ಎಂದು ನಾನಾಬಗೆಯಿಂದ

ಹೇಳಿದರೂ ಪರಶಿವನು ತುಟಿಯನ್ನು ಕೂಡ ಅಲುಗಿಸದಿರಲು ಆ ಬಾಲಿಕೆಯು ಹಾಲಿನ ಬಟ್ಟಲನ್ನೂ, ಲಿಂಗವನ್ನೂ ದುರದುರನೆ ನೋಡುತ್ತ ಬಿಕ್ಕಳಿಸಿ ಅಳುತ್ತ ಲಿಂಗವನ್ನು ತಬ್ಬಿಕೊಂಡು ಗೋಳಾಡಿ ಆ ಹಾಲಿನ ಬಟ್ಟಲನ್ನು ದೂರವಾಗಿಟ್ಟು ಬೇಡಿಕೊಂಡು ಪುನಃ ಹತ್ತಿರಕ್ಕೆ ತಂದು ಇಟ್ಟು, ಬಳಲಿದ ಹೊಟ್ಟೆಯನ್ನು ಹಿಸುಕಿಕೊಳ್ಳುತ್ತ ಗಟ್ಟಿಯಾಗಿ ಹೆಸರುಗೊಂಡು ಓ ಕಲ್ಲಿನಾಥಾ, ಬಡಹುಡುಗಿ ಯೆಂದು ದಯೆತೋರದೆ ನನ್ನನ್ನು ನೆರಳುವಂತೆ ಮಾಡಿದೆಯಾ, ಹಾಲು ಕುಡಿ ಯುವ ವರೆಗೂ ನಾನು ಬಿಡುವದಿಲ್ಲ. ಈ ಹಾಲನ್ನು ಹಾಗೆಯೇ ಮನೆಗೆ ತೆಗೆದುಕೊಂಡು ಹೋದರೆ ಮನೆಯವರು ನನ್ನ ಪ್ರಾಣವನ್ನು ತೆಗೆದು ಕೊಂಡಾರು, ನಾನು ಇಲ್ಲಿಯೇ ಪ್ರಾಣ ಕಳೆದುಕೊಳ್ಳುವೆನೆಂದು ತನ್ನ ತಲೆ ಯನ್ನು ಲಿಂಗಕ್ಕೆ ಜೋರಿನಿಂದ ಡಿಕ್ಕಿ ಹೊಡೆಯಿಸಲು ಭಕ್ತವತ್ಸಲನಾದ ಪರ ಮೇಶ್ವರನು ಪ್ರತ್ಯಕ್ಷನಾಗಿ ಹಾಲನ್ನು ಕುಡಿದುಬಿಟ್ಟನು. ಇದನ್ನು ನೋಡಿ ಕೊಡಗೂಸು ಈಶ್ವರನಿಗೆ ಹಸುಹುಡುಗಿಯೆಂದು ಈ ರೀತಿ ಕಾಡಿದೆಯೋ! ಇರಲಿ ನಮ್ಮ ತಂದೆಯು ಬಂದನಂತರ ನೀನು ಮಾಡಿದ್ದನ್ನೆಲ್ಲ ಹೇಳುತ್ತೇನೆ. ಅವನೆದುರಿಗೆ ನನಗೂ ನಿನಗೂ ಮಾತು ಎಂದು ಹೇಳಿ ಮನೆಗೆ ಬಂದಳು. ಈ ಪ್ರಕಾರ ಆ ಹುಡುಗಿಯು ಪ್ರತಿದಿವಸ ಹಾಲು ತಂದು ಕಲ್ಲಿನಾಥನನ್ನು ಪೂಜಿಸಿ ಹಾಲು ಕೊಟ್ಟು ಅವನು ಕುಡಿದನಂತರ ಸಂತೋಷದಿಂದ ಬರಿಯ ಬಟ್ಟಲನ್ನು ತೆಗೆದುಕೊಂಡು ಹೋಗುತ್ತಿದ್ದಳು. ಹೀಗೆ ಆನಂದದಿಂದ ಬರಿಯ ಬಟ್ಟಲನ್ನು ಹಿಡಿದುಕೊಂಡು ಬರುತ್ತಿರುವಾಗ ಊರಿಗೆ ಹೋದ ತಾಯಿ-ತಂದೆ ಗಳು ಎದುರಿಗೆ ಬಂದರು. ಆಗ ತಂದೆಯು ಮಗಳೇ ಎಲ್ಲಿಗೆ ಹೋಗಿದ್ದೆ? ಬರಿಯ ಬಟ್ಟಲನ್ನು ತೆಗೆದುಕೊಂಡು ಎಲ್ಲಿಂದ ಬಂದೆ? ಎಂದು ಕೇಳಲು ಅಪ್ಪಾ, ನೀವು ಹೇಳಿದಂತೆ ದಿನಂಪ್ರತಿ ಈ ಬಟ್ಟಲದೊಳು ಹಾಲನ್ನು ತೆಗೆದುಕೊಂಡು ದೇವಾಲಯಕ್ಕೆ ಹೋಗಿ ಶಿವನನ್ನು ಪೂಜಿಸಿ ಹಾಲು ಕೊಡಲು ಶಿವನು ಹಾಲನ್ನು ಕುಡಿದನಂತರ ನಮುಸ್ಕರಿಸಿ ಈ ಬಟ್ಟಲನ್ನು ತೆಗೆದುಕೊಂಡು ಬರುವೆ ನೆನಲು ಏನು ? ಶಿವನು ಹಾಲು ಕುಡಿಯುವನೇ ? ಇದು ಸುಳ್ಳು. ಮಹಾ ಶಿವಭಕ್ತಿಸಂಪನ್ನರು ಪ್ರಾರ್ಥಿಸಿದರೂ ಉಣ್ಣುವದು ದುರ್ಲಭವಿರುವಾಗ ಈ ಬುದ್ಧಿಹೀನ ಚಿಕ್ಕಹುಡುಗಿಯ ಮಾತು ಕೇಳಿ ಹಾಲು ಕುಡಿಯುವನೇ? ಎಂದು ತಿಳಿದು ನಾಳೆ ನಾನೂ ಬರುವೆನು. ಶಿವನಿಗೆ ಹಾಲು ಕುಡಿಯಿಸು. ಎಂದು ಮಗ

ಳಿಗೆ ಹೇಳಿ ಮಗಳನ್ನು ಕರೆದುಕೊಂಡು ಮನೆಗೆ ಹೋದನು. ಮರುದಿವಸ ಉದಯ ಕಾಲದಲ್ಲಿ ಎಂದಿನಂತೆ ಬಟ್ಟಲಲ್ಲಿ ಹಾಲನ್ನು ತೆಗೆದುಕೊಂಡು ಆಕೂಡ ಗೂಸು ಶಿವಾಲಯಕ್ಕೆ ಬರಲು ಅವಳ ತಂದೆಯು ಸಹ ಬಂದು ಶಿವನ ಎದುರಿನಲ್ಲಿಯೇ ನಿಲ್ಲಲು ಆಕೆಯು ಹಾಲನ್ನು ಲಿಂಗದ ಎದುರಿನಲ್ಲಿಟ್ಟು ಕೈಮುಗಿದು ಇನ್ನು ಕುಡಿಯಯ್ಯ ಎಂದು ಪ್ರಾರ್ಥಿಸಲು ಹರನು ಆಕೆಯ ಮಹಿಮೆಯನ್ನು ಲೋಕಕ್ಕೆ ತಿಳಿಸುವದಕ್ಕಾಗಿ ಹಾಲು ಕುಡಿಯದಿರಲು ತಂದೆಯು ಸಿಟ್ಟಿನಿಂದ ಕಣ್ಣು ಕೆಂಪಗೆಮಾಡಿ ಎಲಾ-ದುಷ್ಟಳೇ, ದಿನಾಲು ಹಾಲು ನೀನೇ ಕುಡಿದು ಶಿವನು ಕುಡಿಯುತ್ತಿದ್ದಾನೆಂದು ಸುಳ್ಳು ಹೇಳುವಿಯಾ ? ಕಡುಪಾಪಿಯಾದ ನಿನ್ನನ್ನು ಕೊಲ್ಲದೆ ಬಿಡಲಾರೆನೆಂದು ಗರ್ಜಿಸುತ್ತ ಮೇಲೇರಿಬರಲು ಆ ಕೂಸು ಅಯ್ಯೋ! ಮಹೇಶ್ವರಾ, ಹಾ! ಮದೀಶ್ವರಾ! ನೀನು ಕಾಯಬೇಕು ಎಂದು ಭಯದಿಂದ ನಡುಗುತ್ತ ಒಳಲಿ ಬಾಯ್ಬಿಡಲಾಗಿ ದಯಾನಿಧಿಯಾದ ಅವಳನ್ನು ಸಮಾಧಾನ ಪಡಿಸುತ್ತ ಹಾಲು ಕುಡಿದು ಚಂದ್ರಶೇಖರನು ಪ್ರತ್ಯಕ್ಷನಾಗಿ ಅಂತಃಕರುಣ ದಿಂದ ಆ ಕೂಸನ್ನು ಎತ್ತಿ ಅಪ್ಪಿಕೊಂಡು ತಬ್ಬಿ ಮುದ್ದಾಡಿ ಶಿವನು ಅವಳನ್ನು ತನ್ನ ಹೃದಯದಲ್ಲಿರಿಸಿಕೊಳ್ಳುತ್ತಿರುವದನ್ನು ತಂದೆಯು ನೋಡಿ ಮಗಳೇ, ಮಗಳೇ ಎಂದು ಜಡೆಯನ್ನು ಹಿಡಿದೆಳೆದಾಗ್ಯೂ ಅವಳು ಲಿಂಗದಲ್ಲಿ ಹೊಕ್ಕು ಬಿಟ್ಟಳು. ಆದರೆ ಆ ಕೂದಲುಗಳು ಇಂದಿಗೂ ಆ ಶಿವಲಿಂಗದ ಹೊರಗೆ ಕಾಣುತ್ತಿರುವವು. ಆ ಕೂಸಿನ ಮುಗ್ಧಭಕ್ತಿಯನ್ನು ಕಂಡು ಶಿವಶರಣರು ಹೊಗಳುತ್ತಿದ್ದರು. ಈಗಲೂ ಆರುತಿಂಗಳಿಗೊಮ್ಮೆ ಆ ಲಿಂಗದ ಮೇಲೆ ಬೆಳೆಯುತ್ತಿರುವ ಕೂದಲುಗಳನ್ನು ಕತ್ತರಿಸಿ ತೆಗೆಯುತ್ತಿರುವರು. ಇದೂ ಅಲ್ಲದೆ ಮತ್ತೊಬ್ಬ ಮುಗ್ಧಭಕ್ತೆಯ ಕಥೆಯನ್ನು ಹೇಳುತ್ತೇನೆ ಕೇಳು.

## — ಬಿಜ್ಜಮಹಾದೇವಿಯ ಕಥೆಯು —

ಹಿಂದಕ್ಕೆ ಪರಮಶಿವಭಕ್ತಳಾದ ಬಿಜ್ಜ ಮಹಾದೇವಿಯೆಂಬ ಒಬ್ಬ ಶರಣೆಯು ಇದ್ದಳು. ಅವಳು ಒಂದು ದಿವಸ ಯೋಚಿಸುತ್ತಿರುವಾಗ ಅಹಾ ! ಶಂಕರನಿಗೆ ಹೆಂಡತಿ, ಮಕ್ಕಳು, ಬಂಧು-ಬಳಗ, ಸದ್ಭಕ್ತ ಸಮೂಹವೆಲ್ಲವೂ ಇರುವಾಗ ಆತನಿಗೆ ತಾಯಿಯು ಇಲ್ಲದಿರುವದು ಆಶ್ಚರ್ಯಕರವು. ತಾಯಿ ಇಲ್ಲದೆ ಈತನು ಹುಟ್ಟುವದು ಹೇಗೆ ಸಾಧ್ಯ ? ಈತನು ಹುಟ್ಟುತ್ತಲೇ ತಿ

ತಾಯಿಯು ಮರಣಹೊಂದಿರಬಹುದು. ಆದ್ದರಿಂದಲೇ ಈತನು ಭೂತಪ್ರೇತ ಗಳೊಡನೆ ಆಟವಾಡುತ್ತಿದ್ದಾನೆ. ತಲೆಯಲ್ಲಿಯ ಕೂದಲುಗಳು ಜಡೆಗಟ್ಟಿ ಹೋಗಿವೆ, ಕಣ್ಣು ಕೆಂಪಾಗಿರುವದೂ, ಮೈಯೆಲ್ಲಾ ಧೂಳಾಗಿರುವದೂ ತಾಯಿ ಇಲ್ಲದೆ ಇರುವ ಲಕ್ಷಣವನ್ನು ಸೂಚಿಸುತ್ತಲಿವೆ. ತಾಯಿ ಬದುಕಿದ್ದರೆ ಮಗನು ಈ ರೀತಿಯಾಗಿ ಹಾವುಗಳ ಆಭರಣವನ್ನೂ, ತಲೆಬುರುಡೆಗಳ ಮಾಲೆಯನ್ನೂ ಧರಿಸಿಕೊಂಡರೆ ಸುಮ್ಮನಿರುತ್ತಿದ್ದಳೇ? ವಿಷ ಕುಡಿಯುವವನ್ನೂ, ತಿರಿದು ಉಣ್ಣುವದನ್ನೂ, ಆನೆಯ ಚರ್ಮ, ಹುಲಿಯ ಚರ್ಮ ಹೊದ್ದುಕೊಳ್ಳುವ ದನ್ನೂ ಬಿಡಿಸದೆ ಇರುತ್ತಿದ್ದಳೇ? ಮಗನು ಗೃಹಕೃತ್ಯವನ್ನು ಮಾಡದೆ, ಯಾವಾಗಲೂ ತೊಡೆಯಮೇಲೆ ಒಬ್ಬಳು, ತಲೆಯ ಮೇಲೆ ಒಬ್ಬಳು ಹೆಂಡತಿ ಯರನ್ನು ಕೂಡ್ರಿಸಿಕೊಂಡು ಸ್ತ್ರೀಲೋಲನಾಗಿರುವವನ್ನು ನೋಡಿ ಸಹಿಸು ತ್ತಿದ್ದಳೇ? ಶೂರನಾದ ಅರ್ಜುನನು ಈತನಿಗೆ ಬಿಲ್ಲಿನಿಂದ ಹೊಡೆದನು, ಬೇಡರ ಕಣ್ಣಪ್ಪನು ಕಾಲಿನಿಂದ ಒದೆದನು, ಸಾಂಖ್ಯತೊಂಡನು ಕಲ್ಲುಗಳಿಂದ ಗಾಯ ಗೊಳಿಸಿದನು, ಬಾಣಾಸುರನು ತನ್ನ ಮನೆಯ ಬಾಗಿಲು ಕಾಯಲು ಇರಿಸಿ ಕೊಂಡನು. ನಂಬಿಯಣ್ಣನು ಕುಂಟಣಿಯ ಕೆಲಸಕ್ಕೆ ನಿಯಮಿಸಿಕೊಂಡನು. ಅಯ್ಯೋ! ಈತನಿಗೆ ತಾಯಿಯಿದ್ದರೆ ಹೀಗಾಗುತ್ತಿತ್ತೇ? ಇವನ ಬಾಲ್ಯದಲ್ಲಿ ಹಾಲು, ತುಪ್ಪ ಯಾರೂ ಕುಡಿಸದಿದ್ದಕಾರಣ ಪಿಟ್ಟವ್ವೆಯ ಮನೆಯ ಬಿಟ್ಟಿ ಕೆಲಸ ಮಾಡಿ ಹಿಟ್ಟುತಿಂದನು. ತಾಯಿಯಿಲ್ಲದೆ ಪರದೇಶಿಯಾಗಿ ಬೆಳೆದಿರುವ ಶಿವನಿಗೆ ಚಿಕ್ಕಂದಿನಲ್ಲಿ ತಾಯಿಯಿದ್ದು ಎಣ್ಣೆ-ಬೆಣ್ಣೆಯನ್ನೆತ್ತಿ ಮಜ್ಜನ ಮಾಡಿಸಿ, ಕಾಲಕಾಲಕ್ಕೆ ಹಾಲು ತುಪ್ಪ ಕುಡಿಸಿ ಸಾಕಿದ್ದರೆ ಇನ್ನೆಷ್ಟು ಚನ್ನಾಗಿ ಬೆಳೆಯು ತ್ತಿದ್ದನೋ? ಆದ್ದರಿಂದ ಈ ಸ್ವಾಮಿಗೆ ನಾನಾದರೂ ತಾಯಿಯಾಗಿ ಸಾಕು ತ್ತೇನೆಂದು ಯೋಚಿಸಿ ಅತ್ಯಂತ ಪ್ರೀತಿಯಿಂದ ತನ್ನ ಇಷ್ಟಲಿಂಗವನ್ನು ಶಿಶು ಎಂಬ ಭಾವದಿಂದ ನೋಡಿದಳು. ಆಗ ಶಂಕರನು ಆ ಮುಗ್ಧಭಕ್ತೆಯ ಭಕ್ತಿ ಯನ್ನು ಭೂಲೋಕದಲ್ಲಿ ಪ್ರಕಾಶಪಡಿಸಬೇಕೆಂದು ಯೋಚಿಸಿ ಎಳೆಯ ಮಗು ವಾಗಿ ಆ ಮಹಾದೇವಿಯ ತೊಡೆಯ ಮೇಲೆ ಮಲಗಿಕೊಂಡನು. ಆಕೆಯು ಶಿಶುವನ್ನು ನೋಡಿ ಬಹು ಸಂತಸಪಟ್ಟು ಮುದ್ದಾಡಿ, ಅರೆಗಣ್ಣನ್ನು ಮುಚ್ಚಿ ಕೈಕಾಲುಗಳನ್ನು ನೀಡಿ, ಅಳುತ್ತಿರುವ ಕಂದನಿಗೆ ಮೊಲೆಯನ್ನುಣ್ಣಿಸಿ ಹೊಸ ತೊಟ್ಟಿಲಲ್ಲಿ ಮೃದುವಾದ ಹಾಸಿಗೆಯ ಮೇಲೆ ಮಲಗಿಸಿ ಜೋಗುಳ ಹಾಡಿ

ತೂಗುವಳು. ಮಗುವು ನಿದ್ದೆ ತಿಳಿದೆದ್ದು ಕಣ್ಣನ್ನು ಬಿಟ್ಟು ಆಡುತ್ತಿರುವಾಗ ನೋಡಿ ಸಂತೋಷಗೊಂಡು ಎಣ್ಣೆಯೆತ್ತಿ ನಸುಬೆಚ್ಚಗಿರುವ ನೀರನ್ನು ಹೊಯ್ದು ತೊಡೆಯಮೇಲೆ ಮಲಗಿಸಿ ಕಣ್ಣು, ಕಿವಿ ಮೈಗಳನ್ನು ಮಡಿಬಟ್ಟೆಯಿಂದ ಒರೆಸಿ ಹಣೆಯಲ್ಲಿ ಭಸ್ಮವನ್ನು ಧರಿಸಿ, ತಟ್ಟಿ ಮಲಗಿಸುವಳು. ಮುದ್ದು ಮಗುವಿನ ಸೌಂದರ್ಯಕ್ಕೆ ಇತರರ ದೃಷ್ಟಿ ತಗಲಬಾರದೆಂದು ತನ್ನ ಎಡಗಾಲ ಹೆಬ್ಬೆರಳಿನ ಧೂಳಿಯನ್ನು ತೆಗೆದು ಶಿಶುವಿನ ಹಣೆಗೆ ಬಟ್ಟಿಡುವಳು. ಕಾಯ್ದು ಹಾಲಿನಲ್ಲಿ ಕಂಪಾದ ತುಪ್ಪವನ್ನು ಬೆರೆಯಿಸಿ ಬಟ್ಟಲಲ್ಲಿ ತುಂಬಿ ಕುಡಿಸುವಳು. ಆಗಾಗ ಕಂದನಿಗೆ ಚಕ್ಕಲಗುಲಿಯನ್ನಿಕ್ಕಿ ನಗಿಸಿ ಮಾತನ್ನು ಕೇಳಿ ನಗುತ್ತ ನೋಡಿ ತಬ್ಬಿಕೊಂಡು ಸಂತೋಷ ಉಕ್ಕಿ ಕುಚಿಗೆ ಹಾರುತ್ತಿರುವ ಮೊಲೆಯನ್ನು ಬಾಯಿಗೆ ಉಣ್ಣಿಸಿ ಸಾಕುತ್ತಲಿದ್ದಳು. ಹೀಗಿರಲು ಪರಶಿವನು ಇವಳ ಭಕ್ತಿಯನ್ನು ಪ್ರಕಾಶಪಡಿಸಬೇಕೆಂದು ಯೋಚಿಸಿ ಕಣ್ಣೂ, ಮುಖವೂ ಬೆರೆತು ಕೊಂಡು ಕೈಕಾಲುಗಳು ತಣ್ಣಗಾಗಿ, ಹೊಟ್ಟೆ ಉಬ್ಬರಾಗಿ ಮೊಲೆಯನ್ನು ಕುಡಿಯದೆ ಸಪ್ಪಗೆ ಮಲಗಿದ್ದನು. ಕಂದನ ಈ ಅವಸ್ಥೆಯನ್ನು ಮಹಾದೇವಿಯು ಕಂಡು ಎದೆಯು ದಮ್ಮನೆ ಹಾರಿ ಗಡಗಡನೆ ನಡುಗುತ್ತ ಬಾಯ್ಬಿಟ್ಟು ಅಕಟ ಕಟಾ ! ಮಗುವೇ, ನಿನಗೆ ಯಾವ ರೋಗ ಪ್ರಾಪ್ತವಾಯಿತಪ್ಪಾ ! ಎಷ್ಟೋ ಕಡೆಗೆ ಕದನ್ನವನ್ನು ತಿಂದುಉಂಡ ಕಾಲದಲ್ಲಿಯೂ, ವಿಷವನ್ನು ಕುಡಿದಾಗಲೂ ಬಾರದೆ ಇದ್ದ ರೋಗವು ಈಗ ಯಾವ ಕಾರಣದಿಂದ ಬಂದಿತು ? ಅಯ್ಯೋ ! ನನ್ನ ರತ್ನದ ಕನ್ನಡಿಯು ಮಾಸಿಹೋಯಿತೇ ? ನನ್ನ ಹೂವಿನ ಸರವು ಬಾಡಿಹೋಯಿತೇ ? ಎಂದು ಅತ್ಯಂತವಾಗಿ ಶೋಕಿಸಿ ಇದಕ್ಕೇನು ಮಾಡಲಿ ? ಔಷಧವನ್ನು ಬಲ್ಲ ಜನರು ಇಲ್ಲಿ ಇಲ್ಲವಲ್ಲಾ! ಎಂದು ಹಲಬುತ್ತ ಕೊರಗಿ, ಈ ನನ್ನ ಪ್ರಾಣ ಸ್ವರೂಪನಾದ ಸುಕುಮಾರನ ಸಂಕಟವನ್ನು ಕಣ್ಣಿನಿಂದ ನಾನು ನೋಡುವದಕ್ಕಿಂತಲೂ ಸಾಯುವದೇ ಲೇಸೆಂದು ಯೋಚಿಸಿ ಪ್ರಾಣ ತ್ಯಾಗಮಾಡಲು ಪ್ರಯತ್ನಿಸಿ ಕತ್ತಿಯಿಂದ ತನ್ನ ಕುತ್ತಿಗೆಯನ್ನು ಕತ್ತರಿಸುತ್ತಿರುವಷ್ಟರಲ್ಲಿ ಚಂದ್ರಶೇಖರನು ಮೆಚ್ಚಿ ಹೋ ! ಹೋ ! ನಿಲ್ಲಿಸು ಎಂದು ಕೈಹಿಡಿದು ತನ್ನ ನಿಜರೂಪದಿಂದ ಪ್ರತ್ಯಕ್ಷನಾಗಿ ನನಗೂ, ಸಕಲ ದೇವತೆಗಳಿಗೂ ನಿಜವಾಗಿ ನೀನೇ ತಾಯಿಯೆಂದು ಕೊಂಡಾಡಿ ನಿನಗೆ ಬೇಕಾದ ವರವೇನು ? ಹೇಳೆನ್ನಲು ಮಹಾದೇವಿಯು ನಕ್ಕು ಎಲೈ ಸ್ವಾಮಿಯೇ,

ನೀನು ನಿರೋಗಿಯಾಗಿದ್ದರೆ ನನಗೆ ಅದೇ ವರವು ಎಂದು ಹೇಳಲು ಪರಶಿವನು ಸಂತೋಷದಿಂದ ತಬ್ಬಿ ಎಲೌ ತಾಯಿಯೇ, ನಿನ್ನಂಥವಳು ನನಗೆ ತಾಯಿ ಇರಲು ನನ್ನ ಶರೀರವು ಆರೋಗ್ಯದಿಂದ ಇರುವದು ಏನಾಶ್ಚರ್ಯವು ? ಎಂದು ಹೇಳಿ ಆಕೆಗೆ ಚಿರಂಜೀವಿತ್ವವನ್ನು ದಯಪಾಲಿಸಿ ತಾನು ಕೈಲಾಸವನ್ನು ಸೇರಿ ದನು. ಎಂಬುದಾಗಿ ಬಸವೇಶ್ವರನು ಚೆನ್ನಬಸವೇಶ್ವರನಿಗೆ ನಿರೂಪಿಸಿ ಮತ್ತೊಬ್ಬ ಮುಗ್ಧನ ಕಥೆಯನ್ನು ಹೇಳುವದಕ್ಕೆ ಆರಂಭಿಸಿದನು.

## — ದೀಪದ ಕಲಿಯಾರನ ಕಥೆಯು —

ಶಿವಭಕ್ತಿಗೆ ತವರೂರಾಗಿ ಸಕಲಸಂಪತ್ತಿನಿಂದ ಸಮೃದ್ಧವಾದ ಚೋಳ ದೇಶದಲ್ಲಿ ಕಾಂಚಿಯೆಂಬ ಒಂದು ಪಟ್ಟಣವಿತ್ತು. ಅಲ್ಲಿ ಕಲಿಯಾರನೆಂ ಒಬ್ಬ ಶಿವಭಕ್ತನು ತಾನು ಒಂದು ದಿವಸ ಮತ್ತೊಂದು ಊರಿಗೆ ಹೋಗುವ ದಾರಿಯಲ್ಲಿ ಒಂದು ಶಿಥಿಲವಾಗಿರುವ ಶಿವಾಲಯವನ್ನು ಕಂಡು ಒಳಹೊಕ್ಕು ಅಲ್ಲಿರುವ ಶಿವಲಿಂಗವನ್ನು ನೋಡಿ ಎದೆಯು ಧಿಗಿಲ್ಲೆಂದು ಬೆವರಿ ಬೆರಗಾಗಿ ನಿಂತು ಅಯ್ಯೋ ! ಈ ಶಿವಮಂದಿರವು ಬಿದ್ದುಹೋಗುವದರಲ್ಲಿದೆ. ಕದ ಬಾಗಿಲುಗಳು ಮುರಿದು ಹೋಗಿವೆ. ಇಂತಹ ಹಳೆಯ ಗುಡಿಯಲ್ಲಿ ನನ್ನ ಸ್ವಾಮಿಯು ಮೂಢನ ಹಾಗೆ ಒಬ್ಬನೇ ಯಾಕೆ ವಾಸಮಾಡಿದ್ದಾನೆ? ಯಾವಾ ಗಲೂ ಅರ್ಧ ಶರೀರದಲ್ಲಿ ಸೇರಿಕೊಂಡಿದ್ದ ಪಾರ್ವತಿಯು ಎಲ್ಲಿದ್ದಾಳೆ ? ಏನು ಈ ಲಿಂಗದಲ್ಲಿ ಅಡಗಿಕೊಂಡಳೋ ? ಸೇವಿಸತಕ್ಕ ಪರಿವಾರದ ಜನಗಳು ಇಲ್ಲವಲ್ಲ ! ವಾಹನವಾದ ಮುದಿಎತ್ತು ಸಹ ಎಲ್ಲಿ ಬಿದ್ದಿರುವದೋ ಏನೋ! ಈ ಲಿಂಗಕ್ಕೆ ಯಾರೂ ಪೂಜಿಸಿದ ಗುರ್ತುಸಹ ಇಲ್ಲ. ಇದಲ್ಲದೆ ಈ ನಮ್ಮ ಶಿವನು ಅಂಧಕಾಸುರನನ್ನು ಕೊಂದನು. ತ್ರಿಪುರವನ್ನೂ, ಮನ್ಮಥನನ್ನೂ ಸುಟ್ಟನು. ದಕ್ಷನ ಯಜ್ಞದ ಊಟಕ್ಕೆ ಬಂದಿದ್ದ ದೇವತೆಗಳನ್ನೆಲ್ಲಾ ಹೊಡೆ ದನು. ವ್ಯಾಘ್ರಾಸುರ, ಗಜಾಸುರರನ್ನು ಸೀಳಿದನು. ಬ್ರಹ್ಮನ ತಲೆಯನ್ನು ಕತ್ತರಿಸಿದನು. ಹೀಗೆ ಇವನಿಗೆ ಅನೇಕ ಶತ್ರುಗಳಿರುವರು. ಆದಾಗ್ಯೂ ಈ ಹಾಳುಗುಡಿಯಲ್ಲಿ ಒಬ್ಬನೇ ವಾಸಮಾಡಿಕೊಂಡಿದ್ದಾನೆ. ಆ ಶತ್ರುಗಳು ಅಥವಾ ಅವರ ವಂಶದವರು ಬಂದು ಒಬ್ಬಂಟಿಗನಾದ ಇವನನ್ನು ಯಾವಾಗ ಏನು ಮಾಡುವರೋ ಆದಕಾರಣ ನಾನಾದರೂ ಈ ಸ್ವಾಮಿಯನ್ನು ಎಚ್ಚರಿಕೆಯಿಂದ

ಕಾದುಕೊಂಡಿರುತ್ತೇನೆ. ಇಷ್ಟುಜನ ಶತ್ರುಗಳಿದ್ದರೂ ಹೆದರದೆ ಈ ಕಾಡಿನಲ್ಲಿರುವ ಇವನ ಧೈರ್ಯ ಎಂತಹದು ? ನಾನು ಕೂಡ ಇವನಿಗೆ ಸಹಾಯಕನಾಗಿರುತ್ತೇನೆಂದು ನಿಶ್ಚಯಿಸಿ ತನ್ನ ಮನೆಯಲ್ಲಿಯ ಧನ, ಕನಕ, ವಸ್ತುವಾಹನಗಳನ್ನೆಲ್ಲ ವೆಚ್ಚಮಾಡಿ ಗಟ್ಟಿಯಾಗಿಯೂ, ಸುಂದರವಾಗಿಯೂ ದೇವಾಲಯ, ಗೋಪುರ, ಪ್ರಾಕಾರ, ಕಂದಕ ಮೊದಲಾದವುಗಳನ್ನು ಕಟ್ಟಿಸಿ ದೊಡ್ಡ ದೊಡ್ಡ ಕೋಟೆ ಕೊತ್ತಳಗಳನ್ನು ಫಿರಂಗಿಗಳನ್ನಿಡಲು ಅನುಕೂಲವಾಗುವಂತೆ ಮಾಡಿಸಿ ಕಲ್ಲು, ಗುಂಡು, ಮದ್ದು, ಆಯುಧ ಮೊದಲಾದವುಗಳನ್ನು ಸಿದ್ಧಪಡಿಸಿ, ಹಲವು ಬಗೆಯ ಧವಸ, ಧಾನ್ಯಗಳನ್ನು ಸಂಗ್ರಹಮಾಡಿಟ್ಟು ಯಾವ ಪರಾಕ್ರಮಶಾಲಿ ಬಂದರೂ ಜಯಿಸುವದಕ್ಕೆ ಅಶಕ್ಯವಾಗುವಂತೆ ಕೋಟೆಯನ್ನು ಕಟ್ಟಿಸಿದನು. ರಾತ್ರಿಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದ ವೀರಭಟರನ್ನು ಸಂಗಡಕರೆದುಕೊಂಡು ಗಂಟೆ ನಗಾರಿಗಳನ್ನು ಬಾರಿಸುತ್ತ ದೀಪದ ಬೆಳಕನ್ನು ಮಾಡಿಕೊಂಡು ಎಚ್ಚರ ! ಎಚ್ಚರ ! ಎಂದು ಗಟ್ಟಿಯಾಗಿ ಕೂಗುತ್ತ ಕೋಟೆಯ ಸುತ್ತಲೂ ತಿರುಗುತ್ತ ಪ್ರತಿದಿವಸ ಬೆಳಗಾಗುವತನಕ ಪಹರೆ ಮಾಡುತ್ತಿದ್ದನು. ಈ ರೀತಿಯಾಗಿ ಕೆಲವು ದಿನ ಕಳೆಯಲು ತನ್ನಲ್ಲಿದ್ದ ಹಣವೆಲ್ಲ ತೀರಿತು. ಸಂಬಳಕೊಡದೆ ಇದ್ದ ಮೂಲಕ ಕೋಟೆಯನ್ನು ಕಾಯುತ್ತಿದ್ದ ಆಳುಗಳೆಲ್ಲ ಬಿಟ್ಟುಹೋದರು. ಆದರೂ ದೀಪದ ಕಲಿಯಾರನೊಬ್ಬನೇ ಧೈರ್ಯದಿಂದ ಸೊಂಟಕ್ಕೆ ಗಂಟೆಗಳ ಸರ ಕಟ್ಟಿಕೊಂಡು, ಒಂದು ಕೈಯಲ್ಲಿ ಕತ್ತಿಯನ್ನು ಹಿಡಿದು, ಮತ್ತೊಂದು ಕೈಯಲ್ಲಿ ಪಂಜನ್ನು ಹಿಡಿದು ಘಲಕ್ಕೆಂದು ಶಬ್ದವನ್ನು ಮಾಡುತ್ತ ಕಾಲಲ್ಲಿ ಗಗ್ಗರವನ್ನು ತೊಟ್ಟು ಜಗ್ಗುಹಾಕಿ ನಡೆಯುತ್ತ ಗಳಬಳ ಮಾಡಿ ಗರ್ಜಿಸುತ್ತ ಬಹು ಸೈನ್ಯವಿರುವಂತೆ ತೋರ್ಪಡಿಸುತ್ತ ಆಳ್ವೇರಿಯ ಮೇಲೆ ತಿರುಗುತ್ತಿದ್ದನು. ಈ ಪ್ರಕಾರ ಕೆಲವು ದಿವಸ ಕಳೆಯಲು ತನ್ನಲ್ಲಿದ್ದ ಎಣ್ಣೆಯೂ ತೀರಿಹೋಯಿತು. ಬಳಿಕ ಕಾಡಿನಲ್ಲಿದ್ದ ಸೌದೆಯನ್ನು ತಂದು ಹೊತ್ತಿಸಿ ಬೆಳಕನ್ನು ಮಾಡಿ ಆಳ್ವೇರಿಯ ಮೇಲೆ ತಿರುಗುತ್ತಿರಲು ಕೆಲ ದಿವಸಗಳಲ್ಲಿ ಆ ಅಡವಿಯಲ್ಲಿಯ ಸೌದೆಗಳೂ ಮುಗಿದವು. ಕಡೆಗೆ ಹುಲ್ಲು, ಹಗ್ಗ, ಉಟ್ಟ ಬಟ್ಟೆ ಮೊದಲಾದವುಗಳನ್ನೆಲ್ಲ ಹೊತ್ತಿಸಿ ಅವೂ ಮುಗಿದ ಬಳಿಕ ಬೆಳಕಿಲ್ಲದ ಕತ್ತಲೆಯ ಸಮಯದಲ್ಲಿ ಶತ್ರುಗಳೇನು ಮೋಸಮಾಡುವರೋ ಎಂದು ಚಿಂತಿಸಿ ಒಂದು ಉಪಾಯವನ್ನು ಕಂಡು ತನ್ನ ತಲೆಯ ಕೂದಲನ್ನು ಹೊತ್ತಿಸಿ

ಈ ದಿವಸದ ಕತ್ತಲೆಯನ್ನು ಕೊನೆಗಾಣಿಸುತ್ತೇನೆಂದು ನಿಶ್ಚಯಿಸಿ ಕೂದಲನ್ನು ಹೊಸೆದು ಜಡಿಮಾಡಿ ಅದನ್ನು ದೀಪದಿಂದ ಹೊತ್ತಿಸಿ ಬೆಳಕನ್ನು ಮಾಡಿ ಕೊಂಡು ಆಳ್ವೇರಿಯ ಮೇಲೆ ತಿರುಗಿದನು. ತಲೆಯ ಕೂದಲುಗಳೆಲ್ಲ ಧಗ ಧಗನೆ ಉರಿದು ಜ್ವಾಲೆಯು ಮೇಲಕ್ಕೆದ್ದು ಆ ಬೆಂಕಿಯು ನೆತ್ತಿಯನ್ನು ಸುಡಲು ಆರಂಭಿಸಿತು. ಅಷ್ಟರಲ್ಲಿ ಆತನ ದೃಢಭಕ್ತಿಗೆ ಪರಶಿವನು ಮೆಚ್ಚಿ ಜಡೆಯಲ್ಲಿ ಗಂಗೆ, ತೊಡೆಯಲ್ಲಿ ಪಾರ್ವತಿ, ದೇಹದಲ್ಲಿ ಸರ್ಪಾಭರಣ ಧರಿಸಿ ನಂದಿಯ ನ್ನೇರಿ ಪ್ರತ್ಯಕ್ಷನಾಗಿ ಕಡೆಗಣ್ಣಿನ ಕರುಣಾರಸದಿಂದ ಆ ಭಕ್ತನ ತಲೆಗೂದಲ ಬೆಂಕಿಯನ್ನುಆರಿಸಿ ಆತನನ್ನುಬಿಗಿದಪ್ಪಿ ತಲೆಯನ್ನುಸವರಿ ನಿನ್ನಭಕ್ತಿಗೆ ಮೆಚ್ಚಿ ದೆನು ಬೇಕಾದವರವನ್ನು ಬೇಡೆನಲು ದೀಪದಕಲಿಯಾರನು ಮುಗುಳುನ ನಗುತ್ತ ಶಿವನ ಪಾದಗಳಿಗೆರಗಿ ನಿನ್ನ ಪಾದಸೇವೆಯೆಂಬ ಸಾಮ್ರಾಜ್ಯ ಸುಖ ನನಗಿರಲು ಬೇರೆ ವರ ಏತಕ್ಕೆ ? ಎಲೈ— ಸ್ವಾಮಿಯೇ, ಅಪ್ರತಿಮ ದುರ್ಗ ವೆನಿಸಿಕೊಂಡ ಕೈಲಾಸವು ಮೆರೆಯುತ್ತಿರುವಾಗ ನೀನು ಅದನ್ನು ಬಿಟ್ಟು ಈ ಕಾಡಿ ನಲ್ಲಿ ಬಡವನ ಹಾಗೆ ವಾಸಮಾಡಿರುವದು ಯೋಗ್ಯವಲ್ಲ. ಆದ್ದರಿಂದ ಅಲ್ಲಿ ಹೋಗೋಣ ಬೇಗನೆ ನಡೆ ಎಂದು ಹೇಳುತ್ತಿರುವಷ್ಟರಲ್ಲಿ ಸಿದ್ಧವಾಗಿ ನಿಂತ ಪುಷ್ಪಕ ವಿಮಾನದಲ್ಲಿ ಪರಶಿವನೂ, ಆ ಭಕ್ತನೂ, ಇತರ ಪರಿವಾರವೂ ಕುಳಿತು ದೇವಾಲಯ ಸಹಿತವಾಗಿ ಕೈಲಾಸಕ್ಕೆ ತೆರಳಿದರು. ಇದಲ್ಲದೆ ಮತ್ತೂ ಒಂದು ಕಥೆ ಹೇಳುತ್ತೇನೆ ಕೇಳು.

## — ನಾಟ್ಯ ನಮಿತ್ತಂಡಿಯ ಕಥೆಯು —

ಹಿಂದಕ್ಕೆ ಕಾಂಚಿ ಪಟ್ಟಣದಲ್ಲಿ ನಾಟ್ಯ ನಮಿತ್ತಂಡಿಯೆಂಬ ಒಬ್ಬ ಶಿವ ಭಕ್ತನಿದ್ದನು. ಆತನು ಒಂದು ದಿವಸ ಏಕಾಮ್ರನಾಥೇಶ್ವರನ ದೇವಾಲಯಕ್ಕೆ ಹೋಗಿರಲು ಅಲ್ಲಿರುವ ತಾಂಡವ ಮೂರ್ತಿಯನ್ನು ನೋಡಿ ಮನಸ್ಸಿನಲ್ಲಿ ಬಹು ಚಿಂತಾಕ್ರಾಂತನಾಗಿ ಕಳವಳಿಸುತ್ತ ಅಲ್ಲಿಯ ಪೂಜಾರಿಯಾದ ಹಾರುವನನ್ನು ನೋಡಿ— ಅಯ್ಯಾ, ಈ ಪರಶಿವನ ದೇಹವು ಮೂರುಕಡೆ ಡೊಂಕಾಗಿದೆ ಸೊಂಟವು ಉಡುಗಿಕೊಂಡಿದೆ. ಮುಖವು ಬಾಡಿದೆ. ಕುತ್ತಿಗೆಯು ನಲಿದು ಹೋಗಿದೆ. ಒಂದು ಪಾದವು ಮೇಲಕ್ಕೆದ್ದು ಮತ್ತೊಂದು ಭೂಮಿಯಲ್ಲಿ ನಿಂತಿದೆ. ಶಿರಸ್ಸು ಒಂದುಕಡೆ ಬಾಗಿದೆ. ಹಸ್ತಗಳು ಡೊಂಕುಡೊಂಕಾ

ಒಂದೊಂದು ಕಡೆಗೆ ಚಾಚಿಕೊಂಡಿವೆ. ಕಣ್ಣುಗಳು ಜೋಲು ಬಿದ್ದಿವೆ. ಜಡೆಗಳು ಕೆದರಿಕೊಂಡಿವೆ. ಆದಕಾರಣ ಈ ಸ್ವಾಮಿಗೆ ಯಾವ ರೋಗವು ಬಂದಿರುವದು ದಯವಿಟ್ಟು ಹೇಳುವಿರಾ ? ಎಂದು ಕೇಳಲು ವಂಚಕನಾದ ಆ ಪೂಜಾರಿಯು ನಸುನಗುತ್ತ ಈ ಪರಮೇಶ್ವರನಿಗೆ ವಾಯುರೋಗ ಉಂಟಾಗಿರುವದರಿಂದ ಹೀಗಾಗಿದೆ ಎಂದುನುಡಿಯಲು ಆ ಮಾತನ್ನುಕೇಳಿ ನಮಿತ್ತಂಡಿಯು ಬೆದರಿ ಬೆಂಡಾಗಿ ಹಾಗಾದರೆ ಈ ರೋಗವನ್ನು ಗುಣಪಡಿಸುವ ವೈದ್ಯರಿಲ್ಲವೇ? ಎಂದು ಕೇಳಲು ಪೂಜಾರಿಯು— ನಾನೇ ಗುಣಮಾಡಬಲ್ಲೆನು ಎನ್ನಲು ಆಗ ಮುಗ್ಧಭಕ್ತನು— ಅಯ್ಯಾ, ನನ್ನಲ್ಲಿರುವ ಆಸ್ತಿಯನ್ನೆಲ್ಲ ನಿಮಗೆ ಈಗಲೇ ತಂದುಕೊಡುತ್ತೇನೆ. ಈ ರೋಗವನ್ನು ಕಳೆಯಿರಿ. ಶಿವನ ಈ ರೋಗವು ಗುಣವಾದರೆ ನನ್ನ ಹೆಂಡತಿ, ಮಗ ಹಾಗೂ ನಾನೂ ಸಹ ನಿಮ್ಮ ದಾಸರಾಗಿ ಸೇವೆ ಮಾಡುತ್ತೇವೆ. ದಯವಿಟ್ಟು ಕೂಡಲೇ ಔಷಧ ಕೊಟ್ಟು ಗುಣಪಡಿಸು ಎಂದು ಹೇಳಿ ಆ ಹಾರುವನನ್ನು ಒಪ್ಪಿಸಿಕೊಂಡು ತನ್ನ ಆಸ್ತಿಯನ್ನೆಲ್ಲ ಮಾರಿ ಅಷ್ಟೆಲ್ಲ ಹಣವನ್ನು ತೆಗೆದುಕೊಂಡು ಬಂದು ಪೂಜಾರಿಗೆ ಕೊಟ್ಟನು. ಅವನು ಆ ದ್ರವ್ಯವನ್ನೆಲ್ಲ ತೆಗೆದುಕೊಂಡು ವಾಯುವಿನ ಎಣ್ಣೆಯನ್ನು ತಂದು ಕಾಯಿಸಿ ನಾಟ್ಯ ಮೂರ್ತಿಯ ದೇಹಕ್ಕೆ ಲೇಪಿಸಿ, ಔಡಲ ಎಲೆ, ಚಿತ್ರಮೂಲ ಮೊದಲಾದ ಮೂಲಿಕೆಗಳನ್ನು ತಂದು ಡೊಂಕಾಗಿರುವ ಸಂದುಗಳಲ್ಲಿ ಪೊಟ್ಟಣಕಟ್ಟಿ, ಕಾಯಿಸಿ, ಶಾಖವನ್ನು ಕೊಟ್ಟು, ವಾತರೋಗ ನಾಶಕಗಳಾದ ಗಿಡಮೂಲಿಕೆಗಳನ್ನು ಹಾಕಿ ಕಾಯಿಸಿದ ನೀರಿನಿಂದ ಅಭಿಷೇಕ ಮಾಡುತ್ತ ಹೀಗೆಯೇ ಕೆಲವು ದಿವಸ ಚಿಕಿತ್ಸೆ ಮಾಡಿದನು. ಆದರೆ ಶಿವನ ಶರೀರವು ಮೊದಲಿನಂತೆಯೇ ಇರಲು ನಾಟ್ಯ ನಮಿತ್ತಂಡಿಯು ಖಿನ್ನನಾಗಿ— ಎಲೈ ಬ್ರಾಹ್ಮಣನೇ, ನಿನ್ನ ಔಷಧದಿಂದ ಸ್ವಲ್ಪವೂ ಗುಣವಾಗದಿರಲು ಕಾರಣವೇನು ? ಎಂದು ಕೇಳಲು ಪೂಜಾರಿಯು— ಈ ರೋಗವು ಬಲಿತಿರುವದರಿಂದ ವೈದ್ಯರಿಗೆ ಅಸಾಧ್ಯವೆಂದು ಹೇಳಿದನು. ಈ ಮಾತನ್ನು ಕೇಳಿ ಆ ಮುಗ್ಧಭಕ್ತನು ಹಾ ! ಎಂದು ಮೂರ್ಛಿತನಾಗಿ ಹಾಗೆಯೇ ಎಚ್ಚತ್ತು ದುಃಖಿಸುತ್ತ ಅಯ್ಯೋ ! ಈ ರೋಗವು ಗುಣವಾಗದಿದ್ದರೆ ಶಿವನು ಖಂಡಿತವಾಗಿ ಸತ್ತುಹೋಗುವನು. ಇದನ್ನು ನಾನು ಹೇಗೆ ನೋಡಿಕೊಂಡಿರಲಿ ! ಅವನು ಸಾಯುವದಕ್ಕಿಂತ ಮೊದಲು ನಾನೇ ಪ್ರಾಣ ಬಿಡುವದು ಲೇಸೆಂದು ನಿಶ್ಚಯಿಸಿ

ಕತ್ತಿಯನ್ನು ತೆಗೆದುಕೊಂಡು ಝುಳಪಿಸಿ ಶಿವನ ಮುಂದೆ ನಿಂತು ತನ್ನ ಕೊ
ಳನ್ನು ಕೊಯ್ದುಕೊಳ್ಳುತ್ತಿರುವಷ್ಟರಲ್ಲಿ ಕೃಪಾಸಮುದ್ರನಾದ ಪರಮೇಶ್ವರ
ದಿವ್ಯರೂಪದಿಂದ ಪ್ರತ್ಯಕ್ಷನಾಗಿ, ಹೋ ! ಎಂದು ಕೈಯನ್ನು ಹಿಡಿದು ಕತ್ತಿ
ಯನ್ನು ಕಸಿದುಕೊಂಡು ಬಿಸುಡಿ ಆತನನ್ನು ಎತ್ತಿ ತಬ್ಬಿ ಮುದ್ದಾಡಿ ಎಲೈ
ಮುಗ್ಧನೇ, ನಿನಗೆ ಬೇಕಾದ ವರವನ್ನು ಬೇಡು ಕೊಡುತ್ತೇನೆನ್ನಲು ಆ ಶರಣನು
ಎಲೈ ಸ್ವಾಮಿಯೇ, ವರವು ಹಾಗೆಯೇ ಇರಲಿ. ನಿನ್ನ ಶರೀರವು ಡೊಂಕಾಗಿ
ರಲು ಕಾರಣವೇನು ? ನಿನಗಿರುವ ಈ ಅಸಾಧ್ಯರೋಗವು ಯಾವುದು ?
ಇದನ್ನು ಪರಿಹಾರ ಮಾಡುವಬಗೆ ಹೇಗೆ ? ಅದನ್ನು ಪೊಪಲು ನನಗೆ ಹೇಳು
ಎಂದು ಕೇಳಲು ಪರಶಿವನು ನಕ್ಕು ಅಯ್ಯಾ, ನಿನ್ನ ಭಕ್ತಿಯೇ ನನಗೆ ಔಷಧ
ವಾದದ್ದರಿಂದ ಈಗ ನನ್ನ ಶರೀರದ ರೋಗವು ಬಿಟ್ಟುಹೋಗಿದೆ ನೋಡು
ಎಂದು ಆ ತಾಂಡವ ಮೂರ್ತಿಯ ದೇಹವನ್ನು ನೆಟ್ಟಗೆ ಮಾಡಿ ತೋರಿಸಿದನು.
ಆಗ ಆ ಭಕ್ತನು ನೋಡಿ ನನ್ನ ಸ್ವಾಮಿಗೆ ರೋಗವು ಗುಣವಾದದ್ದರಿಂದ
ನಾನು ಬದುಕಿದೆನು. ಎಂದು ಅತ್ಯಾನಂದ ಹೊಂದಿ ಶಿವನ ಪಾದಗಳಿಗೆ
ನಮಸ್ಕರಿಸಿ ನಿನ್ನ ಶರೀರವು ಮೊದಲು ಏನು ಕಾರಣದಿಂದ ಡೊಂಕಾಗಿದ್ದಿತು?
ನನ್ನೊಡನೆ ನಿಜವಾಗಿ ಹೇಳೆನಲು ಶಂಕರನು ತಾನು ಲೀಲೆಯಿಂದ ಹೀಗೆ
ನಾಟ್ಯ ಮಾಡಿದೆನೆಂದು ನುಡಿಯಲು ಅದನ್ನು ಕೇಳಿ ಆ ನಮಿತ್ತಂಡಿಯು
ಆಶ್ಚರ್ಯಪಟ್ಟು ನಿನ್ನ ಅಂತಹ ನರ್ತನವನ್ನು ನಾನು ನೋಡಬೇಕು. ದಯ
ವಿಟ್ಟು ತೋರಿಸೆನ್ನಲು ಶಿವನು ತನ್ನ ಕುಣಿತವನ್ನು ಆ ಭಕ್ತನಿಗೆ ತೋರಿಸ
ಬೇಕೆಂದು ಹುಲಿಯ ಚರ್ಮದ ಕಾಸೆಕಟ್ಟಿ, ರಾಕ್ಷಸರ ಶಿರಸ್ಸುಗಳೆಂಬ ಗೆಜ್ಜೆಗ
ಳನ್ನು ಪಾದಗಳಿಗೆ ಕಟ್ಟಿ, ಕೈಯಲ್ಲಿ ಡಮರುಗವನ್ನು ಹಿಡಿದು ಬಾರಿಸುತ್ತ ಜಡೆ
ಗಳು ಬಿಚ್ಚಿ ಬೆನ್ನಮೇಲೆ ಹೊರಳಾಡುತ್ತಿರಲು ಮಹಾ ನಾಟ್ಯವನ್ನು ಮಾಡಿ
ದನು. ಆಗ ಪರಶಿವನ ಡಮರುಗ ಧ್ವನಿಗೂ, ನರ್ತನಕ್ಕೂ ಸರಿಯಾಗಿ ವಿಷ್ಣು
ಬ್ರಹ್ಮಾದಿ ದೇವತೆಗಳು ವಾದ್ಯಗಳನ್ನು ಬಾರಿಸಿದರು. ಆ ಮಹಾ ನಾಟ್ಯದ
ರಭಸದಿಂದ ಸಪ್ತಸಮುದ್ರಗಳು ತುಳುಕಾಡಿದವು. ಪರ್ವತಗಳು ಅಲ್ಲಾಡಿ
ದವು. ಆದಿಶೇಷನ ಹೆಡೆ ತಗ್ಗಿತು. ಆದಿ ಕೂರ್ಮನು ಕುಗ್ಗಿದನು. ಭೂಮಿ
ಯೆಲ್ಲ ನಡುಗಿತು. ನಕ್ಷತ್ರಗಳು ಉದುರಿದವು. ದೇವತೆಗಳು ಬೆದರಿದರು.
ಇಂತಹ ನಾಟ್ಯವನ್ನು ಆ ಭಕ್ತನು ಕಂಡು ಆಶ್ಚರ್ಯಪಟ್ಟು ಬೇಡ ! ಬೇಡ !

ಸ್ವಾಮೀ, ಇಷ್ಟೇ ಸಾಕು ಎಂದು ಬೇಡಿಕೊಳ್ಳುತ್ತಿರಲು ಲೋಕವು ಭಯಪಡ್ಡು ತ್ತಿದೆಯೆಂದು ವಿಷ್ಣು, ಬ್ರಹ್ಮಾದಿಗಳೂ ಬಿನ್ನವಿಸಿಕೊಳ್ಳಲು ಈಶ್ವರನು ನರ್ತನ ವನ್ನು ನಿಲ್ಲಿಸಿದನು. ಆಗ ಅಂತರಿಕ್ಷದಲ್ಲಿ ದೇವದುಂದುಭಿ ಧ್ವನಿ ಮಾಡುತ್ತಿ ರಲು, ಹೂವಿನ ಮಳೆ ಸುರಿಯುತ್ತಿರಲು ಆ ಭಕ್ತನನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ತೆರಳಿದನು. ಇದಲ್ಲದೆ ಮತ್ತೊಬ್ಬ ಭಕ್ತನ ಕಥೆಯನ್ನು ಹೇಳುತ್ತೇನೆ ಕೇಳೆಂದು ಬಸವೇಶ್ವರನು ಹೇಳತೊಡಗಿದನು.

## — ಬೇಡರ ಕಣ್ಣಪ್ಪನ ಕಥೆಯು —

ಈ ಭೂತಳದಲ್ಲಿ ಕಾಳಹಸ್ತಿಯೆಂಬ ಒಂದು ಶ್ರೇಷ್ಠ ಪರ್ವತವು ಶೋಭಿ ಸುತ್ತಿರುವದು. ಅಲ್ಲಿ ಸಿಂಹ, ಶಾರ್ದೂಲ, ಕರಿ, ವರಾಹ ಮೊದಲಾದ ನಾನಾ ಮೃಗಗಳೂ, ಆಲ, ಅಶೋಕ, ಮತ್ತಿ, ತೇಗು, ಬಿದಿರು, ಅಂಕೋಲೆ, ಪಾದರಿ ಮೊದಲಾದ ಅನೇಕ ಪ್ರಕಾರದ ವೃಕ್ಷಗಳೂ, ನವಿಲು, ಗಿಳಿ, ಕೋಗಿಲೆ, ಪಾರಿವಾಳ, ಗರುಡ, ಗಿಡಗ, ಹಂಸ ಮೊದಲಾದ ಪಕ್ಷಿಗಳೂ ನಿಬಿ ಡವಾಗಿದ್ದವು. ಆ ಅರಣ್ಯ ಮಧ್ಯದಲ್ಲಿ ಕಸ್ತೂರಿಯಿಂದ ಸಾರಿಸಿರುವ ಭೂಮಿಯೂ, ಆನೆಯ ತಲೆಯಲ್ಲಿಯ ಮುತ್ತಿನ ಗುದಿಗಳನ್ನು ಕಟ್ಟಿರುವ ತೋರಣ, ನಾಗರ ಹಾವುಗಳ ರತ್ನದ ದೀಪ, ಆನೆಯ ಕೋರೆ ಹಲ್ಲುಗಳ ಮಂಚ ಇವುಗಳಿಂದ ಒಪ್ಪುತ್ತಿರುವ ಬೇಡರ ಮನೆಗಳು ಅಲ್ಲಲ್ಲಿ ಮನೋಹರ ವಾಗಿದ್ದವು. ಅಲ್ಲಿ ಬಿಲ್ಲಿಗೆ ಸಿಂಜನಿಗಳನ್ನು ಅಣಿಮಾಡುತ್ತ, ಬಾಣಗಳನ್ನು ಮಸೆಯುತ್ತ, ಬಲೆಗಳನ್ನು ಹೆಣೆಯುತ್ತ, ಆನೆಯ ತಲೆಯ ಮುತ್ತುಗಳನ್ನು ಪೋಣಿಸುತ್ತ, ಗುಲಗಂಜಿಯ ಮಾಲೆಗಳನ್ನು ಮಾಡುತ್ತ, ನವಿಲುಗರಿಗಳನ್ನು ಸೇರಿಸಿ ಹುಲಿಯ ಚರ್ಮದಿಂದ ಟೊಪ್ಪಿಗೆಗಳನ್ನು ಮಾಡುತ್ತಿರುವ ಬೇಡರು ಒಪ್ಪುತ್ತಿದ್ದರು. ಇಂತಹ ಬೇಡರ ಗುಂಪಿಗೆ ಒಡೆಯನಾದ ಕಣ್ಣಪ್ಪನೆಂಬ ವನು ಶಿವಭಕ್ತಿ ಸಂಪನ್ನನಾಗಿ ಮುಗ್ಧ ಭಾವದಿಂದ ಇರುತ್ತ ಪರಾಕ್ರಮಶಾಲಿ ಯಾಗಿ ರಂಜಿಸುತ್ತಿದ್ದನು. ಆತನು ಒಂದು ದಿವಸ ಬೇಟೆಯಾಡುವದಕ್ಕಾಗಿ ಹಸುರಂಗಿಯನ್ನು ತೊಟ್ಟು, ಗುಲಗಂಜಿಯ ಆಭರಣವನ್ನು ಧರಿಸಿ, ಬಿಲ್ಲು ಬತ್ತಳಿಕೆಗಳನ್ನು ಹಿಡಿದುಕೊಂಡು ಬಲೆ, ಬಡಿಗೋಲು, ಗಾಣ, ಕತ್ತಿ, ಕಲ್ಲಿ ಮೊದಲಾದವುಗಳನ್ನು ತೆಗೆದುಕೊಂಡು ಸಂಗಡ ಬೇಡರನ್ನೂ, ಬೇಡತಿಯ

ರನ್ನೂ ಕರೆದುಕೊಂಡು ವನವನ್ನು ಪ್ರವೇಶಿಸಿ ಜಿಂಕೆ, ಮೊಲ, ಆನೆ, ಕರಡಿ, ಹಂದಿ, ಸಿಂಹ, ಹುಲಿ ಮೊದಲಾದ ಮೃಗಗಳನ್ನು ಬೇಟೆಯಾಡುತ್ತಿರಲು ಅಷ್ಟರಲ್ಲಿ ಸೂರ್ಯನು ಅಸ್ತಂಗತನಾಗಿ ಕತ್ತಲೆ ಕವಿಯಲು ಕಣ್ಣಪ್ಪನು ಸಂಧ್ಯಾಕಾಲದಲ್ಲಿ ಎಲ್ಲ ಕೆಲಸ ಮುಗಿಸಿಕೊಂಡು ಬಂದು ಮಾವಿನ ಮರದ ಕೆಳಗೆ ಚಿಗುರೆಲೆಗಳ ಹಾಸಿಗೆಯ ಮೇಲೆ ಮಲಗಿಕೊಂಡು ನಿದ್ರಿಸುತ್ತಿರಲು ಪರ ಶಿವನು ಜಂಗಮ ವೇಷವನ್ನು ಧರಿಸಿ ಸ್ವಪ್ನದಲ್ಲಿ ಬಂದು ಆ ಕಣ್ಣಪ್ಪನ ತಲೆಯ ಮೇಲೆ ಕೈಯನ್ನಿಟ್ಟು ಕಿವಿಯಲ್ಲಿ ಶಿವಮಂತ್ರವನ್ನು ಉಪದೇಶಿಸಿ "ಈ ವನದಲ್ಲಿ ಶಿವಲಿಂಗವಿರುವದು ಅದನ್ನು ನೀನು ಪೂಜಿಸು" ಎಂದು ಹೇಳಿ ಮರೆಯಾ ದನು. ಕೂಡಲೆ ಕಣ್ಣಪ್ಪನು ಎದ್ದು ಪರಶಿವನ ಮಾತನ್ನು ನಿಜವೆಂದು ನಂಬಿ ಸಂತೋಷಭರಿತನಾಗಿ ಬೆಳಿಗ್ಗೆ ಎದ್ದು ಎಲ್ಲ ಕೆಲಸ ಮುಗಿಸಿ ಅಲ್ಲಿಂದ ಹೊರಟು ಬರುತ್ತಿರಲು ಒಂದು ಕಾಲುದಾರಿಯು ಕಾಣಿಸಿತು. ಆ ದಾರಿಯಿಂದ ಬರಲು ತುಸು ದೂರದಲ್ಲಿ ಒಂದು ದೇವಾಲಯವು ಕಾಣಲು ಕನಸಿನಲ್ಲಿ ಕಂಡ ಫಲವು ನಿಜವಾಯಿತೆಂದು ಉತ್ಸಾಹಪಟ್ಟು ಅಲ್ಲಿಯ ಶಿವಲಿಂಗವನ್ನು ಕಂಡು ಸಂತೋಷಪಟ್ಟು ಅದನ್ನು ತನ್ನ ಪ್ರಾಣಲಿಂಗವೆಂದೇ ನಂಬಿ ಎಲೈ ಪರಶಿವನೇ, ನೀನು ಗಂಗೆ, ಗೌರಿಯರ ಕಲಹಕ್ಕೆ ಹೆದರಿ ಈ ಅರಣ್ಯಕ್ಕೆ ಬಂದು ನೆಲೆಸಿರು ವೆಯಾ ? ಅಥವಾ ನಿನ್ನ ವಾಹನನಾದ ನಂದೀಶ್ವರನಿಗೆ ಉತ್ತಮವಾದ ಆಹಾ ರವನ್ನು ಹುಡುಕಿಕೊಡಲು ಇಲ್ಲಿಗೆ ಬಂದೆಯಾ ? ಇಲ್ಲವೆ ಒಂದೇ ಕೈಯಲ್ಲಿ ಜಿಂಕೆ ಇರುವದು ಸರಿಯಲ್ಲವೆಂದು ತಿಳಿದು ಇನ್ನೊಂದು ಹುಡುಕಲು ಬಂದೆಯಾ ? ಮತ್ತು ನಿನ್ನ ಜಟಾಮುಕುಟದಲ್ಲಿ ಅಡಗಿಕೊಂಡಿದ್ದರೂ ಕ್ಷಯ ರೋಗಿಯಾದ ಚಂದ್ರನ ರೋಗಪರಿಹಾರಕ್ಕಾಗಿ ಔಷಧಿ, ಮೂಲಿಕೆಗಳನ್ನು ಹುಡುಕಲು ಬಂದಿರುವೆಯಾ ? ಹೊದ್ದುಕೊಳ್ಳಲು ಬಾರದೆ ಇರುವ ವ್ಯಾಘ್ರ ಚರ್ಮವು ಹಳೆಯದಾದ್ದರಿಂದ ಹೊಸದಾದ ಮತ್ತೊಂದು ಚರ್ಮವನ್ನು ಸಂಪಾದಿಸಬೇಕೆಂದು ಬಂದಿರುವೆಯಾ ? ಅಲ್ಲದೆ ನಾನಾ ಕಡೆಗಳಲ್ಲಿ ತಿರಿದು ತಿಂದರೂ ಹೊಟ್ಟೆ ತುಂಬದೆ ಕಾಡಿನಲ್ಲಿಯ ಹಣ್ಣುಹಂಪಲಗಳನ್ನು ರುಚಿ ನೋಡಿ ಸವಿಯುವದಕ್ಕೇನಾದರೂ ಹೊರಟು ಬಂದೆಯಾ ? ಅಥವಾ ಕಾಡಿ ನಲ್ಲಿ ತಪಸ್ಸು ಮಾಡುತ್ತಿದ್ದ ಅರ್ಜುನನಿಗೆ ಪ್ರತ್ಯಕ್ಷನಾಗಿ ದರ್ಶನವನ್ನು ಕೊಟ್ಟು ಕಾಪಾಡಿದಂತೆ ನನ್ನನ್ನು ಉದ್ಧಾರ ಮಾಡುವವಕ್ಕಾಗಿ ಬಂದಿರು

ವೆಯಾ ? ನಿಜವಾದ ಮಾತುಗಳನ್ನು ಕೂಡಲೆ ಹೇಳು. ನನಗೆ ಯಾವದೂ ತಿಳಿಯದು. ಅನೇಕ ಬಗೆಯ ದುಷ್ಟ ಮೃಗಗಳಿಂದ ಕೂಡಿದ ಈ ಕಾಡಿನಲ್ಲಿ ನೀನೊಬ್ಬನೇ ಇರುವದು ಸರಿಯಲ್ಲ. ಯಾಕಂದರೆ ನಿನ್ನ ಆಭರಣವಾದ ಸರ್ಪವನ್ನು ಈ ಆರಣ್ಯದ ನವಿಲುಗಳು ತುಂಡು ಮಾಡದೆ ಬಿಡುವವೇ ? ಶಿರೋಭೂಷಣವಾದ ಚಂದ್ರನನ್ನು ಅಮೃತದ ಕಾರಣದಿಂದ ಘಟಸರ್ಪವು ನುಂಗದೆ ಬಿಡುವದೇ ? ಹಸ್ತದ ಆಭರಣವಾದ ಜಿಂಕೆಯನ್ನು ಕೊಬ್ಬಿದ ಹುಲಿ ತಿನ್ನದೆ ಬಿಡುವದೇ? ಇದೆಲ್ಲವನ್ನು ಯೋಚಿಸದೆ ಹುಚ್ಚುತನದಿಂದ ಈ ಕಾಡಿನಲ್ಲಿ ಒಬ್ಬನೇ ಏಕೆ ಕುಳಿತಿರುವೆ ? ನನ್ನ ಮನೆಗೆ ಬಾ. ನಿನಗೆ ಬಗೆಬಗೆಯ ರುಚಿಯ್ರ ಮಾಂಸಗಳನ್ನೂ, ಇಂಪಾದ ಆಕಳ ಹಾಲನ್ನೂ, ಸೊಂಪಾಗಿ ಬೆಳೆದು ಕಳಿತಿರುವ ಹಣ್ಣುಗಳನ್ನೂ, ಹೊಸದಾಗಿ ತಂದಿಟ್ಟಿರುವ ಬಿದಿರಕ್ಕಿಯನ್ನೂ, ಮಧುರವಾದ ಜೇನುತುಪ್ಪವನ್ನೂ, ಉಣ್ಣುವದಕ್ಕೆ ಕೊಟ್ಟು ಕಾಡಿನಲ್ಲಿ ವಿಶಿಷ್ಟ ಸುವಾಸನೆ ಬೀರುವ ಮೊಲ್ಲೆ, ಮಲ್ಲಿಗೆ ಮೊದಲಾದ ಹೂಗಳನ್ನು ಮುಡಿಯೊಳಗಿಟ್ಟು, ನಾನಾವಿಧವಾದ ಶೈತ್ಯೋಪಚಾರಗಳಿಂದ ಪೂಜಿಸುತ್ತೇನೆ. ಇದು ಸುಳ್ಳು ಮಾತು ಅಲ್ಲ. ನಿಜವಾಗಿಯೂ ನಿನ್ನನ್ನು ಭಕ್ತಿಯಿಂದ ಪೂಜಿಸುವೆನು. ಎಂದಿಗೂ ಅಸಡ್ಡೆ ಮಾಡುವದಿಲ್ಲ. ಹಾಗು ಚಳಿಗಾಲದಲ್ಲಿ ಬೆಚ್ಚಗಿರುವ ನಿಲುವಂಗಿಯನ್ನೂ, ಆನೆಗಳ ತಲೆಯ ಮುತ್ತಿನ ಸರವನ್ನೂ, ಹವಳಗಳಿಗಿಂತಲೂ ಮಿಗಿಲಾದ ಗುಲಗಂಜಿಯ ಆಭರಣಗಳನ್ನೂ, ಪುನುಗು, ಕಸ್ತೂರಿ, ಶ್ರೀಗಂಧ, ಅಗಿಲು ಮೊದಲಾದ ಸುವಾಸಿಕ ದ್ರವ್ಯಗಳನ್ನೂ, ಆಟವಾಡಿಸುವದಕ್ಕೆ ಗಿಳಿ, ನವಿಲು, ಜಿಂಕೆ, ಕೋಗಿಲೆ ಮೊದಲಾದ ಕಾಡು ಪ್ರಾಣಿಗಳನ್ನೂ ಸಿದ್ಧಮಾಡಿಕೊಡುತ್ತೇನೆ. ಇನ್ನು ಅರಗಳಿಗೆಯೂ ಇಲ್ಲಿರದೆ ಮನೆಗೆ ನಡೆ. ಎಂದು ನಾನಾ ಬಗೆಯಿಂದ ಹೇಳಿದರೂ ಈಶ್ವರನು ಮಾತಾಡದಿರಲು ಇತನು ಬಹಳ ದಿವಸಗಳಿಂದ ಊಟವಿಲ್ಲದೆ ಕಾಡಿನಲ್ಲಿ ಕುಳಿತಿರುವದರಿಂದ ಮಾತಾಡುವದಕ್ಕೂ ಶಕ್ತಿಯಿಲ್ಲವಾಗಿದೆ. ಆದ್ದರಿಂದ ರಸವತ್ತಾದ ಒಳ್ಳೆಯ ಹೊಸ ತಿನುಸನ್ನು ತಂದುಕೊಡಬೇಕೆಂದು ಯೋಚಿಸಿ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಆ ಸ್ಥಳ ಬಿಟ್ಟುಹೋಗುವದಕ್ಕೆ ಮನಸ್ಸು ಬಾರದಿದ್ದರೂ ಶಂಕರನಿಗೆ ನಮಸ್ಕರಿಸಿ ಮುಂದಕ್ಕೆ ಹೊರಟನು. ಪೂರ್ವಕಾಲದಲ್ಲಿ ಮಹಾಕಾಯ, ಸುಂದರ ಎಂಬ ಇಬ್ಬರು ರಾಕ್ಷಸರು ಪರೋಪಕಾರಕ್ಕಾಗಿ ತಮ್ಮ ದೇಹವನ್ನು

ನೀಗಿ ಲೋಕದಲ್ಲಿ ಪ್ರಸಿದ್ಧರಾದ ಶಿಬಿಚಕ್ರವರ್ತಿ, ಕರ್ಣ ಮೊದಲಾದವ
ತಾವೂ ಕೀರ್ತಿಯನ್ನು ಪಡೆಯಬೇಕೆಂದು ಯೋಚಿಸಿ ಪರಶಿವನನ್ನು ಕು
ಧ್ಯಾನ ಮಾಡಿದರು. ಆಗ ಈಶ್ವರನು ಪ್ರತ್ಯಕ್ಷನಾಗಿ ನಿಮ್ಮ ಇಷ್ಟಾ
ಳನ್ನು ಕೇಳಿಕೊಂಡರೆ ಕೊಡುತ್ತೇನೆಂದು ಹೇಳಲು ಎಲೈ— ಪರಮೇಶ್ವ
ಪೂರ್ವದಲ್ಲಿ ನಿನ್ನಿಂದ ಮರಣಹೊಂದಿ ಮೋಕ್ಷವನ್ನೂ, ಕೀರ್ತಿಯನ್ನೂ ಪ
ಅಂಧಕಾಸುರ, ಗಜಾಸುರ, ಜಲಂಧರ ಮೊದಲಾದ ರಾಕ್ಷಸರಂತೆ ನಾ
ಮೋಕ್ಷವನ್ನು ಪಡೆಯಬೇಕೆಂಬ ಆಸೆ ಇರುವದರಿಂದ ನೀನು ನಮ್ಮ ಮಾ
ವನ್ನು ಪ್ರೀತಿಯಿಂದ ಭುಂಜಿಸಬೇಕೆಂದು ಕೇಳಿಕೊಂಡರು. ಆಗ ಪರಮೇ
ರನು ಅವರ ಭಕ್ತಿಗೆ ಮೆಚ್ಚಿ ಎಲೈ— ದೈತ್ಯರೇ, ನೀವಿಬ್ಬರೂ ಕಾಳ
ಪರ್ವತದ ಅರಣ್ಯದಲ್ಲಿ ಜಿಂಕೆಗಳಾಗಿ ಹುಟ್ಟಿರಿ. ಅಲ್ಲಿರುವ ಒಬ್ಬಾನೊ
ಬೇಡನು ನಿಮ್ಮಿಬ್ಬರನ್ನು ಸೀಳಿ ಮಾಂಸವನ್ನು ತಂದು ನನಗೆ ತಿನ್ನಿಸು
ಎಂದು ಸಂತೋಷದಿಂದ ನುಡಿದ ಪರಶಿವನ ವಾಕ್ಯವನ್ನು ಕೇಳಿ ಆ ದೈತ್ಯ
ಬ್ಬರೂ ತಮ್ಮ ಬಂಧು-ಮಿತ್ರರೊಡನೆ ಆ ಕಾಳಹಸ್ತಿಯ ಅರಣ್ಯದಲ್ಲಿ ಜಿಂ
ಳಾಗಿ ವಾಸಮಾಡುತ್ತ ಎಂದಿಗೆ ಮುಕ್ತಿಯಾಗುವದೋ ಎಂದು ದಾರಿ ಕಾ
ತ್ತಿದ್ದರು. ಈ ಎರಡು ಜಿಂಕೆಗಳನ್ನು ಕಣ್ಣಪ್ಪನು ನೋಡಿ ಬಾಣ ಪ್ರಯೋ
ಮಾಡಿ ಆ ಜಿಂಕೆಗಳನ್ನು ಕೆಡವಿ ಅವುಗಳನ್ನು ಕೊಯ್ದು ಕೊಬ್ಬಿದ ಮಾ
ವನ್ನು ಆಯ್ದುಕೊಂಡು ತನಿಗೆಂಡದಲ್ಲಿ ಹದವಾಗಿ ಸುಟ್ಟು ಇಂಪಾಗಿ ಕೆ
ರುವ ಖಂಡಗಳನ್ನು ತುಂಡು ತುಂಡು ಮಾಡಿ ತಾವರೆಯ ಎಲೆಯ ದೊನ್ನೆ
ಲ್ಲಿಟ್ಟುಕೊಂಡು ಬಿಲ್ವಪತ್ರಿ, ಎಕ್ಕ, ಕಕ್ಕೆ ಮೊದಲಾದ ಕಾಡು ಹೂಗಳ
ತಲೆಯ ಮೇಲೆ ಹೊತ್ತುಕೊಂಡು ತಿಳಿಯಾಗಿ ರುಚಿಯಾಗಿರುವ ನೀರ
ಬಾಯಿಯಲ್ಲಿ ತುಂಬಿಕೊಂಡು ಆ ಶಿವಲಿಂಗದ ಹತ್ತಿರ ಬಂದು ತನ್ನ ಕೆ
ಕಾಲಿನಿಂದ ಆ ಲಿಂಗದ ಮೇಲಿದ್ದ ಹೂಗಳನ್ನು ತೊಡೆದು, ಬಾಯಿಯಲ್ಲಿ
ನೀರನ್ನು ಲಿಂಗದ ಮೇಲೆ ಉಗುಳಿ, ತಲೆಯ ಮೇಲಿದ್ದ ಹೂಗಳನ್ನು ಲಿಂಗ
ಮುಡಿಸಿ, ಸುಟ್ಟುತಂದಿದ್ದ ಮಾಂಸವನ್ನು ಮುಂದಿಟ್ಟು, ಶಿವಭಕ್ತಿಯುಳ್ಳವನಾ
ಪರಮ ಸಂತೋಷದಿಂದ ಪೂಜೆ ಮಾಡಿದನು. ಈ ಬೇಡನು ಮಾಡಿದಂತ
ಹೊಸತರದ ಪೂಜೆಯನ್ನು ಅದುವರೆಗೂ ಯಾರೂ ನೋಡಿಯೂ ಇಲ್ಲ
ಕೇಳಿಯೂ ಇರಲಿಲ್ಲ. ಇನ್ನು ಮುಂದೆ ಮಾಡತಕ್ಕವರೂ ಇಲ್ಲವೆಂಬಂತೆ

ಈಶ್ವರನಿಗೆ ಆಶ್ಚರ್ಯವನ್ನುಂಟು ಮಾಡುತ್ತಿದ್ದಿತು. ಹೀಗೆ ಮಾಡಿದ ಪೂಜೆಯು ಈಶ್ವರನಿಗೆ ಮಹಾನಂದವನ್ನುಉಂಟುಮಾಡಿತು. ಇಂತಹಆನಂದವು ಮತ್ತಾವ ಭಕ್ತನಿಂದಲೂ ಉಂಟಾಗುವದಿಲ್ಲವೆಂದು ಪರಶಿವನು ಪಾರ್ವತಿಗೆ ಹೇಳಿದನು. ಕಣ್ಣಪ್ಪನೂ ಸಹ ಶಿವಪೂಜೆಯಿಂದ ಸಂತುಷ್ಟನಾಗಿ ಆನಂದ ಭಾಷ್ಪವು ಉಕ್ಕಿಸುರಿಯುತ್ತಿರಲು, ಹೊಗಳಿ, ಕುಣಿದು, ಸ್ತೋತ್ರರೂಪವಾಗಿ ನಾನಾ ಮಾತುಗಳನ್ನು ಆಡುತ್ತ ಸಂತೋಷ ಹೊಂದಿ ತನ್ನ ಬೇಟೆಗೆ ಹೊರಟು ಹೋದನು. ಇತ್ತ ಸೂರ್ಯನು ನೆತ್ತಿಯಮೇಲೆ ಬರಲು ಆ ಶಿವಲಿಂಗದ ಪೂಜಾರಿಯು ಪೂಜೆಮಾಡುವದಕ್ಕಾಗಿ ಆ ದೇವಸ್ಥಾನವನ್ನು ಹೊಕ್ಕು ನೋಡ ಲಾಗಿ ಒಂದು ಕಡೆಗೆ ಮೂಳೆಗಳೂ, ಇನ್ನೊಂದು ಕಡೆ ಚರ್ಮ, ಕೂದಲು ಗಳೂ, ಮತ್ತೊಂದು ಕಡೆ ಮಾಂಸದಿಂದ ಸೋರಿದ್ದ ರಕ್ತವೂ, ಬೇರೊಂದು ಕಡೆಗೆ ಅಸಹ್ಯ ಪದಾರ್ಥಗಳೂ ಲಿಂಗದ ಬಳಿಯಲ್ಲಿಯೂ, ಅದರ ಮೇಲೆಯೂ ಚೆಲ್ಲಿರುವ ಕಾಡು ಹೂಗಳನ್ನೂ ನೋಡಿ ಯಾರೋ ನೀಚರಾದ ಕಾಡಬೇಡರು ಈ ರೀತಿ ದುಷ್ಕೃತ್ಯ ಮಾಡಿರುವರೆಂದು ತಿಳಿದು ಮತ್ತೊಂದು ವೇಳೆ ಅವರು ಇಲ್ಲಿಗೆ ಬಂದರೆ ಅವರನ್ನು ಹಿಡಿದು ಶಿಕ್ಷಿಸಬೇಕೆಂದು ಯೋಚಿಸಿ ಆ ಸ್ಥಳವನ್ನೆಲ್ಲ ಗೋಮಯದಿಂದ ಸಾರಿಸಿ, ಮಂತ್ರಪೂತ ಜಲವನ್ನು ಸಿಂಪಡಿಸಿ, ಪಂಚಬ್ರಹ್ಮ ಮಂತ್ರದಿಂದ ಪುಣ್ಯಾಹವನ್ನು ನೆರವೇರಿಸಿ, ಬಹುಭಕ್ತಿ, ಆದರದಿಂದ ಆ ಶಿವ ಲಿಂಗಕ್ಕೆ ಪಂಚಾಮೃತ ಅಭಿಷೇಕಾದಿಗಳನ್ನುರುದ್ರಸೂಕ್ತ,ಮಹನ್ಯಾಸ,ಪುರುಷ ಸೂಕ್ತ ಮೊದಲಾದ ಮಂತ್ರಗಳಿಂದ ಸ್ತುತಿಸಿ ಷೋಡಶೋಪಚಾರ ಪೂಜೆ ಗಳನ್ನು ಸಮರ್ಪಿಸಿ ಆ ಕಳ್ಳನನ್ನು ಹಿಡಿಯುವದಕ್ಕಾಗಿ ಲಿಂಗದ ಹಿಂಭಾಗದಲ್ಲಿ ಅಡಗಿಕೊಂಡನು. ಎಂದಿನಂತೆ ಕಣ್ಣಪ್ಪನು ಶಿವದೇವಾಲಯವನ್ನು ಹೊಕ್ಕು ಶಿವಲಿಂಗದ ಪೂಜೆಯನ್ನು ಯಥಾಕ್ರಮದಿಂದ ಮಾಡಿದುದನ್ನು ಪೂಜಾರಿಯು ನೋಡಿ ಆಹಾ ! ಎಂತಹ ತುಚ್ಛ ಪೂಜೆಯನ್ನು ಕಣ್ಣಾರೆ ನೋಡಿದೆನು. ಶಿವ ನಿಗೆ ಅಮಂಗಲಕರವಾದ ಮುಕ್ಕಳಿಸಿದ ನೀರೂ, ಮಾಂಸದ ನೈವೇದ್ಯವೂ, ಕೆರವಿನ ಕಾಲಿನಿಂದ ಝಾಡಿಸುವದೂ ಪ್ರೀತಿಯಾದ ಪೂಜೆಯಾಯಿತೇ ? ಇದೆಲ್ಲವನ್ನು ಶಿವನು ಸಹಿಸಿ ಸುಮ್ಮನೆ ಇರುವನಲ್ಲಾ ! ಹಿಂದೆ ಅರ್ಜುನನ ಬಿಲ್ಲಿನೇಟನ್ನೂ, ಸಾಂಖ್ಯಕೊಂಡನ ಕಲ್ಲಿನ ಪೆಟ್ಟುಗಳನ್ನೂ ಸಹಿಸಿ ಸುಮ್ಮ ನಿದ್ದಂತೆ ಈಗ ಈ ಬೇಡನ ಕಾಲಿನೇಟಿಗೆ ಹೇಗೆ ಹೇಸುವನು? ಈ

ಕಾಳ ಹಸ್ತಿಯಲ್ಲಿ ಪೂರ್ವಕಾಲದಲ್ಲಿ ಒಂದು ಜೇಡನ ಹುಳವು ಈಶ್ವರನಿ ನೆರಳಾಗಬೇಕೆಂದು ತನ್ನ ತಂತುವಿನಿಂದ ಮರೆಮಾಡಿದ್ದನ್ನು ಒಂದು ಆನೆಯು ನೋಡಿ ಅದನ್ನು ಕಿತ್ತುಹಾಕಿ ಸೊಂಡಿಲಲ್ಲಿ ತಂದ ನೀರಿನ ಅಭಿಷೇಕ ದಿಂದಲೂ, ಸಂಗಡತಂದಿದ್ದ ತಾವರೆ ಹೂಗಳಿಂದ ಪೂಜಿಸುತ್ತಿರುವದರಿಂದಲೂ ಸಂತೋಷಪಡುತ್ತಿದ್ದುದನ್ನು ಆ ಜೇಡರ ಹುಳವು ನೋಡಿ ಆ ಆನೆಯ ಸೊಂಡಿ ಲಿನ ಮಾರ್ಗವಾಗಿ ಅದರ ಮೆದುಳನ್ನು ಸೇರಿ ಅದನ್ನು ಬಗೆದು ಕೊಂದು ತಾನೂ ಮೃತಪಟ್ಟಿತು. ಆಗ ಆ ಕಾಳ ಹಸ್ತೀಶ್ವರನು ಅವುಗಳಿಗೆ ಮುಕ್ತಿ ಯನ್ನು ಕೊಡಲಿಲ್ಲವೇ ? ಆದಕಾರಣ ಈ ಬೇಡನು ಎಷ್ಟು ಬಲವುಳ್ಳವನಾ ದ್ದರೂ ಚಿಂತೆಯಿಲ್ಲ ಇವನನ್ನು ಕೊಲ್ಲುವದೇ ಯೋಗ್ಯವೆಂದು ಯೋಚಿಸಿ ಅವನು ಹೊರಟು ಹೋದ ಮೇಲೆ ತಾನೂ ತನ್ನ ಮನೆಗೆ ಹೋಗಿ ಹರಿ ವಾದ ಒಂದು ಕತ್ತಿಯನ್ನು ಹುಡುಕಿ ತೆಗೆದುಕೊಂಡು ತನ್ನ ಸ್ವಾಮಿಯಾ ಈಶ್ವರನಿಗೆ ಇಂಥ ಅಪಚಾರಗಳನ್ನು ಮಾಡಿದ ಬೇಡನನ್ನು ಕೊಲ್ಲದ ಹೊರತು ಊಟಮಾಡುವದಿಲ್ಲವೆಂದು ಹಟಮಾಡಿ ಶಿವದೇವಾಲಯಕ್ಕೆ ಬಂದು ಲಿಂಗದ ಹಿಂಭಾಗದಲ್ಲಿ ಮರೆಯಾಗಿ ಅಡಗಿದ್ದನು. ಎಂದಿನಂತೆ ಕಣ್ಣಪ್ಪನು ತನ್ನ ಪೂಜೆಮಾಡಲು ಒಳಗೆ ಬರಲು ಭಕ್ತವತ್ಸಲನಾದ ಶಿವನು ಕಣ್ಣಪ್ಪನ ಭಕ್ತಿ ಯನ್ನು ಅರ್ಚಕನಿಗೆ ತೋರಿಸಬೇಕೆಂದು ಯೋಚಿಸಿ ತನ್ನ ಮುಖವನ್ನು ಲಿಂಗದಲ್ಲಿ ಮೂರ್ತೀಭವಿಸುವಂತೆ ಎರಡೂ ಕಣ್ಣುಗಳನ್ನು ಕೆಂಪಗೆ ಮಾಡಿ ಬಲಗಣ್ಣಿನಿಂದ ನೀರನ್ನು ಸುರಿಸುತ್ತಿದ್ದನು. ಇದನ್ನು ಕಂಡು ಕಣ್ಣಪ್ಪನು ಅತ್ಯಂತ ಚಿಂತಾಕ್ರಾಂತನಾಗಿ ಎಲೈ— ಪರಮೇಶ್ವರನೇ, ದಕ್ಷನು ಯಜ್ಞಕಾಲ ದಲ್ಲಿ ಮಾಡಿದ ಅಪಮಾನವನ್ನು ಸಹಿಸಲಾರದೆ ನಿನ್ನ ಹೆಂಡತಿಯು ಅಗ್ನಿ ಯಲ್ಲಿ ಬಿದ್ದಾಗಲೂ, ಭಕ್ತ ಅರ್ಜುನನು ಒಬ್ಬಂಟಿಗನಾಗಿ ನಿನ್ನನ್ನು ಬಿಲ್ಲಿನಿಂದ ಹೊಡೆದಾಗಲೂ, ಸಾಂಖ್ಯಕೊಂಡನು ನಿನ್ನನ್ನು ಕಲ್ಲಿನಿಂದ ಹೊಡೆದ ಕಾಲ ದಲ್ಲೂ, ಸಿರಿಯಾಳಸೆಟ್ಟಿ ತನ್ನ ಮಗನನ್ನು ಸೀಳಿದ ಸಮಯದಲ್ಲೂ, ಹೊಟ್ಟೆಗೆ ಕೂಳನ್ನು ಕಾಣದೆ ಪಿಟ್ಟವ್ವೆಯ ಮನೆಯಲ್ಲಿ ಬಿಟ್ಟಿಮಾಡಿ ಬದುಕುವ ಹೊತ್ತಿನ ಲ್ಲಿಯೂ, ಇನ್ನೂ ಪಡಬಾರದ ಕಷ್ಟಗಳನ್ನು ಅನುಭವಿಸಿದ ವೇಳೆಯಲ್ಲಿಯೂ ನಿನ್ನ ಕಣ್ಣಿನಲ್ಲಿ ಒಂದು ಹನಿಸಹ ನೀರು ಸುರಿಯಲಿಲ್ಲ. ಈಗ ಇಷ್ಟು ನೀರು ಸುರಿಯಲು ಕಾರಣವೇನು ? ನಿನ್ನ ದೇಹಕ್ಕೆ ಉಂಟಾಗಿರುವ ಕಷ್ಟಗಳನ್ನು

ನನ್ನಸಂಗಡ ಮುಚ್ಚುಮರೆಯಿಲ್ಲದೆ ಹೇಳು. ಹೆಂಡತಿ-ಮಕ್ಕಳನ್ನು ಬಿಟ್ಟು ಅಡವಿಗೆ ಬಂದುದನ್ನು ನೆನೆದು ಅಳುವಿಯಾ ? ಹುಲಿಸಿಂಹಗಳಿಂದ ಕೂಡಿದ ಕ್ರೂರ ಅರಣ್ಯದಲ್ಲಿ ವಾಸಿಸುವ ಕಾಲ ಬಂದಿತಲ್ಲಾ ಎಂದು ರೋದಿಸುವಿಯಾ? ಅಥವಾ ಈ ಬೇಡನು ಆಡಿದ ಮಾತಿಗೆ ತಪ್ಪಿ ನಡೆದನೆಂದು ಚಿಂತಿಸುವೆಯಾ ? ಎಂದು ನಾನಾವಿಧವಾಗಿ ಹಲುಬಿ, ಹಂಬಲಿಸಿ ಗೋಳಿಡುತ್ತ ಲಿಂಗವನ್ನು ತಬ್ಬಿ ಅಪ್ಪಿಕೊಂಡು ಕಣ್ಣನ್ನು ನೋಡಿನೋಡಿ ಹಮ್ಮೈಸುತ್ತ ಕಣ್ಣೀರಿನ ಹನಿಗಳನ್ನು ಉಃಫ್ ಎಂದು ಊದುತ್ತ ಆ ಕಣ್ಣನ್ನು ಪರೀಕ್ಷಿಸುತ್ತ, ಬಟ್ಟೆಯಿಂದ ತೊಡೆದು, ನಾಲಿಗೆಯಿಂದ ಸವರಿ ಉಟ್ಟಬಟ್ಟೆಯನ್ನು ಉಂಡೆಮಾಡಿ ಬಾಯಿಂದ ಶಾಖವನ್ನು ಮಾಡಿ ಕಣ್ಣಿಗೆ ಬೆಜ್ಜರ ಕೊಡುತ್ತ ಇರಲು ಮೊದಲಿಗಿಂತಲೂ ಹೆಚ್ಚು ನೀರು ಬರುತ್ತಿರುವದನ್ನು ನೋಡಿ ಕಣ್ಣನ್ನು ಚನ್ನಾಗಿ ಒತ್ತಿಹಿಡಿಯಲು ಕುಣಿಕೆಯಿಂದಲೂ, ಕುಣಿಕೆಯನ್ನು ಒತ್ತಿಹಿಡಿದರೆ ಕಡೆಗಣ್ಣಿನಿಂದಲೂ ನೀರು ಸೋರುತ್ತಿರುವದನ್ನು ಕಂಡು ಇದು ಈಶ್ವರನಿಗೆ ಬಂದ ಕಣ್ಣುರೋಗವೆಂದು ತಿಳಿದು ಇದು ಅಳಿಗಣ್ಣೋ, ಆರಿಗಣ್ಣೋ, ಪರೆಗಣ್ಣೋ, ವಾಯುಕಣ್ಣೋ, ದುರ್ಮಾಂಸದ ಕಣ್ಣೋ ತಿಳಿಯದಲ್ಲಾ ! ಇದಕ್ಕೆ ಯಾವ ಔಷಧ ಹಾಕಿದರೆ ಗುಣವಾದೀತು ? ಈ ಕಣ್ಣು ಹೇಗೆ ಬಾಳೀತು ? ಎಲೈ ಈಶ್ವರನೇ, ನೀನು ಮೂರು ಕಣ್ಣುಗಳಿಂದ ದೇವತೆಗಳಿಗೆ ಒಡೆಯನೆನಿಸಿಕೊಂಡಿದ್ದೆ. ಈಗ ಒಂದು ಕಣ್ಣು ಕಳೆದುಕೊಂಡರೆ ನಿನಗೆ ಆ ಪದವಿಯು ಹೇಗೆ ಬರುವದು ? ನಿನ್ನನ್ನು ನೋಡಿ ನಿನ್ನಂತೆ ಕಣ್ಣುಗಳಿಲ್ಲದ ಬ್ರಹ್ಮ, ವಿಷ್ಣು ಮೊದಲಾದವರೂ, ನಿನ್ನ ಕಣ್ಣಿನ ಉರಿಯಿಂದ ಸುಟ್ಟುಹೋದ ಮನ್ಮಥನೂ ಹಾಸ್ಯ ಮಾಡಿದರೆ ಅದನ್ನು ಹೇಗೆ ಸಹಿಸುವೆ ? ಅಪಕಾರಣ ಕಣ್ಣಲ್ಲಿ ನೀರು ಸುರಿಸುವದನ್ನು ಬಿಡು. ನಿನಗೆ ಮುತ್ತಿನ ಆಭರಣಗಳನ್ನೂ, ಹಸುರಂಗಿಯನ್ನೂ, ಗುಲಗಂಜಿಯ ತೊಡಿಗೆಗಳನ್ನೂ ಕೊಟ್ಟು ಶೃಂಗಾರ ಮಾಡಿ ಕಣ್ಣಾರೆ ನೋಡಬೇಕೆಂದಿದ್ದೆನಲ್ಲಾ! ಅಷ್ಟರಲ್ಲಿಯೇ ಈ ಹಾಳು ರೋಗವು ನಿನಗೆಲ್ಲಿಂದ ಬಂದಿತು. ಎಂದು ಚಿಂತಿಸಿ ಹುಟ್ಟಿದಾಗಿನಿಂದಲೂ ಯಾವ ರೋಗವನ್ನೂ ಕಾಣದಿರುವ ನನ್ನ ಕಣ್ಣನ್ನು ಇವನಿಗೆ ಕೊಡುತ್ತೇನೆಂದು ಯೋಚಿಸಿ ಸರಳಿನ ಕೊನೆಯ ಮೊನೆಯಿಂದ ತನ್ನ ಬಲಕಣ್ಣನ್ನು ಕಿತ್ತು ಆ ಲಿಂಗದಲ್ಲಿ ಮೂಡಿದ್ದ ಈಶ್ವರನ ಕಣ್ಣಿಗೆ ಸೇರಿಸಲು ಬೆಸುಗೆಹಾಕಿದಂತೆ ತಗುಲಿಕೊಂಡಿತು. ಅದನ್ನು ಕಂಡು

ಕಣ್ಣಪ್ಪನು ಸಂತೋಷದಲ್ಲಿ ಮುಳುಗಾಡುತ್ತಿರುವಾಗಲೇ ಈಶ್ವರನ ಎಡಗಣ್ಣಿನಿಂದ ನೀರು ಸುರಿಯುವದಕ್ಕೆ ಆರಂಭವಾಯಿತು. ಆಗ ಆ ಕಣ್ಣಪ್ಪನು, ಒಂದು ಕಣ್ಣು ಸರಿಯಾದುದಕ್ಕೆ ಸಂತೋಷವನ್ನೂ, ಇನ್ನೊಂದು ಕಣ್ಣು ನೀರು ಸುರಿಯುವದಕ್ಕೆ ದುಃಖವನ್ನೂ ಹೊಂದಿದವನಾಗಿ ಇದಕ್ಕೇನು ಉಪಾಯ ಮಾಡಬೇಕೆಂದು ತುಸು ಹೊತ್ತು ಯೋಚಿಸಿ ನನ್ನ ಇನ್ನೊಂದು ಕಣ್ಣನ್ನೂ ಈಶ್ವರನಿಗೆ ಸಮರ್ಪಿಸುತ್ತೇನೆಂದು ಯೋಜನೆ ಮಾಡಿ ಬಲಗಾಲಿನ ಹೆಬ್ಬೆರಳನ್ನು ಈಶ್ವರನ ಕಣ್ಣಿಗೆ ಗುರುತಾಗಿ ಇಟ್ಟು ಬಾಣದ ಮೊನೆಯನ್ನು ನಾಟಿ ಹೊರಕ್ಕೆ ಮೀಟಿದ ಕಣ್ಣನ್ನು ತೆಗೆದು ಚಂದ್ರಮೌಳೀಶ್ವರನಿಗೆ ಸಮರ್ಪಿಸಲು ಯತ್ನಮಾಡಿದಾಗ ಗಂಗಾಧರನು ತನ್ನ ನಿಜರೂಪದಿಂದ ಪ್ರತ್ಯಕ್ಷನಾದನು. ದೇವದುಂದುಭಿಯು ಮೊಳಗಿತು. ಬ್ರಹ್ಮಾದಿ ದೇವತೆಗಳು ಹೂ ಮಳೆಯನ್ನು ಸುರಿಸುತ್ತ ಸ್ವರ್ಗಲೋಕದಿಂದ ಇಳಿದು ಬಂದಿರಲು ಈಶ್ವರನು ಕಣ್ಣಪ್ಪನ ಮುಖವನ್ನು ಕರುಣಾರಸದಿಂದ ನೋಡಿದಕೂಡಲೇ ಆ ಭಕ್ತನ ಮುಖದಲ್ಲಿಯೂ ಕಣ್ಣುಗಳು ಹೊಳೆಯುತ್ತಿದ್ದವು. ಬೇಡರಕಣ್ಣಪ್ಪನೂ, ಪರಮೇಶ್ವರನೂ ಅನ್ಯೋನ್ಯವಾಗಿ ಒಬ್ಬರ ಕಣ್ಣುಗಳನ್ನೊಬ್ಬರು ನೋಡುತ್ತಿದ್ದರು. ಈ ಪ್ರಕಾರ ಈಶ್ವರನನ್ನು ಸಾಕ್ಷಾತ್ಕರಿಸಿಕೊಂಡ ಕಣ್ಣಪ್ಪನ ಮಹಿಮೆಯನ್ನು ಕಂಡು ಆ ಅರ್ಚಕನು ಕೈಯಲ್ಲಿದ್ದ ಕತ್ತಿಯನ್ನು ಬೀಸಾಟಿ ಕಣ್ಣಪ್ಪನ ಪಾದಗಳಿಗೆರಗಿ ಅತ್ಯಂತ ಭಕ್ತಿಯಿಂದ ಆತನ ಮಹಿಮೆಯನ್ನು ಹೊಗಳುತ್ತಿದ್ದನು. ಎಲೈ— ಶಿವಭಕ್ತಿಸಂಪನ್ನನಾದ ಕಣ್ಣಪ್ಪನೇ, ನನ್ನನ್ನು ಪ್ರೀತಿಯಿಂದ ರಕ್ಷಿಸು. ನಿನ್ನ ಕಾಲಲ್ಲಿಯ ಕೆರವಿನ ಧೂಳಿಯು ಈಶ್ವರನ ಕಿರೀಟದಲ್ಲಿಯ ಚಂದ್ರನಿಗೆ ಸಂಜೆಗೆಂಪೂ, ತಲೆಯಲ್ಲಿರುವ ಗಂಗೆಗೆ ಬೈತಲೆ ಮಣಿಯೂ ಆದವು. ಶಿವನ ಜಡೆಯಲ್ಲಿರುವ ಗಂಗೆಯು ನಿನ್ನ ಪಾದಧೂಳಿಯಿಂದ ಪವಿತ್ರಳಾದಳು. ಚಂದ್ರನು ಲೋಕಪೂಜ್ಯನಾದನು. ಸಮಸ್ತ ಶಾಸ್ತ್ರತತ್ವಗಳಿಗೆ ಅಗೋಚರ ಪಾದವುಳ್ಳ ಈಶ್ವರನು ತನ್ನ ತಲೆಯಮೇಲೆ ನಿನ್ನ ಕೆರವನ್ನು ಧರಿಸಿದುದರಿಂದ ಭಕ್ತವತ್ಸಲನೂ, ಲೋಕಪೂಜ್ಯನೂ ಆದನು. ಮಹಾಲಿಂಗವು ಹುಟ್ಟುವ ಕಾಲದಲ್ಲಿ ಬ್ರಹ್ಮನು ನಿನ್ನ ಪಾದರಕ್ಷೆಯಾಗಿದ್ದರೆ ಆ ಶಂಕರನ ಮಸ್ತಕವನ್ನು ಸುಲಭವಾಗಿ ಕಾಣುತ್ತಿದ್ದನು. ನಿನ್ನ ಈ ಕೆರವುಗಳೆರಡೂ ಮುಕ್ತಿಯನ್ನು ಪಡೆಯುವ ಪುಣ್ಯಶಾಲಿಗಳಿಗೆ ಕಿರೀಟವಂತಿರುವವು. ನಾರಾಯಣನು ಶಿವನ ಪಾದಕ್ಕೆ

ಒಂದು ಕಣ್ಣನ್ನು ಸಮರ್ಪಿಸಿ ಚಕ್ರಾಯುಧವನ್ನು ಪಡೆದನು. ಆದರೆ ನೀನು ಯಾವ ಫಲವನ್ನೂ ಅಪೇಕ್ಷಿಸದೆ ಎರಡೂ ಕಣ್ಣುಗಳನ್ನೂ ಅರ್ಪಿಸಿ ಪೂಜಿಸಿದೆ. ನಿನ್ನನ್ನು ಕೊಲ್ಲಬೇಕೆಂದು ಯೋಚಿಸಿಕೊಂಡು ಬಂದ ನಾನು ಈಶ್ವರನ ಪಾದಗಳನ್ನು ಕಂಡೆನು. ಪರಶಿವನ ಈ ರೀತಿಯ ಕರುಣಾರಸವೂ, ನಿನ್ನ ಈ ಹೊಸತೆರನಾದ ನಡತೆಯೂ ಯಾವ ವೇದಾಗಮಗಳಲ್ಲಿಯೂ ಇಲ್ಲ. ಪರಶಿವನ ಮತ್ತು ಅವನ ಭಕ್ತರ ಮಹಿಮೆಯನ್ನು ಈ ಲೋಕದಲ್ಲಿ ಬಲ್ಲವರಾರು ? ಶಿವನ ಮಹಿಮೆಯನ್ನು ಭಕ್ತರೂ, ಭಕ್ತರ ಪ್ರಭಾವವನ್ನು ಶಿವನೂ ತಿಳಿಯ ಬಲ್ಲರಲ್ಲದೆ ಅನ್ಯರು ತಿಳಿಯಲಾರರು ಇದು ಸತ್ಯವು. ತಂದೆಯನ್ನು ಕೊಲ್ಲುವದೂ, ಮಗನನ್ನು ಸಾಯಿಸುವದೂ, ತಾನುಂಡು ಮಿಕ್ಕ ಎಂಜಲವನು ಈಶ್ವರನಿಗೆ ಉಣಲಿಡುವದೂ, ಶಿವನನ್ನು ಸೂಳೆಯ ಮನೆಗೆ ಕುಂಟಣಿತನಕ್ಕಾಗಿ ತಿರುಗಾಡಿಸುವದೂ ,ನಿನ್ನ ಹಾಗೆ ಮಾಂಸವನ್ನು ಸಮರ್ಪಿಸುವದೂ ಯಾವ ಶಾಸ್ತ್ರಪುರಾಣಗಳಲ್ಲಿ ಹೇಳಲ್ಪಟ್ಟಿದೆ ? ನಿನ್ನಂತಹ ಶಿವಶರಣರ ಚರಿತ್ರೆಯನ್ನು ತಿಳಿದು ಹೇಳುವದಕ್ಕೆ ಬ್ರಹ್ಮನಿಗೂ ಅಸಾಧ್ಯವಾಗಿರುವಾಗ ನನ್ನ ಪಾಡೇನು ? ನಿನ್ನ ವಿಷಯದಲ್ಲಿ ಮಹಾ ಅಪರಾಧ ನೆನೆದ ನನ್ನನ್ನು ಕರುಣದಿಂದ ರಕ್ಷಿಸಬೇಕೆಂದು ಅಡಿಗಡಿಗೆ ಬೇಡಿಕೊಳ್ಳುತ್ತ ನಮಸ್ಕರಿಸುವ ಅರ್ಚಕನನ್ನು ನೋಡಿ ಆತನನ್ನು ಶಿವಾನುಗ್ರಹಕ್ಕೆ ಪಾತ್ರನನ್ನಾಗಿ ಮಾಡಿ ತಾನೂ ಶಿವನಿಗೆ ಅಭಿನ್ನನಾಗಿ ಪರಮಾನಂದದಿಂದ ಪರಶಿವನಲ್ಲಿ ಐಕ್ಯನಾದನು. ಶಂಕರನೂ ಸಹ ಆ ಲಿಂಗದಲ್ಲಿಯೇ ಅಂತರ್ಗತನಾದನು. ಈಗಲೂ ಕಣ್ಣಪ್ಪನು ಕಾಳಹಸ್ತಿಯಲ್ಲಿ ಪರಮೇಶ್ವರನ ದೃಷ್ಟಿಯಲ್ಲಿ ತನ್ನ ದೃಷ್ಟಿಯನ್ನು ನಿಲ್ಲಿಸಿ ಆ ಲಿಂಗದ ಮುಂದುಗಡೆ ಕುಳಿತಿರುವದು ಜಗತ್ಪ್ರಸಿದ್ಧವಾಗಿದೆ. ಅಲ್ಲಿಗೆ ಹೋಗುವ ಭಕ್ತಾದಿಗಳೆಲ್ಲರೂ ಕಣ್ಣಪ್ಪನು ಮುಕ್ಕುಳಿಸಿದ ನೀರಿನಿಂದ ಅಭಿಷೇಕವನ್ನೂ, ಅವನು ತಂದು ಹಾಕಿದ ಹೂಗಳಿಂದ ಪೂಜೆಯನ್ನೂ, ಶಿವನಿಗೆ ಮಾಡಿದ ನೈವೇದ್ಯವನ್ನು ಮೊದಲು ಕಣ್ಣಪ್ಪನಿಗೆ ಕೊಟ್ಟು ನಂತರ ಈಶ್ವರನಿಗೆ ಕೊಡುವರೆಂದು ಬಸವೇಶ್ವರನು ಕಣ್ಣಪ್ಪನ ಕಥೆಯನ್ನು ಹೇಳಲಾಗಿ ಅಲ್ಲಿದ್ದ ಸರ್ವರೂ ಪರಮಾಶ್ಚರ್ಯಭರಿತರಾಗಿ ಸಂತೋಷ ಸಾಗರದಲ್ಲಿ ಮಗ್ನರಾದರು.

## — ಸಕಳೇಶ ಮಾದರಸರ ಕಥೆಯು —

ಈ ಭೂಲೋಕದಲ್ಲಿ ಅನೇಕ ಶಿವದೇವಾಲಯಗಳಿಂದಲೂ, ಶಿವಭಕ್ತಿ ಸಂಪನ್ನರಾದ ಶಿವಶರಣರಿಗೆ ವಾಸಸ್ಥಾನವಾಗಿಯೂ ಇರುವ ಕಂಚಾನಗ ಎಂಬ ಪಟ್ಟಣವಿತ್ತು. ಆ ಪಟ್ಟಣವನ್ನು ಪುಣ್ಯಯಶೋಮಯನೂ, ಶಿ ಲಿಂಗ ಜಂಗಮ ಭಕ್ತಿ ಸಂಪನ್ನನೂ, ನೀತಿಶಾಸ್ತ್ರ ಕೋವಿದನೂ. ಸಕಲಕಲಾ ನಿಪುಣನೂ ಆದ ಮಾದರಸನೆಂಬ ರಾಜನು ಪಾಲಿಸುತ್ತಿದ್ದನು. ಆ ರಾಜನು ತನ್ನ ವಿದ್ಯಾ ನೈಪುಣ್ಯದಿಂದ ಈಶ್ವರನನ್ನು ಸಂತೋಷಗೊಳಿಸಬೇಕೆಂದು ಯೋಚಿಸಿಕೊಳ್ಳಲು, ವೀಣೆ, ಸಿತಾರು, ತಂಬೂರಿ, ಪಿಟೀಲು ಮೊದಲಾದ ವಾದ್ಯಗಳನ್ನಿಟ್ಟು ಯಾವುದರಲ್ಲಿ ಯಾವ ರಾಗವು ಇಂಪಾಗಿ ಹೊರಡುವದೋ ಆ ವಾದ್ಯದಲ್ಲಿ ಆ ರಾಗವನ್ನು ಬಾರಿಸುತ್ತಾ ಪರಶಿವನಿಗೆ ಇಷ್ಟದಾಯಕಗಳಾದ ಮೋಹನ, ತೋಡಿ, ಕಲ್ಯಾಣಿ, ಕೇದಾಗನೌಳ, ಶಂಕರಾಭರಣ, ಶ್ರೀರಾಗ, ನಾಟಿ, ಮಾಳವ, ಮೊದಲಾದ ಸ್ವರಗಳನ್ನು ಅತ್ಯಂತ ಮಾಧುರ್ಯವತ್ತಾಗಿ ಬಾರಿಸುತ್ತ ಪರಶಿವನನ್ನು ತೃಪ್ತಿಪಡಿಸುತ್ತಿದ್ದನು. ಆ ಮಾಧುರ್ಯವು ಸರಸ್ವತಿ, ನಾರದ, ತುಂಬುರ, ಪಾರ್ವತಿ ಮೊದಲಾದವರಿಗಿಂತಲೂ ಈತನ ನಾದ ಮಾಧುರ್ಯವು ಬಹು ರಸಭರಿತವಾದದ್ದೆಂದೇ ಪರಶಿವನು ಆತನನ್ನು ಮೆಚ್ಚಿ ಕೊಂಡಿದ್ದನು. ಈ ಪ್ರಕಾರ ಮಾದರಸನು ಶಂಕರನನ್ನು ಸಂತೋಷಗೊಳಿ ಸುತ್ತ ಇಷ್ಟಲಿಂಗಾರ್ಚನೆ, ಜಂಗಮ ಪಾದಸೇವಾ ನಿರತನಾಗಿ ರಾಜಭೋಗ ಗಳನ್ನು ಹುಲ್ಲಿನಂತೆ ಲಘುವಾಗಿ ತಿಳಿದು ವೈರಾಗ್ಯಶಾಲಿಯಾಗಿರಲು ಶ್ರೀಶೈಲ ದಿಂದ ಒಬ್ಬ ಜಂಗಮನು ಆತನಲ್ಲಿಗೆ ಬಂದನು. ಆ ಜಂಗಮ ಮೂರ್ತಿಯನ್ನು ಪೂಜಿಸಿ ಸತ್ಕರಿಸಿ ಆತನಿಂದ ಶ್ರೀಶೈಲ ಮಹಿಮೆಯನ್ನೂ ಮತ್ತು ಸಕಲರಾಜ್ಯ ಸಂಪತ್ತನ್ನೂ ನೀಗಿ ವೈರಾಗ್ಯವನ್ನು ಹೊಂದಿ ಅಲ್ಲಿ ತಪಸ್ಸು ಮಾಡುತ್ತಿರುವ ಮಲ್ಲರಸನ ಮಹಾತ್ಮೆಯನ್ನು ಕೇಳಿ ಆನಂದಭರಿತನಾಗಿ ತಾನೂ ತನ್ನ ರಾಜ್ಯ ಕೋಶಗಳನ್ನು ಬಿಟ್ಟು ಶ್ರೀಶೈಲ ಕ್ಷೇತ್ರಕ್ಕೆ ಹೊರಟುಹೋದನು. ಉನ್ನತವಾದ ಗಿರಿ, ಶಿಖರಗಳಿಂದಲೂ, ಗಗನ ಚುಂಬಿತವಾದ ಫಲ-ವೃಕ್ಷಗಳಿಂದಲೂ, ವನ್ಯ ಮೃಗಗಳಿಂದಲೂ, ಸಿದ್ಧ-ಸಾಧ್ಯರೇ ಮೊದಲಾದ ಋಷಿಪುಂಗವರಿಂದಲೂ ಕಂಗೊಳಿಸುತ್ತಿರುವ ಶ್ರೀಶೈಲ ಕ್ಷೇತ್ರದಲ್ಲಿ ಮಾದಿರಾಜನು ಮಲ್ಲರಸನ ದರ್ಶನ ವನ್ನು ಮಾಡಿಕೊಳ್ಳಬೇಕೆಂದು ಮುಂದೆ ಬರುತ್ತಿರುವಾಗ ತೇಜೋರಾಶಿ

ಯಂತೆಯೂ, ಭಸ್ಮಶೈಲದಂತೆಯೂ. ಋಷಿಗಳ ಪುಣ್ಯ ಮೂರ್ತಿಯಂತೆಯೂ, ಇರುವ ಒಬ್ಬ ಯೋಗಿಯು ಅಡ್ಡವಾಗಿ ಮಲಗಿರುವದನ್ನು ಮಾದಿರಾಜನು ಕಂಡು ಆತನ ಮಸ್ತಕವನ್ನು ನೋಡಬೇಕೆಂದು ಮೂರು ವರ್ಷಕಾಲ ನಡೆದರೂ ಆತನ ತಲೆಯನ್ನು ಕಾಣದೆ, ಓಹೋ ! ನಾನು ಈ ಗುರುವರನ ಪಾದಗಳಿಗೆ ವಂದಿಸದೆ ಬಂದದ್ದರಿಂದ ಹೀಗಾಯಿತೆಂದು ಯೋಚಿಸಿ ಪಾದಗಳನ್ನು ಹುಡುಕಲು ಎಂಟು ವರ್ಷಗಳವರೆಗೆ ನಡೆದರೂ ಕಾಣದೆ ಭಯಪಟ್ಟು ದೈನ್ಯದಿಂದ— ಎಲೈ ಸ್ವಾಮಿಯೇ, ಬ್ರಹ್ಮಾದಿಗಳು ಸಹ ತಿಳಿಯಲು ಅಸಾಧ್ಯವಾದ ನಿನ್ನ ಮಹಿಮೆಯನ್ನು ಪರೀಕ್ಷಿಸಲು ನಾನೆಷ್ಟರವನು ? ನನ್ನಲ್ಲಿ ಕೃಪೆಮಾಡಿ ಪಾದದರ್ಶನ ಕೊಟ್ಟು ಕಾಪಾಡಬೇಕೆಂದು ಪ್ರಾರ್ಥಿಸಲು ಶಿವಯೋಗಿಯಾದ ಮಲ್ಲಿಕಾರ್ಜುನನು ಆತನ ಪೂರ್ವದ ಗುರುರೂಪವನ್ನು ತಾಳಿ ಶಿಷ್ಯನನ್ನು ಹಿಡಿದೆತ್ತಿ ತಬ್ಬಿ ಆಲಂಗಿಸಿಕೊಂಡು ಮುಗುಳು ನಗೆನಗುತ್ತ ಅಯ್ಯಾ, ಮಾದಿರಾಜಾ, ನಿನಗಿದ್ದ ಸಕಲರಾಜ ವೈಭವಗಳನ್ನು ತೊರೆದು ಯೌವ್ವನದಲ್ಲಿಯೇ ವಿರಾಗಿಯಾಗಿ ಬಂದಿರುವೆಯಲ್ಲಾ ! ನೀನು ಬಹು ಸಾಹಸಿಯು ಎಂದು ಹೊಗಳಿ ತನ್ನ ಆಶ್ರಮಕ್ಕೆ ಕರೆದೊಯ್ದು ತಾನು ಶಿವಪೂಜೆಯನ್ನು ಮಾಡಿ ಮಾದಿರಾಜನಿಂದ ಶಿವಾರ್ಚನೆಯನ್ನು ಮಾಡಿಸಿ ಆತನಿಗೆ ತೀರ್ಥ–ಪ್ರಸಾದಗಳನ್ನು ಕೊಟ್ಟು ಸ್ವಲ್ಪಹೊತ್ತು ಶಿವಾನುಭವ ಗೋಷ್ಠಿಯಲ್ಲಿದ್ದು ನಂತರ ಮಾದಿರಾಜನನ್ನು ಕುರಿತು— ಎಲೈ ರಾಜನೇ, ನೀನು ಇನ್ನೂ ಕೆಲವು ದಿವಸ ಭೂಮಂಡಲದಲ್ಲಿದ್ದು ಸದಾಚಾರಗಳನ್ನು ಪಸರಿಸಿ ನಂತರ ಇಲ್ಲಿಗೆ ಬರಬೇಕೆಂದು ಹೇಳಲು ಮಾದಿರಾಜನು ಚಿಂತಾಕ್ರಾಂತನಾಗಿ— ಎಲೈ ಗುರುವೇ, ಕಡುಬಡವನು ಸಿಕ್ಕ ನಿಧಿಯನ್ನು ತೊರೆದು ಮತ್ತೊಂದು ಪದಾರ್ಥವನ್ನು ಅಪೇಕ್ಷಿಸುವನೇ ? ಅನುಭವವೆಂಬ ಅಮೃತವನ್ನು ಕೊಡುವ ತಮ್ಮ ಪಾದಗಳನ್ನು ಕಂಡು ನಾನು ಬೇರೆ ಕಡೆಗೆ ಚಲಿಸಬೇಕೇ ? ಎಂದು ನುಡಿಯಲು ಮಲ್ಲರಸನು ಆತನನ್ನು ಪರೀಕ್ಷಿಸಬೇಕೆಂದು ಯೋಚಿಸಿ ತನ್ನ ಸಂಗಡ ಮಾದರಸನನ್ನು ಕರೆದುಕೊಂಡು ಬಂದು ಒಂದು ಬರ್ಬೂರ ವೃಕ್ಷದ ಕೆಳಗೆ ಕುಳ್ಳಿರಿಸಿದನು. ಮಾದರಸನು ಆ ಸ್ಥಳದಲ್ಲಿ ಶಿವಯೋಗದಲ್ಲಿ ಮಗ್ನನಾಗಲು ಮಲ್ಲರಸನು ತಾನೊಬ್ಬ ಗೋಪಾಲಕನಾಗಿ ಕರಟುದಲೆ, ಕರಿಯಮೈ, ಗಂಟುಹುಬ್ಬು, ನೀಳವಾದ ಕುತ್ತಿಗೆ, ಜೋಲುದುಟಿ, ದೊಡ್ಡ ಹೊಟ್ಟೆ, ಕೆದರಿದ ಗಡ್ಡ,

ಕೈಯಲ್ಲಿ ಕುಡಗೋಲು, ಕೊಡಲಿ, ಗಡಿಗೆಗಳನ್ನೂ, ಹೆಗಲಲ್ಲಿ ಕು
ಚರ್ಮದ ಕಿದಿಯನ್ನೂ, ನಡುವಿನಲ್ಲಿ ಚೀಲವನ್ನೂ, ಕಂಕುಳಲ್ಲಿ ಕು
ಮರಿಯನ್ನೂ ತುರುಕಿಕೊಂಡು ಸಿಳ್ಳುಹಾಕಿ ಕೋಲು ಬೀಸುತ್ತ, ನಾ
ಳನ್ನು ಕರೆಯುತ್ತ, ಆ ಗೊಬ್ಬುಳಿಯ ಮರದಡಿಗೆ ಬಂದು ಮಾದಿರಾ
ನೆರಳಾಗಿದ್ದ ಆ ಟೊಂಗೆಗಳನ್ನು ಕಡಿಯ ಹತ್ತಿದನು. ಆಗ ಸಕಳೇಶ ಮ
ರಸನು ಆ ಧೂರ್ತನಾದ ಗೊಲ್ಲನನ್ನು ನೋಡಿ— ಎಲೈ ಗೋಪಾಲಕ
ನಾನು ಕುಳಿತಿರುವ ಗಿಡವನ್ನೇ ನೀನು ಕಡಿಯಬೇಕೇ ? ಈ ವನದಲ್ಲಿ ಬೇ
ಮರಗಳಿಲ್ಲವೇ ? ಎಂದು ಹೇಳಿದರೂ. ಅವನು ಕೇಳದೆ ಮತ್ತೂ ಕಡಿ
ತೊಡಗಲು ಎಲೋ ಪಾಪಿಷ್ಠನೇ, ಬಿಡು, ಬಿಡು, ಇಲ್ಲವಾದರೆ ಶಾಪಾ
ಯಿಂದ ಸುಟ್ಟು ಹೋಗುವೆ ನೋಡು ಎಂದು ಗರ್ಜಿಸಲು ಕಪಟ ವೇಷಧಾ
ಯಾಗಿದ್ದ ಮಲ್ಲರಸನು ಯಮ, ನಿಯಮ, ಶಮೆ, ದಮೆ, ಶಾಂತಿ ಸಂಪ
ನಾದ ನಿನಗೆ ಈ ಕಾಡಿನಲ್ಲಿ ಈ ಮರವಲ್ಲದೆ ಕುಳಿತುಕೊಳ್ಳಲು ಮತ್ತು
ಮರವೂ ಇಲ್ಲವೇ ? ಈ ಮರವು ನಿನ್ನದೇ ! ನೀನು ಈ ಮರವನ್ನು ರಕ್ಷಿಸು
ರುವೆಯಾ ? ಈ ಕಾಡು ನಿನ್ನದೇ ? ನಿಷ್ಕಾರಣವಾಗಿ ನನ್ನನ್ನು ಸುಡುವೆನೇ
ಹೇಳುವ ನೀನು ಪಾಪಿಯಲ್ಲವೇ? ಋಷಿಗಳು ತಮ್ಮ ಶರೀರಕ್ಕೆ ಇತರರು ಹೊ
ದರೂ ಕೋಪಮಾಡುವದಿಲ್ಲ. ಹೀಗಿರುವಾಗ ಈ ಕಾಡಿನ ಗಿಡ ಕಡಿದ ಮಾತ್ರ
ನನ್ನ ಮೇಲೆ ಕೋಪವೇ ? ಋಷಿಗಳು ಮಳೆ, ಗಾಳಿ, ಬಿಸಿಲುಗಳ ಬಾ
ಹೆದರದೆ ತಪಸ್ಸು ಮಾಡುತ್ತಿರುವಾಗ ನಿನಗೆ ಈ ಗಿಡದ ನೆರಳು ಬೇಕೇ
ಶಾಪಾಗ್ನಿಯಿಂದ ನನ್ನನ್ನು ಸುಡಲು ಹೇಗೆ ಸಮರ್ಥನಾಗುವೆ ? ಕಪಟಿ
ತಪಸ್ಸು, ಕೋಪಿಯ ಜಪ, ಪರನಿಂದಕನವಿದ್ಯಾ, ಜಿಪುಣನ ಸನ್ಯಾಸ ಇ
ಯಾವ ಪ್ರಯೋಜನವನ್ನೂ ಹೊಂದುವದಿಲ್ಲ. ಕೋಪವು ವಿನಯವನ್ನು
ಹಾಳುಮಾಡಿ, ಶಾಂತಿಯನ್ನು ದೂರಮಾಡಿ, ಸಂತೋಷವನ್ನು ಭೂಮಿ
ತುಳಿದು, ವಿವೇಕವನ್ನು ನಾಶಮಾಡಿ, ಜ್ಞಾನವನ್ನು ಹಾಳು ಮಾಡುವದು
ಹೃದಯವೆಂಬ ಮಡಿಯಲ್ಲಿ ಹುಟ್ಟಿದ ಸುಜ್ಞಾನವೆಂಬ ಬಳ್ಳಿಗೆ ಶಾಂತಿ ಎಂ
ನೀರು ಹನಿಸುವದನ್ನು ಬಿಟ್ಟು ಕೋಪವೆಂಬ ಅಗ್ನಿಯನ್ನು ಚಲ್ಲಿದರೆ ಆ
ಬಳ್ಳಿಯು ನಾಶವಾಗುವದಲ್ಲದೆ ಮೋಕ್ಷವೆಂಬ ಫಲವನ್ನು ಕೊಡಬಹುದೇ?
ಧನ, ಕನಕ, ವಸ್ತ್ರವಾಹನಾದಿಗಳನ್ನು ತೊರೆದು ಇಂತಹ ಪವಿತ್ರವಾ

ಭೂಮಿಗೆ ಬಂದು ತಪ್ಪೋ ಯೋಗಪಲ್ಲಿದ್ದರೂ ಮರದ ನೆರಳಿಗಾಗಿ ಕೋಪಿಸಿಕೊಳ್ಳುವ ನಿನ್ನ ವಿವೇಕವು ಎಂತಹದು ? ನಿನ್ನಂತಹ ಹುಚ್ಚರು ಲೋಕದಲ್ಲಿರುವರೇ ? ಶಿವಯೋಗವನ್ನು ಆಚರಿಸಬೇಕೆಂದು ಬಂದ ನಿನ್ನಂತಹ ತಪಸ್ವಿಯನ್ನು ಶಿವಯೋಗಿಗಳು ಮೆಚ್ಚುವರೇ ? ಶಿವಭಕ್ತಿ, ಶಿವಯೋಗ, ಶಿವಜ್ಞಾನ, ಶಿವಾಚಾರಗಳಿಗೆಲ್ಲ ಶಾಂತಿಯೇ ಮುಖ್ಯವಾದದ್ದು. ಅದಿಲ್ಲದಿದ್ದರೆ ಸಕ್ಕರೆ ಇಲ್ಲದ ಪಾನಕದಂತೆ ನಿರರ್ಥಕವು. ಎಂದು ಹೇಳುವ ಗೊಲ್ಲನ ಮಾತಿಗೆ ಮಾದಿರಾಜನು ಆಶ್ಚರ್ಯಪಟ್ಟು ಕೋಪವನ್ನು ಬಿಟ್ಟು ಕೇಳುತ್ತಿರಲಾಗಿ ಆ ಗೊಲ್ಲನು ಅದೃಶ್ಯನಾಗಿ ಮಲ್ಲಿಕಾರ್ಜುನ ಶಿವಯೋಗಿಯ ರೂಪತಾಳಲು ಮಾದಿರಾಜನು ಭಯದಿಂದ ನಡುಗಿ ನಾಚಿ ತಲೆಬಾಗಿ ಕಣ್ಣೀರು ಸುರಿಸುತ್ತ ಎಲೈ ಗುರುಮೂರ್ತಿಯೇ ಅಪಕ್ವಮತಿಯಾದ ನನಗೆ ಶಾಂತಿಯೂ, ಭಕ್ತಿಯೂ, ವೈರಾಗ್ಯವೂ ಹೇಗೆ ದೊರೆತಾವು ? ಮಿಡಿಕಾಯಿಯನ್ನು ಕೊಯ್ದು ಅಡಿಹಾಕಿದರೆ ಅದು ಹಣ್ಣಾದೀತೇ ? ಅವರಂತೆ ಸುಜ್ಞಾನವು ಶಿವಕೃಪೆಯನ್ನು ಹೊಂದಿದವರಿಗಲ್ಲದೆ ಉಳಿದವರಿಗೆ ಅಶಕ್ಯವು. ತಮ್ಮ ಕರುಣಾರಸವನ್ನು ಪಡೆಯದ ನನಗೆ ಶಾಂತಿಗುಣವು ಲಭಿಸುವದೇ ? ಎಂದು ಹೇಳುತ್ತ ಸಾಷ್ಟಾಂಗ ನಮಸ್ಕಾರ ಮಾಡಲು ಮಾದರಸನನ್ನು ಮಲ್ಲರಸಶಿವಯೋಗಿಯು ಸಂತೋಷದಿಂದ ತಬ್ಬಿಕೊಂಡು— ಎಲೈ ಭಕ್ತನೇ, ನೀನು ಅಪಕ್ವನಲ್ಲ. ನಿನ್ನ ದರ್ಶನವು ಭವಿಗಳಿಗೆ ದೊರೆಯುವದು ಅಸಾಧ್ಯವೆಂದು ನಾನು ಭೂಲೋಕಕ್ಕೆ ಹೋಗಲು ಹೇಳಿದೆ. ನೀನು ಒಲ್ಲೆನೆಂದುಹೇಳಿದ್ದಕ್ಕಾಗಿ ಈ ವಿನೋದವನ್ನು ಮಾಡಿದೆನು. ಆದ್ದರಿಂದ ನೀನು ಭೂಮಿಗೆ ಹೋಗುವದೇ ಉತ್ತಮವು. ಏಕಂದರೆ— ಪರಮೇಶ್ವರನ ಅಪ್ಪಣೆಯಂತೆ ವೃಷಭೇಶ್ವರನು ಬಸವೇಶ್ವರನೆಂದು ಪ್ರಸಿದ್ಧನಾಗಿ ಭೂಲೋಕದಲ್ಲಿ ಅವತರಿಸಿ ನಿನ್ನಂತೆ ಶಿವಭಕ್ತಿ ಮಾಡುತ್ತಿದ್ದಾನೆ. ನೀನೂ ಆತನ ಬಳಿಗೆ ಹೋಗಿ ಆತನನ್ನು ಸಂತೋಷಪಡಿಸಿ ಗುರುರೂಪವನ್ನು ಧರಿಸಿ ಇನ್ನೂ ಐವತ್ತು ವರ್ಷ ಲೋಕದಲ್ಲಿದ್ದು ಇಲ್ಲಿಗೆ ಬರಬೇಕು ಎಂದು ಹೇಳಲು ಕೈ ಮುಗಿದುಕೊಂಡು ನಿಂತಿದ್ದ ಮಾದರಸನನ್ನು ಮಲ್ಲರಸನು ನೋಡಿ ನಿನ್ನ ಮನೋರಥವೇನು? ಕೇಳಿಕೋ ಎನ್ನಲಾಗಿ ಅವನು ಸ್ವಾಮೀ, ಸಂಪತ್ತನ್ನು ಕೇಳಲೇ ಅದು ಅನ್ಯರ ಹೆಂಡತಿ, ಆಯುಷ್ಯವನ್ನು ಕೇಳುವೆನೆಂದರೆ ಅದು

ಮಾಯಾಮಯು, ಕೈವಲ್ಯವನ್ನು ಕೇಳಲೇ ಅದು ಪರಶಿವನ ಮನೆ. ಆದ್ದರಿಂದ ಅನ್ಯರ ಸೊತ್ತನ್ನು ಅಪೇಕ್ಷಿಸುವದು ಸರಿಯಲ್ಲ. ಎಂದು ಗುರುಗಳ ಅಪ್ಪಣೆ ಪಡೆದು ಆತನನ್ನೇ ಸ್ಮರಿಸುತ್ತ ಕಲ್ಯಾಣಪುರವನ್ನು ಪ್ರವೇಶಿಸಿ ಶಿವಪೂಜಾ ಸಂಭ್ರಮದಲ್ಲಿದ್ದ ಬಸವೇಶ್ವರನ ಲಿಂಗದಲ್ಲಿ ಹೊಳೆಯಲು ಬಸವೇಶ್ವರನು ಒಳಗೆನೋಡಿದ ಮೂರ್ತಿಯನ್ನು ಹೊರಗೂ ಕಂಡವನಾಗಿ ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಷೋಡಶೋಪಚಾರಗಳಿಂದ ಪೂಜಿಸಿ ಪ್ರಸಾದವನ್ನು ಗ್ರಹಿಸಿ ತಾನೂ ಸಂತೋಷಭರಿತನಾಗಿದ್ದನು.

## — ಮಡಿವಾಳ ಮಾಚಿದೇವನ ಕಥೆಯು —

ಸಕಲಸಂಪತ್ತಿನಿಂದ ಮೆರೆಯುತ್ತಿರುವ ಹಿಪ್ಪರಿಗೆ ಎಂಬ ಗ್ರಾಮದಲ್ಲಿ ಸಾಕ್ಷಾತ್ ಮಹೇಶ್ವರನೆಂಬಂತೆ ಅವತರಿಸಿದ ಮಾಚಿದೇವನೆಂಬ ವೈರಾಗ್ಯ ಸಂಪನ್ನನು ಅಯೋನಿಜನಾಗಿ ಜನಿಸಿ ಜಿತೇಂದ್ರಿಯನಾಗಿ ಲಿಂಗಾಂಗ ಸಾಮರಸ್ಯದೊಡನೆ ಕೂಡಿದವನಾಗಿ ಮಡಿವಳತನದ ಉದ್ಯೋಗವನ್ನು ಕೈಕೊಂಡು ಪರವಾದಿಗಳಿಗೆ ಅತ್ಯಂತ ಭಯಂಕರನಾಗಿರುತ್ತಿರಲು ಕಲ್ಯಾಣಪಟ್ಟಣದಲ್ಲಿದ್ದ ಬಸವೇಶ್ವರನ ಶಿವಭಕ್ತಿ. ವೈರಾಗ್ಯಯುಕ್ತ ಕೀರ್ತಿಯನ್ನು ಕೇಳಿ ಆತನ ಬಳಿಗೆ ಬಂದು ಆತನಿಂದ ಪೂಜೆಯನ್ನು ಕೈಕೊಳ್ಳುತ್ತಾ ಅವನೆಡೆಯಲ್ಲಿರುವ ಜಂಗಮರಿಗೆ ನಮಸ್ಕರಿಸಿ ಅವರ ಸೇವೆಯನ್ನು ಮಾಡಿ ಧನ್ಯನಾಗಬೇಕೆಂದು ಯೋಚಿಸಿದನು. ಪ್ರತಿದಿವಸ ಉಷಃಕಾಲದಲ್ಲೆದ್ದು ಜಂಗಮರ ಮಾಸಿದ ಬಟ್ಟೆಗಳನ್ನು ಒಯ್ದು ಮಡಿಮಾಡಿ ಒಣಗಿಸಿ ಗಂಟುಕಟ್ಟಿ ತಲೆಯಮೇಲೆ ಹೊತ್ತುಕೊಂಡು ಭವಿಗಳ ದೃಷ್ಟಿಗೆ ಬಿದ್ದು ಮೈಲಿಗೆಯಾಗದಂತೆ ಕೈಯಲ್ಲಿ ಕತ್ತಿಯನ್ನು ಹಿಡಿದು ಝಳಪಿಸುತ್ತ ತಂದುಕೊಡುತ್ತಿದ್ದನು. ಆತನ ಭಕ್ತಿಯ ಮಹಿಮೆಯನ್ನು ಕಂಡು ಎಲ್ಲರೂ ಆಶ್ಚರ್ಯ ಹೊಂದಿದ್ದರು. ಹೀಗಿರಲು ಒಂದು ದಿವಸ ಮಾಚಿದೇವನು ಮಡಿಬಟ್ಟೆಗಳನ್ನು ಹೊತ್ತುಕೊಂಡು ಬರುತ್ತಿರುವಾಗ ಒಬ್ಬ ಭವಿಯು ಅವನನ್ನು ಮುಟ್ಟಿ ಬಟ್ಟೆಗಳನ್ನು ಮೈಲಿಗೆ ಮಾಡಿದನು. ಅದನ್ನು ನೋಡಿ ಆತನು ಕೈಯಲ್ಲಿಯ ಖಡ್ಗದಿಂದ ಆ ಭವಿಯನ್ನು ಕಡಿದುಹಾಕಿದನು. ಆಗ ಆ ಪಟ್ಟಣದ ಜನರು ಈ ಭಯಂಕರ ಕೃತ್ಯವನ್ನು ನೋಡಿ ಭಯಭೀತರಾಗಿ ಗುಂಪುಕೂಡಿ ಅರಮನೆಗೆ ಬಂದು ಬಿಜ್ಜಳರಾಯನಿಗೆ

ನಮಸ್ಕರಿಸಿ– ಅಯ್ಯಾ ರಾಜೇಂದ್ರನೇ, ಈ ಊರಲ್ಲಿ ಸೊಕ್ಕಿನ ಅಗಸನೊಬ್ಬನು ಬೀದಿಯಲ್ಲಿ ಜನರನ್ನು ತಿರುಗಾಡಿಸಗೊಡಿಸದೆ ಕೈಯಲ್ಲಿ ಕತ್ತಿಯನ್ನು ಹಿಡಿದು ಝಳಪಿಸುತ್ತ ತನ್ನ ಬಟ್ಟೆಗಳನ್ನು ಮುಟ್ಟಿದವರನ್ನು ಕಡಿದುಹಾಕುವೆನೆಂದು ಕೂಗುತ್ತ ಶಿವಭಕ್ತನೆಂಬ ಅಹಂಕಾರದಿಂದ ಮೆರೆಯುತ್ತಿರುವನು. ಈ ದಿವಸ ಒಬ್ಬ ಮನುಷ್ಯನನ್ನು ಕೊಂದುಹಾಕಿದ್ದಾನೆ. ಆ ಹೆಣವು ಎಲ್ಲಿಗೆ ಹೋಯಿತೋ ತಿಳಿಯದಾಗಿದೆ. ದಯವಿಟ್ಟು ಆ ಅಗಸನ ಹಾವಳಿಯನ್ನು ನಿಲ್ಲಿಸಿ ಕಾಪಾಡಬೇಕೆಂದು ಮೊರೆಯಿಟ್ಟರು. ಆಗ ರಾಜನು ಬಸವೇಶ್ವರನ ಕಡೆಗೆ ಕೆಂಪಾದ ಕಣ್ಣುಗಳಿಂದ ನೋಡುತ್ತ— ಏನಯ್ಯಾ, ಆತನು ಮನುಷ್ಯನೋ ಅಥವಾ ರಾಕ್ಷಸನೋ ? ಶಿವಭಕ್ತನೆಂಬ ಅಹಂಕಾರದಿಂದ ಕೊಬ್ಬಿ ಎದುರಿಗೆ ಬಂದ ನಿರಪರಾಧಿಗಳನ್ನು ಕೊಂದುಬಿಡಬೇಕೇ ? ದೊರೆಯಾದ ನನ್ನ ಭಯವೂ ಅವನಿಗಿಲ್ಲವೇ ? ಚೋಳ, ಕೇರಳ ಮೊದಲಾದ ರಾಜರು ನನ್ನ ಆಜ್ಞೆಗೆ ಹೆದರಿ ನಡೆಯುವಾಗ ಶಿವಭಕ್ತನೆಂಬ ಅಹಂಕಾರದಿಂದ ನನ್ನ ಪಟ್ಟಣದ ಜನರನ್ನು ಕೊಲ್ಲುವದು ಆಶ್ಚರ್ಯವಾಗಿದೆ. ತಿಳಿಯದೆ ಮುಟ್ಟಿದ ಅವನನ್ನು ಕೊಂದ ಆ ದುರಹಂಕಾರಿ ಅಗಸನನ್ನು ಈಗಲೇ ಚಂಡಾಡಿಬಿಡಿರೆಂದು ಆಜ್ಞಾಪಿಸಲು ಬಸವೇಶ್ವರನು— ಎಲೈ ರಾಜನೇ, ಈ ನೀಚರ ಮಾತನ್ನು ಕೇಳಿ ಮುಂದಾಗುವದನ್ನರಿಯದೆ ಏತಕ್ಕೆ ಹುಚ್ಚನಾಗುವೆ ? ಅವನನ್ನು ತುಚ್ಛ ಅಗಸನೆಂದು ತಿಳಿಯಬೇಡ. ಅವನು ಈ ಲೋಕವನ್ನು ಪವಿತ್ರಮಾಡುವದಕ್ಕಾಗಿ ಬಂದ ಪರಶಿವನು. ಹಾಗು ಆ ಮಾಚಿದೇವನು ಬ್ರಹ್ಮನಯಜ್ಞೋಪವೀತವನ್ನು ಧರಿಸಿ, ಬ್ರಹ್ಮಕಪಾಲವೆಂಬ ತಲೆಬುರುಡೆಯನ್ನು ಹಿಡಿದು ತಿರಿದುಕೊಂಡು ತಿನ್ನುವ ಬ್ರಾಹ್ಮಣನೂ, ಮೋಕ್ಷರಾಜ್ಯವನ್ನಾಳುವ ಕ್ಷತ್ರಿಯನೂ, ಭವಸಾಗರವೆಂಬ ಸಮುದ್ರದಲ್ಲಿ ಜೀವನವೆಂಬ ವಸ್ತುವನ್ನು ಉಪಯೋಗಿಸುತ್ತ ಶರೀರವೆಂಬ ನಾವೆಯನ್ನು ನಡೆಯಿಸುವ ವೈಶ್ಯನೂ, ಮಾಯಾ ಭೂಮಿಯಲ್ಲಿ ಪ್ರಾಣವೆಂಬ ಪೈರುಗಳನ್ನು ಬೆಳೆಯಿಸಿ ಕಾಲಾನುಗುಣವಾಗಿ ಕೊಯ್ಯುವ ಶೂದ್ರನೂ, ನಾದ, ಬಿಂದುಗಳೆಂಬ ಹಲಿಗೆಯಲ್ಲಿ ಆದಿಶಕ್ತಿಯೆಂಬ ಚಕ್ರವನ್ನು ಹೂಡಿ ಕಳೆ ಎಂಬ ದಂಡದಿಂದ ತಿರುಗಿಸುತ್ತ ಬ್ರಹ್ಮಾಂಡವೆಂಬ ಘಟಗಳನ್ನು ತಯಾರಿಸುವ ಕುಂಬಾರನೂ, ವಾಮನ ಮೂರ್ತಿಯ ಬೆನ್ನೆಲುವಿನ ಗಾಳಕ್ಕೆ ಆದಿಶೇಷನೆಂಬ ಹಗ್ಗವನ್ನು ಕಟ್ಟಿ, ವರಾಹನ ಮಾಂಸಗಳಿಂದ ಕೂಡಿ, ನಾರಸಿಂಹನ ಚಳ್ಳು

ಗುರುಗಳೆಂಬ ಕೊಕ್ಕೆಯನ್ನು ಸಿಕ್ಕಿಸಿ, ಪ್ರಳಯ ಸಮುದ್ರದಲ್ಲಿ ತಿರುಗಾಡುವ ಅಹಂಕಾರಿಗಳೆಂಬ ಮೀನುಗಳನ್ನು ಹಿಡಿಯುವ ಬೆಸ್ತನೂ, ಜಿಂಕೆಯಾಗಿ ಓಡು ತ್ತಿದ್ದ ಬ್ರಹ್ಮನನ್ನು ಸಂಹರಿಸಿದ ಬೇಡನೂ, ನಿರ್ಮಲವಾದ ಶಿವದೀಕ್ಷೆಯೆಂಬ ಅಗ್ನಿಯಿಂದ ಚಿನ್ನದಂತಿರುವ ಆತ್ಮನ ಮಾಲಿನ್ಯವನ್ನು ಹೋಗಲಾಡಿಸುವ ಅಕ್ಕಸಾಲಿಗನೂ, ಪ್ರಕೃತಿ ಸೂತ್ರವನ್ನು ಹಿಡಿದು ಸುರ, ನರ, ಉರಗ, ಯಕ್ಷ ಮೊದಲಾದವರನ್ನು ತಿರುಗಿಸುವ ಸೂತ್ರಧಾರನೂ, ಪ್ರಳಯಕಾಲದ ಸಮುದ್ರ ದಲ್ಲಿ ಪಾಪವೆಂಬ ಬಟ್ಟೆಗಳನ್ನು ಒಗೆಯುವ ಅಗಸನೂ ಆಗಿದ್ದಾನೆ. ಆ ಪುಣ್ಯ ಪುರುಷನಿಗೆ ಒಂದು ಜಾತಿಯನ್ನು ಕಲ್ಪಿಸುವದು. ಶುದ್ಧ ಅವಿವೇಕವು. ಆತನ ಮಹಿಮೆಯನ್ನು ಬ್ರಹ್ಮನೂ ಸಹ ಅರಿಯಲಾರನು. ಭಕ್ತನಾದ ಅರ್ಜುನನಿಗೆ ಹಿತವನ್ನು ಮಾಡುವದಕ್ಕಾಗಿ ಶಂಕರನು ಪೂರ್ವದಲ್ಲಿ ಬೇಡನ ರೂಪದಲ್ಲಿ ಬಂದಂತೆ ಈಗ ಮಾಚಿದೇವನು ಶಿವಶರಣರ ಕಲ್ಯಾಣಕ್ಕಾಗಿ ಅಗಸರವನೆನಿಸಿಕೊಂಡು ಮೆರೆಯುತ್ತಿರುವನು. ಆತನ ಮಹಿಮೆಯನ್ನು ತಿಳಿಯದೆ ಈ ನೀಚಜನರ ಮಾತನ್ನು ಕೇಳಿ ನಿನ್ನ ಮಾರ್ಬಲವನ್ನು ಕಳಿಸ ಬೇಡ. ಅವನು ಇದೆಲ್ಲವನ್ನು ಕ್ಷಣಮಾತ್ರದಲ್ಲಿ ತೀರಿಸಿಬಿಡುವನು. ಎನ್ನಲು ಬಿಜ್ಜ ಳನು ಕೋಪಾಗ್ನಿಯಿಂದ ಕುದಿಯುತ್ತ ಮಂತ್ರಿಯನ್ನು ಹಾಸ್ಯಮಾಡಿ ಹುಬ್ಬು ಗಂಟಿಕ್ಕಿ ಆನೆಯ ಮಾವುಟಿಗರನ್ನು ಕರೆಯಿಸಿ ಪರ್ವತದಂತಿರುವ ನಮ್ಮ ಆನೆ ಯಿಂದ ಅವನನ್ನು ತುಳಿಸಿ ಕೊಲ್ಲಿಸಿರೆಂದು ಹೇಳಲು ಮಾವುಟಿಗರು ಆನೆ ಯನ್ನು ಹತ್ತಿ ತನ್ನನ್ನು ತುಳಿಸಲು ಬರುತ್ತಿರುವುದನ್ನು ಮಾಚಿದೇವನು ದೂರ ದಿಂದ ನೋಡಿ ಕಾಲಭೈರವನಂತೆ ವೇಷವನ್ನು ತಾಳಿ ಮಡಿಬಟ್ಟೆಯ ಗಂಟನ್ನು ಆಕಾಶಕ್ಕೆಸೆದು ಅಲ್ಲಿಯೇ ನಿಲ್ಲುವಂತೆ ಮಾಡಿ ಬಾಹುಗಳನ್ನು ಅಪ್ಪಳಿಸಿ ಮಾವುಟಿಗನನ್ನು ನೋಡಿ ನಿಲ್ಲು ! ನಿಲ್ಲು ! ಎಂದು ಹೇಳುತ್ತ ಕುಣಿದು ಕುಪ್ಪಳಿಸಿ ಅತಿ ರಭಸದಿಂದ ಆನೆಯ ಮೇಲಕ್ಕೆ ಜಿಗಿದು ಮಾವುಟಿಗನನ್ನು ಕಾಲಿನಿಂದ ಒದೆದುಕೊಂಡು ಆನೆಯ ಸೊಂಡಿಲನ್ನು ಹಿಡಿದು ಮೇಲಕ್ಕೆತ್ತಲು ಚಿರ್ರೆಂದು ಚೀರಿ ಪ್ರಾಣಬಿಡುತ್ತಿರುವ ಆನೆಯ ಕೋರೆಗಳನ್ನು ಮುರಿದು ಅದರಿಂದಲೇ ತಿವಿದು ಆನೆಯನ್ನು ಕೊಂದು ಗಜಾಸುರನನ್ನು ಕೊಂದ ಪರ ಮೇಶ್ವರನಂತೆ ನಿಲ್ಲಲು ಶಿವಭಕ್ತರೆಲ್ಲರೂ ನೋಡಿ ಸಂತೋಷಗೊಂಡರು. ಲೋಭಿಯು ಸತ್ಪಾತ್ರಕ್ಕೆ ಕಿವಿಗೊಡದಂತೆಯೂ, ಕಾಮುಕನು ವೈರಾಗ್ಯದಲ್ಲಿ

ಪ್ರವರ್ತಿಸದಿರುವಂತೆಯೂ, ಕಟುಕನು ಪ್ರಾಣಿಗಳ ಹಿತವನ್ನು ನೋಡ ದಂತೆಯೂ ಆಯಿತೆಂದು ದೊರೆಯು ನಾಚಿಕೆಯಿಂದ ತಲೆ ತಗ್ಗಿಸಿದನು. ಆಗ ಬಸವೇಶ್ವರನು— ಎಲೈ ಮಹಾರಾಜನೇ, ನೀಚಜನರ ಚಾಡಿ ಮಾತಿನಿಂದ ಮಾನಹಾನಿಗೊಳಗಾದೆ. ಸತ್ಯವಂತನಾದ ವಿಭೀಷಣನ ಮಾತು ಕೇಳದೆ ರಾವಣನೂ, ಭೀಷ್ಮ, ದ್ರೋಣರ ಮಾತಿನಲ್ಲಿ ವಿಶ್ವಾಸವಿಡದೆ ದುರ್ಯೋಧ ನನೂ ಕೆಟ್ಟರಲ್ಲ ! ಐಶ್ವರ್ಯವೆಂಬ ಕತ್ತಲೆಯಲ್ಲಿ ಕಣ್ಣುಕಾಣದ ಜನರಿಗೆ ವಿದ್ವಾಂಸರ ಮಾತುಗಳು ದಾರಿ ದೀಪದಂತೆ ಇರುವವು. ಅದನ್ನು ನಂಬಿದವರಿಗೆ ಸುಖವೂ, ಸನ್ಮಾರ್ಗವೂ ದೊರೆಯುವವು. ಶಿವಭಕ್ತರ ಮಹಿಮೆಯು ಮದಾಂಧರಾದ ಗೂಬೆಗಳಿಗೆ ಗೋಚರವಾಗಲಾರದು. ಅವರ ಮಹಿಮೆಯು ಸಾಮಾನ್ಯವಾದುದಲ್ಲ. ಈ ವಿಚಾರದಲ್ಲಿ ನಿನಗೊಂದು ಕಥೆಯನ್ನು ಹೇಳು ವೆನು ನಿರ್ಮಲಚಿತ್ತನಾಗಿ ಕೇಳು ಎಂದು ಹೇಳಲಾರಂಭಿಸಿದನು.

## — ಚೋಳರಾಜ ಇರಿವತ್ತರ ಕಥೆಯು —

ಹಿಂದಕ್ಕೆ ದ್ರಾವಿಡ ದೇಶದಲ್ಲಿ ಕರವೂರು ಎಂಬ ಗ್ರಾಮವಿತ್ತು. ಅದನ್ನು ಶಿವಭಕ್ತಿ ಸಂಪನ್ನನಾದ ಚೋಳರಾಜನು ಆಳುತ್ತಿದ್ದನು. ಅದೇ ಊರಲ್ಲಿ ಅಷ್ಟಾವರಣ ಸಂಪನ್ನನೂ, ಶಿವಭಕ್ತರ ಹಿಂಸೆಯನ್ನು ತಾಳಲಾರದ ವನೂ ಆದ ಇರಿವತ್ತರನೆಂಬ ಶಿವಭಕ್ತನಿದ್ದನು. ಒಂದು ದಿವಸ ಚೋಳ ರಾಜನ ಆನೆಗೆ ಮದವೇರಿದುದರಿಂದ ಅದು ಕಟ್ಟಿದ್ದ ಸರಪಳಿಯನ್ನು ಕಿತ್ತು ಹಾಕಿ ರಾಜಬೀದಿಯಲ್ಲಿ ರಭಸದಿಂದ ಓಡಿಬರುತ್ತಿರಲು ಜನರು ಗಾಬರಿಯಾಗಿ ಆನೆ, ಆನೆ ಎಂದು ಕೂಗುತ್ತಾ ಅತ್ತಿತ್ತ ಓಡುತ್ತಿರುವಷ್ಟರಲ್ಲಿ ದೇವರ ಪೂಜೆ ಗಾಗಿ ಹೂ, ಬಿಲ್ವಪತ್ರೆಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ಪೂಜೆಗೆ ಹೊತ್ತಾ ಯಿತೆಂದು ಎದುರಿಗೆ ಬರುತ್ತಿರುವ ಶಿವಭಕ್ತನನ್ನು ನೋಡಿ ಆನೆಯು ಸೊಂಡಿಲಿ ನಿಂದ ಹಿಡಿದು ಬೀಸಿ ಮೇಲಕ್ಕೆತ್ತಿ ಕುಂಭಸ್ಥಳದ ಮೇಲೆ ಕೂಡ್ರಿಸಿಕೊಂಡು ಕುಣಿಯಹತ್ತಲು ಆ ಭಕ್ತನು ಮೇಲಿಂದ ಕೆಳಗೆ ಬೀಳುವಾಗ ಕೊಂಬುಗಳಿಂದ ಮೈಯಲ್ಲಾ ಹರಿದು ರಕ್ತವು ಸೋರಿ ರಕ್ತಮಯವಾಗಿರಲು ಅಯ್ಯೋ ! ಈಶ್ವ ರನೇ! ಮೃತ್ಯುಂಜಯಾ! ಭಕ್ತವತ್ಸಲಾ! ಎಂದು ದೀನಸ್ವರದಿಂದ ಗಟ್ಟಿಯಾಗಿ ಕೂಗಿದನು. ಈ ಆರ್ತ ಧ್ವನಿಯನ್ನು ಕೇಳಿ ಇರಿವತ್ತರನು ಅತ್ಯಂತ ಕೋಪ

ದಿಂದ ಗರ್ಜಿಸುತ್ತ ರಭಸದಿಂದ ಓಡಿ ಆನೆಯ ಮೇಲಕ್ಕೆ ಹಾರಿ ಮಾವುತ
ನನ್ನು ಉರುಳಿಸಿ ಅವನ ಅಂಕುಶದಿಂದ ಆನೆಯ ಕುಂಭ ಸ್ಥಳವನ್ನು ಸೀ
ಕೊಂದು ಹಾಕಿದನು. ಈ ವಾರ್ತೆಯನ್ನು ಕೇಳಿ ಚೋಳರಾಜನು ಅವ
ಬಳಿಗೆ ಬಂದು ಸ್ವಾಮೀ; ತ್ರಿಮೂರ್ತಿಗಳನ್ನು ಶಿಕ್ಷಿಸುವದಕ್ಕೆ ಸಮರ್ಥರಾ
ತಾವು ಈ ಆನೆಯನ್ನು ಕೊಲ್ಲುವದು ಯಾವ ದೊಡ್ಡ ಕೆಲಸ ! ಅದಿರಲಿ ಶಿ
ಭಕ್ತನನ್ನು ಕೊಂದ ಆನೆಯು ನನ್ನದಾದ್ದರಿಂದ ಕೊಂದ ಅಪರಾಧಿಯು
ನಾನೇ ಆಗುವೆ. ಆದ್ದರಿಂದ ನಾನು ಯಾವ ಪ್ರಾಯಶ್ಚಿತ್ತವನ್ನು ಮಾ
ಕೊಳ್ಳಲಿ. ನನ್ನ ಪ್ರಾಣವನ್ನು ಕೊಟ್ಟರೆ ಸಾಕೆಯಾಗುವದಾದರೆ ನನ್ನ ಪ್ರಾ
ವನ್ನು ಕಳೆದುಕೊಂಡು ಪರಿಶುದ್ಧನಾಗುವೆನೆಂದು ಖಡ್ಗದಿಂದ ಕುತ್ತಿಗೆ
ಮೇಲೆ ಹೊಡೆದುಕೊಳ್ಳುತ್ತಿರುವಷ್ಟರಲ್ಲಿ ಈಶ್ವರನು ತನ್ನ ನಿಜರೂಪದಿಂ
ಪ್ರತ್ಯಕ್ಷನಾಗಿ ಇರಿವತ್ತರನ ಶೂರತನಕ್ಕೂ, ಚೋಳರಾಜನ ಭಕ್ತಿಗೂ ಮೆಚ್ಚಿ
ಅವರನ್ನು ಆಲಂಗಿಸಿ ಮಡಿದು ಹೋಗಿದ್ದ ಭಕ್ತನಿಗೂ, ಆನೆಗೂ, ಮಾವು
ನಿಗೂ ಪ್ರಾಣದಾನ ಮಾಡಿ ಸಿದ್ಧವಾಗಿದ್ದ ಪುಷ್ಪಕವಿಮಾನದಲ್ಲಿ ಅವರೆಲ್ಲರನ್ನು
ಕೂಡಿಸಿಕೊಂಡು ಗಣಸಮೂಹದೊಡನೆ ಕೈಲಾಸವನ್ನು ಸೇರಿದನು. ಹೇ
ಬಿಜ್ಜಳ ಭೂಪಾಲಾ, "ಆಳುಮಾಡಿದ ತಪ್ಪು ಅರಸನದು" ಎಂಬಂತೆ ಆಳ
ಮಾಡಿದ ಅಪರಾಧಕ್ಕಾಗಿ ಚೋಳರಾಜನು ತನ್ನ ಪ್ರಾಣವನ್ನೇ ಕೊಟ್ಟು
ಬಿಟ್ಟನು. ಹೇ ಅರಸನೇ, ನನ್ನ ಮಾತನ್ನು ಮೀರಿ ಶಿವಭಕ್ತನನ್ನು ಕೊಲ್ಲುವ
ದಕ್ಕಾಗಿ ಆನೆಯನ್ನು ಕಳುಹಿಸಿದ ದ್ರೋಹಕ್ಕೆ ಪ್ರಾಯಶ್ಚಿತ್ತವೇನಿರುವದು!
ಎಂದು ಹೇಳಿ ಮತ್ತೊಂದು ಕಥೆಯನ್ನು ಹೇಳಲಾರಂಭಿಸಿದನು.

## — ಬೊಮ್ಮಿದೇವನ ಕಥೆಯು —

ಬಾಹೂರು ಎಂಬ ಊರಲ್ಲಿ ಶಿವಲಿಂಗ ಜಂಗಮ ಸೇವಾ ನಿರತನಾದ
ಗುರುಭಕ್ತಿಯುತನಾದ ಬೊಮ್ಮಿದೇವನೆಂಬ ಒಬ್ಬ ಭಕ್ತನಿದ್ದನು. ಅವನು
ಒಂದು ಹೂದೋಟವನ್ನು ಮಾಡಿ ಅದರಲ್ಲಿ ಮೊಲ್ಲೆ, ಮಲ್ಲಿಗೆ, ಜಾಜಿ ಮೊದ
ಲಾದ ಹೂಗಿಡಗಳನ್ನು ಬೆಳೆಯಿಸಿ ಅವುಗಳಿಂದ ಮಾಲೆ, ದಂಡೆ ಮೊದಲಾದ
ವನ್ನು ಕಟ್ಟಿ ಶಿವಭಕ್ತರಿಗೆ ಮಾರಿ ಬಂದ ಹಣದಿಂದ ಶಿವಶರಣರ ಸೇವೆಯನ್ನು
ಮಾಡುತ್ತ ಸುಖದಿಂದ ಇದ್ದನು. ಈ ಮಹಾತ್ಮನು ಕಲ್ಲಿನ ಬಸವಣ್ಣನಿಗೆ

ಕಬ್ಬನ್ನು ತಿನ್ನಿಸಿ, ಜೋಳವನ್ನು ಲಿಂಗವನ್ನಾಗಿಮಾಡಿ ಮಾತನಾಡಿಸಿ ಅತ್ಯಂತ ಮಹಿಮಾನ್ವಿತನಾಗಿ ಹೊಳೆಯುತ್ತಿದ್ದನು. ಒಮ್ಮೆ ಒಬ್ಬ ರಾಜನು ಶತ್ರುಗಳಾದ ರಾಜರ ಮೇಲೆ ದಂಡಯಾತ್ರೆಗೆ ಹೊರಟಾಗ ಕತ್ತಲಾಗಲು ಹೊರಭಾಗದಲ್ಲಿದ್ದ ಬೊಮ್ಮಿದೇವನ ಕೈದೋಟದ ಹತ್ತಿರದಲ್ಲಿಯೇ ಬೀಡುಬಿಟ್ಟಿದ್ದನು. ಅಕಸ್ಮಾತ್ ರಾಜನ ಪಟ್ಟದಾನೆಯು ಮದವೇರಿದುದಾಗಿ ಸರಪಳಿಯನ್ನು ಕಡಿದು ಮಾವುಟಿಗನನ್ನು ಕೆಡವಿ ತೋಟವನ್ನು ಹೊಕ್ಕು ತನ್ನ ಕಡೆಗೆ ಬರುತ್ತಿರುವ ಆನೆಯನ್ನು ಕಂಡು ಬೊಮ್ಮಿದೇವನು ಸಿಂಹನಾದವನ್ನು ಮಾಡುತ್ತ ಆನೆಗೆ ಎದುರಾಗಿ ನಿಂತು ಹೋ! ಹೋ! ಬೀಳು! ಬೀಳು! ಎಂದು ಗಟ್ಟಿಯಾಗಿ ಕೂಗಲು ಆನೆಯು ಸೊಂಡಿಲನ್ನು ಮೇಲಕ್ಕೆತ್ತಿ ಚಿಗ್ರಿಂದು ಚೀರುತ್ತ ಕೂಡಲೇ ಭೂಮಿಗೆ ಬಿದ್ದು ಪ್ರಾಣಬಿಟ್ಟಿತು. ಇದನ್ನು ನೋಡಿ ರಾಜಭಟರು ದೊರೆಯ ಬಳಿಗೆ ಬಂದು ನಡೆದ ಎಲ್ಲ ವೃತ್ತಾಂತವನ್ನು ತಿಳಿಸಲು ರಾಜನು ಪ ರ ಮಾ ಶ್ಚ ರ್ಯ ದಿ ಂ ದ ನಡುಗುತ್ತ ಆತನಿದ್ದ ಸ್ಥಳಕ್ಕೆ ಬಂದು ಗುರುವರನೇ! ಆನೆಯು ಮಾಡಿದ ತಪ್ಪು ನನ್ನದು. ಆದುದರಿಂದ ಕ್ಷಮಿಸಬೇಕು- ಎಂದು ಕಾಲ್ಗೆರಗಿ ಬೇಡಿಕೊಂಡನು. ಬೊಮ್ಮಿದೇವನು ಅವನನ್ನು ಹಿಡಿದೆತ್ತಿ ಜೋಳೈಸಿ ಮಸ್ತಕದ ಮೇಲೆ ಹಸ್ತವನ್ನಿಕ್ಕಿ ಸವರಿ ಸತ್ತುಹೋಗಿದ್ದ ಆನೆಗೆ ಪ್ರಾಣವನ್ನು ಕೊಟ್ಟು ಕಾಪಾಡಿದನು. ಆಗ ಅಲ್ಲಿದ್ದವರೆಲ್ಲ ಆ ಭಕ್ತನ ಮಹಿಮೆಯನ್ನು ಕೊಂಡಾಡಿದರು. ಎಲೈ ದೊರೆಯೇ, ಶಿವಭಕ್ತರು ಶರಣರನ್ನು ರಕ್ಷಿಸುವರು. ಗರ್ವಿಗಳನ್ನು ಕೊಲ್ಲುವರು. ಅವರ ಪಾದಗಳಿಗೆ ನಮಸ್ಕರಿಸಿದರೆ ಭವಭೀತಿಯನ್ನು ಹೋಗಲಾಡಿಸಿ, ಮನಸಾಸೇವೆಯನ್ನು ಮಾಡತಕ್ಕವರಿಗೆ ಮುಕ್ತಿ ಸೌಖ್ಯವನ್ನು ಕೊಟ್ಟು ರಕ್ಷಿಸುವರು. ಆದ್ದರಿಂದ ಸಾಕ್ಷಾತ್ ಶಿವರೂಪಿಯಾದ ಮಾಚಿದೇವನಲ್ಲಿ ನೀನು ಶರಣಾಗತನಾಗು ಇಲ್ಲವಾದರೆ ಕೇಡುತಪ್ಪದು. ಎಂದು ಹೇಳಲು ಬಿಜ್ಜಳನು ತನ್ನ ಆಪ್ತ ಮಂತ್ರಿಗಳನ್ನು ಕೂಡಿಕೊಂಡು ಮಾಚಿದೇವನಲ್ಲಿಗೆ ಹೋಗಿ ನಮಸ್ಕರಿಸಲು ಬಸವೇಶ್ವರನು ಆತನ ಪಾದಗಳಿಗೆರಗಿ ಗುರುವೇ, ಭಕ್ತಿರಸಭರಿತವಾದ ನನ್ನ ಮಾತು ಕೇಳದೆ ತನ್ನ ಆನೆಯನ್ನು ಕಳುಹಿಸಿ ಹಾನಿಗೀಡಾಗಿ ಭಯದಿಂದ ನಿಮ್ಮ ಅಭಯವನ್ನು ಪಡೆಯುವದಕ್ಕಾಗಿ ಬಂದು ಅಡ್ಡಬಿದ್ದಿದ್ದಾನೆ. ಶಿವಸ್ವರೂಪಿಗಳಾದ ತಮ್ಮ ಸಂಗಡ ಕದನಮಾಡಿ ಗೆಲ್ಲುವವರಾರು' ಈ ರಾಜನು

ತಮಗೆ ತೃಣಸಮಾನನು. "ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ" ? ಎಂಬಂ ಈತನ ಮೇಲೆ ಕೋಪ ಮಾಡದೆ ಇವನ ಅಪರಾಧವನ್ನು ಕ್ಷಮಿಸಿ ಉದ್ಧ ಬೇಕೆಂದು ಹೇಳಿಕೊಳ್ಳಲು ಮಾಚಿದೇವನು ಪ್ರಸನ್ನನಾಗಿ ಸತ್ತುಹೋಗಿ ಆನೆಯನ್ನು ಬದುಕಿಸಲು ಅದರ ಅವಯವಗಳನ್ನೆಲ್ಲ ಜೋಡಿಸಿ ಮಂತ್ರ ವಿಭೂತಿಯನ್ನು ಲೇಪಿಸಿ ತೀರ್ಥವನ್ನು ಮೇಲೆ ಸಿಂಪಡಿಸಲು ಆನೆಯು ಸಜೀ ವಾಯಿತು. ಮೊದಲು ಕಡಿದು ಆಕಾಶಗತವಾಗಿದ್ದ ಹೆಣವು ಭೂಮಿ ಮೇಲೆ ಬಿತ್ತು. ಅದನ್ನು ನೋಡಿ ಸರ್ವರೂ ಹೊಗಳುತ್ತಿರಲು ಆದಕ್ಕ ಪ್ರಾಣದಾನಮಾಡಲು ಬಿಜ್ಜಳನೇ ಮೊದಲಾಗಿ ನೆರೆದಿದ್ದವರೆಲ್ಲರೂ ಆತ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಿ ತಮ್ಮ ತಮ್ಮ ಮನೆಗೆ ಹೋದ ಬಸವೇಶ್ವರನು ಗುರುವರನಾದ ಮಡಿವಾಳ ಮಾಚಿದೇವನ ಚರಣಗ ವಂದಿಸಿ ಆತನ ಪ್ರಭಾವವನ್ನು ಹೊಗಳುತ್ತ ತನ್ನ ಮನೆಗೆ ಪಯಣಮಾ ಅಲ್ಲಿ ಜಂಗಮ ಪಾದಪೂಜೆಯನ್ನು ಮಾಡುತ್ತ ಅವರ ಅಪೇಕ್ಷೆಗಳನ್ನು ಪೂ ಸುತ್ತ ಕಲ್ಯಾಣ ಪಟ್ಟಣದಲ್ಲಿಯ ಕಲ್ಪತರುವಾಗಿ ಸರ್ವರಿಂದಲೂ ಹೊಗ ಕೊಳ್ಳುವವನಾಗಿದ್ದನು.

## — ಬಸವೇಶ್ವರ ಮಾಚಿದೇವರ ಸಂಭಾಷಣೆಯು —

ಒಂದು ದಿವಸ ಬಸವೇಶ್ವರನ ಮನೆಯಿಂದ ಬಂದ ಒಬ್ಬ ಜಂಗಮ "ಬೇಡುವ ಭಕ್ತರಿಲ್ಲದೆ ನಾನು ಬಡವನಾದೆ" ಎಂದು ಬಸವಣ್ಣನವರು ಹಾ ತ್ತಿದ್ದ ಒಂದು ಗೀತವನ್ನು ಹಾಡಲು ಅದನ್ನು ಮಾಚಿದೇವನು ಕೇಳಿ ಇ ಕರ್ಣಕಠೋರವಾದುದೆಂದು ತಿಳಿದು ಎರಡೂ ಕೈಗಳಿಂದ ಕಿವಿಗಳನ್ನು ಮುಚ್ಚಿ ಕೊಂಡು ಶಿವಶಿವಾ ! ಇಂತಹ ಅಸಹ್ಯ ಪದವನ್ನು ನನ್ನ ಮುಂದೆ ಹಾಡಬೇ ವೆಂದು ಅವನನ್ನು ಗದರಿಸಿ ಅಹಾ ಇನ್ನೇನು ಹೇಳಲಿ ! ಶಿವಶರಣರು ಬಡ ರಂತೆ ! ಬಸವಣ್ಣನು ಅವರು ಕೇಳಿದ್ದನ್ನು ಕೊಡುವ ಮಹಾದಾನಿಯಂತೆ! ಬಹುತರವಾಗಿ ಬಸವೇಶನು ಪರಶಿವನಲ್ಲಿ ತಾನು ಹೇಳಿದ್ದ ಮಾತನ್ನು ಮ ತಂತೆ ಇದೆ. ತಾನು ದಾಸಿಯೆಂಬ ಅಹಂಕಾರವು ಹೆಚ್ಚಾಗಿದೆ. ಎಂದು ನಾನಾ ವಿಧವಾಗಿ ನಿಂದಿಸಿ ಸ್ನಾನಕ್ಕೆ ಹೋದನು. ಬಸವೇಶ್ವರನು ಈ ಮಾತನ್ನು ಕೇಳಿ ಭೀತಿಯಿಂದ ನಡುಗಿ ಹಾ ! ತಪ್ಪಾಯಿತು. ಎಂದು ಓಡಿಬಂದು ಮಾ

ದೇವನ ಪಾದಗಳಿಗೆರಗಿ ದೈನ್ಯತೆಯಿಂದ ಮಹಾಸ್ವಾಮೀ, ನಾನು ಅಹಂಕಾರಿಯು, ಕುಟಿಲನು, ಕಪಟಿಯು, ಧೂರ್ತನು, ಸಂಸ್ಕಾರ ಹೀನನು, ಕಳ್ಳನು ಅಜ್ಞಾನಿಯು ಆಗಿದ್ದೇನೆ. ಈ ಪ್ರಪಂಚದಲ್ಲಿ ನನ್ನಂತಹ ದುಷ್ಟರು ಹುಡುಕಿದರೂ ಸಿಗಲಾರರು. ಆದ್ದರಿಂದ ನನ್ನಲ್ಲಿ ಎಷ್ಟು ತಪ್ಪುಗಳಿದ್ದರೂ ಮನ್ನಿಸಿ ಪ್ರೀತಿಯಿಂದ ಸಲುಹಬೇಕು. ಉರಿಯುವ ಬೆಂಕಿಯಲ್ಲಿ ತನುವನ್ನೂ, ಮುಳ್ಳಿನಲ್ಲಿ ಮೃದುಭಾವವನ್ನೂ, ಪೊಳ್ಳಿನಲ್ಲಿ ತಿರುಳನ್ನೂ ಕಾಣಬಹುದು ಆದರೆ ನನ್ನಲ್ಲಿ ಸದ್ಗುಣಗಳು ಕಾಣಲಾರವು. ಎಂದು ನಾನಾವಿಧವಾಗಿ ಪ್ರಾರ್ಥಿಸಲು ಮಹಾದೇವನು ಎಲೈ— ದುಷ್ಟಾ, ನೀನು ಬಹಳ ಕೊಬ್ಬಿರುವೆ. ಪ್ರಪಂಚದಲ್ಲಿ ನೀನೊಬ್ಬನೇ ಐಶ್ವರ್ಯವಂತನೋ? ಶಿವಭಕ್ತರು ಬಡವರೋ? ಬೇಡುವ ಭಕ್ತರಿಲ್ಲದೆ ನೀನು ಹೇಗೆ ಬಡವನಾದೆಯಯ್ಯಾ ? ಅಯ್ಯೋ, ಶಿವ ಶರಣರಿಗೆ ನೀನಿಲ್ಲದಿದ್ದರೆ ಯಾರೂ ಬೇಡಿದ್ದನ್ನು ಕೊಡುವವರಿದ್ದಿಲ್ಲವೇ ! ಎಲೋ ಬಸವಾ, ನೀನು ಮಹಾದಾನಿಯೇ! ಕೊಡುವವನೂ, ತೆಗೆದುಕೊಳ್ಳುವವನೂ ಆ ಪರಶಿವನೇ ಅಲ್ಲದೆ ಮತ್ತಾರೂ ಅಲ್ಲ. ಎಂಬುದನ್ನು ತಿಳಿಯುವದೇ ಶುದ್ಧ ಭಕ್ತಿಯು. ಇಲ್ಲದಿದ್ದರೆ ಅಂತಹ ದಾನದಿಂದ ಯಾವ ಫಲವೂ ಇಲ್ಲ. ಚಿಂತಾರತ್ನವನ್ನು ಅರೆಯುವ ಕಲ್ಲಿನಂತೆಯೂ, ಕಲ್ಪವೃಕ್ಷವನ್ನು ಹಿತ್ತಲ ಗಿಡದಂತೆಯೂ, ಕಾಮಧೇನುವನ್ನು ಮನೆಯ ಆಕಳನ್ನಾಗಿಯೂ, ಇಂದ್ರನನ್ನು ಸೇವಕನನ್ನಾಗಿಯೂ, ಕುಬೇರನನ್ನು ಖಜಾನೆಯ ಕಾವಲುಗಾರನನ್ನಾಗಿಯೂ, ಮೇರು ಪರ್ವತವನ್ನು ಆಡುವ ಚಿಕ್ಕ ದಿನ್ನೆಯಾಗಿಯೂ ಮಾಡಲು ಸಮರ್ಥರಾದ ಶಿವಶರಣರಿಗೆ ನೀನು ಕೊಡುವ ಧನ, ಕನಕ, ವಸ್ತು, ವಾಹನಗಳು ಕ್ಷುಲ್ಲಕವಾದವುಗಳು. ಎಲೋ ಬಸವಣ್ಣಾ ! ಶಿವಭಕ್ತರ ಬಡತನವನ್ನು ತೋರಿಸುತ್ತೇನೆ ನೋಡು. ಎಂದು ಹೇಳಿ ಸಮೀಪದಲ್ಲಿದ್ದ ಕೆರೆಯ ನೀರನ್ನು ಕಾಲಿನಿಂದ ಮೇಲಕ್ಕೆ ಚಿಮ್ಮಲು ಆ ಹನಿಗಳು ಮುತ್ತು, ಹವಳ, ಪಚ್ಚ, ಪುಷ್ಯರಾಗ, ವಜ್ರ, ವೈಢೂರ್ಯ ಮೊದಲಾದ ನವರತ್ನಗಳಾಗಿ ಪ್ರಕಾಶಿಸುತ್ತ ಬೀಳಲು ಭಕ್ತರೆಲ್ಲರೂ ಪರಮ ಸಂತೋಷಪಟ್ಟರು. ಬಿಜ್ಜಳನು ಈ ಸಂಗತಿಯನ್ನು ಸೇವಕರಿಂದ ಕೇಳಿ ತಿಳಿದು ಆ ಸ್ಥಳಕ್ಕೆ ಸಕಲ ಪರಿವಾರದೊಂದಿಗೆ ಬಂದು ತೋರಿಸಿ ಶಿವಭಕ್ತರ ಮಹಿಮೆಯನ್ನು ಕೊಂಡಾಡಿದನು. ಆಗ ಬಸವೇಶ್ವರನು ಶರಣಾಗತ ವತ್ಸಲನೂ, ರುದ್ರರೂಪಿಯೂ ಆದ

ಮಾಚಿದೇವನಿಗೆ ನಮಸ್ಕರಿಸಿ, ಸ್ತುತಿಸುತ್ತ, ಎಲೈ ಸ್ವಾಮಿಯೇ, ನಾ
ಪಶುವು. ನೀನು ಪತಿಯು. ನಾನು ನೀಚನು. ನೀನು ಸಾಧುವು. ನಾ
ಕೋಪಿಯು, ನೀನು ಶಾಂತನು. ನಾನು ಪಾಪಿಯು, ನೀನು ಪುಣ್ಯಶಾಲಿ
ನಾನು ಮಾಯಕ್ಕೆ ಅಧೀನ, ನೀನು ಮಾಯಾರಹಿತನು. ನಾನು ಜ್ಞಾ
ಶೂನ್ಯನು, ನೀನು ಮಹಾಜ್ಞಾನಿಯು. ನಾನು ಅಪರಾಧಿಯಾದ ಮ
ನೀನು ಅದನ್ನು ರಕ್ಷಿಸುವ ತಂದೆ. ನಾನು ದರಿದ್ರನು, ನೀನು ದಾನಿ
ವ್ಯರ್ಥವಾಗಿ ನಾಲ್ಕುಲಕ್ಷ ತೊಂಭತ್ತಾರುಸಾವಿರ ಗೀತೆಗಳನ್ನು ಹಾ
ಅಹಂಕಾರಿಯಾದೆನು. ನಿನ್ನ ಪಾದಭಕ್ತಿಯಿಲ್ಲದೆ ಅದೆಲ್ಲ ವ್ಯರ್ಥವಾಯಿತು
ಎಂದು ಬೇಡಿಕೊಳ್ಳಲು ಮಾಚಿದೇವನು ಬಸವೇಶ್ವರನನ್ನು ಕರುಣಾ ದೃ
ಯಿಂದ ನೋಡಿ ಅಯ್ಯಾ, ಬಸವರಾಜಾ, ಶಿವಶರಣರ ಬಟ್ಟೆಯನ್ನು
ಯುವ ನನಗೆ ಕೊಳೆಯ ಮೇಲೆ ಕೋಪವಲ್ಲದೆ ಬಟ್ಟೆಯ ಮೇಲೆ ಕೋಪವಿಲ್ಲ
ನಿನ್ನ ಕೀರ್ತಿಯನ್ನು ಲೋಕದಲ್ಲಿ ಬೆಳಗಿಸುವದಕ್ಕಾಗಿ ಕೋಪಮಾಡಿದೆ
ಕಬ್ಬನ್ನು ಕಡಿದರೆ ಮಧುರ ರಸವನ್ನೂ, ಶ್ರೀಗಂಧವನ್ನು ತೆಯ್ದರೆ ಮಧು
ಸುವಾಸನೆಯನ್ನೂ, ಬಂಗಾರವನ್ನು ಪುಟವಿಟ್ಟರೆ ಅದರ ಔನ್ನತ್ಯವನ್ನು
ಕೊಡುವವಲ್ಲವೇ ! ನಾನು ಕೋಪಿಸಿದಷ್ಟು ನಿನ್ನ ಭಕ್ತಿಯು ಲೋಕದ
ವಿಸ್ತಾರವಾಯಿತು ಎಂದು ಹೇಳಿ ವಿನಯ, ಶಾಂತಿ, ಇಂದ್ರಿಯ ನಿಗ್ರಹ
ನಿರ್ವಂಚನೆ, ಸತ್ಯ, ಸ್ಥಿರಬುದ್ಧಿ, ಕೈಂಕರ್ಯ, ನಿಷ್ಕಪಟ, ನಿರಹಂಕಾರ, ಭಕ್ತ
ಅನುಕರಣ ಇವು ಮೊದಲಾದವು ಭಕ್ತಿಗೆ ಕುರುಹಾಗಿವೆ. ಅಹಂಕಾರವು ಭಕ್ತಿ
ಯೆಂಬ ವೃಕ್ಷವನ್ನು ಬೇರುಸಹಿತ ಕಡಿದುಹಾಕುವದು. ಆದ್ದರಿಂದ ಶಿವಶ
ಣರು ಗರ್ವವನ್ನು ಬಿಟ್ಟುಬಿಡಬೇಕು. ಪೂರ್ವದಲ್ಲಿ ನಮ್ಮ ಶಿವಶರಣ
ಭಕ್ತರಲ್ಲಿದ್ದ ಗರ್ವವನ್ನು ಹೋಗಲಾಡಿಸಿ ಭಕ್ತಿಯನ್ನು ಪ್ರಕಾಶಪಡಿಸಿದರು
ಅದು ಹೇಗೆಂದರೆ ಕೇಳು.

### — ಶಂಕರದಾಸಯ್ಯನವರ ಕಥೆಯು —

ಭೂದೇವಿಯ ಕೈತಲೆ ಮಣಿಯಂತೆ ಹೊಳೆಯುತ್ತಿರುವ ನವಿಲೆ ಎಂಬ
ಒಂದು ಪಟ್ಟಣವಿತ್ತು. ಆ ಪಟ್ಟಣದಲ್ಲಿ ಶಿವಭಕ್ತಿಸಂಪನ್ನನೂ, ಶಿವಾನಂದ
ಸಂತುಷ್ಟನೂ, ಶಿವಜ್ಞಾನಿಗಳಲ್ಲಿ ಉತ್ತಮನೂ, ತಾಪತ್ರಯವಿದೂರನೂ, ಪ

ಮತ ವಿದಾರಕನೂ, ಜನನ-ಮರಣರಹಿತನೂ, ಶಿವಮತಕ್ಕೆ ಕಲ್ಪವೃಕ್ಷ ಪ್ರಾಯನೂ, ಭವಿಗಳಿಗೆ ಭಯಂಕರನೂ ಆದ ಶಂಕರದಾಸಯ್ಯನೆಂಬ ಶಿವ ಭಕ್ತನು ಮಹಿಮಾಪುರುಷನಾಗಿದ್ದನು. ಅವನು ಜಡೆಯ ಶಂಕರ ದೇವರ ಆಸ್ಥಾನದಲ್ಲಿದ್ದುಕೊಂಡು ಪ್ರತಿದಿವಸ ಸೂಜಿಯ ಕಾಯಕವನ್ನು ಮಾಡುತ್ತ ಅದರಿಂದ ಬಂದ ಕೂಲಿಯಿಂದ ಐದು ಮಾನ ಧಾನ್ಯಗಳನ್ನು ತಂದು ಸಾವಿರಾರು ಜನ ಶಿವಗಣಂಗಳು ಬಂದರೂ ಅಷ್ಟರಿಂದಲೇ ತೃಪ್ತಿಮಾಡಿಸುತ್ತಿದ್ದನು. ಇಂತಹ ಪುಣ್ಯಪುರುಷನ ದರ್ಶನ ಪಡೆಯಬೇಕೆಂದು ಜಾಡರದಾಸಯ್ಯನೆಂಬ ಭಕ್ತಿಸಂಪನ್ನನು ಬಂದು ಅವನ ಪಾದಗಳಿಗೆರಗಿ ಸ್ವಲ್ಪಹೊತ್ತು ಕುಳಿತು ಶಿವಾನುಭವ ಪ್ರಸಂಗದಲ್ಲಿ ನಿರತನಾಗಿ ನಂತರ ತನ್ನ ಮನೆಗೆ ಬಂದು ಹೆಂಡತಿಗೆ— ನಮ್ಮ ಶಂಕರದಾಸಯ್ಯನವರು ಬಹಳ ಬಡವರಿದ್ದಾರೆ. ಅವರ ಮನೆಗೆ ಸ್ವಲ್ಪ ಭತ್ತವನ್ನು ಕಳುಹಿಸಿಕೊಡು. ಇಲ್ಲವಾದರೆ ಅವರು ಉಪವಾಸ ಮಾಡಬೇಕಾಗುವದು ಎಂದು ಮರುಕ ದಿಂದ ಹೇಳಲು ಅವಳು ಕೂಡಲೇ ಸ್ವಲ್ಪ ಧಾನ್ಯಗಳನ್ನು ಕಳುಹಿಸಿದಳು. ಜಾಡರ ದಾಸಯ್ಯನು ನಮ್ಮ ಬಡತನವನ್ನು ನೋಡಿ ಕನಿಕರದಿಂದ ಈ ಧಾನ್ಯ ಕಳಿಸಿದ್ದಾನೆ. ಆತನು ಈಶ್ವರನಿಗೆ ಬಟ್ಟೆಯನ್ನು ನೆಯ್ದುಕೊಟ್ಟು ಧನ ಸಂಪಾದಿಸಿರುವನು. ಆದರೆ ಬಡವನಾದ ನಾನು ಏನು ಕೊಡಲಿ? ಎಂದು ಹೀಯಾಳಿಸುತ್ತ ತಂದಿದ್ದ ಭತ್ತವನ್ನು ಶಂಕರ ದಾಸಯ್ಯನು ಒಂದೇ ಹಿಡಿಯಾಗಿ ತೆಗೆದುಕೊಂಡು ತೆಗೆದಿಟ್ಟನು. ಕೂಡಲೇ ಜಾಡರ ದಾಸಯ್ಯನ ಮನೆಯಲ್ಲಿದ್ದ ನಿಧಿ-ನಿಕ್ಷೇಪಗಳೆಲ್ಲ ಮಾಯವಾದವು. ಅದನ್ನು ನೋಡಿ ಜಾಡರದಾಸಯ್ಯ ಭಯಗೊಂಡು ಕಳವಳಪಟ್ಟನು. ಆಗ ಅವನ ಹೆಂಡತಿ ದುಗ್ಗಲದೇವಿಯು ಈ ಲೋಕದಲ್ಲಿ ಸಿಂಹದ ಮರಿಯ ಸಂಗಡ ಸರಿ–ಬೆಸದ ಆಟವದುಂಟೇ? ಎಲೈ, ಪತಿದೇವಾ, ಶಿವಶರಣರ ಮಹಿಮೆಯನ್ನು ತಿಳಿಯದೆ ಭತ್ತವನ್ನು ಕೊಟ್ಟು ಕಳುಹಿಸಿ ನಮ್ಮ ಸಂಪತ್ತನ್ನೆಲ್ಲ ಹಾಳುಮಾಡಿಕೊಂಡೆವು. ಕೂಲಿಯಿಂದ ಬಂದಹಣದಿಂದಐದುಮಾನ ಧಾನ್ಯಕೊಂಡುತಂದು ಸಾವಿರಾರು ಜನ ಶಿವಭಕ್ತರಿಗೆ ಭೋಜನ ಮಾಡಿಸುತ್ತಿರುವ ಶಂಕರದಾಸಯ್ಯನವರ ಮಹಿಮೆಯನ್ನು ತಿಳಿಯದೆ ಬಡವನೆಂದು ಯೋಚಿಸಿದೆವಲ್ಲಾ. ಆತನ ಸಾಮರ್ಥ್ಯ ಅಸಾಧಾರಣವಾದುದು. ಪ್ರತ್ಯಕ್ಷ ಪರಮೇಶ್ವರನೇ ಆತನ ಮನೆಗೆ ಬಂದು ಬೇಕಾದ ವರ ಬೇಡಲು ಕೇಳಿದಾಗ ಶಂಕರದಾಸಯ್ಯನು

ಮುಗುಳುನಗೆ ನಕ್ಕು— ಎಲೈ ದೇವಾಧಿದೇವನೇ, ನಿನ್ನ ಪಾದಕಮಲದ ಭಕ್ತಿಯು ನನ್ನಲ್ಲಿ ಸ್ಥಿರವಾಗಿರುವಾಗ ಬೇರಾವ ವರವನ್ನು ಬೇಡಲಿ ? ಎಂದು ಹೇಳಿದನು. ಮತ್ತು ವರವನ್ನು ಬೇಡಲಿಲ್ಲವಲ್ಲ ಎಂದು ಕೋಪವು ಬರುತ್ತಿದ್ದರೆ ಸೂಜಿಯನ್ನು ಪೋಣಿಸಲು ರಾತ್ರಿ ಕಣ್ಣು ಕಾಣುವದಿಲ್ಲ ಆದಕ್ಕಾ ಒಂದು ಬೆಳಕು ಕೊಡು ಎಂದು ಕೇಳಲು ಈಶ್ವರನು ತನ್ನ ಹಣೆಯ ಕಣ್ಣನ್ನು ಕೊಟ್ಟನು. ಆತನು ಆ ಉರಿಗಣ್ಣಿನಿಂದ ನೋಡಲಾಗಿ ಮಾರಿ, ಮಸಣಿ ಮೊಲಾದ ದೇವತೆಗಳು ಉಟ್ಟ ಬಟ್ಟೆಗಳು ಸುಟ್ಟುಹೋದವು. ಅವು ಆತನನ್ನು ಪ್ರಸನ್ನ ಮಾಡಿಕೊಳ್ಳಬೇಕೆಂದು ಯೋಚಿಸಿ ಸಿದ್ಧವಾದವು ಮೈಲಾರನು ಛತ್ರವನ್ನೂ, ಮಾಳವಿಯು ಪಾದುಕೆಗಳನ್ನೂ, ಬ್ರಾಹ್ಮಿಯು ತಾಂಬೂಲವನ್ನೂ, ಬ್ರಹ್ಮರಾಕ್ಷಸನು ವಿಭೂತಿಯ ಭರಣಿಯನ್ನೂ, ಡಾಕಿನಿಯು ಸೂಜಿದಾರ ತುಂಬಿರುವದನ್ನೂ, ಭೈರವನು ತ್ರಿಶೂಲವನ್ನೂ ಹಿಡಿದುಕೊಂಡು ನಿಲ್ಲುತ್ತಿದ್ದಾರೆ. ಇವರಲ್ಲದೆ ಮಸಣಮ್ಮನು ಕಸಗೂಡಿಸುವಳು. ಕಾಳರಾತ್ರಿಯು ಮನೆಯ ಸುತ್ತಲೂ ಕಾವಲಿರುವಳು. ಚಂಡಿಯು ದನ ಕಾಯುವಳು. ಭೈರವಿಯು ಉರುವಲ ಕಟ್ಟಿಗೆ ತರುವಳು. ಮಾರಿಯರು ಭತ್ತ ಕುಟ್ಟುವರು. ಚಾಮುಂಡಿಯು ಬಾಗಿಲ ಕಾಯುವಳು. ಏಕನಾಥೆ ಎಂಬವಳು ನೀರು ತರುವಳು. ಹೀಗೆ ಸೇವೆಯನ್ನು ತೆಗೆದುಕೊಳ್ಳುತ್ತಿರುವ ಶಂಕರದಾಸಯ್ಯನ ಚರಿತ್ರೆಯನ್ನು ಜಗದೇಕಮಲ್ಲನೆಂಬ ರಾಜನು ಕೇಳಿ ಅಸೂಯೆಯಿಂದ— ಆ ದಾಸಯ್ಯನು ಅನ್ಯದೇವತೆಗಳನ್ನು ಸುಟ್ಟಂತೆ ನಮ್ಮೂರಲ್ಲಿಯ ವಿಷ್ಣು ದೇವಾಲಯವನ್ನು ಸುಟ್ಟರೆ ಆವನ ಶಕ್ತಿಯನ್ನು ನೋಡುವೆನೆಂದು ಹೇಳಿ ಪಂಚಲೋಹದಿಂದ ಮೂರ್ತಿಗೆ ಎರಕವೆರೆಯಿಸಿ ದೇವಸ್ಥಾನವನ್ನು ಭದ್ರವಾಗಿರಿಸಿ ಪೂಜಿಸುತ್ತ ಮತ್ತನಾಗಿ ಇದ್ದನು. ಶತ್ರುಸಂಹಾರಕನಾದ ಶಂಕರದಾಸಯ್ಯನು ಅಲ್ಲಿಗೆ ಹೋಗಬೇಕೆಂದು ಮನಸ್ಸು ಮಾಡಿದ ಕೂಡಲೆ ದೇಗುಲದ ದೀಪವು ಆರಿಹೋಯಿತು. ಗರುಡಕಂಬವು ಆದುರಿತು. ಗೋಪುರವು ನಡುಗಿತು. ಕಲಶವು ಮುರಿದುಹೋಯಿತು. ಕೆಂಧೂಳೆದ್ದಿತು. ನಂತರ ಆತನು ಶಿವಗಣಂಗಳಿಂದ ಕೂಡಿ ಆ ದೇವಾಲಯವನ್ನು ಹೊಕ್ಕು ಪ್ರಾಕಾರವನ್ನು ಚೆನ್ನಾಗಿ ನೋಡಿ ಗುಡಿಗೆ ಬಂದು ತೆರೆಯನ್ನು ಓರೆಮಾಡಿ ಹಣೆಗಣ್ಣಿನಿಂದ ಮೂರ್ತಿಯನ್ನು ದೃಷ್ಟಿಸಿನೋಡಲು ಕೂಡಲೆ ಛಟ್ ಛಟ್ ಎಂಬ ಶಬ್ದದಿಂದ

ವಿಗ್ರಹವು ಕರಗಿ ನೀರಾಗಿ ಉರಿದುಹೋಯಿತು. ಇದನ್ನು ನೋಡಿ ಶಿವಶರಣರು ಆಶ್ಚರ್ಯಾನಂದ ಹೊಂದಿದರು. ಈ ವರ್ತಮಾನವನ್ನು ಜಗದೇಕಮಲ್ಲನು ಕೇಳಿ ಭಯಾಕ್ರಾಂತನಾಗಿ ಮಂತ್ರಿ ಸೇನಾಸಹಿತ ಅಲ್ಲಿಗೆ ಬಂದು ಸಾಷ್ಟಾಂಗ ಪ್ರಣಾಮ ಮಾಡಿ ದಾಸಯ್ಯನವರ ಕರುಣಾದೃಷ್ಟಿಗೆ ಪಾತ್ರನಾದನು. ಈ ಪ್ರಕಾರ ಅವತಾರ ಪುರುಷನೆನಿಸಿಕೊಂಡಿರುವ ಶಂಕರ ದಾಸಯ್ಯನಿಗೆ ಬಡತನವೆಲ್ಲಿಯದು ? ಆತನ ಮಹಿಮೆಯನ್ನು ಅರಿಯದೆ ಧಾನ್ಯವನ್ನು ಕಳುಹಿಸಿ ಇದ್ದುದನ್ನು ಕಳೆದುಕೊಂಡು ಹುಚ್ಚರಾದ ನಮಗೆ ಆವನ ಪಾದಗಳೇ ಗತಿ ಎಂದು ಯೋಚಿಸಿ ದಂಪತಿಗಳಿಬ್ಬರೂ ಶಂಕರದಾಸಯ್ಯನ ಮನೆಗೆ ಬಂದು ಆತನ ಪಾದಗಳಿಗೆರಗಿ ಕೈಮುಗಿದು ನಿಂತುಕೊಂಡು ಎಲೈ ಕರುಣಾಸಾಗರನಾದ ಸ್ವಾಮಿಯೇ, ನಿನ್ನ ಮಹಿಮೆಯನ್ನು ಅರಿಯದೆ ಮೂಢತನದಿಂದ ಮಾಡಿದ ಅಪರಾಧವನ್ನು ಕ್ಷಮಿಸು. ನೀನಲ್ಲದೆ ಮತ್ತಾರೂ ರಕ್ಷಿಸುವವರಿಲ್ಲ. ಎಂದು ಹೇಳಿ ತಮ್ಮ ಮನೆಯಲ್ಲಿ ಮಾಯವಾಗಿ ಹೋದ ಸಂಪತ್ತಿನ ವಿಚಾರವನ್ನು ತಿಳಿಸಿ ಶಂಕರದಾಸಯ್ಯನ ಸೇವೆಯಲ್ಲಿ ನಿರತರಾದರು. ಆಗ ದಾಸಯ್ಯನು ಶರಣಾರ್ಥಿ ಎಂದು ನುಡಿದು ಅಯ್ಯಾ, ನಮಗಿರುವ ಬಡತನ ನೋಡಿ ಧಾನ್ಯವನ್ನು ಕಳುಹಿಸಿ ಪರಿಹರಿಸಿದ ನಿನ್ನಂತಹ ಆಪ್ತರು ನಮಗೆ ಇನ್ನಾರು ಇರುವರು. ಮಹಾದಾನಿಯಾದ ನೀನು ಇನ್ನಷ್ಟು ಧಾನ್ಯವನ್ನು ಕಳುಹಿಸುತ್ತೀ ಎಂದು ನೆನೆಯುಸುತ್ತಿರುವಷ್ಟರಲ್ಲಿ ನಿನ್ನ ನಿಧಿಯು ಇಷ್ಟರಲ್ಲಿಯೇ ಬಯಲಾಯಿತೆಂದು ಹೇಳುವೆಯಲ್ಲ ಇದೇನಾಶ್ಚರ್ಯ! ಕಳ್ಳರು ಕದ್ದರೇ, ಭೂಮಿಯು ನುಂಗಿಬಿಟ್ಟತೇ, ಕೊಟ್ಟ ಶಿವನೇ ಪುನಃ ತೆಗೆದುಕೊಂಡನೇ, ಶಿವನು ಕೊಟ್ಟ ನಿಧಿಯು ಅಡಗಿ ಹೋದರೆ ಮಾಡತಕ್ಕದ್ದೇನು. ಮತ್ತೆ ಆವನನ್ನೇ ಕೇಳಿಕೊಂಡರೆ ಕೊಡುವನು. ಬಡತನದಿಂದ ಸಾಯುತ್ತಿರುವ ನನ್ನನ್ನು ಕೇಳಿದರೆ ಏನು ಕೊಡಬಲ್ಲೆನು ? ಎಂದು ನುಡಿಯುತ್ತ ಜಾಡರ ದಾಸಯ್ಯನಿಗೆ ಒಂದು ಗುದ್ದಲಿಯನ್ನು ಕೊಟ್ಟು, ಈ ಸ್ಥಳದಲ್ಲಿ ಅಗಿ ಎಂದು ಹೇಳಿ ಜಂಗಮ ಪಾದೋದಕವನ್ನು ಆ ಸ್ಥಳದಲ್ಲಿ ಸಿಂಪಡಿಸಿ ಅಗೆಯಿಸಲು ಅಪಾರವಾದ ಸುವರ್ಣದ ರಾಶಿಯು ಕಂಡು ಬಂದಿತು. ಅದನ್ನು ನೋಡಿ ಆ ದಂಪತಿಗಳಿಬ್ಬರೂ ಶಂಕರದಾಸನ ಅಡಿಗಳಿಗೆ ನಮಸ್ಕಾರ ಮಾಡುತ್ತ ಸ್ವಾಮೀ, ನಿನ್ನನ್ನು ಸಂಪದಧಿಷ್ಠಾನ ದೇವತೆ ಎಂದು ತಿಳಿಯದೆ ಮೂಢರಾಗಿದ್ದೆವು.

ನೀನು ನಮಗೆ ತಂದೆಯು. ನಾವು ಮಕ್ಕಳು. ನಾವು ಬಡವರು. ನೀನು ಮಹಾದಾನಿಯು. ನಮ್ಮನ್ನು ಸಲುಹಬೇಕು. ಎಂದು ಮೊರೆಯಿಡಲು ಶಂಕರ ದಾಸಯ್ಯನು ಎಂದಿಗೂ ಕಡಿಮೆಯಾಗದಿರುವ ಅಪಾರ ನಿಧಿಯನ್ನು ಅವರಿಗೆ ಕೊಟ್ಟು ಕಾಪಾಡಿದನು. ಆದಕಾರಣ ಭಕ್ತನು ಅಹಂಕಾರವನ್ನು ಪಡ ಬಾರದು. ಭಕ್ತಿಯೆಂಬ ಬೆಳದಿಂಗಳಿಗೆ ಅಹಂಕಾರವೆಂಬ ಮೋಡವು ಅವರಿಸಿ ಪ್ರಕಾಶವನ್ನು ಕೆಡಿಸುವದು ಎಂದು ಹೇಳಿದ ಮಾಚಿದೇವನ ಉಪದೇಶವನ್ನು ಕೇಳಿದ ಬಸವೇಶ್ವರನು ಮೊದಲಿಗಿಂತಲೂ ಭಕ್ತಿಸಂಪನ್ನನಾಗಿ ಶಿವಗಣಂಗಳ ಪಾದಸೇವಾ ನಿರತನಾಗಿ ಯಶೋಮಯನಾಗಿದ್ದನು.

### — ಸಿರಿಯಾಳಸೆಟ್ಟಿಯ ಕಥೆಯು —

ಬಳಿಕ ಮಾಚಿದೇವನು ಬಸವೇಶನಿಗೆ ಮತ್ತೊಂದು ಕಥೆಯನ್ನು ಹೇಳಲಾರಂಭಿಸಿದನು. ಎಲೈ ಬಸವೇಶಾ, ರಸಭರಿತವೂ, ಭಕ್ತಿಯುತವೂ ಆದ ಒಬ್ಬ ಭಕ್ತನ ಚರಿತ್ರೆಯನ್ನು ವಿವರಿಸುವೆನು ಕೇಳು:— ಕಾಂಚೀಪುರ ಎಂಬ ಪಟ್ಟಣದಲ್ಲಿ ಸದ್ವಂಶದಲ್ಲಿ ಹುಟ್ಟಿದವನೂ, ಭಕ್ತಿ, ಭಯ, ವಿನಯವಂತನೂ, ಶಿವಭಕ್ತಿ ಪರಾಯಣನೂ ಆದ ಸಿರಿಯಾಳಶೆಟ್ಟಿ ಎಂಬ ಭಕ್ತನು ಪತಿವ್ರತಾ ಶಿರೋಮಣಿ ಎನಿಸಿದ ಚಂಗಳೆ ಎಂಬ ಪತ್ನಿಯೊಡನೆ ಸದಾ ಜಂಗಮಾರ್ಚನೆಯನ್ನು ಮಾಡುತ್ತ ಕಂಗೊಳಿಸುತ್ತಿದ್ದನು. ಅವರಿಗೆ ಸಕಲಸದ್ಗುಣ ಸಂಪನ್ನನಾದ ಚಿಲ್ಲಾಳನೆಂಬ ಮಗನಿದ್ದನು. ಇವರು ಪ್ರತಿದಿವಸ ಅನೇಕ ತರಹದ ಪಕ್ವಾನ್ನಗಳನ್ನು ಮಾಡಿಸಿ ಸಾವಿರಾರು ಜನ ಜಂಗಮರನ್ನು ಪ್ರೀತಿಯಿಂದ ಉಣಿಸಿ ತೃಪ್ತಿಪಡಿಸುತ್ತಿದ್ದರು. ಹೀಗಿರಲು ಒಮ್ಮೆ ಮಳೆಗಾಲದಲ್ಲಿ ಒಂದೇ ಸವನೆ ಇಪ್ಪತ್ತು ದಿವಸಗಳ ವರೆಗೆ ಮಳೆ ಸುರಿಯುತ್ತಿರಲು ಕೆರೆ, ಕೊಳ್ಳ, ಭಾವಿ ನದಿಗಳೆಲ್ಲ ತುಂಬಿ ಎಲ್ಲ ಕಡೆಗೆ ಜಲಸಮೃದ್ಧಿಯಾಯಿತು. ಎಡೆಬಿಡದೆ ಬೀಳುತ್ತಿರುವ ಮಳೆಯಿಂದ ಜನರು ಪೀಡೆಗೊಳಗಾಗಿದ್ದರು. ಆಗ ಪರಮೇಶ್ವರನು ಸಿರಿಯಾಳಸೆಟ್ಟಿಯ ಮಹಿಮೆಯನ್ನು ಲೋಕದಲ್ಲಿ ಪ್ರಸಾರಮಾಡಬೇಕೆಂದು ಯೋಚಿಸಿ ತನ್ನ ಪ್ರಮಥ ಗಣಂಗಳನ್ನು ಕಳುಹಿಸಿದನು. ಅವರು ಜಂಗಮ ರೂಪವನ್ನು ಧರಿಸಿ ಸಿರಿಯಾಳನ ಮನೆಗೆ ಬರಲು ಆತನು ಅವರನ್ನು ಭಕ್ತಿಯಿಂದ ಬರಮಾಡಿಕೊಂಡು ಪೂಜಿಸಿ, ಪ್ರಣಾಮಮಾಡಿ ತೀರ್ಥಪ್ರಸಾದಗಳನ್ನು

ಪರಿಗ್ರಹಿಸಿ ಶಿರಸ್ಸಿನಲ್ಲಿ ಧರಿಸಿಕೊಂಡು ಅವರ ಭೋಜನಕ್ಕಾಗಿ ಅಡಿಗೆ ಮಾಡ ತೊಡಗಲು ಮನೆಯಲ್ಲಿದ್ದ ಕಟ್ಟಿಗೆಗಳೆಲ್ಲವೂ ಮುಗಿದು ಹೋಗಲು, ಉರುವ ಲವು ಎಲ್ಲಿಯೂ ಸಿಗದಾಗಲು ಮನೆಯ ತೊಲೆ, ಕಂಬ, ಜಂತಿಗಳನ್ನು ಹಿರಿದು ಒಡೆದು ಒಲೆಗೆ ಹಾಕಲು ಅವೂ ಸಾಲದಾಗಲು ಮನೆಯಲ್ಲಿಯ ಪಟ್ಟೆ ಪೀತಾಂಬರ ಮೊದಲಾದವನ್ನು ಎಣ್ಣೆ, ತುಪ್ಪಗಳಲ್ಲಿ ಎದ್ದಿ ಉರಿಮಾಡಿ ಪಾಕ ಪದಾರ್ಥಗಳನ್ನು ತಯಾರಿಸಿ, ಗಣಂಗಳಿಗೆ ತೃಪ್ತಿಪಡಿಸಿ, ಕರ್ಪೂರ ವೀಳ್ಯೆ ವನ್ನೂ, ಯಕ್ಷ ·ಕರ್ದಮದ ಗುಳಿಗೆಗಳನ್ನೂ ಅವರಿಗೆ ಕೊಟ್ಟು ಗಂಧ ಮಾಲ್ಯಾದಿಗಳಿಂದ ಸತ್ಕರಿಸಿ, ವಸ್ತ್ರಾಭರಣಗಳಿಂದ ಅಲಂಕರಿಸಿ ಪೂಜಿಸಿದನು. ಅದರಿಂದ ಜಂಗಮರು ಮಹದಾನಂದ ಭರಿತರಾಗಿ ಆ ಕುಟುಂಬವನ್ನು ಹರಸಿ, ಆಶೀರ್ವಾದಮಾಡಿ, ಸಂತೋಷದಿಂದ ಕೈಲಾಸಕ್ಕೆ ಹೋಗಿ ಸಿರಿಯಾಳಶೆಟ್ಟಿಯ ಭಕ್ತಿಯನ್ನೂ, ತಾವು ಅನುಭವಿಸಿದ ಆನಂದವನ್ನೂ, ಪರಮೇಶ್ವರನಲ್ಲಿ ಚನ್ನಾಗಿ ವಿವರಿಸಲು ಪರಶಿವನು ಅತ್ಯಂತ ಸಂತೋಷವುಳ್ಳವನಾಗಿ ಆತನನ್ನು ಕೈಲಾಸಕ್ಕೆ ಕರೆದುಕೊಂಡು ಬರಬೇಕೆಂದು ಆಲೋಚಿಸಿ ವೀರಭದ್ರನ ವೇಷ ವನ್ನು ಧರಿಸಿ ಸಿರಿಯಾಳಸೆಟ್ಟಿಯ ಮನೆಯ ಮುಂದಿನ ಗಿಡದ ಬುಡದಲ್ಲಿ ಹುಲಿಯ ಚರ್ಮವನ್ನು ಹಾಸಿಕೊಂಡು ಕುಳಿತುಕೊಂಡನು. ಆ ದಿವಸ ತನ್ನ ಮನೆಗೆ ಜಂಗಮರೊಬ್ಬರೂ ಬಾರದಿರಲು ದುಃಖಿತನಾಗಿ ಎಲ್ಲ ಬೀದಿಗಳಲ್ಲಿ ಎಷ್ಟು ಹುಡುಕಿದರೂ ಯಾರೂ ಸಿಕ್ಕದಿರಲು ಮನೆಗೆ ಬರುವಾಗ ತಮ್ಮ ಮನೆಯ ಮುಂದಿನ ಗಿಡದ ಬುಡದಲ್ಲಿ ಕುಳಿತಿರುವ ಭೈರವೇಶ್ವರನನ್ನು ಕಂಡು ಸಂತೋಷದಿಂದ ಆತನ ಪಾದಗಳಿಗೆ ನಮಸ್ಕರಿಸಿ ಸ್ವಾಮಿಗಳೇ, ತಾವು ನನ್ನ ಮೇಲೆ ದಯೆತೋರಿಸಿ ಈ ದಿವಸ ನನ್ನ ಮನೆಯಲ್ಲಿ ಶಿವಪೂಜೆಯನ್ನು ಮಾಡಿ ಕೃತಾರ್ಥನನ್ನಾಗಿ ಮಾಡಬೇಕೆಂದು ಬೇಡಿಕೊಂಡನು. ಆಗ ಕಪಟ ವೇಷ ಧಾರಿಯಾದ ಶಿವನು— ಎಲೈ ಭಕ್ತನೇ ಕೇಳು, ನನ್ನ ಅಪೇಕ್ಷೆಯನ್ನು ಪೂರ್ಣ ಮಾಡುವ ಪುಣ್ಯಾತ್ಮನ ಮನೆಯಲ್ಲಿ ನಾನು ಇಂದು ಭೋಜನವನ್ನು ಮಾಡು ವೆನೇ ಹೊರತು ಉಳಿದ ಕಡೆ ಸಾಧ್ಯವಿಲ್ಲ. ಅಂತಹ ಪುಣ್ಯಶಾಲಿಯು ಈ ಲೋಕದಲ್ಲಿ ಯಾರು ಇರುವರು ? ಒಂದು ವೇಳೆ ನೀನು ನೆರವೇರಿಸಿ ಕೊಡುವ ದಾದರೆ ನಿನ್ನ ಜನ್ಮವು ಸಾರ್ಥಕವಾಗುವದು ಎಂದು ಹೇಳಲು ಆ ಭಕ್ತನು ತಮ್ಮ ಕೋರಿಕೆ ಏನಿದೆ ? ಎಂದು ಬಿನ್ನವಿಸಲು ಉತ್ತಮ ಲಕ್ಷಣವಂತನೂ,

ಸದ್ಗುಣ ಪರಿಪೂರ್ಣನೂ, ತಾಯಿ-ತಂದೆಗಳಿಗೆ ಪ್ರಿಯನೂ ಆದ ಶಿಶು ನನ್ನು ಅವನ ತಾಯಿ-ತಂದೆಗಳೇ ಕತ್ತರಿಸಿ ತುಂಡುಮಾಡಿ ಆ ಶಿಶುವ ವನ್ನು ಅಡಿಗೆ ಮಾಡಿ ನನಗೆ ಉಣಬಡಿಸಿದರೆ ಅದನ್ನು ಉಂಡು ತೃಪ್ತನಾ ವ್ರತವು ನನಗೆ ಇದೆ. ನೀನು ಅದನ್ನು ಪೂರೈಸಿಕೊಡುವದಾದರೆ ನಿನ್ನ ಮ ಬರುವೆನು. ಇಲ್ಲವಾದರೆ ಬರಿಯ ಮಾತಿನಿಂದ ಯಾವ ಪ್ರಯೋಜನವು ಎನ್ನಲು ಸಿರಿಯಾಳನು ಗುರುವರಾ, ನಿನ್ನ ಇಷ್ಟದಂತೆ ನೆರವೇರಿಸುವೆನೆ ಹೇಳಿ ನಮಸ್ಕರಿಸಿ ಮನೆಗೆ ಬಂದು ಹೆಂಡತಿಯನ್ನು ಕರೆದು ಆವಳ ಮನಸ್ಸ ಪರೀಕ್ಷಿಸಬೇಕೆಂದು ಎಲೈ ಸಾಧ್ವಿಯೇ, ಈ ಊರಿಗೆ ಹೊಸದಾಗಿ ಒಬ್ಬ ಭೈ ಸ್ವಾಮಿ ಬಂದಿದ್ದಾನೆ. ಅವರು ಶಿಶುಮಾಂಸವನ್ನು ತಿಂದು ತೃಪ್ತರಾಗಬೇಕೆ ಅಪೇಕ್ಷಿಸುವರು. ಆದ್ದರಿಂದ ಈ ಊರಲ್ಲಿಯ ಹುಡುಗರಲ್ಲಿ ರೂಪವಂತನಾ ಐದು ವರ್ಷದ ಮಗುವನ್ನು ಕೊಂಡುತಂದು ಆ ಶಿಶುವನ್ನು ಪಕ್ವಮಾಡಿ ಇ ರಿಗೆ ಎಡೆಮಾಡಿ ತೃಪ್ತಿಗೊಳಿಸುವೆಯಾ ? ಎಂದು ಹೇಳಲು ಆ ಜಂಗ ದೇವಿಯು ಶಿವಶಿವಾ ! ನಿಮಗೆ ಇಂದು ಇಂತಹ ಹುಚ್ಚು ಏಕೆ ಹಿಡಿಯಿತು ಸಾಕ್ಷಾತ್ ಈಶ್ವರನು ಈ ರೀತಿಯಾಗಿ ಬಂದು ಕೇಳುತ್ತಿರುವಾಗ ಹೆರವರ ಮ ವೇಕೆ? ನಮ್ಮ ಮಗುವನ್ನೇ ಕಡಿದು ಅಡಿಗೆಮಾಡಿ ಉಣಬಡಿಸಿ ಧನ್ಯರಾಗೋ ಎಂದು ನುಡಿದಳು. ಆ ಮಾತನ್ನು ಕೇಳಿ ಸಿರಿಯಾಳನು ಸಂತಸಗೊಂ ಶಾಲೆಯಲ್ಲಿ ಓದುತ್ತಿರುವ ತನ್ನ ಮಗನನ್ನು ಕರೆಯುವದಕ್ಕಾಗಿ ಅಲ್ಲಿ ಹೋಗುವದರೊಳಗಾಗಿ ಆ ಭೈರವೇಶ್ವರನು ತನ್ನ ವೇಷವನ್ನು ಬದಲಾಯಿ ಸಾಮಾನ್ಯ ಮನುಷ್ಯರೂಪ ಧರಿಸಿ ಶಾಲೆಗೆ ಬಂದು ಓದುತ್ತಿದ್ದ ಚಿಲ್ಲಾಳನನ್ ಕೂಗಿ ಹೊರಗೆ ಕರೆಯಲು ಆತನು ಬಂದು ಪಾದಗಳಿಗೆ ಎರಗಲು ಅವ ಮುದ್ದು ಮುಖವನ್ನು ನೋಡಿ ನೊಂದು ನಿಟ್ಟುಸಿರು ಬಿಟ್ಟು ಕಣ್ಣಲ್ಲಿ ನೀ ಸುರಿಸುತ್ತ ಎಲೈ— ಮಗುವೇ, ಈ ದಿವಸ ನಿನ್ನ ತಾಯಿ-ತಂದೆಗಳು ನಿನ್ನನ್ನು ಕೊಂದು ಕತ್ತರಿಸಿ ಅಡಿಗೆಮಾಡಿ ಒಬ್ಬ ರಾಕ್ಷಸ ತಪಸ್ವಿಗೆ ಬಲಿಕೊಡಬೇಕೆಂದು ಯೋಚಿಸಿರುವರು. ಆದ್ದರಿಂದ ನೀನು ಎಲ್ಲಿಯಾದರೂ ಗುಟ್ಟಾದ ಸ್ಥಳದಲ್ಲಿ ಹೋಗಿ ಅಡಗಿಕೋ. ಇಲ್ಲದಿದ್ದರೆ ನಿಮ್ಮ ತಂದೆಯು ನಿನ್ನನ್ನು ಮನೆಗೆ ಕರೆದುಕೊಂಡು ಹೋಗಿ ಕೊಂದು ಬಿಡುವನು. ಸತ್ತು ಮೋಕ್ಷವನ್ನು ಹೊಂದುವದಕ್ಕಿಂತ ಬದುಕಿ ಲೋಕಸುಖ ಅನುಭವಿಸುವದು ಉತ್ತಮ.

ಅಕಟಕಟಾ ! ಕೋಮಲಾಂಗನಾದ ನಿನ್ನನ್ನು ಹಿಡಿದು ನೆಲಕ್ಕೆ ಕೆಡವಿ ಕೈಕಾಲು ಅಲುಗಿಸದಂತೆ ಗಟ್ಟಿಯಾಗಿ ಅದುಮಿ ಹಿಡಿದು ಹರಿತವಾದ ಕತ್ತಿಯಿಂದ ನಿನ್ನ ಕುತ್ತಿಗೆಯನ್ನು ಕೊಯ್ದು ಬಿಡುವರು ಅಯ್ಯೋ-ಬಾಲನೇ, ಹೇಗಾದರೂ ಮಾಡಿ ನಿನ್ನ ಪ್ರಾಣವನ್ನು ಉಳಿಸಿಕೋ ಎಂದು ಹೆದರಿಸಲು ಆ ಚಿಲ್ಲಾಳನು ನಸುನಕ್ಕು— ಅಯ್ಯಾ, ಸ್ಥಿರವಲ್ಲದ ಈ ದೇಹವನ್ನು ನನ್ನ ತಾಯಿ-ತಂದೆಗಳು ಯೋಗ್ಯ ತಪಸ್ವಿಗೆ ಅರ್ಪಿಸಿ ಶಿವಾರ್ಪಣೆ ಮಾಡುವದರಿಂದ ನನ್ನ ಜನ್ಮವು ಸಾರ್ಥಕವಾಗುವದಿಲ್ಲವೇ ? ನನ್ನ ಈ ಶರೀರದಿಂದ ಹೆತ್ತವರಿಗೂ, ಆ ತಪಸ್ವಿಗೂ ಏಕಕಾಲದಲ್ಲಿ ಸಂತೋಷವಾಗುವದರಿಂದ ನನಗಿಂತಲೂ ಧನ್ಯರಾದವರು ಈ ಲೋಕದಲ್ಲಿ ಯಾರಿದ್ದಾರೆ ? ನಿಮ್ಮ ಮಾತುಗಳಿಗೆ ನಾನು ಎಂದಿಗೂ ಹೆದರತಕ್ಕವನಲ್ಲ. ಎಂದು ಹೇಳಿದ ಚಿಲ್ಲಾಳನ ಭಕ್ತಿಗೆ ಮೆಚ್ಚಿ ಮಗನಂತೆಯೇ ತಾಯಿ-ತಂದೆಗಳೂ ಏಕರಸ ಭಕ್ತಿಭಾವದಿಂದ ಇರುವರು. ಇವರನ್ನು ಗೆಲ್ಲುವದು ತನ್ನಿಂದ ಆಗದೆಂದು ತಿಳಿದು ಮೊದಲಿನಂತೆ ಭೈರವ ವೇಷವನ್ನು ಧರಿಸಿ ಆ ಸಿರಿಯಾಳನ ಮನೆಯ ಮುಂದಿನ ವೃಕ್ಷದ ಬಳಿಯಲ್ಲಿ ಕುಳಿತುಕೊಂಡನು. ಅಷ್ಟು ಹೊತ್ತಿಗೆ ಸಿರಿಯಾಳನು ಮಠಕ್ಕೆ ಬಂದು ಓದುತ್ತಿದ್ದ ಮಗನನ್ನು ಕರೆದು ಮುದ್ದಾಡಿ ಮೈದಡವಿ, ಎತ್ತಿಕೊಂಡು ಬಂದು ಮಗನಿಗೆ ಬೇಕಾದ ತಿಂಡಿಯನ್ನು ತಿನ್ನಿಸಿ ನಾನಾ ಅಲಂಕಾರಗಳಿಂದ ಸಂತೈಸಿ ಈ ಲೋಕದ ಆಸೆಯನ್ನೇ ತೊರೆದು ನಿಂತಿರುವ ಮಗುವನ್ನು ಮುದ್ದುಮಾತುಗಳಿಂದ ಮೋಹಗೊಳಿಸಿ ಮಗುವೇ, ಈ ದಿವಸ ಹಬ್ಬದ ದಿನವು. ಮುಕ್ತಿದಾಯಕನಾದ ಈಶ್ವರನು ಭವರೋಗವನ್ನು ನಾಶ ಮಾಡುವದಕ್ಕಾಗಿ ಜಂಗಮ ರೂಪದಿಂದ ಬಂದು ಎಂದೂ ಇಲ್ಲದ ಹೊಸ ಆಹಾರವನ್ನು ಬಯಸಿರುವನು. ಆದ್ದರಿಂದ ಅವನಿಗೆ ಪ್ರೀತಿಯದಾದ ನಿನ್ನ ಶರೀರದ ಮಾಂಸದ ಅಡಿಗೆಯನ್ನು ಸಮರ್ಪಿಸುವೆವು. ಎಂದು ಹೇಳಿದ ತಂದೆಯ ಮಾತನ್ನು ಕೇಳಿ ಚಿಲ್ಲಾಳನು:— ಎಲೈ ತಂದೆಯೇ, ಈ ದಿವಸ ನನ್ನ ಪುಣ್ಯದ ರಾಶಿಯು ಫಲಿಸಿತು. ಶಿವಕಟಾಕ್ಷನೆಂಬ ಬಳ್ಳಿಯು ಪುಷ್ಪ ಧರಿಸಿತು. ಈ ಸಂಸಾರವೆಂಬ ಅರಣ್ಯವು ಹಾಳಾಯಿತು. ನಾನೂ ಧನ್ಯನಾದೆನು. ಎಂದು ನುಡಿದ ಮಗನ ಧೀರತನಕ್ಕೆ ತಂದೆಯು ಮೆಚ್ಚಿ ಅಯ್ಯಾ ಮಗುವೆ, ಶಿವಮಂತ್ರವನ್ನು ಮರೆಯದಿರು. ಸದಾಶಿವನಲ್ಲಿ ಎರಕ ನೆರೆದಂತೆ

ಇರು. ಶಾಶ್ವತವಾದ ಸುಖವನ್ನು ಹೊಂದು ಎಂದು ಹೇಳುತ್ತಿರಲು ತಾಯಿ
ಶಿವಮಂತ್ರವನ್ನು ಜಪಿಸುತ್ತ ಮಗನ ತಲೆಯನ್ನು ಅದುಮಿ ಹಿಡಿದುಕೊ
ರಲು ತಂದೆಯು ಸಂತೋಷದಿಂದ ಕೈಗತ್ತಿಯಿಂದ ಶಿರಸ್ಸನ್ನು ಕೊಯ್ದ
ನಂತರ ರುಂಡವನ್ನು ಬೇರೆ ಕಡೆಗೆ ಇಟ್ಟು ಮುಂಡದಲ್ಲಿರುವ ಮಾಂಸವ
ತೆಗೆದು ತುಂಡುತುಂಡಾಗಿ ಕತ್ತರಿಸಿ ತೊಳೆದು, ಸಾಂಬಾರ ದ್ರವ್ಯಗಳನ್ನು
ರಲ್ಲಿ ಬೆರೆಯಿಸಿ ಹದವಾಗಿ ಕಾಸಿದ ತುಪ್ಪದಲ್ಲಿ ಹುರಿದು ಬೇಯಿಸಿ
ಮನೆಯಗೌಡಿಯು ಆ ತಲೆಬುರುಡೆಯನ್ನು ಒರಳಿನಲ್ಲಿ ಹಾಕಿ ಚನ್ನಾಗಿ ಕ
ರಸವನ್ನು ತೆಗೆದು ಸೋಸಿ ಅದರಿಂದ ಮಧುರವಾದ ಮೇಲೋಗರವನ್ನು
ಮಾಡಿದಳು. ಅಡುಗೆ ಎಲ್ಲವೂ ಸಿದ್ಧವಾಗಲು ಅಡಿಗೆಯ ಪಾತ್ರೆಗಳಿಗೆ ವಿ
ತಿಯ ಕಟ್ಟನ್ನು ಹಾಕಿ, ಅಲಂಕರಿಸಿ ಮನೆಯನ್ನು ಸಾರಿಸಿ, ರಂಗವಲ್ಲಿಯಿ
ಅಲಂಕರಿಸಿದ ನಂತರ ಚಂಗಳಾದೇವಿಯು ಗಂಡನನ್ನು ಕುರಿತು— ಆ ತ
ಸ್ವಿಯು ಬಹಳ ಹಸಿದಿರಬಹುದು. ಹೊತ್ತಾಗಿದೆ. ಬೇಗ ಕರೆದುಕೊಂ
ಬನ್ನಿರೆಂದು ಹೇಳಲು ಸಿರಿಯಾಳನು ಭೈರವಸ್ವಾಮಿಯ ಬಳಿಗೆ ಬಂದು ನ
ಸ್ಕರಿಸಿ ಅವರನ್ನು ಮನೆಗೆ ಕರೆದುಕೊಂಡು ಬಂದು ಸ್ನಾನ ಶಿವಾರ್ಚನೆ ಮಾ
ಸಿದ ನಂತರ ದಂಪತಿಗಳಿಬ್ಬರೂ ಆತನ ಪಾದಗಳನ್ನು ತೊಳೆದು ತೀರ್ಥವನ್ನ
ಶಿರಸ್ಸಿನಲ್ಲಿ ಧರಿಸಿ ರತ್ನಪೀಠದಲ್ಲಿ ಕೂಡ್ರಿಸಿ ಮುತ್ತಿನಾರತಿಯನ್ನು ಬೆ
ಗಂಧ, ಪುಷ್ಪ, ಅಕ್ಷತೆಗಳಿಂದ ಪೂಜಿಸಿ ಎತ್ತರವಾದ ಅಡ್ಡಣಿಗೆಯ ಮೇ
ಬಂಗಾರದ ಬಟ್ಟಲವನ್ನಿಟ್ಟು ಮಾಂಸದ ಪದಾರ್ಥಗಳನ್ನು ತಂದು ಭಕ್ತಿಯಿಂ
ಎಡೆಮಾಡಿದ್ದನ್ನು ಆ ತಪಸ್ವಿಯು ಪರೀಕ್ಷಿಸಿ ಅದರಲ್ಲಿ ತಲೆಯ ಮಾಂಸವನ್ನು
ಕಾಣದೆ ಕೋಪಗೊಂಡು ಆಹಾ! ಎಂತಹ ಭಕ್ತಿಯಿಂದ ಎಡೆಮಾಡಿದಿರಿ!
ಇದರಲ್ಲಿ ತಲೆಯ ಮಾಂಸವೇ ಇಲ್ಲ! ಶರೀರದಲ್ಲಿ ಶಿರಸ್ಸೇ ಮುಖ್ಯವಾದದ್ದು.
ಆ ಉತ್ತಮಾಂಗದ ಮಾಂಸವಿಲ್ಲದ ಅಡಿಗೆಯನ್ನು ನಾನೆಂದಿಗೂ ಮುಟ್ಟುವ
ದಿಲ್ಲ. ಇದರಿಂದ ನನ್ನ ವ್ರತಭಂಗವಾಗುವದು ಎಂದು ಗದ್ದರಿಸಲು ದಂಪ
ಗಳು ಒಬ್ಬರ ಮುಖವನ್ನೊಬ್ಬರು ನೋಡುತ್ತ ನಡುಗುತ್ತಿರಲು ಕಂಡು
ದಿಯು ತಲೆಯ ಮಾಂಸವನ್ನು ತಂದು ಎಡೆಮಾಡಿದಳು. ಆಗ ತಪಸ್ವಿಯು
ನಾನೊಬ್ಬನೇ ಊಟ ಮಾಡುವದಿಲ್ಲ. ನೀನೂ ನನ್ನ ಜೊತೆಯಲ್ಲಿ ಕುಳಿತು
ಭುಂಜಿಸಬೇಕೆನ್ನಲು ಸಿರಿಯಾಳನು ಹೆಂಡತಿಯ ಮುಖವನ್ನು ನೋಡಿದನು.

ಹಿರಿಯರ ಮಾತಿನಂತೆ ನಡೆಯುವದು ಯುಕ್ತವೆಂದು ನುಡಿದ ಹೆಂಡತಿಯ ಮಾತಿನಂತೆ ತಾನೂ ಒಂದೆಡೆ ಕುಳಿತುಕೊಳ್ಳಲು ಆ ತಪಸ್ವಿಯು ಆಶ್ಚರ್ಯ ಭರಿತನಾಗಿ ನಾನು ಮಕ್ಕಳಿಲ್ಲದ ಮನೆಯಲ್ಲಿ ಉಣ್ಣಲಾರೆನು. ಗುರುವನ್ನೂ, ದೇವರನ್ನೂ, ಅತಿಥಿಗಳನ್ನೂ ಸತ್ಕರಿಸುವ ಕಾಲದಲ್ಲಿ ಮನೆಯಲ್ಲಿ ಮಕ್ಕಳಿರಲೇ ಬೇಕು. ಮಕ್ಕಳಿಲ್ಲದ ನಿನ್ನ ಮನೆಯಲ್ಲಿ ಭೋಜನ ಮಾಡಿದರೆ ನಾನು ಪರಮಪಾತಕಿಯಾಗುವೆನು. ಆದ್ದರಿಂದ ನಾನೆಂದಿಗೂ ಊಟ ಮಾಡೆನು. ತೆಗೆದುಕೋ ಈ ಬಟ್ಟಲನ್ನು ಎಂದು ಬೀಸಾಡ ಹತ್ತಿದ ಪರಶಿವನ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಿ ಸಿರಿಯಾಳನು ಸ್ವಾಮೀ, ಬಾಲಕನು ಓದುವ ಮನೆಗೋ, ಆಟಕ್ಕಾಗಿಯೋ ಹೋಗಿರುವನು. ಬಂದ ಮೇಲೆ ತಮ್ಮ ಪ್ರಸಾದ ಸೇವಿಸಿ ತೃಪ್ತನಾಗುವನು. ಮಾಡಿದ ಪದಾರ್ಥಗಳು ಆರುವದಕ್ಕೆ ಮುಂಚಿತ ವಾಗಿಯೇ ಸ್ವೀಕರಿಸಿ ತೃಪ್ತರಾಗಬೇಕೆಂದು ಬೇಡಿಕೊಂಡನು. ನಂತರ ಶಿವನು ಸಾಧ್ವೀಶಿರೋಮಣಿಯಾದ ಚಂಗಳಾದೇವಿಗೆ- ಅಮ್ಮಾ, ತಾಯಿಯು ಪ್ರೀತಿ ಯಿಂದ ಕರೆದರೆ ಮಕ್ಕಳು ಬಾರದಿರುವರೇ ? ನೀನು ಈಗಲೇ ಹೊರಗೆ ಹೋಗಿ ನಮಗೆಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ನಾಲ್ಕೂ ದಿಕ್ಕುಗಳಲ್ಲಿ ಕೈಬೀಸಿ ಕರೆದು ಕೂಗು. ನಿನ್ನ ಮಗನು ಬರುವನು. ಎಂದು ಹೇಳಿದ ಈಶ್ವರನ ಮಾತನ್ನು ನಂಬಿ ಆಕೆಯು ಹೊರಗೆ ಬಂದು ಕೈಗಳನ್ನು ಮೇಲಕ್ಕೆತ್ತಿ ದೂರದ ಲ್ಲಿದ್ದವರನ್ನು ಕೈಬೀಸಿ ಕವರೆಂತೆ ಬಾ ಮಗನೇ! ನನ್ನ ಮುದ್ದಿನ ಕಂದನೇ ಬಾ! ಶಿವಭಕ್ತರ ಕೈಗನ್ನಡಿಯೇ ಬಾ ! ಈಶ್ವರನಿಗಾಹಾರವಾದವನೇ ಬಾ ! ಶಿವ ಭಕ್ತಿಪೂರಿತ ಹೃದಯನೇ ಬಾ ! ಬಾ !! ಬಾ !!! ಎಂದು ಕರೆಯುತ್ತಿರುವ ತಾಯಿಯ ಧ್ವನಿಯನ್ನು ಕೇಳಿ ಮುಗುಳುನಗೆ ಬೀರುತ್ತಿರುವ ಮುದ್ದು ಮಗನು ಲೀಲಾಸ್ಮಿತನಾಗಿ ಎದುರಿಗೆ ಬರುತ್ತಿರುವದನ್ನು ನೋಡಿ ತಪಸ್ವಿ ಯನ್ನು ಸತ್ಕರಿಸುವದಕ್ಕಾಗಿ ಬಂದನೆಂದು ಹಿಗ್ಗಿನಿಂದ ಹೋಗಿ ಮಗನನ್ನು ಎತ್ತಿಕೊಂಡಳು. ತಂದೆಯು ಮಗನನ್ನು ನೋಡಿ ಆನಂದ ಭರಿತನಾದನು. ಚಿಲ್ಲಾಳನು ಬಂದು ತಪಸ್ವಿಯ ಪಾದಗಳಿಗೆ ನಮಸ್ಕರಿಸಲು ಸಿರಿಯಾಳನು ಸ್ವಾಮೀ, ತಾವು ಸುಖವಾಗಿ ಈಗ ಭೋಜನ ಮಾಡಬೇಕೆಂದು ಪ್ರಾರ್ಥಿಸಿದನು. ಆ ವಾರ್ತೆಯನ್ನು ಪಟ್ಟಣದ ಜನರೆಲ್ಲ ಕೇಳಿ ಆಶ್ಚರ್ಯವನ್ನು ಹೊಂದಿದರು. ಶಂಕರನು ಅವರ ಭಕ್ತಿಗೆ ಮೆಚ್ಚಿ ತನ್ನ ದಿವ್ಯರೂಪವನ್ನು ತೋರಿಸಿದನು

ಪುಷ್ಪವೃಷ್ಟಿಯಾಯಿತು. ಎಲ್ಲ ಪ್ರಮಥರೂ ಆಗಮಿಸಿದರು ಪರಮೇಶ್ವರನು ಸಿದ್ಧವಾಗಿದ್ದ ಪುಷ್ಪಕ ವಿಮಾನದಲ್ಲಿ ಪುತ್ರಸಮೇತ ದಂಪತಿಗಳನ್ನು ಕುಳ್ಳಿರಿಸಿಕೊಂಡು ಕೈಲಾಸವನ್ನು ಸೇರಿ ಪಾರ್ವತೀಸಹಿತನಾಗಿ ಪರಮೇಶ್ವರನು ಓಡ್ಡೋಲಗದಲ್ಲಿ ಕುಳಿತಿರುವಾಗ ಸಿರಿಯಾಳನು ಶಿವನನ್ನೂ ತನ್ನ ಮಗನನ್ನೂ, ನೋಡಿ ಸಂತೋಷದಿಂದ ಗರ್ವಿಷ್ಟನಾಗಿ ನನ್ನಂತೆ ಹೆತ್ತ ಮಕ್ಕಳನ್ನು ಶಿವನಿಗೆ ಅರ್ಪಿಸಿ ಕೈಲಾಸ ಪಡೆದವರು ಈ ಭೂಲೋಕದಲ್ಲಿ ಯಾರಿರುವರು ? ನನ್ನಂತಹ ಅಸಾಧ್ಯಕಾರ್ಯ ಮಾಡಲಿಕ್ಕೆ ಯಾರಿಗೆ ಶಕ್ತಿ ಇದೆ ಎಂದು ನುಡಿಯಲು ಮಹಾದೇವನು ಎಲೈ ಭಕ್ತನೇ, ಬಾ ಎಂದು ಕೈಹಿಡಿದು ಭೂಲೋಕಕ್ಕೆ ಕರೆತಂದನು.

## — ನಿಂಬೆಕ್ಕನ ಕಥೆಯು —

ನಿಂಬೆಕ್ಕನೆಂಬ ಶಿವಭಕ್ತೆಯು ಶಿವಶರಣರ ಮನೆಯಲ್ಲಿ ನೀರು ಹೊರುವದರಿಂದಲೂ, ಮಗನು ಜಂಗಮರ ಗೋವುಗಳನ್ನು ಕಾಯುವದರಿಂದಲೂ ಬಂದ ಕೂಲಿ ಹಣದಿಂದ ಉಪಜೀವಿಸುತ್ತ ಗುರುಲಿಂಗ ಜಂಗಮಾರ್ಚನ ತತ್ಪರಳಾಗಿ ಕೀರ್ತಿಶಾಲಿಯಾಗಿದ್ದಳು. ಅವಳ ಮನೆಗೆ ಶಿರಿಯಾಳಸೆಟ್ಟಿಯನ್ನು ಕರೆದುಕೊಂಡು ಪರಶಿವನು ಜಂಗಮ ರೂಪದಿಂದ ಬರಲು ಆಕೆಯು ಅತ್ಯಂತ ಭಕ್ತಿಯಿಂದ ಅವರನ್ನು ಸತ್ಕರಿಸಿ ಭೋಜನದಿಂದ ತೃಪ್ತಿಗೊಳಿಸಬೇಕೆಂದು ವಿಚಾರಿಸಿ ಬಿನ್ನಹಮಾಡಿ, ಸ್ನಾನಮಾಡಿ ಶುಚಿಯಾಗಿ ಶಾವಿಗೆ, ಮಂಡಿಗೆ, ಹೂರಿಗೆ, ಲಾಡು, ಫೇಣಿ, ಚಿರೋಟಾ ಮೊದಲಾದ ಬಗೆಬಗೆಯ ಮಧುರವಾದ ಭಕ್ಷ್ಯ-ಭೋಜ್ಯಗಳನ್ನು ಸಿದ್ಧಮಾಡಿ ಅವುಗಳನ್ನು ಮಡಿಬಟ್ಟೆಯಲ್ಲಿ ಮುಚ್ಚಿಟ್ಟು ಜಂಗಮ ಶಿವಾರ್ಚನೆಗೆ ಮೀಸಲ ನೀರು ತರಲು ಬಾವಿಗೆ ಹೋದಳು. ಇತ್ತ ಜಂಗಮರ ದನಗಳನ್ನು ಕಾಯಲು ಹೋದ ಮಗನು ಹಸಿವಿನಿಂದ ಕಂಗೆಟ್ಟು ಮನೆಗೆ ಬಂದು ತಾಯಿಯನ್ನು ಕೂಗಿ ಮನೆಯಲ್ಲಿ ಹುಡುಕಿ ನೋಡಲು ಎಲ್ಲಿಯೂ ಕಾಣದಿರಲು ಆಹಾರಕ್ಕಾಗಿ ಪಾತ್ರೆಗಳನ್ನು ಹುಡುಕಿ ನೋಡುತ್ತಿರಲು ಮಡಿಯನ್ನು ಹೊದಿಸಿದ್ದ ತಿನುಸುಗಳನ್ನು ಕಂಡು ಅವುಗಳಲ್ಲಿ ಕೆಲವನ್ನು ತೆಗೆದುಕೊಂಡು ತಿನ್ನುತ್ತಿರುವಷ್ಟರಲ್ಲಿ; ಅವನ ತಾಯಿಯು ಮನೆಗೆ ಬಂದು ಮಗನು ಮಾಡಿದ ಕೆಲಸಕ್ಕೆ ಕೋಪಗೊಂಡು ಅತ್ಯಂತ ದುಃಖಿ

ತಳಾಗಿ ಮೂಲೆಯಲ್ಲಿಟ್ಟಿದ್ದ ಒನಕೆಯಿಂದ ಮೂಳ ನಾಯಿಯನ್ನು ಹೊಡೆದು ಕೊಲ್ಲುವಂತೆ ತಲೆಗೆ ಹೊಡೆದು ಕಾಲುಹಿಡಿದು ದರದರನೆ ಎಳೆದು ಹುಲ್ಲು ಮೆದೆಯಲ್ಲಿ ಮುಚ್ಚಿಟ್ಟು ಮನೆಗೆ ಬಂದು ಪರಿಶುದ್ಧಳಾಗಿ ಮಂತ್ರವತ್ತಾದ ಭಸ್ಮವನ್ನು ಧರಿಸಿಕೊಂಡು ಮತ್ತೆ ಮೊದಲಿನಂತಹ ಅಡಿಗೆ ಮಾಡುತ್ತಿರುವಾಗ ಪರಶಿವನು ಕಣ್ಣುಸನ್ನೆಯಿಂದ ನಡೆದ ಸಂಗತಿಯನ್ನು ಸಿರಿಯಾಳನಿಗೆ ತಿಳಿಸಿ ದನು. ಆತನು ಅವಳ ಭಕ್ತಿಯನ್ನು ಕಂಡು ಆಶ್ಚರ್ಯಚಕಿತನಾದನು. ನಿಂಬೆ ಕ್ಕನು ಅಡಿಗೆಯನ್ನು ಸಿದ್ಧಗೊಳಿಸಿ ಇಬ್ಬರಿಗೂ ಶಿವಪೂಜೆಯನ್ನು ಮಾಡಿಸಿ ನಮಸ್ಕರಿಸಿ ಕೈಮುಗಿದು ನಿಂತುಕೊಂಡು "ದಾತಾಭೋಕ್ತಾ ಸ್ವಯಂ ಶಿವಃ" (ಕೊಡುವವನೂ, ಊಟ ಮಾಡುವವನೂ ಶಿವನೇ ಆಗಿದ್ದಾನೆ) ಎಂದು ಹೇಳಿ ದಳು. ಆಗ ಶಂಕರನು ಅಮ್ಮಾ! ನಿನ್ನ ಮಗನು ಎಲ್ಲಿ ಹೋದನು? ಆಗಳೇ ಮನೆಗೆ ಬಂದು ಹಸಿವೆಯಾಗಿದೆಯೆಂದು ಕಾಡಿಸುತ್ತಿದ್ದನಲ್ಲ. ಈಗಾದರೂ ಅವನನ್ನು ಕರೆದು ಉಣಿಸು. ನೀನು ಬಹಳ ಕಠಿಣ ಹೃದಯದವಳು. ಮನೆಗೆ ಅತಿಥಿಗಳು ಬಂದರೆ ಹೆಚ್ಚಾಗಿ ತಿಂಡಿ ಸಿಗುವದೆಂದು ತುಂಬಾ ಆಸೆ ಪಡುತ್ತಿರುವದು ಮಕ್ಕಳ ಲಕ್ಷಣ. ಆದ್ದರಿಂದ ನಿನ್ನ ಮಗನನ್ನು ಕರೆ. ಅವನೂ ನಮ್ಮೊಡನೆ ಊಟಮಾಡಲಿ. ಮಕ್ಕಳಿಲ್ಲದೆ ನಮಗೂ ಊಟ ಮಾಡಲಿಕ್ಕಾ ಗುವದಿಲ್ಲ. ಮಕ್ಕಳು ಇಲ್ಲದ ಮನೆಯೂ, ಮಕ್ಕಳ ಮಗ್ಗುಲಲ್ಲಿ ಕುಳಿತು ಉಣ್ಣದ ಊಟವೂ ಕಾಟದ ಕೆಲಸಗಳಾಗುವವು. ಎಂದು ಬಲ್ಲವರು ಹೇಳು ವರು ಈಗಲಾದರೂ ಸತ್ತ ಮಗನನ್ನು ಕೂಗಿ ಕರೆ ಎಂದು ಈಶ್ವರನು ಹೇಳಲು ಆಕೆಯು- ನಕ್ಕು ಓ ಸ್ವಾಮಿಯೇ, ನಿನ್ನ ಈ ಬೆಡಗಿನ ಮಾತುಗಳನ್ನು ಬಿಟ್ಟುಬಿಡು. ನಾನು ನಿನ್ನ ಹಂಗಿನಲ್ಲಿ ಬಾಳಿದ ಸಿರಿಯಾಳಸೆಟ್ಟಿಯೆಂದು ಹೀಗೆ ಮಾತಾಡುವೆಯಾ! ಮಕ್ಕಳನ್ನು ಕಡಿದು ಕತ್ತರಿಸಿ ಮತ್ತೆ ಬರಮಾಡಿ ಕೊಳ್ಳುವ ಈ ಕೆಲಸ ನನಗೆ ಬೇಡ. ನಾನು ಅವನಂತೆ ಮೂಢಳಲ್ಲ. ನಿಂಬ ಕ್ಕನು ಶಿವಭಕ್ತರ ನಿಂಬಿಯೆಂದು ತಿಳಿದುಕೋ. ನನಗೆ ನೀನು ಕೊಡುವ ಮುಕ್ತಿ ಪದವಿಯೊಂದು ಬೇಕಲ್ಲದೆ ಅನ್ಯವಸ್ತುಗಳು ಬೇಡ. ನಿನ್ನ ನೈವೇದ್ಯ ಕ್ಕೆಂದು ಮಾಡಿದ್ದ ಅನ್ನವನ್ನು ತಿಂದು ಆ ಪಾಪಿಯು ಸತ್ತು ಹೋದನು. ಇನ್ನು ನಿನ್ನ ಮಾಯದ ಮಾತುಗಳನ್ನು ಸಾಕುಮಾಡು. ನನಗೆ ಮಗನ ಹಂಬಲವೇ ಇಲ್ಲ. ಎಂದು ನುಡಿಯಲು ಸಿರಿಯಾಳನು ಅವಳ ಮಾತುಕೇಳಿ

ಭೀತನಾಗಿ ನಾಚಿಕೆಯಿಂದ ತಲೆತಗ್ಗಿಸಿದನು. ನಂತರ ಈಶ್ವರನು ಅವಳ ಭಕ್ತಿ ಮೆಚ್ಚಿ ತನ್ನ ನಿಜರೂಪವನ್ನು ತೋರಿಸಲು ಸ್ವಾಮೀ, ನಿನ್ನ ಈ ರೂಪವನ್ನು ಮರೆಮಾಚು. ದೇಹಲಿಂಗಕ್ಕೆ ಜೀವಲಿಂಗವೂ, ಜೀವಲಿಂಗಕ್ಕೆ ದೇಹಲಿಂಗವೂ ಅಂಗಗಳಾಗಿರುವಾಗ ನೀನು ಜಂಗಮ ರೂಪದ ದೇಹವನ್ನು ತೊರೆದು ಬೇರೆ ರೂಪ ಹೊಂದಬೇಕೇ ? ಹಾಲನ್ನು ಕುಡಿಯಬೇಕೆಂದು ಅಳುತ್ತಿರುವ ಮಕ್ಕಳ ಬಾಯಿಗೆ ಇಂಗಿನ ಉಂಡೆಯನ್ನು ಕೊಟ್ಟು ಎದೆಯನ್ನು ಮರೆಮಾಡುವ ಪಂಡಿತ ಕಳಂತೆ ನಿನ್ನ ಈ ರೂಪವನ್ನು ತೋರಿಸಿ ಭಕ್ತಿಯನ್ನು ಮರೆಗೊಳಿಸಿ ಜಾಣತನ ದಿಂದ ತಪ್ಪಿಸಿಕೊಂಡು ಹೋಗಬೇಕೆನ್ನುನಿಯಾ ! ಎಲ್ಲವನ್ನೂ ತಿಳಿದ ನಾನು ನಿನ್ನ ಮಾಯೆಗೆ ಒಳಗಾಗುವೆನೇ ? ನಿನ್ನ ಮೊದಲಿನ ರೂಪವನ್ನು ನೋಡಿ ನಾನು ಬೇರೆ ಎಂದು ತಿಳಿದಿದ್ದೆನೇ ? ಹಣೆಯಲ್ಲಿ ಕಣ್ಣಿದ್ದರೂ, ಇಲ್ಲದಿದ್ದರೂ ಸದ್ಗುರು ಉಪದೇಶದಿಂದ ಜ್ಞಾನಿಯಾದವನಿಗೆ ಭೇದಬುದ್ಧಿಯು ಹುಟ್ಟುವು ದಿಲ್ಲ. ವಸ್ತ್ರದಾನ ಮಾಡಿದ ಜಾಡರ ದಾಸಯ್ಯನ ಮನೆಗೆ ಹೋಗುವಾಗ ಸರ್ವ ಆಭರಣಗಳನ್ನು ಧರಿಸಿಕೊಂಡಿದ್ದೆಯಾ ? ನಿನ್ನ ಮಾನವನ್ನು ಕಾಪ ಹರಿಸಿದ ಕುಂಬಾರ ಗುಂಡಯ್ಯನ ಮನೆಗೆ ಹೋಗುವಾಗ ಯಾವ ಚಂದ್ರ ನನ್ನು ಧರಿಸಿ ಹೋಗಿದ್ದೆ ? ಮಾನಕಂಜನ ಬಳಿಗೆ ಬಂದು ಕೇಶವನ್ನು ಬೇಡುವ ಕಾಲದಲ್ಲಿ ಪಾರ್ವತಿಯೊಡನೆ ಇದ್ದೆಯಾ? ಬಳ್ಳಾಲ ಸಿಂಘುವಿನ ಹೆಂಡತಿಯನ್ನು ಬೇಡುವ ಕಾಲದಲ್ಲಿ ಕೊರಳಲ್ಲಿ ವಿಷವನ್ನು ಧರಿಸಿದ್ದೆಯಾ ? ಸಿರಿಯಾಳನ ಮನೆಗೆ ಹೋದ ಕಾಲದಲ್ಲಿ ಶಿರಸ್ಸಿನಲ್ಲಿ ದೇವಗಂಗೆಯನ್ನು ಧರಿಸಿಕೊಂಡಿ ದ್ದೆಯಾ ? ಇಲ್ಲದಿದ್ದರೂ ಅವರೆಲ್ಲರೂ ನಿನ್ನನ್ನು ಶಿವನೆಂದು ಸತ್ಕರಿಸಲಿಲ್ಲವೇ? ಅಂತಹ ಮಹಾತ್ಮರ ಪಾದಸೇವಕಳಾದ ನನ್ನೊಡನೆ ಈ ಮರೆಮೋಸಗಳು ಏತಕ್ಕೆ ? ಚತುರತನದ ಈ ಬಿನ್ನಣವನ್ನು ಬಿಟ್ಟು ಎನ್ನಾಣೆಯಾಗಿ ಊಟ ಮಾಡಬೇಕೆಂದು ಬೇಡಿಕೊಳ್ಳಲು ಈಶ್ವರನು ಅವಳ ಭಕ್ತಿಗೆ ಮೆಚ್ಚಿ ಸಿರಿಯಾಳ ನೊಡನೆ ತಾನೂ ಭೋಜನ ಮಾಡಿದನು. ಆಗ ನಿಂಬೆಕ್ಕನು ಅವನಿಗೆ ತಾಂಬೂಲವನ್ನು ಕೊಟ್ಟು ಮಹದಾನಂದದಿಂದ ಅವರನ್ನು ಬೀಳ್ಕೊಟ್ಟು ಮಗನ ಮೇಲಣ ಆಶೆಯನ್ನು ಬಿಟ್ಟು ಸುಖದಿಂದ ಇದ್ದಳು. ಪರಶಿವನು ಸಿರಿ ಯಾಳನನ್ನು ನೋಡಿ ಪೂರ್ವ ಕಾಲದಲ್ಲಿ ಕಾಟಕೋಟ-ಚಂಡಿಕೇಶರುಗಳು

ಅಪರಾಧಿಯಾದ ತಂದೆಯನ್ನು ಕೊಂದರಲ್ಲಾ ! ಈಗ ಅಪರಾಧಿಯಾದ ಮಗ ನನ್ನು ಕೊಂದುಹಾಕಿದ ಸಿಂಬೆಕ್ಕನು ಶ್ರೇಷ್ಠಳು ಎಂದು ನುಡಿದನು.

## — ನರಸಿಂಹರಾಜನ ಕಥೆಯು —

ದ್ರಾವಿಡ ದೇಶದಲ್ಲಿ ನರಸಿಂಹರಾಜನೆಂಬ ಶಿವಭಕ್ತಿ ಸಂಪನ್ನನಾದ ದೊರೆ ಇದ್ದನು. ಅವನಿಗೆ ಶೋಭಾವತಿಯೆಂಬ ಹೆಂಡತಿ ಇದ್ದಳು. ಅವಳು ಒಂದು ದಿವಸ ವಿನೋದಾರ್ಥವಾಗಿ ಹೊರಟು ಬಾಹೂರು ಎಂಬ ಗ್ರಾಮ ವನ್ನು ತಲುಪಿ ಅಲ್ಲಿಯ ಶಿವಲಿಂಗವನ್ನು ಪೂಜಿಸಿ ತಿರುಗಿ ಬರುತ್ತಿರುವಾಗ ದಾರಿಯಲ್ಲಿ ಒಬ್ಬ ಶಿವಭಕ್ತನು ಶಿವಪೂಜೆಗೆ ಇರಿಸಿದ್ದ ಹೂಗಳಲ್ಲಿಯ ಒಂದು ಕಪ್ಪು ಕಮಲವನ್ನು ತೆಗೆದುಕೊಂಡು ಮೂಸಿನೋಡಿದಳು. ಅದನ್ನು ನೋಡಿದ ಆ ಭಕ್ತನು ಕೋಪಗೊಂಡು ಅವಳ ಮೂಗನ್ನು ಕೊಯ್ದನು. ಆಗ ಹತ್ತಿರದಲ್ಲಿದ್ದ ಸಖಿಯರು ಬೆದರಿ ತಮ್ಮ ರಾಜನ ಬಳಿಗೆ ಬಂದು ನಡೆದ ವೃತ್ತಾಂತವನ್ನು ಹೇಳಿದರು. ಅದನ್ನು ರಾಜನು ಕೇಳಿ ಆಹಾ! ಆ ಪೂಜಾ ರಿಯು ಎಂತಹ ಕೆಟ್ಟಕೆಲಸವನ್ನು ಮಾಡಿದನು! ಶಿವದ್ರೋಹವನ್ನು ಮೊದಲು ಮಾಡಿದ ಕೈಯನ್ನು ಬಿಟ್ಟು ಕೊನೆಯ ಅಪರಾಧಿಯನ್ನು ಕಡಿದನಲ್ಲಾ ! ಎಂದು ಕೋಪದಿಂದ ಅವನ ಬಳಿಗೆ ಬಂದು ಅವನನ್ನು ಗದರಿಸಿ ಹೆಂಡತಿಯನ್ನು ನೋಡಿ ಎಲ್ಲೆ ಸೀಚಳೇ, ಹೂವನ್ನು ಹಿಡಿದ ನಿನ್ನ ಕೈಯನ್ನು ಮೊದಲು ಮುಂದಕ್ಕೆ ಚಾಚು ಎಂದು ಹೇಳಿ ಕತ್ತಿಯಿಂದ ಅವಳ ಕೈಯನ್ನು ಕಡಿಯಲು ಅವರ ಭಕ್ತಿಭಾವಕ್ಕೆ ಮೆಚ್ಚಿದ ನಾನು ಅವಳಿಗೆ ಕೈಯನ್ನೂ, ಮೂಗನ್ನೂ ಕೊಟ್ಟು ಮೋಕ್ಷವನ್ನು ದಯಪಾಲಿಸಿದೆನು. ಇದೂ ಅಲ್ಲದೆ ಚೋಳರಾಜನು ಬರಗಾಲದಲ್ಲಿ ಬೇಕಾಗಬಹುದೆಂದು ಸಂಗ್ರಹಮಾಡಿಟ್ಟ ಧಾನ್ಯಗಳನ್ನು ಅವನ ಹೆಂಡತಿಯು ತಿನ್ನಲಾಗ ಆಗ ರಾಜನು ಬಸುರಿಯಾದ ಅವಳನ್ನು ಲಕ್ಷಿಸದೆ ಅವಳ ಹೊಟ್ಟೆಯನ್ನು ಸೀಳಿಬಿಡಲು ನಾನು ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ವರ ವನ್ನು ಬೇಡೆನ್ನಲು ಅವನು ಮುಕ್ತಿಯನ್ನು ಬೇಡಿದನು. ಆಗ ಕೂಸಿಗೆ ಪ್ರಾಣ ದಾನಮಾಡಿ ಆ ದಂಪತಿಗಳಿಗೂ ಕೂಸಿಗೂ ಮೋಕ್ಷ ಸುಖವನ್ನು ಕೊಟ್ಟೆನು. ಈ ರೀತಿ ಎಲ್ಲರೂ ದೊಡ್ಡ ಪದವಿಗಳನ್ನು ಹೊಂದಿದರು. ಆದರೆ ಈ ಹೆಣ್ಣು ಮಗಳು ವರ ಬೇಡೆನ್ನಲು ಕಿಪಿಕೇಳಿಸದವಳಂತೆ ಇರುವಳು. ಮಗನನ್ನು

ಕೊಂದರೂ ಅವನ ಪ್ರಾಣವನ್ನು ಬೇಡುವದಿಲ್ಲವಲ್ಲಾ ! ಇವಳ ಭಕ್ತಿ ನಾನು ಎಷ್ಟೆಂದು ಹೇಳಲಿ ? ಎಲೈ ಸಿರಿಯಾಳನೇ, ನಿನಗಿಂತಲೂ ಹೆ ಇವಳ ಭಕ್ತಿಯನ್ನು ನೋಡಿ ನಿನ್ನ ಗರ್ವವನ್ನು ಬಿಡು. ಎಂದು ಹೇ ಯಾಳನನ್ನು ಸಂತೈಸಿ ಅವನ ಅಹಂಕಾರವನ್ನು ಕಳೆದು ಬಳಿಕ ನಿಂಬೆಕ್ಕನ ನಿಗೆ ಪ್ರಾಣವನ್ನು ಕೊಟ್ಟು ಅಕ್ಕರೆಯಿಂದ ಪೈದಿವಿ ಪುಷ್ಪಕ ವಿಮಾ ಕುಳ್ಳಿರಿಸಿ ನಿಂಬೆಕ್ಕನ ಭಕ್ತಿಯನ್ನು ಹೊಗಳಿ ತಾನು ಕೈಲಾಸಕ್ಕೆ ತೆರಳ ಆದರೆ ನಿಂಬೆಕ್ಕನು ಮುಕ್ತಿಗಿಂತಲೂ ಶಿವಶರಣರ ಸೇವೆಯೇ ಹೆಚ್ಚೆನ ತಿಳಿದು ಇಲ್ಲಿಯೇ ಇದ್ದಳು. ಆದಕಾರಣ ಹೇ ಬಸವೇಶ್ವರಾ, ಭಕ್ತಿಯ ಅಹಂಕಾರವು ಕೂಡಿದರೆ ಹಾಲಿಗೆ ಹುಳಿಯನ್ನು ಹಾಕಿದಂತಾಗು ಎಂದು ಹೇಳಿದ ಮಾಚಿದೇವನ ವಾಕ್ಯಗಳನ್ನು ಬಸವೇಶನು ಅತ್ಯಂತ ಭ ಭಕ್ತಿಗಳಿಂದ ಲಾಲಿಸಿ ಅವನ ಪಾದಕ್ಕೆ ನಮಸ್ಕರಿಸಿ ಶಿವಭಕ್ತಿ, ಶಿವಾ ಶಿವಧ್ಯಾನಗಳಲ್ಲಿ ಆಸಕ್ತನಾಗಿದ್ದನು.

## — ಹಲಾಯುಧಯ್ಯನವರ ಕಥೆಯು —

ಆ ಮೇಲೆ ಗುರುವಾದ ಮಡಿವಾಳ ಮಾಚಿದೇವನು ಭಕ್ತನಾದ ಬಸ ಶ್ವರನಿಗೆ ಮತ್ತೊಂದು ಕಥೆಯನ್ನು ಹೇಳತೊಡಗಿದನು. ಬಸವೇಶ್ವ ಕೇಳು. ಪರಶಿವನು ಸಿರಿಯಾಳನ ಕೈಯನ್ನು ಹಿಡಿದುಕೊಂಡು ಹಲಾಯು ಯ್ಯನ ಊರಿಗೆ ಬಂದು ಅವನ ಮನೆಗೆ ಹೋಗಿ ಕುಳಿತುಕೊಳ್ಳಲು ಶಿವ ಣರ ವೇಷದಲ್ಲಿರುವ ಇವರನ್ನು ಅವನು ಬಹುಭಕ್ತಿ ಪೂರ್ವಕವಾಗಿ ಕ ದೀರ್ಘದಂಡ ನಮಸ್ಕಾರಮಾಡಿ ಯಥಾಪ್ರಕಾರ ಸತ್ಕರಿಸಿ ಸ್ವಾಮಿಗಳೆ ತಮ್ಮ ಸ್ಥಲವು ಯಾವದು? ನನ್ನ ಮೇಲೆ ಅಂತಃಕರಣವಿಟ್ಟು ಯಾವ ಊರಿ ಇಲ್ಲಿಗೆ ದಯಮಾಡಿಸಿದಿರಿ ? ಎಂದು ಕೇಳಲು ಜಂಗಮ ರೂಪಿಯಾದ ಶ ರನು— ಅಯ್ಯಾ ಹಲಾಯುಧಯ್ಯಾ, ನಮ್ಮ ಸ್ಥಲವು ಚಿದಂಬರ ಪುರ ನನಗೆ ತಾಯಿ-ತಂದೆಗಳಾರೂ ಇಲ್ಲ. ಚಿಕ್ಕವನಿರುವಾಗ ನನ್ನನ್ನು ಮಾದೇ ಎಂಬವಳು ಸಾಕಿ ಸಲುಹಿದಳು, ಕೋಳೂರ ಕೊಡಗೂಸು ಹಾಲೆರೆದ ಸುರಗಿ ಚೌಡಯ್ಯನು ಅನ್ನವನ್ನು ಉಣ್ಣಿಸಿದನು. ಕೆಂಭಾವಿ ಭೋಗಯ್ಯನ ನಡೆಯಲು ಕಲಿಸಿದನು. ಮಾದರ ಚನ್ನಯ್ಯನಿಂದ ಊಟ ಮಾಡುವದ

ತಿಳಿದುಕೊಂಡೆನು. ತಿರುಜ್ಞಾನ ಸಂಬಂಧಿಗಳು ಈ ವಿಭೂತಿಯನ್ನು ಹಚ್ಚಿದರು. ಜಾಡರ ದಾಸಯ್ಯನು ಬಟ್ಟೆಗಳನ್ನು ಕೊಟ್ಟನು. ಸುಂದರ ನಂಬಿಯಣ್ಣಗಳು ಜಾಣತನದ ಮಾತು ಕಲಿಸಿದರು. ಮಾನಕಂಜ ರಾಜನು ಮುಡಿ ಕಟ್ಟುವವನ್ನು ಕಲಿಸಿದನು. ಪಿಟ್ಟವ್ವೆಯು ಕಷ್ಟಪಟ್ಟು ಕೆಲಸ ಮಾಡುವದನ್ನು ಕಲಿಸಿದಳು. ಬಳಿಕ ಯೌವನ ಬಂದ ಕಾಲದಲ್ಲಿ ಸಿಂಧು ಬಲ್ಲಾಳನು ತನ್ನ ಹೆಂಡತಿಯನ್ನು ಕೊಟ್ಟು ಮದುವೆ ಮಾಡಿದನು. ಮೋನೆಯನಾಥನು ಪಡಿಯನ್ನೆರೆದು ಸಾಕಿದನು. ಈ ಪ್ರಕಾರ ಬಾಳುವೆ ಮಾಡಿಕೊಂಡು ಬಹು ಕಾಲದಿಂದ ಜೀವಿಸುತ್ತ ಭಕ್ತರ ಸಹವಾಸದಲ್ಲಿ ಸಂತೋಷದಿಂದ ಕಾಲಕಳೆಯುತ್ತಿರುವೆನು. ಚೆನ್ನಯ್ಯ, ಚೇರಮ, ಕರಿಕಾಲ, ತಿರುನೀಲಕಂಠ ಮೊದಲಾದ ಭಕ್ತರು ನನ್ನನ್ನು ಈಶ್ವರನೆಂದು ಪೂಜಿಸುವರು. ನಾನು ದೇಶಾಟನೆ ಮಾಡುತ್ತ ಭಕ್ತರು ಮಾಡಿದ ಸೇವೆಯನ್ನು ಸ್ವೀಕರಿಸುತ್ತ ಕಾಂಚೀ ಪಟ್ಟಣಕ್ಕೆ ಬಂದು ಅಲ್ಲಿ ಶಿವಭಕ್ತನಾದ ಸಿರಿಯಾಳನ ಮನೆಯಲ್ಲಿ ಸುಖವಾಗಿದ್ದುಕೊಂಡು ಅವನ ಭಕ್ತಿಯುತ ಸೇವೆಯನ್ನು ಕೈಕೊಳ್ಳುತ್ತಿರುವಾಗ ಅವನ ಮನೆಯಲ್ಲಿ ಒಂದು ದಿವಸ ಒಂದು ಆಶ್ಚರ್ಯಕರ ಘಟನೆ ನಡೆಯಿತು. ಅದೇನೆಂದರೆ— ಈಶ್ವರನು ಒಂದು ದಿವಸ ಭೈರವನ ವೇಷವನ್ನು ಧರಿಸಿ ಸಿರಿಯಾಳನ ಮನೆಗೆ ಬಂದು ನಿನ್ನ ಮಗನನ್ನು ಕೊಂದು ಕಡಿದು ಅಡಿಗೆಮಾಡಿ ನನಗೆ ಊಟ ಮಾಡಿಸಬೇಕೆಂದು ಬೇಡಿದನು. ಆತನು ಅದೇ ಪ್ರಕಾರ ತನ್ನ ಮಗನನ್ನು ಶಿವಾರ್ಪಣೆ ಮಾಡುತ್ತೇನೆಂಬ ಸಂತೋಷದಿಂದ ಕಡಿದು ಚೂರುಮಾಡಿ ಮಾಂಸವನ್ನು ಹೆಂಡತಿಯಿಂದ ಅಡಿಗೆ ಮಾಡಿಸಿ ತೃಪ್ತಿಪಡಿಸಿದ ಸಿರಿಯಾಳನ ಭಕ್ತಿಯು ಅಗಾಧವಾದುದು. ಲೋಕದಲ್ಲಿ ಮಕ್ಕಳ ಮೋಹವು ಯಾರನ್ನೂ ಬಿಟ್ಟಿಲ್ಲ. ಅನೇಕ ದಾರುಣವ್ರತಮಾಡಿ ಮಕ್ಕಳನ್ನು ಪಡೆಯುವಾಗ ತನ್ನ ಮಗನನ್ನು ಕಡಿದು ಬಡಿಸಿದ್ದು ಆಶ್ಚರ್ಯಕರವಾದದ್ದು. ಕಾಟಕೋಟಿ ಚಂಡೇಶ್ವರನು ಶಿವಾಪರಾಧಿಯಾದ ತಂದೆಯನ್ನು ಕೊಂದನು. ಆದರೆ ನಿರಪರಾಧಿಯಾದ ಹೆತ್ತ ಮಗುವಿನ ಮಾಂಸವನ್ನು ಎಡೆಮಾಡಿದಾಗ ಆ ಭೈರವನು ಮಗನನ್ನು ಕರೆ ಎಂದು ಹೇಳಿ ಮಗುವನ್ನು ಕರೆಯಿಸಿ ಅವರನ್ನೂ, ಊರ ಏಳುಬೀದಿಯ ಜನರನ್ನೂ ಕೈಲಾಸಕ್ಕೆ ಕರೆದುಕೊಂಡು ಹೋದನು. ನಾನು ಈ ವರೆಗೆ ಬದುಕಿದ್ದರೂ ಇಂತಹ ಆಶ್ಚರ್ಯಕರ ಮಹಿಮೆಯನ್ನು

ಎಲ್ಲಿಯೂ ಕೇಳಿಲ್ಲವೆಂದು ಪರಶಿವನು ಸಿರಿಯಾಳನ ಹೃದಯವನ್ನೂ, ಹ
ಯುಧಯ್ಯನ ಮನಸ್ಸನ್ನೂ ಪರೀಕ್ಷಿಸಬೇಕೆಂದು ಈ ಸಂಗತಿಯನ್ನು ಹೇಳಿದ
ಇದನ್ನು ಕೇಳಿ ಹಲಾಯುಧಯ್ಯನು ಹರಹರಾ ! ಪರಮೇಶ್ವರನು ನರಮಾ
ವನ್ನು ಬೇಡುವದಕ್ಕೆ ಅವನು ರಾಕ್ಷಸನೇ ! ಶಿವಭಕ್ತಿ ಸಂಪನ್ನನಾದ ಮ
ನನ್ನು ಕೊಲ್ಲುವದಕ್ಕೆ ಸಿರಿಯಾಳನು ಭಕ್ತಿಶೂನ್ಯನೇ ! ಇದು ಸುಳ್ಳು ಇಂ
ಮಾತನ್ನು ನಾನೆಂದೂ ನಂಬುವದಿಲ್ಲ. ಮಹಿಮಾನ್ವಿತನಾದ ನೀನು ಇ
ಹುಚ್ಚು ಮಾತುಗಳನ್ನಾಡುವದೇ ! ಎನ್ನಲು ಪರಮೇಶ್ವರನು ಅಯ್ಯಾ ಹ
ಯುಧಯ್ಯಾ, ನಿನ್ನಾಣೆಯಾಗಿಯೂ ಈ ಮಾತು ನಿಜ. ಜಂಗಮ
ಯಾದ ಶಿವನಿಗೆ ಭಕ್ತರು ತಮ್ಮ ಹೆಂಡರು, ಮಕ್ಕಳನ್ನೂ, ತಮ್ಮ ತ
ಮನ, ಧನಗಳನ್ನೂ ಅರ್ಪಿಸುವರು. ಇಂಥ ಭಕ್ತಿಸಂಪನ್ನನು ಸಿರಿಯಾ
ನೊಬ್ಬನೆಂದೇ ತಿಳಿಯಬೇಡ. ಪರಶಿವನು ಭಕ್ತರನ್ನು ಪರೀಕ್ಷಿಸುವದಕ್ಕಾ
ಅಸಾಧ್ಯವಾದ ವಸ್ತುಗಳನ್ನು ಬೇಡಿ ಅವರು ಹಿಂದೆಗೆಯದೆ ಕೊಡುವ ಭ
ರಿಗೆ ಅದನ್ನು ಪುನಃ ಕೊಟ್ಟು ಅವರಿಗೆ ಮುಕ್ತಿಪದವಿಯನ್ನು ಕೊಡುವನ
ಹಾಗು ಅವರ ಭಕ್ತಿಯನ್ನು ಲೋಕದಲ್ಲಿ ಪ್ರಸಾರಗೊಳಿಸುವನು. ಭಕ್ತಿ
ಪರೀಕ್ಷೆಗಾಗಿ ಮಗನನ್ನು ಕೊಲ್ಲಿಸಿ ಅದನ್ನು ಪ್ರಕಾಶಪಡಿಸಿ ಅವರಿಗೆ ಮುಕ್ತಿ
ಯನ್ನು ಕೊಡುವದಕ್ಕಾಗಿ ಮಗನನ್ನು ಬದುಕಿಸಿದ ಈಶ್ವರನಲ್ಲಿ ದೋಷವೇ
ರುವದು. ಸಾವಿಗಂಜುವ ಮಗುವನ್ನು ಕೊಲ್ಲಿಸಿದ್ದರೆ ಈಶ್ವರನು ಅಪರಾ
ಯಾಗುತ್ತಿದ್ದನು. ಸಾಯುವದಕ್ಕೆ ತಾನೇ ಸಿದ್ಧನಾಗಿದ್ದ ಮಗನನ್ನು ಕೊ
ಸುವದರಲ್ಲಿ ಯಾವ ದೋಷ ಉಂಟು. ಎಂದು ನುಡಿದ ಈಶ್ವರನ ಮಾತ
ಹಲಾಯುಧನು ಕಡುಕೋಪವನ್ನು ಹೊಂದಿ ಆಹಾ ! ಪರಮೇಶ್ವರನು ಮಗು
ವಿನ ಮಾಂಸವನ್ನು ತಿನ್ನುವದಕ್ಕೆ ಬೇಡಿದನೇ ? ಭಕ್ತಿಸಂಪನ್ನನಾದ ಸಿರಿಯಾ
ಳನು ಮುದ್ದು ಮಗನನ್ನು ಕರುಣೆಯಿಲ್ಲದೆ ಕಡಿದು ಹಾಕಿದನೇ ? ಇಂದು
ಧರನು ಚಂದವಾದ ಮುಡಿಯಲ್ಲಿ ಉನ್ಮತ್ತದ ಹೂವನ್ನು ಮುಡಿದು ಮರು
ಬಳಗದೊಡನೆ ಮಸಣವಾಸಿಯಾಗಿದ್ದುದರಿಂದ ಈ ರೀತಿಯ ಶಿಶುಕೊಲೆಗೆ
ಆಸೆ ಪಟ್ಟನೇ ? ಒಂದು ವೇಳೆ ಭಕ್ತಿ ಪರೀಕ್ಷೆಗಾಗಿ ಅವನ ಮಗನನ್ನು ಬೇಡಿದ
ವನಾಗಿದ್ದರೆ ಮಗನನ್ನು ಕೊಲ್ಲುವದಕ್ಕೆ ಮುಂಚೆಯೇ ಪ್ರತ್ಯಕ್ಷನಾಗಿ ವ
ವನ್ನು ಕೊಡಬೇಕಾಗಿತ್ತು. ಸರ್ವಲೋಕ ಪೂಜ್ಯನಾದ ಶಂಕರನು ಆ ಮಗು

ವನ್ನು ಕೊಲ್ಲಿಸಿ ಮಾಂಸವನ್ನು ತಿನ್ನುವದಕ್ಕೆ ಹೇಗೆ ಬಯಸಿದನು? ಭಕ್ತನಾದ ಸೆಟ್ಟಿಯು ಮಗನನ್ನು ಕೊಲ್ಲುವದಕ್ಕೆ ಹೇಗೆ ಮನಗೊಟ್ಟನು. ತಾನೇ ಹೇಳಿ ರುವ ವೇದದಲ್ಲಿ "ಅಹಿಂಸಾ ಪರಮೋಧರ್ಮಃ" ಎಂದು ಹೇಳಿ ಸುಗುಣ ಗಂಭೀರನಾಗಿದ್ದ ಮಗನನ್ನು ಕೊಲ್ಲಿಸುವದಕ್ಕೆ ಹೇಗೆ ಬಯಸಿದನು. ಇವನ ಚರ್ಯವನ್ನು ನೋಡಿ ಭಕ್ತರು ನಗಲಿಕ್ಕಿಲ್ಲವೇ? ಶಿಷ್ಯರ ಮನೆಯ ಹಾಲು, ಅನ್ನ ಸೇವಿಸಿ ವಂಶಾಭಿವೃದ್ಧಿಯಾಗುವಂತೆ ಹರಸಿ ಆಶೀರ್ವದಿಸುವದನ್ನು ಬಿಟ್ಟು ಲೋಕದ ಅಪವಾದಕ್ಕೆ ಹೆದರದೆ ಮಾಂಸಕ್ಕಾಗಿ ಮಗುವನ್ನು ಕೊಲ್ಲಿಸಿ ದನಲ್ಲಾ! ಈಶ್ವರನೇ ಹೀಗೆ ಮಾಡಿದ ಮೇಲೆ ಇನ್ನುಳಿದವರಿಗೆ ಹೇಳುವದೇ ನಿದೆ. ಶಿವನು ಸ್ಮಶಾನದಲ್ಲಿ ಪಿಶಾಚಿಗಳೊಡನೆ ಕುಣಿದಾಡಿ ಲೋಕಂಗಳರು ಹಿದ ದೋಷಗಳನ್ನು ಫಾಲನೇತ್ರದಿಂದ ಶಿವಶರಣರ ಮನೆಯನ್ನು ಹೊಕ್ಕು ಹೋಗಲಾಡಿಸಿಕೊಳ್ಳಲು ಬಯಸಿ ಭಕ್ತರ ಮಗನನ್ನು ಕೊಲ್ಲಿಸುವದಕ್ಕೆರಗಿದ ಕೆಲಸವು ಅತಿ ಆಶ್ಚರ್ಯಕರವಾದುದು. ಹಿಂದೆ ತಿರಿದು ಉಂಡ ಪಾಪವನ್ನು ಚನ್ನಯ್ಯನೊಡನೆ ಮಾಡಿದ ಊಟದಿಂದಲೂ, ಪಿಶಾಚಗಳ ಸಹವಾಸದಿಂದ ಬಂದ ಪಾಪವನ್ನು ಸುಂದರ ನಂಬಿಯಣ್ಣಗಳ ಸಂಗದಿಂದಲೂ ಅಳಿದು ಹೋಯಿತು. ಬಾಹೂರ ಬೊಮ್ಮನು ರುಂಡಮಾಲೆಯನ್ನು ತಪ್ಪಿಸಿ ಹೂಮಾ ಲೆಯನ್ನು ಕೊಟ್ಟನು. ಜೇಡರ ದಾಸಯ್ಯನು ಗಜಚರ್ಮವನ್ನು ತೆಗೆಸಿ ಹೊಸ ಬಟ್ಟೆಯನ್ನು ಹೊದಿಸಿದನು. ನೆಲೆಗೊಂಡಯ್ಯನು ಸ್ಮಶಾನ ಭಸ್ಮವನ್ನು ತಪ್ಪಿಸಿ ಶ್ರೀಗಂಧವನ್ನು ಲೇಪಿಸಿದನು. ಈ ಪ್ರಕಾರ ಶರಣರಿಂದ ಪರಿಶುದ್ಧನಾದ ಪರ ಮೇಶ್ವರನು ಭಕ್ತನ ಮಗನನ್ನು ಕೊಲ್ಲಿಸುವದಕ್ಕೆ ಪ್ರಯತ್ನಿಸಿದನಲ್ಲಾ! ಲೋಕದಲ್ಲಿ ಇವನಿಗಿಂತಲೂ ಕೃತಘ್ನರು ಮತ್ತಾರುಂಟು? ಒಂದು ವೇಳೆ ಪರಶಿವನು ನರಮಾಂಸವನ್ನು ಅಪೇಕ್ಷಿಸಿ ಬಂದು ಬೇಡಿದ್ದರೆ ವೀರಶೈವ ಮತಾ ವಲಂಬಿಗಳು ಹೊಗಳುವಂತೆಯೂ, ಶಿವಶರಣರು ಕೊಂಡಾಡುವಂತೆಯೂ ತನ್ನ ದೇಹವನ್ನೇ ಕಡಿದು ಮಾಂಸವನ್ನು ಕೊಡಬೇಕಾಗಿತ್ತು. ಹಾಗೆ ಮಾಡದೆ ಶಿವನ ಆಜ್ಞಾಪಾಲಕನಾದ ಮಗನನ್ನು ಕಡಿದಿಕ್ಕಬಹುದೇ! ಅವನು ಮಗನಾದ ಮಾತ್ರಕ್ಕೇನು? ಶಿವನಿಗೆ ಸಮಾನನಾದ ಜಂಗಮ ರೂಪಿಯ ಲ್ಲವೇ! ಅವನನ್ನು ಕೊಂದು ಸಿರಿಯಾಳನು ಜಂಗಮನಿಗಿಕ್ಕಬಹುದೇ! ಆಹಾ! ಮಗನನ್ನು ಕೊಂದುದಕ್ಕಾಗಿ ಸಿರಿಯಾಳನಿಗೂ, ನರಮಾಂಸವನ್ನು

ಬೇಡಿದ್ದಕ್ಕಾಗಿ ಈಶ್ವರನಿಗೂ ಅಪವಾದ ಬರುವದೆಂದು ಹೆದರಿ ಕೂಡಲೆ ಮಗುವನ್ನು ಬರವಾಡಿದರು. ಜಂಗಮ ಲಿಂಗಕ್ಕೆ ಹಿತ್ತೈಷಿಯಾದ ಶಂಕರನು ಭಕ್ತನ ಮಗನನ್ನು ಹೇಗೆ ಕೊಲ್ಲಿಸಿದನು ? ಜಂಗಮಪೂಜಾ ನಿರತನಾದ ಆ ಸಿರಿಯಾಳನು ಜಂಗಮ ರೂಪಿಯಾದ ಮಗನನ್ನು ಹೇಗೆ ಕೊಂದನು ? ಒಂದು ವೇಳೆ ಆ ಮಗುವು ಸಾಯುವದಕ್ಕೆ ಒಪ್ಪಿದರೂ ಶಿವಚಿಹ್ನ ಧರಿಸಿದವನನ್ನು ಹೇಗೆ ಕೊಲ್ಲುವದು? ಛೀ ಬಿಡು ಬಲ್ಲವರು ಇದನ್ನು ಎಂದಿಗೂ ಮೆಚ್ಚಲಾರರು. ಭೂಲೋಕದಲ್ಲಿ ಎಳೆಗೂಸುಗಳನ್ನು ಕೊಲ್ಲುವದೂ ತಿನ್ನುವದೂ ರಾಕ್ಷಸೀ ಕೃತ್ಯವು. ಎಲ್ಲರೂ ಇದನ್ನು ಅನಾಚಾರವೆಂದು ಭಾವಿಸುವರು. ಇಂಥ ಕ್ರೂರ ಕೆಲಸವನ್ನು ಭಕ್ತರು ಮೆಚ್ಚುವರೇ ! ಎಂದೂ ಒಪ್ಪಲಾರರು. ಆದ ರಿಂದ ಅವರಿಬ್ಬರೂ ರಾಕ್ಷಸರು. ಅವನ ಕಥೆಯು ಕೇಳುವದಕ್ಕೆ ನೀಚವಾದದ್ದು. ಆದುದರಿಂದ ಆ ವಿವರಗಳನ್ನು ನನಗೆ ಹೇಳಬೇಡ. ಇದನ್ನು ಹೇಳುವವರೂ ಶಿವಭಕ್ತರ ಗುಂಪಿಗೆ ಬಾಹಿರರಾಗುವರು. ಎಂದು ಡಂಗುರ ಹೊಡಿಯಿಸಿದನು. ಮತ್ತು ಅವರನ್ನು ಆಕ್ಷೇಪಿಸಿ ಬಹಿಷ್ಕರಿಸಿದನು. ಆಗ ಭಯದಿಂದ ಕುದುಗುತ್ತಿರುವ ಸಿರಿಯಾಳನನ್ನು ನೋಡಿ ಶಂಕರನು ಹೆದರಬೇಡವೆಂದು ಅಭಯವನ್ನು ಕೊಟ್ಟು ತನ್ನ ಪತ್ನಿಯಾದ ಪಾರ್ವತಿಯನ್ನು ನೆನೆದು ಚಂಗಳಾದೇವಿ ಸಹಿತವಾಗಿ ಬರಬೇಕೆನ್ನಲು ಆ ದೇವಿಯು ಋಷಿಪತ್ನಿಯಂತೆ ವೇಷವನ್ನು ಧರಿಸಿ ಹಲಾಯುಧನ ಮನೆಗೆ ಬರಲು ಹಲಾಯುಧನು ಬೇಗನೆ ಎದ್ದು ದೇವಿಯ ಪಾದಗಳಿಗೆ ನಮಸ್ಕರಿಸಿ ಸತ್ಕರಿಸಿದನು. ಆಗ ಪಾರ್ವತಿಯು ಎಲೈ ಭಕ್ತಾಗ್ರೇಸರನೇ, ನೀನು ಪರಮ ಶಿವಭಕ್ತನಾಗಿ ಪ್ರಖ್ಯಾತಿ ಹೊಂದಿದ್ದು ಸಕಲರ ಕೋರಿಕೆಗಳನ್ನು ಕೊಡತಕ್ಕವನಾಗಿರುವೆ. ಈಗ ನನ್ನ ಅಪೇಕ್ಷೆಯನ್ನು ನೆರವೇರಿಸಬೇಕೆಂದು ಬೇಡಿಕೊಳ್ಳಲು ಎಲೈ ದೇವಿಯೇ, ಲೋಕದಲ್ಲಿಯ ಶಿವ ಶರಣರ ಪಾದಧೂಳಿಗೆ ಸಮಾನನಾದ ನಾನು ನಿನ್ನ ಕೋರಿಕೆಯನ್ನು ನೆರವೇರಿಸಲು ಶಕ್ತನಾಗುವೆನೇ ! ಶಿವಭಕ್ತ ಶಿರೋಮಣಿಗಳು ಮಾತ್ರ ನಿನ್ನ ಅಪೇಕ್ಷೆಯನ್ನು ಪೂರೈಸಬಲ್ಲರೆಂದು ಹೇಳಿ ಸುಮ್ಮನಾಗಲು ಶಂಕರಿಯು— ಈ ಲೋಕದಲ್ಲಿ ಪತಿವ್ರತೆಯರಿಗೆ ಪತಿಯೇ ಪರದೈವವು. ಅವನಿಂದಲೇ ಸಕಲ ಸುಖಗಳುಂಟಾಗುವವು. ಅವನಿಲ್ಲದೆ ನಾನು ಹೇಗೆ ಜೀವಿಸಲಿ. ಲಕ್ಷ್ಮೀ ಸರಸ್ವತಿಯರಂತೆ ಅನ್ಯರ ಆಶ್ರಯದಲ್ಲಿ ನಾನು ಬಾಳುವವಳಲ್ಲ. . ಗಂಡನು

ಬಹಿಷ್ಕೃತನಾದರೆ ಆ ದೋಷವು ಹೆಂಡತಿಗೂ ಬಾರದಿರುವದೇ ? ಆದ್ದರಿಂದ ನಿನ್ನ ಪಾದಗಳಿಗೆ ನಮಸ್ಕರಿಸುವ ನಾರೀಶಿರೋಮಣಿಯಾದ ಈ ಜಂಗಳೆಯು ಸಿರಿಯಾಳಸೆಟ್ಟಿಯ ಹೆಂಡತಿಯು. ನಾನು ಪಾರ್ವತಿಯು. ಈತನು ನನ್ನ ಗಂಡನು. ಅಗೋ ಆತನ ಪಕ್ಕದಲ್ಲಿ ಕುಳಿತಿರುವವನೇ ಸಿರಿಯಾಳನು. ಎಂದು ಹೇಳಿ ನಾನಿಬ್ಬರೂ ಪತಿಭಿಕ್ಷೆಗಾಗಿ ಬಂದಿರುವೆವು. “ಪತಿಭಿಕ್ಷಾಂದೇಹಿ” ಎಂದು ಮೊರೆಯಿಡುವ ಜಂಗಳೆ-ಪಾರ್ವತಿಯರ ದೀನಸ್ವರವನ್ನು ಕೇಳಿ ಹಲಾಯುಧನು ಶಿವಗಣಂಗಳ ಸಮೂಹವನ್ನು ನೆರೆಯಿಸಿ ಶಂಕರನಿಗೂ, ಸಿರಿಯಾಳನಿಗೂ ಅಭಯವನ್ನು ಕೊಟ್ಟು ಅವರನ್ನು ಸಭೆಗೆ ಕರೆಯಿಸಿದನು. ಆಗ ಆಕಾಶದಲ್ಲಿ ದೇವ ದುಂದುಭಿ ಧ್ವನಿಮಾಡಿದವು. ಸ್ವರ್ಗದಿಂದ ಹೂ ಮಳೆ ಸುರಿಯಿತು. ಭಕ್ತರೆಲ್ಲರೂ ಸಂತೋಷಭರಿತರಾದರು. ಶಿವನು ಪ್ರಮಥ ಗಣ ಸಹಿತನಾಗಿ ತನ್ನ ನಿಜ ರೂಪವನ್ನು ತೋರಿಸಲು ಹಲಾಯುಧಯ್ಯನು ಆ ದಿವ್ಯ ಮೂರ್ತಿಯನ್ನು ನೋಡಿ ಪರಮ ಭಕ್ತಿಯಿಂದ ಪಾರ್ವತೀ ಪತಿಯೇ, ಮೃತ್ಯುಂಜಯನೇ, ಕರುಣಾಸಾಗರನೇ ಎಂದು ಹೊಗಳುತ್ತ ಅತ್ಯಂತ ಭಕ್ತಿ ಪರವಶನಾಗಿ ಪಾರ್ವತೀ ಪರಮೇಶ್ವರರಿಗೆ ನಮಸ್ಕರಿಸಿದನು. ಆಗ ಪರಶಿವನು ಅವನನ್ನು ಕರುಣಾದೃಷ್ಟಿಯಿಂದ ನೋಡಿ ಪ್ರೀತಿಯಿಂದ ಅಪ್ಪಿಕೊಂಡು ಹಲಾಯುಧನನ್ನು ಕೊಂಡಾಡುತ್ತ ಆತನನ್ನೂ, ಅವನು ಆಳುತ್ತಿದ್ದ ಒಂಬತ್ತು ಪಟ್ಟಣಗಳನ್ನೂ, ಪುಷ್ಪಕವಿಮಾನದಲ್ಲಿರಿಸಿಕೊಂಡು ಶಿವಗಣ ಸಮೇತನಾಗಿ ಕೈಲಾಸವನ್ನು ಸೇರಿದನು. ಸಿರಿಯಾಳನ ಅಹಂಕಾರವು ಅಡಗಿಹೋಗಲೆಂದು ಭಕ್ತವತ್ಸಲನಾದ ಶಿವನು ಈ ರೀತಿ ಮಾಡಿದನು. ಎಲೈ ಬಸವೇಶ್ವರನೇ, ಆದ ಕಾರಣ ಶಿವಭಕ್ತರಿಗೆ ಗರ್ವವು ಯೋಗ್ಯವಾದದ್ದಲ್ಲ ಎಂದು ಮಾಚಿದೇವನು ಹೇಳುತ್ತಿರಲು ಬಸವೇಶ್ವರನು ಅವನ ವಚನಗಳನ್ನು ಅನುಮೋದಿಸಿ ಪಾದಗಳಿಗೆರಗಿ ಸದಾ ಅವನ ಪಾದ ಧ್ಯಾನಾಸಕ್ತನಾಗಿ ಸುಖದಿಂದ ಇದ್ದನು.

## — ನೆರೆನಿಂದಿದೇವ ಸೌಂದರ ನಂಬಿಯಣ್ಣರ ಕಥೆಯು —

ಬಳಿಕ ಮಾಚಿದೇವನು ಬಸವೇಶ್ವರನಿಗೆ ಮತ್ತೊಂದು ಆಶ್ಚರ್ಯಕರವಾದ ಕಥೆಯನ್ನು ಹೇಳತೊಡಗಿದನು:— ಎಲೈ ಭಕ್ತ ವತ್ಸಲನಾದ ಈಶ ಭಕ್ತನೇ, ಭೂಲಕ್ಷ್ಮಿಯು ವಾಸಮಾಡುವ ಕಮಲದಂತೆ ಹೊಳೆಯುತ್ತಿರುವ

ತಿರುಚೆಂಗೊಡೆ ಎಂಬ ಒಂದು ಪಟ್ಟಣದಲ್ಲಿ ಪರವಾದಿಭಯಂಕರನೂ, ಗು... ಲಿಂಗ ಜಂಗಮಾರ್ಚನೆಯಲ್ಲಿ ಮನಸ್ಸುಳ್ಳವನೂ, ಸದ್ಗುಣಶಾಲಿಯೂ ಆ... ಮೆರೆಮಿಂಡಿದೇವನೆಂಬ ಭಕ್ತನಿದ್ದನು. ಆತನು ಒಮ್ಮೆ ಶಿವರಾತ್ರಿಯ ದಿ... ತಿರುವಾರೂರು ಎಂಬ ಪಟ್ಟಣಕ್ಕೆ ಬಂದು ಅಲ್ಲಿಯ ವಲ್ಮೀಕನಾಥೇಶ್ವರನ... ಪೂಜಿಸಿ, ಆ ರಾತ್ರಿಯೆಲ್ಲಾ ಶಿವಗಣಸಮೇತ ಜಾಗರಣೆಮಾಡಿ, ಉಷಃಕಾಲ... ಸಭೆಯಿಂದ ಎದ್ದು, ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಬೆಳಗಾದ ಕೂಡ... ಎಂದಿನಂತೆ ಶಿವಗಣಯುತನಾಗಿ ರಂಗಮಂಟಪದಲ್ಲಿ ಕುಳಿತು ಶಿವಕ... ಗೋಷ್ಠಿಯಲ್ಲಿ ನೆರೆದುಕುಳಿತಿದ್ದನು. ಆ ವೇಳೆಯಲ್ಲಿ ರೂಪ, ಯೌವನ ಸ... ನ್ನನಾದ ಸೌಂದರನಂಬಿಯಣ್ಣನೆಂಬ ಶಿವಭಕ್ತನು ತನ್ನ ಪ್ರೀತಿ ಪಾತ್ರ... ಪರವೆಯೆಂಬ ವೇಶ್ಯೆಯ ಮನೆಯಲ್ಲಿ ಮಲಗಿದ್ದು ಅವಳ ಆಲಿಂಗನ... ದೇಹಕ್ಕೆ ತೊಡೆದುಕೊಂಡಿರುವ ಕುಂಕುಮರೇಖೆಯೂ, ನಖಕ್ಷತ್ರಯುಕ್ತ... ಕೊರಳೂ, ಕಸ್ತೂರಿಯ ತಿಲಕಹೊಂದಿರುವ ಹಣೆಯಿಂದಲೂ, ಸುವಾಸ... ಯುಳ್ಳ ಪುಷ್ಪಗಳನ್ನು ಮುಡಿದಿರುವ ಮುಡಿಯಿಂದಲೂ, ಮುತ್ತಿನಹಾ... ಕರ್ಣಕುಂಡಲ, ಬಾಹುಪೂರ ಮೊದಲಾದ ನಾನಾ ಆಭರಣಗಳನ್ನು ಧರಿ... ದೇಹದಿಂದಲೂಕೂಡಿ ಪಾದದಲ್ಲಿ ಮುತ್ತಿನ ಗಗ್ಗರಗಳು, ರತ್ನದ ಹಾವುಗೆಯು ಹೊಳೆಯುತ್ತಿರಲು ಗಂಧದ ಲೇಪನದಿಂದ ಹೊಳೆಯುತ್ತಿರುವ ಹೂಬಿಸ... ಯಿಂದ ದಾದಿಯರ ಕಡೆಯಿಂದ ಚಾಮರವನ್ನು ಹಾಕಿಸಿಕೊಳ್ಳುತ್ತ ಮುಂದ... ಗಡೆಯಲ್ಲಿ ಸಂಗೀತವನ್ನು ಹಾಡುತ್ತಿರುವ ಗಾಯಕರಿಂದಲೂ, ಸಂಗಡ ಬರುತ್ತಿರುವ ರಾಜಕುಮಾರರಿಂದಲೂ ಆಶೀರ್ವಾದಮಾಡಿ ಹಿಂಬಾಲಿಸುತ್ತಿರುವ ಶಿವಗಣಂಗಳಿಂದಲೂ, ಹೊಗಳುತ್ತಿರುವ ಸ್ತುತಿಪಾಠಕರಿಂದಲೂ, ವಿದೂಷಕ ವಿಟವರ್ಯಾದಿ ಸ್ನೇಹಿತರಿಂದಲೂ, ಪರಿಪರಿಯಾಗಿ ತನ್ನನ್ನು ಹೊಗಳುತ್ತಿರುವ ವಿದ್ವಾಂಸರಿಗೆ ಒಂದೊಂದು ಬೊಗಸೆ ರತ್ನಗಳನ್ನು ತನ್ನ ಕೈಯಿಂದ ಕೊಡುತ್ತಾ ಎಡಗೈಯಲ್ಲಿ ರತ್ನದ ಕಠಾರಿಯನ್ನು ಹಿಡಿದು ಜಗ್ಗುಹಾಕುತ್ತ, ವಿಳಾಸಯುಕ್ತನಾಗಿ ಮುಂಭಾಗದಲ್ಲಿ ಕುಳಿತಿರುವ ಶಿವಗಣಂಗಳಿಗೆ ನಮಸ್ಕರಿಸದೆ ಅವರನ್ನು ಅಲಕ್ಷ್ಯಮಾಡಿ ಕಾಲಿನಲ್ಲಿದ್ದ ತನ್ನಹಾವುಗೆಯು ಹಾಗೆಯೇ ಇರಲು ದೇವಸ್ಥಾನವನ್ನು ಪ್ರವೇಶಿಸಿದನು. ಆತನನ್ನು ನೋಡಿ ಮೆರೆಮಿಂಡಿದೇವನು ಬಹುವಾಗಿ ಕೋಪಿಸಿಕೊಂಡು ಶಿವಶರಣರ ಸಭೆಗೆ ಬಂದು ಅವರನ್ನು ನಮಸ್ಕರಿಸದೆ ಸತ್ತ...

ಸದೆ ಗರ್ವದಿಂದ ಹೋದ ಈ ನೀಚನು ಯಾರು? ಇವನು ಶಿವಶರಣರ ಮಹಾತ್ಮೆಯನ್ನು ಕೇಳಿ ತಿಳಿದಿಲ್ಲವೇ? ಮಾಹೇಶ್ವರರು ಕೋಪಿಸಿಕೊಂಡರೆ ಲೋಕವನ್ನೇ ಸುಟ್ಟು ಬಿಡುವರು. "ಕೆಡಕುಕಾಲಕ್ಕೆ ಒಡಕು ಬುದ್ಧಿ" ಎಂಬಂತೆ ಈ ನೀಚನಿಗೆ ವಿವೇಕವು ಸ್ವಲ್ಪವೂ ಇಲ್ಲ. ಆದ್ದರಿಂದ ಇವನನ್ನು ಈಗಲೇ ದೇವಸ್ಥಾನದಿಂದ ಹೊರದೂಡಿರಿ ಎಂದು ಸಭಿಕರೆಲ್ಲರೂ ಆಶ್ಚರ್ಯಪಡುವಂತೆ ಗಟ್ಟಿಯಾಗಿ ಕೂಗಿ ಹೇಳಿದನು. ಆಗ ಪೂಜಾರಿಯು ಮುಂದೆ ಬಂದು ಕೈಮುಗಿದು ನಿಂತು ಕೊಂಡು ಅಯ್ಯಾ ಮೆರೆಮಿಂಡಿದೇವಾ, ಈ ಸುಂದರ ನಂಬಿಯಣ್ಣನು ಸಾಮಾನ್ಯ ಶಿವಭಕ್ತನೆಂದು ತಿಳಿಯಬೇಡ. ಈಶ್ವರನು ಇವನಿಗೆ ಯಾವ ರೀತಿಯಾಗಿ ಒಲಿದಿರುವನೋ ನಾನು ಕಾಣೆ. ಗಾಯನಕ್ಕೆ ಮೆಚ್ಚಿದನೋ ಇಲ್ಲವೆ ಭಕ್ತಿಗೆ ಜೇಂಡಾಗಿ ಬೆರೆತುಕೊಂಡಿರುವನೋ ಹೇಳಲಾರೆ. ಅಂತು ಇವನನ್ನು ಮಾತ್ರ ತನ್ನ ಮಗನಿಗಿಂತಲೂ ಹೆಚ್ಚಾಗಿ ನೋಡಿ ಸಲಹುತ್ತಿರುವನು. ಇವನು ಕೇಳಿದ ವಸ್ತುಗಳನ್ನೆಲ್ಲ ಕೊಡುವದಲ್ಲದೆ ಇವನ ಸಂಗಡ ಆಟವಾಡಿ ನಲಿಯುತ್ತಿರುವ ಒಂದು ದಿವಸಕ್ಕೆ ಒಂದೊಂದು ಬಳ್ಳ ಹೊನ್ನನ್ನು ಶಿವನು ಇವನಿಗೆ ಕೊಡುವನು. ಹೆಚ್ಚಾಗಿ ಹೇಳಿ ಫಲವೇನು ? ಯಾವಾಗಲೂ ಅವನು ಹೇಳಿದಂತೆ ಕೇಳುತ್ತ ಇಚ್ಛಾನುಸಾರವಾಗಿ ನಡೆದುಕೊಳ್ಳುವನು ಎಂದು ಹೇಳಿದ ಮಾತನ್ನು ಕೇಳಿ ಮಿಂಡಿದೇವನು ಇನ್ನೂ ಹೆಚ್ಚಾಗಿ ಕೋಪಿಸಿ ಕೊಂಡು ವಲ್ಮೀಕನಾಥನಾದ ಈಶ್ವರನಿಗೆ ವಿಟಹಾವು ಸಹವಾಸವು ಯೋಗ್ಯವಾದದ್ದೇ ಸರಿ. ಹಣ್ಣು ಹಣ್ಣು ಮುದುಕನಾದ ಈಶ್ವರನು ಈ ನೀಚನ ಸಹವಾಸದಲ್ಲಿ ಸಿಕ್ಕಿರುವನೇ ? ಆದ್ದರಿಂದಲೇ ಇವನು ಇಷ್ಟೊಂದು ಗರ್ವದಿಂದ ಮೆರೆಯುವನು. ಅಯ್ಯೋ ಯಾರ ಸಹಾಯವಿದ್ದರೆ ಏನು ? ಕಾಲಕ್ಕನುಸಾರವಾಗಿ ಮರ್ಯಾದೆ ನಡೆಸತಕ್ಕವನು ನೀಚನಾದ ಈ ಈಶ್ವರನಲ್ಲವೇ ! ಆಹಾ ಎಷ್ಟು ಚೆನ್ನಾಯಿತು. ಇಂತಹ ಭಕ್ತನಿಗೆ ಶಿವನು ಹತ್ತರದಲ್ಲಿರುವನಂತೆ ಇದೇ ಅಲ್ಲವೇ ಭಕ್ತಿ ! ಈ ಲೋಕದಲ್ಲಿ ಇವರಿಬ್ಬರೂ ನೀಚರು. ಆದ್ದರಿಂದ ಇವರು ಶಿವಗಣ ಸಮೂಹಕ್ಕೆ ಬಾಹಿರರು ಎಂದು ಡಂಗುರ ಸಾರಿರಿ ಎಂದು ಕೋಲಾಹಲವನ್ನು ಎಬ್ಬಿಸಿದನು. ಈ ಗದ್ದಲವನ್ನು ಕೇಳಿ ಈಶ್ವರನು ತನ್ನ ಭಕ್ತವಾತ್ಸಲ್ಯವನ್ನು ಪ್ರಕಾಶಪಡಿಸಬೇಕೆಂದು ಪ್ರತ್ಯಕ್ಷ ರೂಪವನ್ನು ಧರಿಸಿ ಕೊಂಡು ನಿಂತು ಗಡಗಡನೆ ನಡುಗುತ್ತ ಮೈಬೆವರಿ ರೋಮಗಳೆದ್ದು ಕುಣಿ

ಯುತ್ತಿರಲು ಜಡೆಮುಡಿಗಳನ್ನು ಸರಿಮಾಡಿಕೊಳ್ಳುತ್ತ ಉಡುಗೆಯನ್ನು
ಕಟ್ಟಿಕೊಂಡು ಉಸುರು ಮಾತ್ರ ಆಡಿಸುತ್ತ ಮಾತನ್ನಾಡದೆ ಕೈಸನ್ನೆ
ಸುಂದರ ನಂಬಿಯನ್ನು ಹತ್ತಿರಕ್ಕೆ ಕರೆದು ನಮಗೆ ಇನ್ನು ಗತಿಯಿಲ್ಲ
ಎಂದು ಆತನಿಗೆ ಹೆದರಿಕೆಯನ್ನು ಹುಟ್ಟಿಸುತ್ತ ಭಕ್ತರು ಕಾಣುವರೆಂ
ದಿಂದ ಹೂಮಾಲೆಗಳನ್ನು ಮರೆಮಾಡಿಕೊಳ್ಳುತ್ತ ಯಾರಾದರೂ ಕಾಣುವ
ಎಂದು ಒಂದೊಂದು ಕಿಟಕಿಯಲ್ಲಿ ತಲೆಯನ್ನು ಇಣಕಿಸಿನೋಡುತ್ತ
ಕಾಣದಂತೆ ಬಿಗುವಾಗಿ ಮುಸುಕನ್ನು ಹೊದೆದು ಹಿಂಭಾಗದ ಪ್ರಾಕಾ
ಬಂದು ಗೋಡೆಯ ಕಲ್ಲನ್ನು ಕಾಲಿನಿಂದ ಒದೆದು ಕೆಡವಿ ಅವರಿಂದಾದ
ಕಿಂಡಿಯಿಂದ ತಾನೂ ನಂಬಿಯೂ ಹೊರಗೆ ಬಂದು ದಡದಡನೆ
ಅಲ್ಲಿಂದ ಒಂದು ಗಾವುದ ದೂರದಲ್ಲಿರುವ ಹೂದೋಟವನ್ನು ಹೊಕ್ಕು
ತೋಟದಲ್ಲಿರುವ ಪಾರಿಜಾತದ ಒಂದು ಗಿಡದ ಬುಡದಲ್ಲಿರುವ ಚಪ್ಪಟೆ
ಹಾಸುಗಲ್ಲ ಮೇಲೆ ಮಲಗಿಕೊಂಡು ಸುಂದರ ನಂಬಿಯಿಂದ ಪಾದ
ಸೇವೆಯನ್ನು ಕೈಕೊಳ್ಳುತ್ತ ಆಯಾಸದಿಂದ ಒರಗಿದ್ದನು. ಆಗ ಸು
ನಂಬಿಯು— ಓ ಪರಮೇಶ್ವರಾ, ನಿನಗೆ ಇಷ್ಟೊಂದು ಆಯಾಸವುಂಟಾ
ಕಾರಣವೇನು ? ಎಂದು ಕೇಳಲು ಅಯ್ಯಾ ನನ್ನ ಭಕ್ತರಾದ ಶಿವಗಣ
ನನ್ನನ್ನು ಬಹಿಷ್ಕಾರ ಹಾಕಿದ ಮೇಲೆ ನನಗೆ ಗತಿಯಾರು ? ನಾನಿನ್ನು
ಕುವದು ಹೇಗೆ ? ಎಂಬುದಾಗಿ ಸಂಕಟಪಡುತ್ತೇನೆ ಎಂದು ಹೇಳಿದನು.
ಮಾತನ್ನು ಕೇಳಿ ಸುಂದರ ನಂಬಿಯು— ಎಲೈ ತಾತನೇ, ಈ ಲೋ
ನೀನು ಸ್ವತಂತ್ರನಲ್ಲವೇ ? ನಿನಗಿಂತಲೂ ಸ್ವತಂತ್ರರಾರಿರುವರು
ಕೇಳಲು ಪರಶಿವನು— ಓ ಮೂಢಮಾನವಾ, ನಾನು ಸಕಲ
ಸ್ವತಂತ್ರನಾಗಿದ್ದರೂ ಭಕ್ತಪರಾಧೀನನಾಗಿರುವೆನು. ಆದ್ದರಿಂದ
ನನ್ನ ಪ್ರಾಣಗಳು. ಅವರ ದೇಹವೇ ನನ್ನ ಶರೀರ. ಅವರ ತೃಪ್ತಿಯೇ
ಸಂತೋಷ. ಅವರ ಪಾದಪೂಜೆಯೇ ನನ್ನ ಆತ್ಮಪೂಜೆ. ಅವರ
ಣೆಯೇ ನನ್ನ ನಿಂದೆ. ಅವರ ಸ್ತುತಿಯೇ ನನ್ನ ಸ್ತೋತ್ರ. ಅವರಿಗಿಂ
ನನ್ನ ಪ್ರೇಮಕ್ಕೆ ಪಾತ್ರರಾದವರು ಮೂರು ಲೋಕಗಳಲ್ಲಿ ಯಾರೂ
ಈ ಮಾತು ವೇದಾಗಮ ಸಿದ್ಧವಾದುದು. ನನ್ನ ಭಕ್ತರ ಪಾದಪೂಜೆ
ತಿರಸ್ಕರಿಸಿ ನನ್ನ ಪೂಜೆಯನ್ನು ಮಾಡಿದರೆ ಅದು ವ್ಯರ್ಥವಾದುದೆ

ಲಿಂಗಾಂಗ ಸಾಮರಸ್ಯವೆಂಬ ಮೋಕ್ಷವು ನನ್ನ ಭಕ್ತರಿಗೆ ದೊರೆಯುವದಲ್ಲದೆ ಉಳಿದವರಿಗೆ ಎಂದಿಗೂ ಸಿಗದು ಲೋಕಕ್ಕೆಲ್ಲ ನಾನು ಸ್ವಾಮಿ ಆಗಿದ್ದರೂ ನನ್ನ ಭಕ್ತರು ನನಗೆ ಸ್ವಾಮಿಯಾಗಿರುವರು. ಅದು ಹೇಗೆ ಎನ್ನುವಿಯಾದರೆ ಹೇಳುತ್ತೇನೆ ಕೇಳು:- ಪೂರ್ವ ಕಾಲದಲ್ಲಿ ಬಾಣನೆಂಬ ಒಬ್ಬ ತಪಸ್ವಿ ಇದ್ದನು. ಅವನು ಪ್ರತಿದಿವಸ ನನ್ನನ್ನು ಒಂದು ಸಾವಿರಸಾರೆ ಪೂಜೆಮಾಡದ ಹೊರತು ಊಟ ಮಾಡುತ್ತಿರಲಿಲ್ಲ. ಹೀಗಿರಲು ಬಾಣನಿಗೆ ಇತರ ಕೆಲಸಗಳಿಗೆ ವೇಳೆ ದೊರೆಯದಾಗಲು ನಾನು ಒಂದು ಸಹಸ್ರ ಕೈಗಳನ್ನು ದಯಪಾಲಿಸಿದೆನು. ಆದರಿಂದ ಅವನು ಮೊದಲಿಗಿಂತಲೂ ಭಕ್ತಿಭರಿತನಾಗಿ ಸಾವಿರ ಕೈಗಳಿಂದಲೂ ಸಂಭ್ರಮಯುಕ್ತನಾಗಿ ನನ್ನನ್ನು ಪೂಜಿಸುತ್ತಿದ್ದನು. ಈ ವಾರ್ತೆಯನ್ನು ಕೇಳಿ ಅನೇಕ ಭಕ್ತರು ಬಾಣನ ಪೂಜಾವಿಧಾನವನ್ನು ನೋಡಬೇಕೆಂದು ತಂಡೋಪ ತಂಡವಾಗಿ ಬಂದರು. ಬಾಣನು ಅವರೊಡನೆ ಲಿಂಗಜಂಗಮಾ ರ್ಚನೆಗಳನ್ನು ತೀರಿಸಿ ಪ್ರಸಾದವನ್ನು ಎಲ್ಲರೂ ಪಡೆಯುವವರೆಗೆ ಒಬ್ಬರೂ ಒಳಗೆ ಹೋಗದಂತೆ ನಾನು ಬಾಗಿಲನ್ನು ಕಾದಿದ್ದೆನು. ಇದಲ್ಲದೆ ಕರಿಕಾಳ ಚೋಳನು ಕಾವೇರಿ ನದಿಗೆ ಸೇತುವೆ ಕಟ್ಟಿಸುವದಕ್ಕಾಗಿ ಊರ ಜನರನ್ನು ಬಿಟ್ಟಿಹಿಡಿದಿರಲು ಮನೆಯಲ್ಲಿ ಗಂಡಸರಾರೂ ಇಲ್ಲವೆಂದು ಬಳಲುತ್ತಿದ್ದ ಪಿಟ್ಟ ವ್ವೆಯನ್ನು ನಾನು ಸಮಾಧಾನಮಾಡಿ ನಿನ್ನ ಬಳಿಯಲ್ಲಿ ಆಳಾಗಿರುವೆನೆಂದು ಬಿಟ್ಟಿಮಾಡಿದೆನು. ಮತ್ತು ಗುರುಲಿಂಗ ಜಂಗಮರಲ್ಲಿ ಭಕ್ತಿಯುತನಾದ ಕಲಿಕಾಮದೇವನು ತಿರುಕಡಿಯೆಂಬ ಊರಲ್ಲಿದ್ದನು. ಅವನು ನಮ್ಮಿಬ್ಬರ ಸ್ನೇಹವನ್ನು ಯಾರಿಂದಲೋ ತಿಳಿದು ಕೋಪದಿಂದ ಕೂಡಿದ ಆಶ್ಚರ್ಯವನು ಹೊಂದಿ ಆಹಾ ! ಕಾಮುಕಿಯೂ, ನೀಚನೂ ಆದ ಸುಂದರ ನಂಬಿಯು ನನ್ನ ಒಡೆಯನಾದ ಪರಶಿವನನ್ನು ಆಳಾಗಿ ನೇಮಿಸಿಕೊಂಡನೇ ! ಆ ಭಕ್ತವತ್ಸಲನ ಪಾದಗಳು ಕಂದಿಹೋಗುವವಲ್ಲಾ ! ಮರುಕವಿಲ್ಲದೆ ಅವನನ್ನು ಸೂಳೆಯ ಮನೆಗೆ ತಿರುಗಾಡಿಸುತ್ತಿರುವನಲ್ಲ ! ಇಂಥ ಕಾರ್ಯವನ್ನು ಹೇಗೆ ನೋಡು ವದು. ಸರ್ವಜ್ಞನಾದ ಈಶ್ವರನು ಮೂಢನಾದ ಸುಂದರ ನಂಬಿಯ ಆಳಾಗಿ ಸೂಳೆಯ ಮನೆಗೆ ತಿರುಗಾಡುವದನ್ನು ನೋಡಿ ಪಂಡಿತರು ನಗುವರಲ್ಲ ಆಹಾ! ಇದನ್ನು ನಾನು ಹೇಗೆ ಸಹಿಸಲಿ ? ಎಂದು ಅವನು ನಿನ್ನ ಊರಿಂದ ಬಂದವ ರನ್ನೂ, ನಿನ್ನ ಹೆಸರು ಹೇಳುವವರನ್ನೂ ಕೊಂದು ಹಾಕುವದಾಗಿ ಪ್ರತಿಜ್ಞೆ

ಮಾಡಿರುವನು. ಆ ಕಲಿಕಾಮನು ನಿನ್ನನ್ನು ನೀಚನೆಂದೂ ಶಿವದ್ವೇ
ಯೆಂದೂ ತಿಳಿದಿರುವನು. ಹೀಗಿದ್ದರೂ ನೀನು ನನ್ನನ್ನು ಸೇವಕನ
ಮಾಡಿಕೊಂಡಿದ್ದು ಪ್ರತಿದಿವಸ ನಿನಗೆ ಬೊಗಸೆ ಹೊನ್ನು ಕೊಡುತ್ತ
ಹೇಳಿದ ಕೆಲಸ ಮಾಡಿಕೊಂಡಿರುವೆನಲ್ಲ ! ನಿಮ್ಮ ತಂದೆ ನನಗೆ ಹಳೆಯ
ಕೊಟ್ಟಿರುವನೆಂದು ಭಾವಿಸಿರುವೆಯಾ! ಇದೆಲ್ಲವೂ ನಿನ್ನ ಭಕ್ತಿಯಿಂದ ವ
ಎಂದು ಪರಶಿವನು ತನ್ನ ಭಕ್ತವತ್ಸಲತ್ವವನ್ನು ತೋರಿಸಿ ಶಿವಶರಣರ ಚ
ಚರಿತ್ರೆಗಳನ್ನು ತಿಳಿಸಿ ಈ ರೀತಿಯಾಗಿ ಮಹಿಮಾಶಾಲಿಗಳಾದ ನನ್ನ ಭಕ್ತ
ನೀನು ಅಹಂಕಾರ ತೋರಿಸುವದು ಯೋಗ್ಯವಲ್ಲ. ನಿನ್ನ ಒಡನಾಟದಿ
ನನಗೆ ಇಂತಹ ಸಂಕಟ ಒದಗಿತು. ಎಂದು ನುಡಿಯಲು ನಂಬಿಯಣ್ಣ
ಗಡಗಡನೆ ನಡುಗಿ ಹೆದರಿ ಶಿವನ ಅಪ್ಪಣೆಯನ್ನು ಪಡೆದು ಶರಣರ
ಯನ್ನು ಸಂಪಾದಿಸಬೇಕೆಂದು ಶಿವಶರಣರ ಕಥೆಯನ್ನು ಪಾಡುವದಕ್ಕೆ ಆ
ಸಿದನು. ಪ್ರತಿದಿವಸ ತ್ರಿಕಾಲದಲ್ಲಿ ಈಶ್ವರನಿಗೆ ಗಂಧವನ್ನು ಲೇಪಿಸುವ
ಸ್ಥನಾಗಿ ಅದನ್ನು ಆಚರಿಸುತ್ತ ಗಂಧವನ್ನು ಕೊಳ್ಳಲು ಹಣವೆಲ್ಲ ಮು
ಹೋಗಲು ಪುನಃ ಶ್ರೀಗಂಧವನ್ನು ಕೊಳ್ಳಲು ಸಾಧ್ಯವಿಲ್ಲದಾಗ ತನ್ನ
ವನ್ನೇ ಗಂಧವನ್ನಾಗಿ ತೇಯ್ದು ಒಪ್ಪಿಸಿ ಮುಕ್ತನಾಗಬೇಕೆಂದು ಗೊ
ಮಾಡಿ ಈಶ್ವರನ ಬಳಿಗೆ ಬಂದು ಎಲೈ ಈಶ್ವರನೇ, ನನ್ನ ದೇಹದ
ಸೊಗಸೂ, ಸುಗಂಧವೂ ಬಾರದಿದ್ದರೆ ಆ ದೋಷವು ನಿನ್ನನ್ನೇ ಹೊಂ
ದೆಂದು ಹೇಳಿ ತನ್ನ ಮೊಳಕೈಯನ್ನು ಗಂಧವಾಗಿ ಸಮರ್ಪಿಸಿ ಕೈಲಾಸವ
ಸೇರಿದ ಅಣುಮೂರ್ತಿಯೆಂಬ ಶರಣನ ಪಾದಕ್ಕೆರಗುವೆನು. ಪ್ರತಿದಿ
ಸಾವಿರ ದೀಪಗಳನ್ನು ಹಚ್ಚಿ ಶಿವನಿಗೆ ದೀಪಾರ್ಚನೆಯನ್ನು ಮಾಡುವ
ವನ್ನು ಅನುಸರಿಸಿ ತನ್ನಲ್ಲಿದ್ದ ಹಣವೆಲ್ಲವೂ ಖರ್ಚಾಗಲು ಎಣ್ಣೆ, ಬತ್ತಿಗ
ಮಾರ್ಗವಿಲ್ಲದೆ ಹೋದುದನ್ನು ನೋಡಿ ಹೆದರದೆ ಭಕ್ತಿಯಿಂದ ತನ್ನ ಶ
ವನ್ನು ದೀಪದ ಕಂಬವನ್ನಾಗಿಯೂ, ತಲೆಯನ್ನು, ದೀಪವನ್ನಾಗಿಯ
ಜಡೆಯನ್ನೇ ಬತ್ತಿಯನ್ನಾಗಿಯೂ, ಭಕ್ತಿರಸವನ್ನು ಎಣ್ಣೆಯನ್ನಾಗಿಯ
ಮಾಡಿ ದೀಪಾರ್ಚನೆಯಿಂದ ಪರಮೇಶ್ವರನನ್ನು ಮೆಚ್ಚಿಸಿ ಶಿವಲೋಕವ
ಸೇರಿದವನಾದ ಕಡವಲ ನಂಬಿಯಣ್ಣನೆಂಬ ಭಕ್ತನ ಸೇವಕನಾಗುವೆ
ಪಾಂಡ್ಯ ದೇಶದ ನದಿಯಲ್ಲಿ ಬಲೆಯನ್ನು ಬೀಸಿ ಮೊದಲು ಸಿಕ್ಕ ಮೀನ

ಶಿವಾರ್ಪಿತವೆಂದು ಬಿಟ್ಟು ಉಳಿದ ಮೀನುಗಳನ್ನು ಹಿಡಿದು ಮಾರಿಬಂದ ಹಣ ದೀಪ ಗುರುಲಿಂಗ ಜಂಗಮಾರ್ಜನೆ ಮಾಡುತ್ತಿರಲು ಒಂದು ದಿವಸ ಎಂದಿ ನಂತೆ ಹೊಳೆಯಲ್ಲಿ ಬಲೆಯನ್ನು ಬೀಸಿನೋಡಲು ಮೊದಲು ಬಂಗಾರದ ಶರೀ ರವಿರುವ ರತ್ನದ ಕಣ್ಣುಳ್ಳ ಮೀನವು ಬರಲು ಅದನ್ನು ಶಿವಾರ್ಪಿತ ಮಾಡಿ ದನು. ಪುನಃ ಬಲೆಯೊಡ್ಡಲು ಅದೇ ಮೀನು ಬಂದದ್ದನ್ನು ಕಂಡು ಅದು ಶಿವಾರ್ಪಿತವಾಗಿರುವದೆಂದು ತೊರೆದು ಮತ್ತೆ ಗಾಳಹಾಕಲು ಅದೇ ಮೀನು ಬಂದುದನ್ನು ನೋಡಿ ಆ ಸ್ಥಳಬಿಟ್ಟು ಬೇರೆ ಮಡುವಿನಲ್ಲಿ ಬಲೆಹಾಕಲು ಅಲ್ಲಿಯೂ ಅದೇ ಮೀನು. ಹೀಗೆ ಸಾಯಂಕಾಲದವರೆಗೆ ಹುಡುಕಿ ದರೂ ಅದೇ ಮೀನನ್ನು ನೋಡಿ ಇದನ್ನು ಹಿಡಿಯುವದು ನ್ಯಾಯವ ಲ್ಲವೆಂದು ಯೋಚಿಸಿ ಬೇರೆ ಜಲಾಶಯಗಳಲ್ಲಿ ಹುಡುಕಿ ನೋಡಿ ಎಲ್ಲ ಕಡೆಗೂ ಅದನ್ನೇ ಕಂಡು ಕೊನೆಗೆ ಊರ ಪೂರ್ವಕ್ಕಿರುವ ಹೊಳೆಯದಡದಲ್ಲಿ ಬಲೆ ಯನ್ನು ಬೀಸಿನೋಡಲು ಮುಕ್ಕಣನೂ, ಚಂದ್ರಶೇಖರನೂ, ವಿಷಕಂಠನೂ, ನಾಗಾಭರಣನೂ ಆದ ಪರಮೇಶ್ವರನು ಪ್ರತ್ಯಕ್ಷನಾದನು. ಆ ಶಿವನ ಕೃಪೆ ಯಿಂದ ಕೈಲಾಸವನ್ನು ಕಂಡ ಅತಿಭಕ್ತನ ಸೇವಕನಾಗುವೆನು. ಪ್ರತಿದಿವಸ ಪರಶಿವನಿಗೆ ಸಣ್ಣಕ್ಕಿಯ ಅನ್ನವನ್ನು ಸಮರ್ಪಿಸುವ ವ್ರತಹಿಡಿದು ತನ್ನಲ್ಲಿದ್ದ ಸಮಸ್ತ ಆಸ್ತಿಯನ್ನೆಲ್ಲ ವ್ಯಯಮಾಡಿ ಕೊನೆಗೆ ಗದ್ದೆಗಳಲ್ಲಿ ಕೂಲಿಮಾಡಿ ಬಂದ ಹಣದಿಂದ ಶಿವಾರ್ಪಣೆ ಮಾಡುತ್ತಿರಲು ಅಂತ್ಯದಲ್ಲಿ ಕೂಲಿಯೂ ಸಿಗ ದಿರಲು ಒಂದು ವಾರ ಉಪವಾಸಮಾಡಿ ಕಡೆಗೆ ಎಲ್ಲಿಯೋ ಸಿಕ್ಕ ಎರಡು ಮಾನ ಅಕ್ಕಿ ತೆಗೆದುಕೊಂಡು ಬರುವಾಗ ದಾರಿಯಲ್ಲಿ ಎಡವಿದ ಮೂಲಕ ಅಕ್ಕಿಯೆಲ್ಲ ಚೆಲ್ಲಹೋಗಲು ಆರಿಸುವದಕ್ಕೂ ಆಗದಿರಲು ಶಿವಾರ್ಪಣೆಗಾಗಿ ತಂದ ಅಕ್ಕಿ ಚೆಲ್ಲಿದ್ದಕ್ಕಾಗಿ ಪ್ರಾಣವನ್ನೇ ಕಳೆದುಕೊಳ್ಳುವೆನೆಂದು ಕುಡುಗೋ ಲಿನಿಂದ ಕೊರಳನ್ನು ಕತ್ತರಿಸಿಕೊಂಡು ಮೋಕ್ಷವನ್ನು ಸಂಪಾದಿಸಿದ ಅರಿವಾಲ ಯ್ಯನಿಗೆ ಪರಿಚಾರಕನಾಗುವೆನು. ಮೃತ್ಯುಂಜಯನಿಗೆ ಸಂಜೆ, ಮುಂಜಾವು, ಮಧ್ಯಾಹ್ನ ಈ ಕಾಲಗಳಲ್ಲಿಯೂ ಗುಗ್ಗುಳ ಹಾಕುವ ನಿಯಮದಿಂದ ಜೀವಿ ಸುತ್ತ ತನ್ನ ಹಣವೆಲ್ಲವನ್ನು ಖರ್ಚುಮಾಡಿ ಕೊನೆಗೆ ಹೆಂಡತಿಯ ಕೊರಳ ಲ್ಲಿಯ ತಾಳಿಯನ್ನು ಮಾರಿಬಂದ ಹಣದಿಂದ ದೇವರಿಗೆ ಧೂಪಹಿಡಿಯುವ ವ್ರತ ನಡೆಸಿ ಇರುವಲ್ಲಿ ತಿರುಪನಂಬಿಯೆಂಬ ಪಟ್ಟಣದ ತಿರುಪರಾಧಾಮ

ನೆಂಬ ಅರಸನು ತಾನು ನಿತ್ಯವೂ ಪೂಜಿಸುತ್ತಿದ್ದ ನಾಗನಾಥನೆಂಬ ಲಿಂಗವು ಪಟ್ಟಣದ ಹೊರಭಾಗದಲ್ಲಿ ಹಾಡುತ್ತಿರುವ ನಾಗಕನ್ಯೆಯ ನಾಗಸ್ವರ ಧ್ವನಿಗೆ ಮುಂದಕ್ಕೆ ಬಾಗಿರುವದನ್ನು ನೋಡಿ ಆ ದೊರೆಯು ಈ ಲಿಂಗವನ್ನು ನೆಟ್ಟಗೆ ಮಾಡಿದವರಿಗೆ ಕೇಳಿದ ವಸ್ತುವನ್ನು ಕೊಡುತ್ತೇನೆಂದು ಸಾರಿಸಿದನು. ಈ ಸಂಗತಿ ಕೇಳಿ ನನಗೆ ಬೇಕಾಗುವಷ್ಟು ಧೂಪಕೊಟ್ಟರೆ ನಾನು ಅದನ್ನು ಸರಿ ಮಾಡುವೆನೆಂದು ಪ್ರತಿಜ್ಞೆಮಾಡಿ ಆ ಪ್ರಕಾರ ಅರಸನು ಕೊಟ್ಟ ಗುಗ್ಗುಳವೆಲ್ಲ ವನ್ನು ಆ ಲಿಂಗದ ಮುಂದೆ ರಾಶಿಮಾಡಿ ಪಟ್ಟೆಮುಡಿಯಿಂದ ಲಿಂಗವನ್ನು ಬಿಗಿದುಕಟ್ಟಿ ಆ ಕಟ್ಟಿಗೆ ಸೇರಿದ ಗಂಡುಗತ್ತರಿಯನ್ನು ಕೊರಳಿಗೆ ಸೇರಿಸಿ ಕೊಂಡು ಭಕ್ತಿಭಾವದಿಂದ ಮೇಲಕ್ಕೆತ್ತಿ ಲಿಂಗವನ್ನು ನೆಟ್ಟಗೆ ಮಾಡುವಷ್ಟರಲ್ಲಿ ಪ್ರತ್ಯಕ್ಷನಾದ ಪರಶಿವನಿಂದ ಮುಕ್ತಿಯನ್ನು ಪಡೆದ ಕಲ್ಲಿನಾಥ ಭಕ್ತನನ್ನು ಸದಾ ವಂದಿಸುತ್ತಿರುವೆನು. ಶಿವಚಿಹ್ನೆಗಳನ್ನು ಧರಿಸುವ ಭಕ್ತರನ್ನು ಪರಶಿವ ನಂತೆ ನೋಡುತ್ತ ಶತ್ರುರಾಜರನ್ನು ಗೆದ್ದು ಕೀರ್ತಿವಂತನಾಗಿ ಬಾಳುತ್ತಿರಲು ದಂಡೆತ್ತಿಬಂದ ಶತ್ರುರಾಜನನ್ನು ಸೋಲಿಸಿ ಓಡಿಸಲು ಅವನು ಇವನ ಶಿವಭಕ್ತಿ ಯನ್ನು ತಿಳಿದು ಜಂಗಮವೇಷಧಾರಿಯಾಗಿ ಬಂದು ಯುದ್ಧಕ್ಕೆ ನಿಲ್ಲಲು ಕೈಯಲ್ಲಿದ್ದ ಖಡ್ಗವನ್ನು ಬಿಸುಟಿ ಆ ಶತ್ರುವಿನ ಪಾದಗಳಿಗೆರಗಲು ಅವನು ಕುತ್ತಿಗೆಯನ್ನು ಕಡಿಯುತ್ತಿದ್ದರೂ ಅಲುಗಾಡದೆ ಸುಮ್ಮನಿರಲು ಅವನ ಭಕ್ತಿ ಭಾವಕ್ಕೆ ಶಂಭುವು ಮೆಚ್ಚಿ ಆ ಖಡ್ಗವನ್ನು ಹೂವಿನ ಹಾರವನ್ನಾಗಿ ಮಾಡಲು ಶಿವಕೃಪೆಯಿಂದ ಸಾಯುಜ್ಯ ಪದವಿಯನ್ನು ಹೊಂದಿದ ಏಣಾದಿನಾಥನಿಗೆ ನಾನು ಬಿಚ್ಚುಗತ್ತಿಯ ಪಹರೆಯವನಾಗುವೆನು. ಮತ್ತು ಶಿವಭಕ್ತರನ್ನು ಶಿವನಿಗಿಂತಲೂ ಅಧಿಕರೆಂದು ತಿಳಿದು ನಡೆಸುವ ಭಕ್ತಿಯುಳ್ಳವನಾಗಿ ಗುಂಪಾಗಿ ಬಂದ ಹಗೆಗಳನ್ನು ಗೆದ್ದು ಯುದ್ಧರಂಗದಿಂದ ಓಡಿಸಲು ಅವರು ಜಂಗಮ ವೇಷದಿಂದ ಬಂದು ನಿಂತಿರಲು ಅವರನ್ನು ಭಕ್ತಿಭಾವದಿಂದ ನೋಡು ತ್ತಿರುವಾಗ ಇವನ ಕುತ್ತಿಗೆಯನ್ನು ಕೊಯ್ಯಲು ಬಂದಿರಲು ಅವರಿಗೆ ತನ್ನ ದೇಹವನ್ನು ಕೊಟ್ಟು ಈಶ್ವರನನ್ನು ಮೆಚ್ಚಿಸಿದ ಮತ್ತು ಆತನಿಂದ ಸಾರೂಪ್ಯ ಸುಖವನ್ನು ಪಡೆದ ಸೇದಿರಾಜನ ಪಾದಗಳಿಗೆ ನಮಸ್ಕರಿಸುವೆನು. ಶಿವಲಾಂಛ ನವನ್ನು ಧರಿಸಿದವರನ್ನು ಶಿವನೆಂದು ಪೂಜಿಸುತ್ತ ರಾಜ್ಯವಾಳುತ್ತಿರಲು ವೈರಿ ರಾಜರನ್ನು ಗೆದ್ದು ಅವರ ತಲೆಬುರುಡೆಗಳನ್ನು ಗಾಡಿಗಳಲ್ಲಿ ತುಂಬಿಕೊಂಡು

ಬರುತ್ತಿರುವಾಗ ಅವುಗಳಲ್ಲಿ ಒಂದು ತಲೆಬುರುಡೆಯು ಮಾತ್ರ ರಕ್ತಮಯವಾಗಿರುವವನ್ನು ನೋಡಿ ಅದು ಶಿವಭಕ್ತನ ತಲೆಯೆಂದು ತಿಳಿದು ಅದಕ್ಕಾಗಿ ತನ್ನ ತಲೆಯನ್ನು ಕಡಿದು ಈಶ್ವರನನ್ನು ಬರಮಾಡಿಕೊಂಡು ತಾನೂ ಕೈವಲ್ಯವನ್ನು ಹೊಂದಿದ ಪಗಳ ಚೋಳನಿಗೆ ನಾನು ಸೇವಕನಾಗುವೆನು. ತನ್ನ ಮನೆಯ ಕೆಲಸಗಳನ್ನು ಮಾಡುತ್ತಿದ್ದ ದಾಸಿಯ ಮಗನೊಬ್ಬನು ಕೆಲಸಮಾಡಲು ಕೈಲಾಗದೆ ಓಡಿಹೋಗಿ ವಿಭೂತಿ, ರುದ್ರಾಕ್ಷಿ, ಮೊದಲಾದ ಶಿವಚಿನ್ಹಗಳನ್ನು ಧರಿಸಿ ಜಂಗಮ ರೂಪದಿಂದ ಮನೆಗೆ ಬರಲು ಅವನು ತನ್ನ ಪಾದಗಳನ್ನು ತೊಳೆಯಲು ಎರಡೂ ಕಾಲುಗಳನ್ನು ಮುಂದಕ್ಕೆ ಮಾಡಲು ಇವನು ನಮ್ಮ ದಾಸಿಯಾದ ಸಿರಿಗಿಯ ಮಗನೆಂದು ತಿಳಿದು ನೀರು ಎರೆಯದೆ ಇರುವವನ್ನು ನೋಡಿ ತನ್ನ ಹೆಂಡತಿಯ ತೋಳುಗಳನ್ನು ಕಡಿದು ಈಶ್ವರನ ಕೃಪಾಕಟಾಕ್ಷಕ್ಕೆ ಪಾತ್ರನಾದ ಕಲಿಕಂಭನಿಗೆ ನಾನು ಆಳಾಗುವೆನು. ಗುರು, ಲಿಂಗ, ಜಂಗಮ ಸೇವಾ ನಿರತನಾಗಿರುವಾಗ ಒಂದು ದಿವಸ ಜಂಗಮ ರೂಪಿಯಾದ ಪರಶಿವನು ತನ್ನ ಕೌಪೀನವನ್ನು ಕೊಟ್ಟು ಇದು ನಿನ್ನಲ್ಲಿರಲಿ ನಾನು ಕೇಳಿದಾಗ ಪುನಃ ಕೊಡು ಎಂದು ಹೇಳಿ ನಂತರ ಅದನ್ನು ಕಾಣದಂತೆ ಮಾಡಿ ಪುನಃ ಒಂದು ಕೇಳಲು ಅದನ್ನು ಕಾಣದೆ ಭಯದಿಂದ ನಡುಗುತ್ತಿರುವ ಭಕ್ತನನ್ನು ನೋಡಿ ಶಂಕರನು:— ಅದು ಹೋದರೆ ಹೋಗಲಿ: ನನ್ನಲ್ಲಿ ಅದರ ಜೊತೆಯ ಮತ್ತೊಂದು ಕೌಪೀನವಿರುವದು ಅದರ ತೂಕಕ್ಕೆ ಸರಿಯಾಗಿ ಬಟ್ಟೆಯನ್ನು ಕೊಟ್ಟು ಬಿಡಿರೆನ್ನಲು ಹಾಗೆ ಮಾಡುವದಕ್ಕಾಗಿ ತಕ್ಕಡಿಯ ಒಂದು ಕಡೆ ಕೌಪೀನವನ್ನಿಟ್ಟು ಮತ್ತೊಂದು ಕಡೆ ತನ್ನ ಮನೆಯಲ್ಲಿಯ ಎಲ್ಲ ಬಟ್ಟೆಗಳು ಸಮಸ್ತ ವಸ್ತುಗಳನ್ನು ಹಾಕಿದರೂ ಸರಿಬಾರದಿರಲು ತನ್ನನ್ನೂ, ಹೆಂಡತಿ, ಮಗನನ್ನೂ, ತೂಕಕ್ಕೆ ಹಾಕಿ ಸರಿಮಾಡಿಕೊಟ್ಟು ಶಿವನನ್ನು ಮೆಚ್ಚಿಸಿ ಮುಕ್ತಿಯನ್ನು ಪಡೆದ ಅಮರ ನೀತಿಗೆ ನಾನು ಭಟನಾಗುವೆನು. ಜಂಗಮರ ಸೇವೆಗಾಗಿ ತನ್ನ ಎಲ್ಲ ಐಶ್ವರ್ಯವನ್ನು ಖರ್ಚುಮಾಡಿ ತಿನ್ನುವದಕ್ಕೆ ಅನ್ನವಿಲ್ಲದೆ ಬಡತನದಿಂದ ನರಳುತ್ತಿರಲು ಒಂದು ದಿವಸ ಜಡಿಮಳೆಯು ಒಂದೇ ಸವನೆ ಸುರಿಯುತ್ತಿರುವಾಗ ಶಿವನು ಜಂಗಮ ರೂಪದಿಂದ ಮನೆಗೆ ಬಂದು ಹತ್ತಿದ ಥಂಡಿಯನ್ನು ನಿವಾರಿಸಿಕೊಳ್ಳಲು ಎಲ್ಲ ಹೊದಿಕೆಗಳನ್ನು ಹೊತ್ತುಕೊಂಡರೂ ಚಳಿಹೋಗದಿರಲು ಗುಡಿಸಲನ್ನೇ ಕಿತ್ತು ಉರಿಮಾಡಿ ಕಾಖಿನ

ನ್ನುಂಟುಮಾಡಲು ಶಿವನು ಹಸಿವಾಗಿದೆ ಅನ್ನವನ್ನು ಕೊಡು ಎಂದು ಕೇಳಿದನು. ಆಗ ಮಕ್ಕಳಿಗೆಂದು ಮುಚ್ಚಿಟ್ಟ ಅನ್ನ ಇರುವದೇ ಎಂದು ಹೆಂಡತಿಯನ್ನು ಕೇಳಿ ಇಲ್ಲದ್ದನ್ನು ತಿಳಿದು ಜಡಿಮಳೆಯಲ್ಲಿಯೇ ಮೊಳಕಾಲುದ್ದ ನೀರಿನಿಂದ ತುಂಬಿದ ಗದ್ದೆಗಳಲ್ಲಿ ಭತ್ತದ ಕಾಳುಗಳನ್ನು ಆಯ್ದು ತಂದು ಹುರಿದು ಕುಟ್ಟಿ ಅನ್ನಮಾಡಿ ಶಿವನಿಗೆ ತೃಪ್ತಿಪಡಿಸಿ ಮೋಕ್ಷವನ್ನು ಪಡೆದ ಎಳೆಯಾಂಡಗುಡಿಯ ಮಾರಯ್ಯನ ಮಗನಾಗುವೆನು. ತನ್ನ ರಾಜ್ಯದಲ್ಲಿ ವೇದಾಗಮ ವಿಚಾರಗಳನ್ನು ಬೋಧಿಸುತ್ತ ಮಹಾದಾನಿಯಾಗಿ ಪ್ರತ್ಯಕ್ಷ ಪ್ರಮಾಣಗಳಿಂದ ಶಿವಸಿದ್ಧಾಂತಗಳನ್ನು ತೋರ್ಪಡಿಸುತ್ತ ಭವಬಂಧಿಗಳನ್ನು ಭಕ್ತರನ್ನಾಗಿ ಮಾಡುತ್ತ ಭಕ್ತರಾಗದವರನ್ನು ಕೊಲ್ಲಿಸುತ್ತ ಇರುತ್ತಿರಲು ಪರಮೇಶ್ವರನು ಇವನ ಶಕ್ತಿಯನ್ನು ಪರೀಕ್ಷಿಸಿ ನೋಡಬೇಕೆಂದು ಒಬ್ಬ ಒಕ್ಕಲಿಗನ ವೇಷವನ್ನು ಧರಿಸಿ ಆ ಪಟ್ಟಣವನ್ನು ಪ್ರವೇಶಿಸಿ ಅರಮನೆಯ ಮುಂದೆ ನಿಂತು— ಎಲೈ ರಾಜನೇ, ನಿನ್ನ ಸೇವಕರು ಸುಂಕ, ಕಪ್ಪ, ಕಾಣಿಕೆಗಳನ್ನು ಕೊಟ್ಟು ಹೋಗಬೇಕೆಂದು ಹಿಂಸಿಸುತ್ತಾರೆ. ಇದು ನಿನಗೆ ನ್ಯಾಯವೇ ? ಎಂದು ಕೇಳಲು ರಾಜನು ಆಶ್ಚರ್ಯದಿಂದ ಇವನು ಪಟ್ಟಣದೊಳಗೆ ಹೇಗೆ ಬಂದನು ? ಎಂದು ಬೆರಗಾಗಿ ಎಲೈ ಒಕ್ಕಲಿಗನೇ, ನೀನು ಶಿವಭಕ್ತನಾದರೆ ಸರ್ವಮಾನ್ಯ ಕೊಟ್ಟು ಸುಂಕತೆರಿಗೆ ತೆಗೆದು ಹಾಕುವೆನೆನ್ನಲು ನಮ್ಮ ವಂಶದವರು ಯಾವನೊಬ್ಬನೂ ಶಿವಭಕ್ತನಿಲ್ಲದ್ದರಿಂದ ಸಾಧ್ಯವಿಲ್ಲವೆಂದು ಒಕ್ಕಲಿಗನು ಹೇಳಲು ನಿನಗೆ ಬೇಕಾದಷ್ಟು ಸಂಪತ್ತು ಕೊಡುತ್ತೇನೆ. ಹಾಗು ಎಲ್ಲ ಅನುಕೂಲತೆಗಳನ್ನೂ ಮಾಡಿ ಕೊಡುತ್ತೇನೆ. ಸುಖದಿಂದ ಕಾಪಾಡುತ್ತೇನೆ. ನನ್ನ ಮಾತನ್ನು ಲಾಲಿಸಿ ಲಿಂಗದೀಕ್ಷಾ ಸಂಪನ್ನನಾಗೆಂದು ಎಷ್ಟು ಪರಿಯಿಂದ ಹೇಳಿದರೂ ಕೇಳದಿರಲು ಕೋಪಾವಿಷ್ಟನಾಗಿ ಕೈಗತ್ತಿಯನ್ನು ಝುಳಪಿಸುತ್ತ ಕಡಿಯಲು ಸಿದ್ಧನಾಗುವಷ್ಟರಲ್ಲಿಶಿವನು ಪ್ರತ್ಯಕ್ಷನಾಗಿ ಬೇಕಾದ ವರ ಬೇಡಲು ಹೇಳಿದರೂ ನೀನು ಲಿಂಗಧಾರಿಯಾಗುವದೇ ನನಗೆ ವರವೆಂದು ಬೇಡಿಕೊಂಡು ಶಿವನಿಗೆ ಲಿಂಗಧಾರಣೆ ಮಾಡಿಸಿ ಗಣ ಪದವಿಯನ್ನುಪಡೆದ ಗಣನಾಥನಿಗೆ ನಾನು ಪಾದರಕ್ಷೆಯ ಪರಿಚಾರಕನಾಗುವೆನು. ಚಿದಂಬರದಲ್ಲಿರುವ ಶಿವಾಲಯಕ್ಕೆ ಪ್ರತಿದಿವಸ ಹೋಗಿ ನಮಸ್ಕಾರಮಾಡಿ ಮನೆಗೆ ಬರುವ ನಿಯಮವನ್ನು ಹಿಡಿದಿರಲು ಒಂದು ದಿವಸ ರಾತ್ರಿಯಲ್ಲಿ ಶಿವಾಲಯ ದಿಂದ ಬರುತ್ತಿರುವಾಗ ಉಪ್ಪರಿಗೆಯ

ಮೇಲೆ ನಿಂತಿದ್ದ ವೇಶ್ಯೆಯೊಬ್ಬಳು ತಂಬುಲವನ್ನು ಉಗುಳಲು ಆ ಎಂಜಲು ಅವನ ಮೈಮೇಲೆ ಬೀಳಲು ಆತನು ಶಂಕರಾ! ಪರಮೇಶ್ವರಾ! ಎಂದು ಕೂಗಿದಕೂಡಲೇ ಆ ಸೂಳೆಯು ತೀವ್ರವಾಗಿ ಇಳಿದುಬಂದು ಆತನ ಪಾದಗಳಿಗೆರಗಿ ಮನೆಗೆ ಕರೆದುಕೊಂಡು ಹೋಗಿ ಸುಗಂಧದ ಎಣ್ಣೆಯನ್ನು ಪೂಸಿ ಸ್ನಾನಮಾಡಿಸಿ, ಗಂಧಮಾಲೆಗಳಿಂದ ಅಲಂಕರಿಸಿ, ಕರ್ಪೂರ ಸಹಿತ ವೀಳೆಯವನ್ನು ಕೊಟ್ಟು ತನ್ನ ಅಪರಾಧ ಕ್ಷಮಿಸಬೇಕೆಂದು ಬೇಡಿಕೊಂಡು ಸಮಾಧಾನ ಪಡಿಸಿ ಮನೆಗೆ ಕಳಿಸಲು ಆತನ ಹೆಂಡತಿಯು ತನ್ನ ಗಂಡನ ಹೊಸ ವೇಷ–ಭೂಷಣಗಳನ್ನು ನೋಡಿ ಇಷ್ಟು ಹೊತ್ತಿನ ವರೆಗೆ ಎಲ್ಲಿಗೆ ಹೋಗಿದ್ದಿರಿ ? ಯಾವಳಿಂದ ಈ ಸೇವೆಯನ್ನು ಕೈಕೊಂಡು ಬಂದಿರಿ? ನಿಮ್ಮ ಪೂಜೆಗೆ ಇದೇ ಫಲವೋ? ಇದೆಲ್ಲವನ್ನು ನೋಡಿ ನಾನೆಂತು ಸೈರಿಸಲಿ ಎಂದು ಸಿಟ್ಟಿನಿಂದ ಗದ್ದರಿಸಿ ಪಟ್ಟೆ ಮಂಚಕ್ಕೆ ಬಾರದಿರಲು ಅವಳ ಮನೋಭಾವವನ್ನು ತಿಳಿದು ಪ್ರೀತಿಯಿಂದ ಮುದ್ದಾಡಿ, ಕೈಹಿಡಿದು ಕರೆದರೂ ಬಾರದೆ ಶಿವನಾಣೆಗೂ ನೀನು ನನ್ನನ್ನು ಮುಟ್ಟಕೂಡದೆಂದು ಹೇಳಲು ಅವಳ ಮೇಲಿನ ಮೋಹವನ್ನು ಬಿಟ್ಟು ೮೦ ವರ್ಷ ಕಾಲ ಕಳೆದುಹೋಗಲು ಶಂಕರನು ಜಂಗಮ ರೂಪಧಾರಿಯಾಗಿ ಅವನ ಮನೆಗೆ ಬಂದು ಪಾದಸೇವೆಯನ್ನು ಕೈಕೊಂಡು ಭಿಕ್ಷಾ ಪಾತ್ರೆಯನ್ನು ಆತನ ಕಡೆಗೆ ಕೊಟ್ಟು ನಾನು ಕೇಳಿದಾಗ ಪರತ ಕೊಡಬೇಕೆಂದು ಹೇಳಿ ಸ್ವಲ್ಪ ಹೊತ್ತಿನಲ್ಲಿ ಅದನ್ನು ಮಾಯ ಮಾಡಿ ಪುನಃ ಬಂದುಕೇಳಲು ಆತನು ಮನೆಯನ್ನೆಲ್ಲಾ ಹುಡುಕಿ ಎಲ್ಲಿಯೂ ಸಿಕ್ಕದಿರಲು ಭಿಕ್ಷಾ ಪಾತ್ರೆಯು ಹೋಯಿತೆಂಬ ಭಯದಿಂದ ನಡುಗುತ್ತಿರಲು ಎಲೈ ಮೋಸಗಾರನೇ, ನನ್ನ ಪಾತ್ರೆಯನ್ನು ಮುಚ್ಚಿಟ್ಟು, ಹೋಗಿದೆಯೆಂದು ಸುಳ್ಳು ಹೇಳುವೆಯಾ? ನೀನು ತಕ್ಕನು. ನಿಮ್ಮಿಬ್ಬರನ್ನು ಪ್ರಮಾಣ ಮಾಡಿಸುವೆನೆಂದು ಹೇಳಿ ಒಂದು ಕೊಳದ ಬಳಿಗೆ ಕರೆದುಕೊಂಡು ಬಂದು ಅವರನ್ನು ಭೂತ್ಕಾರದಿಂದ ನೀರಿನಲ್ಲಿ ಮುಳುಗಿಸಿ ಮುದಿತನವನ್ನು ಹೋಗಲಾಡಿಸಿ ಎಂಭತ್ತು ವರ್ಷಗಳವರೆಗೆ ಸಂಸಾರ ಸುಖವನ್ನು ಅನುಭವಿಸುವಂತೆ ಮಾಡಿ ಬಳಿಕ ಪ್ರತ್ಯಕ್ಷನಾಗಿ ಗಣ ಪದವಿಯನ್ನು ಕೊಡಲು ಆಗಣ ಸಮುದಾಯದಲ್ಲಿ ಮೆರೆಯುತ್ತಿರುವ ತಿರುನೀಲಕಂಠನ ಪಾದಸೇವಕ ನಾಗುವೆನು. ವಿಕ್ರಮ ಚೋಳನು ಶಿವಾಲಯಗಳನ್ನು ಕಟ್ಟಿಸಿ ಶಿವಲಿಂಗವನ್ನು ಸ್ಥಾಪಿಸಿದುದನ್ನು

ನೋಡಿ ತನ್ನ ದೇಹವನ್ನು ಗುಡಿಯನ್ನಾಗಿಯೂ, ಹೃದಯವನ್ನು ಶಿವಪೀಠವನ್ನಾಗಿಯೂ ಮಾಡಿ ಮನಸ್ಸಿನಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಕೈಲಾಸ ಮುಕ್ತಿಯನ್ನು ಕೈಕೊಂಡವನಾದ ಪೂಸಲ ವರನಿಗೆ ನಾನು ಆಳಾಗುವೆನು. ಸಕಲ ಸಾಮ್ರಾಜ್ಯ ಸುಖವನ್ನು ತೊರೆದು ಶಂಕರನನ್ನು ಮೆಚ್ಚಿಸಿದ ಕರಿಕಾಲನಿಗೆ ನಾನು ಸೇವಕನಾಗುವೆನು. ಮಾನಸ ಪೂಜಾ ವಿಧಿಯಿಂದ ಹೃದಯದಲ್ಲಿ ಶಿವಧ್ಯಾನ ಮಾಡಿ ಅವನನ್ನು ಮೆಚ್ಚಿಸಿಕೊಂಡ ತಿರುಕುರುಪೆಯ ಪಡಿಯರನಾಗುವೆನು. ಶಿವಭಕ್ತಿ ಸಂಪನ್ನನಾಗಿ ರೋಹಿಣಿಯೆಂಬ ತನ್ನ ಹೆಂಡತಿಯೊಡನೆ ಜಂಗಮ ಭಕ್ತಿಯಿಂದ ಈಶ್ವರನನ್ನು ಮೆಚ್ಚಿಸಿದ ತಿರುಮೂಲನ ಪಾದವನ್ನು ನಂಬುವೆನು. ನಿತ್ಯಸಹಸ್ರ ಜಂಗಮರಿಗೆ ಹೊನ್ನು ದಾನಮಾಡುತ್ತ ದ್ರವ್ಯವೆಲ್ಲ ಮುಗಿಯಲು ಶಿವಪುರಕ್ಕೆ ತೆರಳಿದ ಚಿರುಪುಲಿಯಾರ್ಯನಿಗೆ ಬಂಟನಾಗುವೆನು. ಶಿವನಿಂದ ನಿತ್ಯವೂ ಒಂದು ಹೊನ್ನನ್ನು ತಂದು ಅದರಿಂದ ಶಿವಗಣಂಗಳ ಸೇವೆ ಮಾಡಿ ಮುಕ್ತಿಯನ್ನು ಪಡೆದ ಚಿರುತ್ತೊಣೆಯರ ಕೈಂಕರ್ಯವನ್ನು ಮಾಡುವೆನು. ಹಿಂದಿನ ಕಾಲದವರೂ, ಮುಂದೆ ಹುಟ್ಟುವವರೂ, ಈಗ ಇರತಕ್ಕವರೂ ಆದ ಸಮಸ್ತ ಶಿವಭಕ್ತರಿಗೂ ನಾನು ಸೇವಕನಾಗಿರುವೆನೆಂಬ ಅಭಿಪ್ರಾಯವುಳ್ಳ ತಿರುಪಾಡುಗಳನ್ನು ಕವನಿಸಿ ಹಾಡುತ್ತ ಎಲೈ ಶಿವಶರಣರ ಸಮೂಹವೇ, ನಾನು ನಿಮ್ಮ ಸೇವಕರ ಆಳು. ಆಳಿನ ಸೇವಕ, ಸೇವಕನ ಬಂಟ, ಆ ಬಂಟನ ಭೃತ್ಯನಾಗುವೆನೆಂದು ಹೇಳುತ್ತ ತಾವು ನನ್ನಲ್ಲಿ ಕೃಪೆಮಾಡಿ ರಕ್ಷಿಸಬೇಕೆಂದು ಹೊಗಳಿ ನಮಸ್ಕರಿಸುತ್ತ ದೈನ್ಯಸ್ವರದಿಂದ ವಿನಯಯುಕ್ತನಾಗಿ ಶಿವಗಣಸಮೇತ ಸಾವಕಾಶವಾಗಿ ದೇವಾಲಯದಿಂದ ಹೊರಗೆ ಬರುತ್ತಿರುವ ಸುಂದರ ನಂಬಿಯನ್ನು ಮಿಂಡಿದೇವನು ಕರುಣಾದೃಷ್ಟಿಯಿಂದ ನೋಡಿ ಅಭಯದಾನವನ್ನು ಮಾಡಿ ಪ್ರೀತಿಯಿಂದ ಶಿವನ ಪಾದಗಳಿಗೆರಗಿ ಅವನನ್ನು ಕೊಂಡಾಡುತ್ತಿರಲು ಪರಮೇಶ್ವರನು ಮೆರೆಮಿಂಡಿದೇವನನ್ನೂ, ಅಲ್ಲಿದ್ದ ಶಿವಭಕ್ತರನ್ನೂ. ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ತೆರಳಿ ತನ್ನ ಸಭೆಯಲ್ಲಿ ಭಕ್ತನ ಚರಿತ್ರೆಯನ್ನು ವಿವರಿಸಿ ಹೇಳುತ್ತ ಪಾರ್ವತಿ ಯುಕ್ತನಾಗಿ ಸೌಖ್ಯದಿಂದ ಇದ್ದನು. ಆದ್ದರಿಂದ ಹೇ ಬಸವೇಶ್ವರಾ, ಶಿವಭಕ್ತರಲ್ಲಿ ಅಹಂಕಾರವನ್ನು ತೋರಬಾರದೆಂದು ಮಾಚಿದೇವನು ಹೇಳಲು ಬಸವೇಶ್ವರನುಮಾಚಿದೇವನ ಭಕ್ತಿಯಿಂದ ಉತ್ಪನ್ನವಾದ ರತ್ನಗಳನ್ನು ಜಂಗಮರಿಗೆ ದಾನಮಾಡುತ್ತ ಸುಖದಿಂದ ಇದ್ದನು.

## — ಕಿನ್ನರಿ ಬ್ರಹ್ಮಯ್ಯನ ಕಥೆಯು —

ಪರವಾದಿಗಳೆಂಬ ನರಿಗಳಿಗೆ ಸಿಂಹಸ್ವರೂಪನೂ, ಸರ್ವ ಪ್ರಾಣಿಹಿತಕರನೂ, ಸಂಗೀತ ವಿದ್ಯಾವಿಶಾರದನೂ, ಗುರು, ಲಿಂಗ, ಜಂಗಮ ಪೂಜಾ ತತ್ಪರನೂ ಆದ ಕಿನ್ನರಿಬ್ರಹ್ಮಯ್ಯನೆಂಬ ಶಿವಭಕ್ತನು ಪುಡೂರು ಎಂಬ ನಗರದಲ್ಲಿದ್ದನು. ಆತನು ಶಿವಶರಣರ ಹಿತಕ್ಕಾಗಿ ತನ್ನಲ್ಲಿದ್ದ ಹಣವನ್ನೆಲ್ಲ ವೆಚ್ಚಮಾಡಿ ಜೀವನಕ್ಕೆ ಮಾರ್ಗವಿಲ್ಲದಾಗಲು ಸಂಗೀತದಿಂದ ಸದಾಶಿವನನ್ನು ಮೆಚ್ಚಿಸಿ ಪ್ರತಿದಿವಸ ಆತನಿಂದ ಒಂದು ಕಾಲು ಹಣವನ್ನು ತಂದು ಶಿವಶರಣರ ಸೇವೆಯನ್ನು ಮಾಡುತ್ತ ಸುಖದಿಂದ ಇದ್ದನು. ಈತನು ಶಿವಭಕ್ತರಿಂದ ಬಸವೇಶ್ವರನ ಚರಿತ್ರೆಯನ್ನು ಕೇಳಿ ಆತನ ದರ್ಶನ ಪಡೆದು ಶಿವಾನುಭವ ಗೋಷ್ಠಿಯಲ್ಲಿ ಭಾಗವಹಿಸಿ ತೃಪ್ತನಾಗಬೇಕೆಂದು ಯೋಚಿಸಿ ಬಸವೇಶ್ವರನ ಪ್ರಾಣಲಿಂಗದಲ್ಲಿ ಪ್ರತಿಫಲಿಸಿ ಕೂಡಲೇ ಎದುರಿಗೆ ನಿಂತು ದರ್ಶನಕೊಡಲು ಬಸವೇಶ್ವರನು ಉತ್ಸಾಹಭರಿತನಾಗಿ ಒಳಗೆ ಕಂಡ ಜಂಗಮನನ್ನು ಹೊರಗೂ ನೋಡಿ ಆತನನ್ನು ಸತ್ಕರಿಸಿ ಪೂಜಿಸಿ ರತ್ನಪೀಠದಲ್ಲಿ ಕುಳ್ಳಿರಿಸಿ ಕೆಲವು ಕಾಲ ಶಿವಾನುಭವ ಗೋಷ್ಠಿಯಲ್ಲಿ ಕಳೆದು ಆನಂದಭರಿತನಾಗಿ ಜಂಗಮ ಸೇವಾ ತತ್ಪರನಾಗಿದ್ದನು. ಒಂದು ದಿವಸ ಕಿನ್ನರಿಬ್ರಹ್ಮಯ್ಯನು ತ್ರಿಪುರಾಂತಕೇಶ್ವರ ದೇವಾಲಯದ ಮುಂಭಾಗದಲ್ಲಿ ವಿನೋದಾರ್ಥವಾಗಿ ಕುಳಿತುಕೊಂಡ ಕಾಲದಲ್ಲಿ ಒಬ್ಬ ವಿಟನು ತನ್ನ ವೇಶ್ಯೆಯ ಮನೆಯಲ್ಲಿ ಮಾಡುವ ಹಬ್ಬದಲ್ಲಿ ಬಲಿಕೊಡಲು ಒಂದು ಕುರಿಯನ್ನು ಕೊಂಡು ತರುತ್ತಿರುವಾಗ ಆ ಕುರಿಯು ಕುತ್ತಿಗೆಗೆ ಕಟ್ಟಿದ ಹಗ್ಗವನ್ನು ಕಳಚಿಕೊಂಡು ಓಡುತ್ತ ದೇವಸ್ಥಾನವನ್ನು ಹೊಕ್ಕಿತು. ಆಗ ಅದನ್ನು ಹಿಡಿಯಲು ಹಿಂಬಾಲಿಸಿ ಹೋಗುವ ವಿಟನನ್ನು ಕಿನ್ನರಿಬ್ರಹ್ಮಯ್ಯನುನೋಡಿ ಎಲೈ— ಮೂಢ ಮನುಷ್ಯನೇ, ಈ ಕುರಿಯನ್ನು ಹಿಡಿಯಬೇಡ ಬಿಡು. ಇದು ಸಾವಿಗೆ ಅಂಜಿ ತ್ರಿಪುರಾಂತಕನನ್ನು ಮೊರೆ ಹೊಕ್ಕಿದೆ. ಬೇಕಾದರೆ ಅದರ ಬೆಲೆಯನ್ನು ಕೊಡುವೆನು. ಕುರಿಯನ್ನು ಹಿಡಿಯಬೇಡ. ಎನ್ನಲು ಆ ವಿಟಪುರುಷನು ಆಹಾ ! ಈತನು ಎಂತಹ ವಿವೇಕಶಾಲಿಯು ! ಕುರಿಗಳು ಸಂದಿಗೊಂದಿ ಹುಡುಕಿ ತಿರುಗುವದು ಸ್ವಾಭಾವಿಕವೇ ಸರಿ. ಈತನು ಹೀಗೆ ಏಕೆ ಹೇಳುವನು ಎಂದು ಪುನಃ ಕುರಿಯನ್ನು ಹಿಡಿದೆಳೆಯಲು ಓ ವಿಟವರ್ಯಾ, ಮರಣವೆಂಬುದು ಲೋಕದಲ್ಲಿ ಭಯಂಕರವಾದದು. ಅದಕ್ಕೆ ಹೆದ

ರದಿರುವ ಪ್ರಾಣಿ ಯಾವದು ? ಆದರಲ್ಲಿಯೂ ಶಿವನನ್ನೂ, ಶಿವಶರಣರನ್ನೂ ಮೊರೆ ಹೊಕ್ಕವರಿಗೆ ಮರಣವುಂಟೇ ? ಆದ್ದರಿಂದ ಈ ಕುರಿಯನ್ನು ಹಿಡಿಯ ಬೇಡೆಂದು ನುಡಿಯಲು ಅವನು ಹಾ ! ಹಾ !! ಹಾ !!! ಎಂದು ಗಟ್ಟಿಯಾಗಿ ನಗುತ್ತ ದಾನಮಾಡತಕ್ಕವರಲ್ಲಿ ನಿನ್ನಂತಹ ದಾನಿ ಯಾರಿರುವರು ? ಉಪಾ ಯದಿಂದ ಕುರಿಯನ್ನು ಉಳಿಸಿಕೊಳ್ಳಬೇಕೆನ್ನುವಿಯಾ ? ಈಶ್ವರನ ಗುಡಿ ಯನ್ನು ಹೊಕ್ಕಮಾತ್ರಕ್ಕೆ ಅದನ್ನು ಹಿಡಿಯಬೇಡೆನ್ನುವಿಯಾ ? ಅಷ್ಟೊಂದು ದಯಾಪರನಿದ್ದರೆ ಇದರ ಬೆಲೆ ಒಂದು ಸಾವಿರ ವರಹಕೊಟ್ಟು ಈ ಕುರಿಯ ಪ್ರಾಣವನ್ನು ಉಳಿಸು. ಎಂದು ನುಡಿಯುತ್ತ ವೇಳೆಯಾದರೆ ಸೂಳೆಯು ಕೋಪ ಮಾಡುವಳೆಂಬ ಭಯದಿಂದ ಕುರಿಯನ್ನು ಬಲಾತ್ಕಾರವಾಗಿ ಹಿಡಿದು ಎಳೆಯುತ್ತಿರುವದನ್ನು ಕಂಡು ಎಲಾ ಕಟುಕನಾದ ನೀಚನೇ, ಸುಮ್ಮನೇ ನನ್ನನ್ನು ರೇಗಿಸಬೇಡ ತೆಗೆದುಕೋ ಸಾವಿರ ಹೊನ್ನುಗಳನ್ನು. ಇನ್ನು ಕುರಿ ಯನ್ನು ಮುಟ್ಟಬೇಡವೆಂದು ಹೇಳಿ ಹಣಕೊಟ್ಟು ಕುರಿಗೆ ಶಿವಮುದ್ರೆಯನ್ನು ಒತ್ತಿ ಗುಡಿಯಲ್ಲಿ ಕಟ್ಟಿಸಿದನು. ಇತ್ತ ವಿಟನು ಸಾಕಷ್ಟು ಹಣ ಸಿಕ್ಕಿತೆಂದು ಹಿಗ್ಗಿ ಬೇರೊಂದು ಕುರಿಯನ್ನು ಕೊಂಡು ಸೂಳೆಯಮನೆಗೆ ತೆಗೆದುಕೊಂಡು ಹೋದನು. ಹಾಗು ಹಣವನ್ನು ತೋರಿಸುತ್ತ ನಡೆದ ಸಂಗತಿಯನ್ನು ಸೂಳೆಗೆ ಹೇಳಲು ಅವಳು ಕೋಪದಿಂದ— ಎಲೈ ಮೂಢನೇ, ನೀನು ಮಾಡಿದ ಕೆಲ ಸವು ಅವಿವೇಕತನದ್ದು ಈ ಹಣ ಏಕೆ ತಂದೆ? ಈ ಊರಲ್ಲಿರುವ ವೇಶ್ಯೆಯ ರಲ್ಲಿ ನಾನೇ ಐಶ್ವರ್ಯಶಾಲಿ ಇದ್ದು ಹಣದಾಶೆಗಾಗಿ ನೀನು ಮಾಡಿದ ಕೆಲ ಸದಿಂದ ನಿಂದೆಗೆ ಗುರಿಯಾಗ ಬೇಕಾಯಿತು. ಯಾರಿಗಾದರೂ ತಿಳಿದರೆ ನಮ್ಮ ಮಾನವನ್ನು ಕಾಸಿಗೆ ಸಮನಾಗಿ ಮಾಡದೆ ಬಿಡರು. ಹಾಗೂ ನಮ್ಮ ದೇವರಿಗೆ ಮೀಸಲು ಅಳಿದುಹೋಯಿತು. ಇನ್ನು ಈ ಹಬ್ಬಮಾಡಿ ಫಲ ವೇನು? ಈಶ್ವರನ ಬಲಿಗೆಂದು ತಂದ ಕುರಿಯನ್ನು ಮಾರಿ ಹುಲ್ಲು ಮೇಯುವ ಕುರಿಯನ್ನು ಹಬ್ಬಕ್ಕೆಂದು ತಂದಿರುವೆಯಾ? ಈಗ ನಮ್ಮ ದೇವರಿಗೆ ಕೋಪವೂ, ನಮಗೆ ಲೋಕಾಪವಾದವೂ ಬಾರದಂತೆ ಹಣವನ್ನು ಹಿಂದಕ್ಕೆಕೊಟ್ಟು ಮೊದಲಿನ ಕುರಿಯನ್ನೇ ತೆಗೆದುಕೊಂಡು ಬೇಗ ಬಾ ಎಂದು ಹೇಳಿ ಗದರಿಸಿ ಕಳಿಸಿದಳು. ಆ ಮದಾಂಧನು ಮುಂದೆ ಆಗುವದನ್ನು ತಿಳಿಯದೆ ಸೂಳೆಯ ಸಂತೋಷಕ್ಕಾಗಿ ದೇವಾಲಯಕ್ಕೆ ಬಂದು ಆ ಕುರಿಯನ್ನು ಹಿಡಿದು ಎಳೆಯ

ಹತ್ತಿದನು. ಅವನ್ನು ಕಿನ್ನರಿ ಬ್ರಹ್ಮಯ್ಯನು ನೋಡಿ– ಎಲಾ ನೀಚನೇ, ಕುರಿಯನ್ನು ಬಿಟ್ಟುಬಿಡು ಇಲ್ಲವಾದರೆ ಶಿವನಾಣೆಯಾಗಿ ನಿನ್ನನ್ನು ಇಲ್ಲಿಯೇ ಕೊಂದುಬಿಡುವೆನು ಶಿವ ಮುದ್ರೆಯಿಂದ ಒಪ್ಪುವ ಈ ಕುರಿಯನ್ನು ನೀನೇಕೆ ನಿಮ್ಮ ತಾತ, ನಿಮ್ಮ ಮನೆಯ ದೇವರು ಸಹ ಬಂದರೂ ಹಿಡಿಯಲಾರರು ಒಂದು ವೇಳೆ ಬಂದು ಬಲಾತ್ಕಾರದಿಂದ ಹಿಡಿದೆಳೆದರೆ ಅವರನ್ನೂ ಕತ್ತರಿಸಿ ಹಾಕುವೆನೆಂದು ಮೂದಲಿಸಿ ನುಡಿದನು. ಆಗ ಆ ವಿಟನು ತಾನೂ ಒಂದು ಖಡ್ಗವನ್ನು ತೆಗೆದುಕೊಂಡು ಅಲುಗಿಸುತ್ತ ಹೋಗಿ ಕಿನ್ನರಿಬ್ರಹ್ಮಯ್ಯನ ಮೇಲೇರಿ ಹೋದನು. ಆಗ ಅವನು ಕೋಪದಿಂದ ಮುಂಡದಿಂದ ರುಂಡವನ್ನು ಬೇರ್ಪಡಿಸಿ ಗುಡಿಯ ಮುಂಭಾಗದಲ್ಲಿ ರುಂಡವನ್ನೂ, ಹಿಂಭಾಗದಲ್ಲಿ ಮುಂಡವನ್ನೂ ಬಿಸುಡಿದನು. ಆಗ ಅವನ ಆಪ್ತೇಷ್ಟರು ಬಂದು ಆ ಹೆಣವನ್ನು ತೆಗೆದುಕೊಂಡು ಹೋಗಿ ರಾಜನಲ್ಲಿ ಎಲ್ಲ ಸಂಗತಿಯನ್ನು ಹೇಳಿ ರಕ್ಷಿಸಬೇಕೆಂದು ಮೊರೆಯಿಟ್ಟರು. ಆಗ ರಾಜನು ಬಸವೇಶ್ವರನನ್ನು ನೋಡಿ— ಏನಯ್ಯಾ, ಶಿವಭಕ್ತರು ವಿನಯಶಾಲಿಗಳು, ದಯಾಪರರು ಎಂದು ಹೇಳಿದ ಮಾತು ನಿಜವಾಯಿತು ? ದೇವಾಲಯದಲ್ಲಿ ಓಡಿ ಹೋದ ತನ್ನ ಕುರಿಯನ್ನು ಹಿಡಿಯುವದಕ್ಕಾಗಿ ಬಂದ ಮನುಷ್ಯನನ್ನು ಶಿವಭಕ್ತನಾದ ಕಿನ್ನರಿಬ್ರಹ್ಮನು ಕಡಿದುಹಾಕಬೇಕೇ ? ಶಿವಭಕ್ತರೆಂಬ ಗರ್ವದಿಂದ ಮೆರೆಯುವ ಇವರನ್ನು ಬುದ್ಧಿಗಲಿಸುವವರು ಯಾರು ? ಮಕ್ಕಳನ್ನು ಸೀಳುವದು. ದೇವರನ್ನು ಒದೆಯುವದು. ಹೆಂಡತಿಯನ್ನು ಅನ್ಯರಿಗೆ ಕೊಡುವದು. ನೀಚಜಾತಿಯಲ್ಲಿ ಬಾಳುವದು ಧರ್ಮವೆಂದು ತಿಳಿದಿರುವ ಇವರನ್ನು ಯಾರು ಮೆಚ್ಚುವರು ? ನೀನು ಅವರಿಗೆ ಹಿರಿಯನಾಗಿದ್ದು ನಿನ್ನ ಭಕ್ತರು ಹೀಗೆ ಮಾಡಬಹುದೇ ? ನೋಡು ಎಂದು ಸಿಟ್ಟಿನಿಂದ ನುಡಿದನು. ಆ ಮಾತನ್ನು ಕೇಳಿ ಬಸವೇಶ್ವರನು ನಸುನಗೆಯಿಂದ ಅಯ್ಯಾ– ರಾಜನ್, ಶಿವಭಕ್ತರು ಎಂದಿಗೂ ಅಧರ್ಮವನ್ನು ಬಳಸುವರಲ್ಲ. ಕಿನ್ನರಯ್ಯನು ಶಿವಸ್ವರೂಪಿಯು. ಸುಮ್ಮನೆ ಮುಂದಾಗುವದನ್ನು ಕಾಣದೆ ಅವಿವೇಕದಿಂದ ಮಾತಾಡಬೇಡ. ನಿನ್ನ ಅನುಮಾನವನ್ನು ಹೋಗಲಾಡಿಸಿಕೊಳ್ಳಲು ಒಬ್ಬ ಮಂತ್ರಿಯನ್ನು ಆ ಕಿನ್ನರಿಬ್ರಹ್ಮಯ್ಯನ ಬಳಿಗೆ ಕಳುಹಿಸಿ ನಿಜಸ್ಥಿತಿಯನ್ನು ತಿಳಿದುಕೊಳ್ಳುವದು ವಿಹಿತವೆನ್ನಲು ದೊರೆಯು ಅಪ್ಪಣೆಯಂತೆ ಒಬ್ಬ ಮಂತ್ರಿಯು ಕಿನ್ನರಯ್ಯನಲ್ಲಿಗೆ ಹೋಗಿ ಆತನ

ಪಾದಗಳಿಗೆರಗಿ ಸ್ವಾಮೀ, ಹಾಲಿಗೆಸಮಾನರಾದ ತಾವು ತಲಗೊಜ್ಜಿನಂತಿರುವ ಈ ಲೌಕಿಕರೊಡನೆ ವ್ಯಾಜ್ಯಮಾಡಬಹುದೇ ? ತಮ್ಮನ್ನು ನೋಡಿದರೆ ಶಾಂತಿಯುಕ್ತರೂ, ತೇಜೋಮಯರೂ, ಭಕ್ತಿ ಭಾಗ್ಯಸಂಪನ್ನರೂ ಆಗಿರುವಂತೆ ಕಾಣುವಿರಿ. ನಮ್ಮ ದೊರೆಯು ಈ ಜಗಳದ ವಿಚಾರ ತಿಳಿದುಕೊಂಡುಬರಲು ಕಳಿಸಿರುವನೆಂದು ಹೇಳಲು— ಅಯ್ಯಾ ಆ ಪಾಪಿಷ್ಠನು ಈ ಕುರಿಯನ್ನು ಕ್ರಯಕ್ಕೆ ಕೊಂಡು ಒಯ್ಯುವಾಗ ಅದು ಮರಣಭಯದಿಂದ ದೇವಸ್ಥಾನವನ್ನು ಹೊಕ್ಕಿತು. ಅದನ್ನು ನೋಡಿ ನಾನು ಒಂದಕ್ಕೆ ಎರಡು ಬೆಲೆ ಕೊಡುತ್ತೇನೆ ಕುರಿಯನ್ನು ಇಲ್ಲಿಯೇ ಬಿಡು ಎನ್ನಲು ಅದಕ್ಕೆ ಅವನು ಸತ್ಪುರುಷನಾದ ನೀನು ದಯಾಪರನಿದ್ದರೆ ಒಂದು ಸಾವಿರ ವರಹಗಳನ್ನು ಕೊಟ್ಟು ಬಿಡಿಸಿಕೊಳ್ಳಬಲ್ಲೆಯಾ ? ಎಂದು ಹಾಸ್ಯಮಾಡಿ ನಕ್ಕನು. ನಾನು ಹಾಗೆಯೇ ಆಗಲೆಂದು ಅವನಿಗೆ ಸಾವಿರ ವರಹಗಳನ್ನು ಕೊಟ್ಟು ಇಗೋ ಈ ಕುರಿಗೆ ಶಿವಮುದ್ರೆಯನ್ನು ಹಾಕಿರುವೆನು. ಪುನಃ ಬಂದು ಕೇಳಿದರೆ ಕುರಿಯು ದೊರೆಯಲಾರದೆಂದು ಹೇಳಿ ಅದನ್ನು ದೇವಸ್ಥಾನದಲ್ಲಿ ಕಟ್ಟಿ ಇಲ್ಲಿಯೇ ಕುಳಿತಿರುವಷ್ಟರಲ್ಲಿ ಅವನು ತಿರುಗಿ ಬಂದು ಕುರಿಯನ್ನು ಹಿಡಿದುಕೊಂಡು ಹೋಗುವದಕ್ಕೆ ಯತ್ನಿಸಿದನು. ಆಗ ಎಲಾ— ನರಾಧಮಾ, ಮೊದಲು ಕ್ರಯಕ್ಕೆ ಮಾರಿದ ಕುರಿಯನ್ನು ಪುನಃ ಹೇಗೆ ಬಯಸುತ್ತೀಯೋ ? ಎಂದು ಕೇಳಿದ್ದಕ್ಕೆ ಆತನು ನನ್ನ ಮೇಲೆ ಕತ್ತಿಯನ್ನು ಪ್ರಯೋಗಿಸುವದಕ್ಕೆ ಬಂದನು. ಆಗ ನಾನೇ ಅವನನ್ನು ಕತ್ತರಿಸಿದೆನು. ಅಪರಾಧವು ಯಾರಲ್ಲಿರುವದೋ ನೀವೇ ಯೋಚಿಸಿರಿ. ಇದಕ್ಕೆ ಈ ತ್ರಿಪುರಾಂತಕೇಶ್ವರನೇ ಸಾಕ್ಷಿ ಎಂದು ನುಡಿದು ಸುಮ್ಮನಾಗಲು, ಮಂತ್ರಿಯು ಆಶ್ಚರ್ಯಯುಕ್ತನಾಗಿ ರಾಜನಲ್ಲಿಗೆ ಬಂದು ಎಲ್ಲ ಸಂಗತಿ ವಿವರಿಸಿ ಹೇಳಲಾಗಿ ರಾಜನು ಪರಮಾಶ್ಚರ್ಯದಿಂದ ತ್ರಿಪುರಾಂತಕೇಶ್ವರನ ಸಾಕ್ಷಿಯನ್ನು ಕೇಳಬೇಕೆಂದು ಪರಿವಾರ ಸಮೇತನಾಗಿ ದೇವಸ್ಥಾನದ ಬಾಗಿಲಿಗೆ ಬಂದು ನಿಂತಿರಲು ಬಸವೇಶ್ವರನು ಬ್ರಹ್ಮಯ್ಯನ ಪಾದಗಳಿಗೆ ನಮಸ್ಕರಿಸಿ ಸ್ತುತಿಸಿ ನಿಂತಿದ್ದನು. ಸಕಲ ಜನರೂ ಆಶ್ಚರ್ಯದಿಂದ ನೋಡುತ್ತಿರಲು ಕಿನ್ನರಿಬ್ರಹ್ಮಯ್ಯನು ದೇವಸ್ಥಾನದ ಬೀಗವನ್ನು ನೋಡಿದ ಕೂಡಲೇ ಬಾಗಿಲು ತನ್ನಿಂದ ತಾನೇ ತೆರೆಯಿತು. ಆಗ ದೇವರ ಬಳಿಯಲ್ಲಿ ನಿಂತು ಗುರುಪಾದ ಧ್ಯಾನವನ್ನು ಮಾಡಿ ಓ ಪರಮೇಶ್ವರಾ, ನೀನು ಸೌಂದರ ಗಣೇಶನ ಹೆಂಡತಿಯ ಮೊಲೆ

ಯಲ್ಲಿ ಉದ್ಘನಿಸಿ ಮಾತಾಡಿದೆ. ತಿರುಪಿಯೊಳು ವಾದವನ್ನುಮಾಡಿದೆ. ಬೊಮ್ಮಯ್ಯನಿಗೆ ಜೋಳನಿಗೆ ಎದುರಾಗಿ ನಿಂತು ಮಾತಾಡಿದಂತೆ ನೀನು ನಿಜ ವಾದದ್ದನ್ನು, ನುಡಿ ಎಂದು ಅತ್ಯಂತ ನಿಷ್ಠೆಯಿಂದ ನುಡಿಯಲು ಹರಹರ ಮಹಾದೇವ ಎಂದು ಭಕ್ತರೆಲ್ಲರೂ ದಶದಿಕ್ಕುಗಳು ಪ್ರತಿಧ್ವನಿಸಿಗೊಡುವಂತೆ ಜಯಜಯಕಾರ ಮಾಡುತ್ತಿರಲು ಹಗಲು ರಾತ್ರಿಯನ್ನದೆ ಏಳು ದಿವಸಗಳ ವರೆಗೆ ಆತನ ಸದ್ಭಕ್ತಿಯನ್ನು ನಿರೀಕ್ಷಿಸುತ್ತಿರಲು ಬಸವೇಶ್ವರನು ಅನೇಕ ವಿಧ ವಾಗಿ ಸ್ತೋತ್ರ ಮಾಡುತ್ತಿರಲಾಗಿ ಪರಶಿವನು ಪ್ರತ್ಯಕ್ಷನಾಗಿ ನಸುನಗುತ್ತ ಎದುರಿನಲ್ಲಿಯೇ ನಿಂತಿರಲು ಸರ್ವರೂ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ ಸ್ತೋತ್ರ ಮಾಡುತ್ತಿರಲು ಕಿನ್ನರಯ್ಯನ ಸತ್ಯತನವನ್ನು ಸಾಕ್ಷಿಯಾಗಿ ನುಡಿದು ಅದೃಶ್ಯನಾಗಲು ಅರಸನೇ ಮೊದಲಾಗಿ ಸರ್ವರೂ ಕಿನ್ನರ ಬ್ರಹ್ಮಯ್ಯನ ಪಾದ ಗಳಿಗೆರಗಿ ಆತನ ಮಹಿಮೆಯನ್ನು ಕೊಂಡಾಡುತ್ತ ಆತನ ಅಪ್ಪಣೆ ಪಡೆದು ತನ್ನ ಅರಮನೆಗೆ ಹೊರಟುಹೋದರು. ಆಗ ನೆರೆದ ಸದ್ಭಕ್ತರೆಲ್ಲರೂ ಮರಣ ಹೊಂದಿದ ಆ ವಿಟನಿಗೆ ಪ್ರಾಣದಾನ ಮಾಡಬೇಕೆಂದು ಪ್ರಾರ್ಥಿಸಲು ಅವರ ಕೋರಿಕೆಯಂತೆ ಜೀವದಾನಮಾಡಲು ಶಿವಶರಣರೆಲ್ಲರೂ ಸಂತೋಷದಿಂದ ಹೊಗಳುತ್ತಿರಲು ಬಸವೇಶ್ವರನು ಕಿನ್ನರಯ್ಯನವರನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ ಅವರ ಪಾದಪೂಜೆಮಾಡಿ ತೀರ್ಥ ಪ್ರಸಾದ ಸ್ವೀಕರಿಸಿ ಬೀಳ್ಕೊಟ್ಟು ಎಂದಿನಂತೆ ಗುರುಲಿಂಗ ಜಂಗಮಾರ್ಚನಾ ತತ್ಪರನಾಗಿದ್ದನು.

## — ಕಲಿಕೇತ ಬ್ರಹ್ಮಯ್ಯನ ಕಥೆಯು —

ಅದೇ ಕಲ್ಯಾಣ ಪಟ್ಟಣದಲ್ಲಿ ಕಲಿಕೇತ ಬ್ರಹ್ಮಯ್ಯನೆಂಬ ಒಬ್ಬ ಶರಣನು ಜೀವನ್ಮುಕ್ತನೂ, ದಯಾಶಾಲಿಯೂಗಿಯೂ, ವೀರಶೈವಾಚಾರ ತತ್ಪರನಾ ಗಿಯೂ ಮೆರೆಯುತ್ತಿದ್ದನು. ಆತನು ಮುಂದಲೆಯಲ್ಲಿ ಕೂದಲನ್ನು ಕಟ್ಟಿ ಹಣೆ ಯಲ್ಲಿ ಭಸ್ಮವನ್ನು ಧರಿಸಿ, ಹಸಿರು ಬಣ್ಣದ ಬಟ್ಟೆಯನ್ನುಟ್ಟು ಒಂದು ಪಾದಕ್ಕೆ ಗೆಜ್ಜೆಗಳನ್ನೂ, ಮತ್ತೊಂದು ಪಾದಕ್ಕೆ ಚಿನ್ನದ ಗಗ್ಗರವನ್ನೂ ಧರಿಸಿ ಎಡಗೈ ಯಲ್ಲಿ ದಕ್ಷನ ಕುರಿತಲೆಯ ಕೊಂಬಿನಂತಹ ಟಗರಿನ ಕೊಂಬನ್ನೂ,ಬಲಗೈಯಲ್ಲಿ ಜಂಗನ್ನು ಕಟ್ಟಿದ ದಂಡವನ್ನೂ ಹಿಡಿದು, ವೀರಭದ್ರನ ಹಲಗೆಯನ್ನು ಧರಿಸಿ ಮುಗುಳು ನಗೆನಗುತ್ತ ಜಂಗು, ಗೆಜ್ಜೆ, ಗಗ್ಗರಗಳು ಝುಣಝುಣ ಎಂಬ ಶಬ್ದ

ಮಾಡುತ್ತಿರಲು ಸಡಗರದಿಂದ ಶಿವಭಕ್ತರ ಮನೆಯ ಮುಂದೆ ನಿಂತು ಪ್ರ ಶಬ್ದಧ್ವನಿಯಿಂದ ಪರಮತದವರ ಗರ್ವವೆಂಬ ಆನೆಗೆ ಸಿಂಹನಾದ ಬಂದನು. ಶಿವಶರಣರ ಪಾದಕಮಲದ ಭ್ರಮರ ಬಂದನು. ಶಿವಮತ ಸರೋವರದಲ್ಲಿ ಆಡುವ ಹಂಸಪಕ್ಷಿಯ ಮರಿಯು ಬಂದನು. ದಕ್ಷಬ್ರಹ್ಮ ನಾಶಮಾಡಿದ ವೀರಭದ್ರನ ಮದದಾನೆಯು ಬಂದನು. ಶಿವಭಕ್ತರ ಮು ಮಗನು ಬಂದನು. ಗುರುಲಿಂಗ ಜಂಗಮರ ಪ್ರಸಾದ ಸೇವಕನು ಬಂ ಪ್ರಮಥರ ಪಾದಚಾರಕನು ಬಂದನು. ಭೃಂಗೀಶನ ಮಗನು ಬಂ ಚಂಗಳೆಯ ಪುತ್ರನು ಬಂದನು. ದುಗ್ಗಳೆಯ ಮನೆಯ ಕಾವಲುಗಾ ಬಂದನು. ಆದಯ್ಯನಸೇವಕನು ಬಂದನು. ಭೋಗಯ್ಯನ ಆಳು ಬಂ ಈ ಕಲಿಕೇತಬ್ರಹ್ಮನು ಬಂದನು. ಶಿವಶರಣರು ನೋಡಿರಿ ಎಂದು ಭಕ್ತರನ್ನು ನಗಿಸುತ್ತ ಈ ಕಾಯಕದಿಂದ ಎರಡು ಕೊಳಗ ಭತ್ತವನ್ನು ತಂ ಅಷ್ಟರಿಂದಲೇ ಎಷ್ಟುಸಾವಿರ ಜನಜಂಗಮರು ಬಂದರೂ ತೃಪ್ತಿಪಡಿಸುತ್ತಿದ್ದನು ಹೀಗಿರಲು ಒಂದು ದಿವಸ ಒಬ್ಬ ಶಿವಭಕ್ತನು ಮಾರ್ಗಾಯಾಸದಿಂದ ಬ ಆತನ ಮನೆಯ ಬಾಗಿಲ ಜಗುಲಿಯಮೇಲೆ ಮಲಗಿರಲು ಆತನನ್ನು ಕಲಿಕೇ ತಯ್ಯನು ಕಂಡು ನೀನಾರು ? ಯಾವಕಾರಣದಿಂದ ಬಂದೆ ? ಎಂದು ಕೇಳ ಆ ಭಕ್ತನು ನಾನು ಶಿವಭಕ್ತನು. ಕಿನ್ನರಿಬ್ರಹ್ಮಯ್ಯಗಳ ಬಳಿಗೆ ಹೋಗುತ್ತಿದ್ದೇನೆ ಮಾರ್ಗಾಯಾಸದಿಂದ ವಿಶ್ರಾಂತಿಗಾಗಿ ನಿಂತೆನು. ಕಿನ್ನರಯ್ಯಗಳು ಬ ದೊಡ್ಡವರು. ಸಾಮಾನ್ಯರಲ್ಲ ಯಾಕಂದರೆ— ಪೂರ್ವದಲ್ಲಿ ಸೌಂದರನ ಯಣ್ಣನು ಪರಶಿವನಿಂದ ಒಂದು ಸೇರು ಹೊನ್ನು ಪಡೆದಿದ್ದನು. ಆದರೆ ಕಿ ಕಿನ್ನರಯ್ಯನು ಶಿವನಿಂದ ಪ್ರತಿದಿವಸ ಒಂದು ಬೊಗಸೆ ಹೊನ್ನು ಪಡೆಯುತ್ತಿ ದ್ದಾನೆ. ಆತನಲ್ಲಿಗೆ ಹೋಗದೆ ನನ್ನ ಬಡತನ ಹಿಂಗಲಾರದು. ಆತ ಮನೆಯು ಇನ್ನೂ ಎಷ್ಟು ದೂರದಲ್ಲಿದೆ ? ಹೇಳಬೇಕು ಎಂದು ಕೇಳಲು ಮಾತನ್ನು ಕಲಿಕೇತಯ್ಯನು ಕೇಳಿ ಕಣ್ಣು ಕೆಂಪಗೆ ಮಾಡಿ ಸಾಕುಬಿಡು. ಕಿನ್ನರಯ್ಯನ ದೊಡ್ಡಸ್ತಿಕೆಯನ್ನು ನನ್ನ ಮುಂದೆ ಹೇಳಬೇಡ. ಹಣದ ಆ ಗಾಗಿ ಶಿವನನ್ನು ಪೂಜಿಸುವನೇ ಹೊರತು ಭಕ್ತಿ ಸುಖಕ್ಕಾಗಿ ಪೂಜಿಸುವವನಲ್ಲ ಇದೆಂತಹ ಭಕ್ತಿ ? ಕೂಲಿಯನ್ನು ಮಾಡುವವನೂ, ಹಣ ಸಂಪಾದಿಸುವ ಲ್ಲವೇ ? ಶಿವಭಕ್ತಿ ಪರಾಯಣರಾದ ಶಿವಶರಣರಿಗೆ ಸಂಪತ್ತು ಹುಲ್ಲುಕಡ್ಡಿ

ಸಮಾನ. ಹೀಗಿರಲು ಹಣದಾಶೆಗಾಗಿ ಶಿವನನ್ನು ಪೂಜಿಸುವದ.ಂಟೇ ? ಕಿನ್ನರಿಯನ್ನು ನುಡಿಸಿ ಹಾಡಿ ಶಿವನನ್ನು ಮೆಚ್ಚಿಸಿ ಹೊನ್ನು ಪಡೆಯುತ್ತಿರುವನು. ಇವನೂ ಪೂರ್ವದಲ್ಲಿ ಸೌಂದರಸಂಬ್ಯಣ್ಣನ ಸಹವಾಸ ಮಾಡಿರಬಹುದು. ಎಂದು ತಿರಸ್ಕರಿಸಿ ನುಡಿದು ಎಲೈ— ಭಕ್ತನೇ, ಆ ಕಿನ್ನರಯ್ಯನ ಮನೆಯು ಇನ್ನೂ ಬಹಳ ದೂರವಿದೆ. ನೀನು ಈಗಲೇ ಆಯಾಸ ಹೊಂದಿರುವೆ. ಆದ್ದರಿಂದ ಅಲ್ಲಿಗೆ ಏಕೆ ಹೋಗುವೆ ? ನಿನಗೆ ಇಲ್ಲಿಯೇ ಹಣವನ್ನು ಕೊಡುತ್ತೇನೆ ನೋಡು ಎಂದು ಹೇಳುತ್ತ ಕಲಿಕೇತಯ್ಯನು ಕೈಯಲ್ಲಿಯ ಟಗರಿನ ಕೊಂಬನ್ನು ಅಲ್ಲಾಡಿಸಿ ಬಾರಿಸಲು ರಾಶಿಯಾಗಿ ಸುರಿದ ಚಿನ್ನವನ್ನು ಕಂಡು ಆ ಭಕ್ತನು ಆಶ್ಚರ್ಯ ಪಟ್ಟು ತನಗೆ ತೃಪ್ತಿಯಾಗುವಷ್ಟು ಹೊನ್ನನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಹೊತ್ತು ಭಾರದಿಂದ ಆಯಾಸ ಪಡುತ್ತ ಬಸವೇಶ್ವರನ ಮನೆಯ ವರೆಗೆ ಬಂದು ಆ ಮನೆಯ ಪಡಸಾಲೆಯಲ್ಲಿ ಇಳುಹಿ ಬಸವೇಶ್ವರನ ಬಳಿಗೆ ಬಂದು ಕಲಿಕೇತದೇವನಾಡಿದ ಮಾತನ್ನೂ, ತಾನಾಡಿದ ಮಾತನ್ನೂ ಎಲ್ಲವನ್ನೂ ಹೇಳಿ ಅವನು ಕೊಟ್ಟ ಹಣ ತೋರಿಸಿ ಇದನ್ನು ನಾನು ಹೊರಲಾರೆ. ಹೊರುವದಕ್ಕೆ ಬಲಾಢ್ಯನಾದ ಒಬ್ಬ ಆಳನ್ನು ಕಳುಹಿಸಬೇಕೆಂದು ಕೇಳಲು ಬಸವರಸನು ಆ ಮಾತಿಗೆ ತಲೆದೂಗಿ ಆಹಾ ! ದಾಸಿಗಳಲ್ಲಿ ಕಲಿಕೇತಯ್ಯನೇ ಶ್ರೇಷ್ಠನು. ಆತನು ಸಾಕ್ಷಾತ್ ಮಹೇಶ್ವರನು. ಎಂದು ಕೊಂಡಾಡಿ ಆ ಭಕ್ತನಿಗೆ ಹೊನ್ನಿನ ಹೊರೆ ಹೊರಲಿಕ್ಕೆ ಒಬ್ಬ ಆಳನ್ನು ಕಳುಹಿಸಿ ಕೂಡಲೇ ಎದ್ದು ಆ ಕಲಿಕೇತ ಬ್ರಹ್ಮಯ್ಯನ ದರ್ಶನವನ್ನು ಪಡೆಯಬೇಕೆಂದು ಬಂದು ಆತನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಎಲೈ ಗಣಶ್ರೇಷ್ಠನಾದ ಸ್ವಾಮಿಯೇ, ನಿನ್ನ ಪಾದಕಮಲವು ಅಣಿಮಾದಿ ಅಷ್ಟಸಿದ್ಧಿಗಳಿಗೆ ಕಾರಣವಾದದ್ದು. ನಿನ್ನ ಸಮಾನರು ಮೂರು ಲೋಕಗಳಲ್ಲಿ ಯಾರೂ ಇಲ್ಲ ಎಂದು ಹೊಗಳಿ ಕೈಮುಗಿದು ನಿಂತಿರುವ ಬಸವಣ್ಣನನ್ನು ನೋಡಿ ಕಲಿಕೇತಯ್ಯನು— ನನ್ನನ್ನು ಏಕೆ ವರ್ಣಿಸುವೆ ? ಕಿನ್ನರಯ್ಯನಂತೆ ಶಿವನನ್ನು ಮೆಚ್ಚಿಸಿ ನಾನು ಪ್ರತಿದಿವಸ ಹೊನ್ನು ಪಡೆಯುವೆನೇ ? ಅವನ ಹಾಗೆ ನಾನು ಧನಾಢ್ಯನೇ ? ಸುಮ್ಮನೆ ನನ್ನನ್ನು ಏಕೆ ದೊಡ್ಡವನನ್ನಾಗಿ ಮಾಡುವೆ ? ಈ ಲೋಕದಲ್ಲಿ ಶಿವನನ್ನು ಪೂಜಿಸಿ ಹಣ ಪಡೆದವರು ಸೌಂದರ ನಂಬಿಯಣ್ಣ ಹಾಗು ಈ ಕಿನ್ನರಿ ಬ್ರಹ್ಮಯ್ಯ ಇವರಿಬ್ಬರೇ ಹೀಗೆ ಪ್ರಸಿದ್ಧರಾಗಿದ್ದಾರೆ. ಮುಂಜಾನೆಯಿಂದ

ಸಂಜೆಯವರೆಗೆ ಒಂದೇಸವನೆ ಸೇವೆ ಮಾಡಿದರೂ ನನಗೆ ಸ್ವಲ್ಪ ಧಾನ್ಯ
ಮತ್ತೇನೂ ದೊರೆಯುವದಿಲ್ಲ. ಈ ನನ್ನ ಪೂಜೆ ವ್ಯರ್ಥವಾದದ್ದು.
ಯ್ಯನು ಶ್ರೀಮಂತನು. ನಾನು ಬಡವನು ಎಂದು ಗೇಲಿಯ ಮಾತುಗಳ
ಅಯ್ಯಾ, ನಾನು ಶಂಕರದಾಸಯ್ಯನ ಆಳು. ಶಿವನನ್ನು
ನಾಚಿಕೆಯಿಲ್ಲದೆ ಬೇಡಿ ಹಣವನ್ನು ಪಡೆಯುವವನು
ಆವನ ಪಾದ ಧ್ಯಾನದಿಂದ ಮಾಡುತ್ತಿರುವ ಕಾಯಕದಿಂದ ನನ್ನಲ್ಲಿ
ಸ್ವಲ್ಪ ಹಣವಿದೆ. ಅದನ್ನು ತೆಗೆದುಕೊಂಡು ಹೋಗಲು ಕಿನ್ನರಯ್ಯ
ತಿಳಿಸು. ಸಾವಿರ ಬಂಡಿಗಳನ್ನು ತುಂಬಿ ಕಳುಹಿಸುತ್ತೇನೆ. ಎಂದು
ಕೈಯಿಂದ ಮಣ್ಣಿನ ಹೆಂಟೆಯನ್ನು ತೆಗೆದುಕೊಂಡು ಇಟ್ಟು ಅಟ
ತ್ತಿರಲು ಆದಿಷ್ಟೂ ಬಂಗಾರವಾಗಿರುವದನ್ನು ಬಸವೇಶ್ವರನು ಕಂಡು
ಶ್ಚರ್ಯಭರಿತನಾಗಿರಲು ಇತ್ತ ಕಿನ್ನರಯ್ಯನು ಈ ಸುದ್ದಿಯನ್ನೆಲ್ಲ ಕೇಳಿ
ದಿಂದ ಓಡಿ ಬಂದು ಕಲಿಕೇತದೇವರ ಪಾದಗಳಿಗೆ ನಮಸ್ಕರಿಸಿ ಎಲೈ
ಳುವೇ, ಸೂರ್ಯನ ಮುಂದೆ ಮಿಂಚುಹುಳದ ಕಾಂತಿಯೇ ? ಮಹಾಮ
ನಾದ ನಿನ್ನ ಮುಂದೆ ನನ್ನ ಪ್ರಭಾವವೇ ? ಎಂದು ದೈನ್ಯದಿಂದ ಹೊಗ
ಮುಗಿದು ನಿಂತಿರಲು ಕಿನ್ನರಯ್ಯನನ್ನು ಅಪ್ಪಿಕೊಂಡು ಮನ್ನಿಸಿ, ಆತನಿ
ಪಾಧಿಕವಾದ ಸ್ಥಿರಭಕ್ತಿಯ ಸಕೀಲವನ್ನು ಹೇಳಿ, ಲಿಂಗಾಂಗ ಸಾಮ
ಆಧಿಕ್ಯವನ್ನು ಬೋಧಿಸಿ, ತನ್ನ ಮನೆಯಲ್ಲಿ ಶಿವಪೂಜೆಯನ್ನು ಮಾಡಿಸಿ,
ಪ್ರಸಾದದಿಂದ ತೃಪ್ತಿಗೊಳಿಸಿ, ವಸ್ತ್ರ ಭೂಷಣಗಳಿಂದ ಅಲಂಕರಿಸಿ, ಆ
ರಯ್ಯ, ಬಸವೇಶ್ವರನನ್ನು ಅವರವರ ಮನೆಗೆ ಕಳುಹಿಸಿಕೊಟ್ಟು ಪದ್ಧ
ಮೇರೆಗೆ ತನ್ನ ಕಾಯಕವನ್ನು ಮಾಡುತ್ತ ತನ್ನ ಮಹಿಮೆಯನ್ನು ಲೋ
ಪ್ರಕಟಿಸುತ್ತ ಗುರು–ಲಿಂಗ–ಜಂಗಮರ ಸೇವೆಯಲ್ಲಿ ಆಸಕ್ತನಾಗಿ ಆ
ದೊಳಿದ್ದನು. ಅನಂತರ ಬಸವೇಶ್ವರನು ಕಿನ್ನರಿಬ್ರಹ್ಮಯ್ಯನ ಪಾದಗ
ನಮಸ್ಕರಿಸಿ ಕಲಿಕೇತದೇವನ ಮಹಿಮೆಯನ್ನು ಮನಸ್ಸಿನಲ್ಲಿ ಧ್ಯಾನಿಸು
ಆವನ ಚರಿತ್ರೆಯನ್ನು ಭಕ್ತರಿಗೆ ಹೇಳಿ ಹೊಗಳುತ್ತ ಜಂಗಮ ಪಾದಾ
ತತ್ಪರನಾಗಿ ಒಪ್ಪಿದ್ದನು.

## — ನೋಳಿಗೆ ಮಾರಯ್ಯನ ಕಥೆಯು —

ಅದೇ ಕಲ್ಯಾಣ ಪಟ್ಟಣದಲ್ಲಿ ಪ್ರಾಣಲಿಂಗಿಯೂ, ಭವಿಸಂಗ ಪರಿತ್ಯಾಗಿಯೂ, ಶಿವಾನುಭವಿಯೂ ಆದ ಮೋಳಿಗೆ ಮಾರಯ್ಯನೆಂಬ ಒಬ್ಬ ಶಿವ ಶರಣನಿದ್ದನು. ಆತನು ಪ್ರತಿದಿವಸ ಕಾಡಿಗೆ ಹೋಗಿ ಕೊಡಲಿಯಿಂದ ಕಟ್ಟಿಗೆ ಕಡಿದು ಹೊರೆಕಟ್ಟಿ ಹೊತ್ತುತಂದು ಮಾರಿ ಅದರಿಂದ ಬಂದ ಹಣದಿಂದ ಜಂಗಮಾರ್ಜನೆಯನ್ನು ಮಾಡುತ್ತ ಇದ್ದನು. ಶಿವಗಣಂಗಳು ಬಸವೇಶ್ವರನ ಮನೆಯಲ್ಲಿ ಷಡ್ರಸಾನ್ನ ಭೋಜನ ಮಾಡಿದಾಗ್ಯೂ ತೃಪ್ತಿಹೊಂದದೆ ಈ ಮಾರಯ್ಯನ ಮನೆಗೆ ಬಂದು ಜೋಳದ ಅಂಬಲಿಯನ್ನು ಕುಡಿದು ತೃಪ್ತರಾಗುತ್ತಿದ್ದರು. ಹೀಗೆ ತೃಪ್ತಿಹೊಂದುತ್ತಿದ್ದ ಜಂಗಮರು ಒಂದು ದಿವಸ ಬಸವೇಶ್ವರನ ಮನೆಗೆ ಬಂದು ಆತನನ್ನು ಕಂಡು ಎಲೈ ಬಸವೇಶ್ವರನೇ, ನಿನ್ನ ಮನೆಯಲ್ಲಿ ನಾವು ನಾನಾವಿಧ ಷಡ್ರಸಯುತ ಭೋಜ್ಯಗಳನ್ನು ಊಟ ಮಾಡಿದಾಗ್ಯೂ ಅದು ಮೋಳಿಗೆಯ ಮಾರಯ್ಯನ ಮನೆಯ ಅಂಬಲಿಗೆ ಸಮನಾಗುವದಿಲ್ಲವಲ್ಲ ? ಅದನ್ನು ಕುಡಿದ ನಮ್ಮ ನಾಲಿಗೆಗೆ ಮತ್ತೊಂದು ಪದಾರ್ಥವು ರುಚಿಸುವದೇ ಇಲ್ಲ. ಆತನು ಪ್ರತಿದಿವಸ ತನ್ನ ಕಾಯಕದಿಂದ ಒಂದು ಕೊಳಗ ಭತ್ತವನ್ನು ತಂದು ಅದರಿಂದ ಎಷ್ಟು ಜಂಗಮರು ಬಂದರೂ ತೃಪ್ತಿಪಡಿಸುವನು. ಆದನ ಭಕ್ತಿಯನ್ನು ಶಿವನೊಬ್ಬನಲ್ಲದೆ ಅನ್ಯರಾರೂ ತಿಳಿಯರು. ಎಂದು ಹೊಗಳುತ್ತಿರುವದನ್ನು ಬಸವೇಶನು ಕೇಳಿ ಆಶ್ಚರ್ಯಪಟ್ಟು ಆ ಭಕ್ತನನ್ನು ನೋಡಬೇಕೆಂದು ಅಪೇಕ್ಷಿಸಿ ಬೇರೊಂದು ವೇಷವನ್ನು ಧರಿಸಿ ಗುಪ್ತವಾಗಿ ಆ ಮೋಳಿಗೆಯ ಮಾರಯ್ಯನ ಮನೆಯ ಅಂಗಳಕ್ಕೆ ಹೋಗಿ ಆತನ ಹೆಂಡತಿಯನ್ನು ಕಂಡು ಶರಣೆಂದು ಕೈಮುಗಿಯಲು ಆಕೆಯು ಸಹ ಶರಣೆಂದು ಹೇಳಿ ನೀರು ತುಂಬಿದ ತಂಬಿಗೆಯನ್ನು ತರಲು ಅದನ್ನು ಬಸವರಾಜನು ತೆಗೆದುಕೊಂಡು ಪಾದಪ್ರಕ್ಷಾಲನೆ ಮಾಡಿಕೊಂಡು ಮನೆಯೊಳಗೆ ಪ್ರವೇಶಿಸಿ ಪೀಠದಲ್ಲಿ ಕುಳಿತು ಶಿವಾರ್ಚನೆಯನ್ನು ಮಾಡಿ ತಾಯೀ, ನಮ್ಮ ದೇವರಿಗೆ ಹಸಿವಾಗಿದೆ. ನಿಮ್ಮ ಮನೆಯಲ್ಲಿದ್ದುದನ್ನು ನೈವೇದ್ಯಕ್ಕೆ ಬಡಿಸು ಎಂದು ಹೇಳಿದನು. ಆಕೆಯು ಕೂಡಲೆ ಮನೆಯಲ್ಲಿದ್ದ ಆಹಾರವನ್ನು ಉಣಬಡಿಸಲು ತಾನು ಅದನ್ನು ಇಷ್ಟಲಿಂಗಕ್ಕೆ ತೃಪ್ತಿಗೊಳಿಸಿ ಎರಡು ಸಾವಿರ ಹೊನ್ನುಗಳಿಂದ ತುಂಬಿದ ಎರಡು ಚೀಲಗಳನ್ನು ಯಾರಿಗೂ ಕಾಣಿಸದಂತೆ ನೀರನ್ನು

ಕಾಯಿಸುವ ಹಂಡೆಯ ಹಿಂದುಗಡೆ ಬಚ್ಚಿಟ್ಟು ತಾಯೀ, ಶರಣೆಂದು
ಹೊರಟು ಬಂದು ಹೊರಗೆನಿಂತು ಆ ಮನೆಯನ್ನು ನೋಡಿ ಸಂತೋಷ
ಇದು ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿರುವದು. ಮುಕ್ತಿಗೆ ಜನ್ಮ
ವಾಗಿರುವದು. ಪರಶಿವನ ವಾಸಸ್ಥಳವಾಗಿರುವದು. ಈ ಮನೆಯನ್ನು
ಮನುಷ್ಯನು ನೋಡುವನೋ ಅವನ ಪಾಪರಾಶಿಯೆಲ್ಲ ನಾಶವಾಗು
ಇದನ್ನು ಪ್ರವೇಶಿಸುವವರಿಗೆ ಸ್ಥಿರವಾದ ಮುಕ್ತಿ ಸೌಖ್ಯವು ದೊರೆಯದೆ
ಈ ಮನೆಯಲ್ಲಿ ಭೋಜನ ಮಾಡಿದವನು ಸಂಸಾರ ಬಂಧನದಿಂದ ಮುಕ್ತ
ಗುವನು. ಎಂದು ಹೊಗಳಿ ತನ್ನ ಮನೆಗೆ ತೆರಳಿದನು. ಇತ್ತ ಮೋ
ಮಾರಯ್ಯನು ಮಧ್ಯಾಹ್ನಕ್ಕೆ ಸೌದೆಯ ಹೊರೆಯನ್ನು ಹೊತ್ತು
ತಂದು ಶಿವಸ್ಮರಣೆಯೊಂದಿಗೆ ಇಳುಹಲು ಹೆಂಡತಿಯು ಕಾಲನ್ನು ತೊ
ಲಾಗಿ ಮನೆಯನ್ನು ಪ್ರವೇಶಿಸಿ ಶಿವಲಿಂಗಾರ್ಚನೆ, ಜಂಗಮ ಪಾದ
ಮಾಡಿದ ಬಳಿಕ ಹೊಳೆಯುತ್ತಿರುವ ಹೊನ್ನಿನ ಚೀಲವನ್ನು ನೋಡಿ ಇದ
ನಮ್ಮ ಮನೆಗೆ ಯಾವ ಭಕ್ತರು ಬಂದಿದ್ದರು? ಎಂದು ಕೇಳಲು ಹೆಂಡತಿ
ನಾನು ಆತನ ಗುರುತನ್ನು ಅರಿಯೆನು. ಒಬ್ಬ ಭಕ್ತನು ಮಾತ್ರ ಬಂದು
ಕುಳಿತು ಶಿವಪೂಜೆಯನ್ನು ಮಾಡಿಕೊಂಡು ಹೋದನು ಎಂದು ಹೇಳಲು ಮ
ಯ್ಯನು ಬಸವೇಶನೇ ಬಂದಿರಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ—
ಸತಿಯೇ, ಈ ದಿವಸ ನಮ್ಮ ಮನೆಗೆ ಬಂದು ಶಿವಾರ್ಚನೆ ಮಾಡಿಕೊ
ಹೋದವನು ಬಸವೇಶ್ವರನು. ಬಡವರಾದ ಭಕ್ತರಿಗೆ ಹಣವನ್ನು ಕೊ
ದಕ್ಕೂ, ಕಾಪಾಡುವದಕ್ಕೂ ಆತನೊಬ್ಬನೇ ಸಮರ್ಥನು. ಬಸವೇಶ್ವ
ಬಹುಭಾಗ್ಯಶಾಲಿಯು. ಆದ್ದರಿಂದ ಕಡುಬಡವರಾದ ನಮ್ಮನ್ನು ದಯೆಯಿ
ನೋಡಿ ಈ ಹಣವನ್ನು ಕೊಟ್ಟು ಹೋಗಿರುವನು. ನಾವು ಕೇಳದೆ, ಹೇ
ಇದ್ದರೂ ಬಸವೇಶನು ತಾನಾಗಿಯೇ ಬಂದು ಹೊನ್ನಿನ ಚೀಲಗಳನ್ನು
ರಿಸಿ ಹೋಗಿರುವನು. ಅವನಂತಹ ದಾನಿಗಳೂ, ಕರುಣಾಶಾಲಿಗಳೂ
ರಿದ್ದಾರೆ ? ಲಿಂಗಮೂರ್ತಿಯು ನಮಗೆ ಕೊಟ್ಟಿರುವ ಕಾಯಕದಿಂದ ಹ
ದೊರೆಯುವದೆಂಬ ಮಹಿಮೆಯನ್ನು ಆತನು ಬಲ್ಲನಲ್ಲದೆ ನಾನು ಬಲ್ಲೆ
ಎಂದು ಹೀಯಾಳಿಸಿ ಆ ಎರಡೂ ಚೀಲಗಳನ್ನು ಇಬ್ಬರು ಮಾಹೇಶ್ವ
ಕೊಟ್ಟು ಕಳುಹಿಸಿ ಜಂಗಮರ ಪಾದತೀರ್ಥವನ್ನು ತಂದು ಆ ಕಟ್ಟಿ

ಹೊರೆಯ ಮೇಲೆ ಸಿಂಪಡಿಸಲು ಕೂಡಲೇ ಆ ಕಟ್ಟಿಗೆಗಳೆಲ್ಲ ಬಂಗಾರದವಾದವು. ಅವುಗಳನ್ನು ಕತ್ತರಿಸಿ ಬಂದಿದ್ದ ಸಹಸ್ರ ಜಂಗಮರಿಗೆಲ್ಲ ಸಹಸ್ರಾರು ತುಂಡುಗಳನ್ನು ಕೊಟ್ಟು ನಮಸ್ಕರಿಸಿ ಕಳುಹಿಸಿಕೊಟ್ಟನು. ಬಳಿಕ ಅವರೆಲ್ಲರೂ ಸಂತೋಷಪಟ್ಟು ತಲೆದೂಗಿ ಬಸವೇಶನ ಅರಮನೆಗೆ ಬಂದು ಮಾರಯ್ಯನ ಮಹಿಮೆಯನ್ನೂ, ಆತನು ಮಾಡಿದ ಕೆಲಸವನ್ನೂ ಹೇಳಿ ಹೇಳಿ ಹೊಗಳಲು ಬಸವೇಶ್ವರನು ಭಯಪಟ್ಟು ಬೇಗನೆ ಬಂದು ಮಾರಯ್ಯನನ್ನು ಕಂಡು ಆತನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ ನಮ್ರಭಾವದಿಂದ ಕೈಮುಗಿದು ನಿಂತು — ಶರಣಾಗತ ಪರಿಪಾಲಕನೆಂದ ಮಹಾತ್ಮನೇ, ಅಜ್ಞಾನಿಯಾದ ನನ್ನನ್ನು ಸಂರಕ್ಷಿಸು. ಎಂದು ಬೇಡಿಕೊಳ್ಳಲು ಮಾರಯ್ಯನು ಬಸವೇಶ್ವರನನ್ನು ನೋಡಿ ಅತ್ಯಂತ ಐಶ್ವರ್ಯ ಸಂಪನ್ನನೂ, ದಾನಿಯೂ ಆದ ನೀನು ಕಡುಬಡವನಾದ ನನ್ನನ್ನು ಹೊಗಳುತ್ತೀಯೇ? ನಾನು ಎಂದೂ ಕಾಣದೆ ಇದ್ದ ಹೊನ್ನಿನ ಚೀಲವನ್ನು ನಿನ್ನ ಕೃಪೆಯಿಂದ ನೋಡಿದೆನು. ನನ್ನ ಬಡತನವನ್ನು ಹಿಂಗಿಸಿದ ನೀನೇ ಈ ಲೋಕದಲ್ಲಿ ಶ್ರೇಷ್ಠದಾನಿಯು. ಭಕ್ತನು ಬಹು ಬಡತನದಿಂದ ಇರುವನೆಂದು ಮರುಗಿ ದಯೆಯಿಂದ ಹೊನ್ನಿನ ಚೀಲವನ್ನು ತಂದು ಕೊಟ್ಟೆ. ಈ ಭೂಮಿಯಲ್ಲಿ ನಿನ್ನಂತೆ ನನಗಾರು ಆಪ್ತರಿದ್ದಾರೆ? ನೀನು ಕೊಡದೆ ಹೋದರೆ ನನಗಿನ್ನಾರು ಹಣವನ್ನು ಕೊಡುವರು? ಎಲೈ ಬಸವೇಶನೇ, ಬಡವರ ಬಳಿಗೆ ನೀನೇ ಹೋಗಿ ಹಣವನ್ನು ಕೊಡುತ್ತಿರುವ ನೀನು ಕಾಮಧೇನು, ಕಲ್ಪವೃಕ್ಷಗಳಿಗಿಂತಲೂ ಹೆಚ್ಚಿನವನು. ನನಗೆ ಹಣವನ್ನು ಕೊಟ್ಟಂತೆ ಮತ್ತೆ ಇನ್ನಾರಿಗೆ ಕೊಟ್ಟಿರುವೆ ? ಹೇಳು. ನಾನು ಮಾಚಿದೇವನ ಮೊಮ್ಮಗನು. ನನ್ನಲ್ಲಿ ಇಂಥ ದಯೆಯನ್ನು ಎಂದಿಗೂ ತಪ್ಪಿಸಬೇಡ ಎಂದು ಮಾರಯ್ಯನು ವ್ಯಂಗವಾಗಿ ನುಡಿಯಲು ಬಸವೇಶ್ವರನು ಭಯದಿಂದ ನಡುಗಿ ಬೆರಗಾಗಿ ಸ್ವಾಮೀ, ಮೂಢನೂ, ಅಹಂಕಾರಿಯೂ ಆದ ನನ್ನಲ್ಲಿ ಸದ್ಗುಣವನ್ನು ಹುಡುಕಿನೋಡುವದೇ? ಸಿದ್ಧರಸವು ಕಬ್ಬಿಣದಲ್ಲಿರುವ ದುರ್ಗುಣವನ್ನು ನೋಡುವದೇ? ಮೇರು ಪರ್ವತವು ಕಾಗೆಯ ಕೆಟ್ಟನಡತೆಯನ್ನು ಯೋಚಿಸುವದೇ ? ಕಪ್ಪೆಯಲ್ಲಿ ಮಧುರ ಸ್ವರವುಂಟೇ ? ಕಾಡಿಗೆಯಲ್ಲಿ ಬಿಳುಪುಂಟೇ ? ಚಿಕ್ಕಹಳ್ಳದಲ್ಲಿ ಕಮಲವುಂಟೇ ? ಅದರಂತೆ ನನ್ನಲ್ಲಿ ಸದ್ಗುಣವುಂಟೇ ? ನಾನು ಹಿಂದೆ ಪ್ರಭುದೇವನು ಹಸಿದನೆಂದು ಆಲೋಚಿಸಿ ತೃಪ್ತಿಗೊಳಿಸಬೇಕೆಂದು

ಯೋಚಿಸಿದೆ. ಈಗ ನಿನ್ನನ್ನು ಬಡವನೆಂದು ಆಲೋಚಿಸಿದೆ. ಆದ್ದರಿಂದ ನನಗೆ ಸಮಾನರಾದ ಮೂಢರು ಇನ್ನಾರು ಇರುವರು ? ನನಗೆ ಗತಿಯೂ, ಮತಿಯೂ, ಹಿತನೂ, ಪಿತನೂ, ಗುರುವೂ ನೀನೇ. ನನ್ನ ಅಪರಾಧ ಎಷ್ಟಿದ್ದರೂ ಕ್ಷಮಿಸಿ ಕಾಪಾಡು. ಎಂದು ಭಯಭಕ್ತಿಯಿಂದ ಬೇಡಿ ಪಾದಕ್ಕೆ ನಮಸ್ಕರಿಸಿದ ಬಸವೇಶ್ವರನನ್ನು ಮಾರಯ್ಯನು ಕರುಣೆಯಿಂದ ನೋಡಿ ಬಿಗಿದಪ್ಪಿ ಹಿತವಚನದಿಂದ ಆತನ ಮನಸ್ಸಿಗೆ ಸಂತೋಷವನ್ನುಂಟು ಮಾಡಿ ಕಳುಹಿಸಿಕೊಡಲು ಬಸವೇಶ್ವರನು ಆ ಮಾರಯ್ಯನ ಪಾದಗಳಿಗೆ ನಮಸ್ಕರಿಸಿ ಅಪ್ಪಣೆಯನ್ನು ಪಡೆದು ಮನೆಗೆ ಬಂದು ಹೃದಯದಲ್ಲಿ ಆ ಮೋಳಿಗೆ ಮಾರಯ್ಯನ ಮಹಿಮೆಯನ್ನು ಯೋಚಿಸುತ್ತ ಜಂಗಮಸಾದ ಸೇವಾನಿರತನಾಗಿದ್ದನು.

## .... ಕನ್ನದ ಬ್ರಹ್ಮಯ್ಯನ ಕಥೆಯು ....

ಆ ಕಲ್ಯಾಣಪಟ್ಟಣದಲ್ಲಿ ಜಂಗಮಾರ್ಚನ ತತ್ಪರನೂ, ದಯಾಭರಿತನೂ, ಸದಾಚಾರ ನಿರತನೂ ಆದ ಕನ್ನದ ಬ್ರಹ್ಮಯ್ಯನೆಂಬ ಒಬ್ಬ ಶಿವಶರಣನಿದ್ದನು. ಆತನು ಜೋಡನ್ನು ಮೆಟ್ಟಿ ಕರಿಯಬಟ್ಟೆಯನ್ನು ಉಟ್ಟು, ಕನ್ನಗತ್ತರಿ, ಬಳಸ, ನಾಯಿಗಳ ಬಾಯಿಕಟ್ಟುವ ಮದ್ದು, ಅದೃಶ್ಯಾಂಜನ, ಮೊದಲಾದ ಸಾಮಗ್ರಿಗಳನ್ನು ತೆಗೆದುಕೊಂಡು ರಾತ್ರಿಯವೇಳೆಯಲ್ಲಿ ಹಣವಂತರ ಬಳಿಗೆ ಬಂದು ಶಬ್ದವನ್ನು ಕೇಳಿ ನೆಲಗನ್ನ, ಗೋಡೆಗನ್ನ ಇವುಗಳಲ್ಲಿ ತನಗೆ ಅನುಕೂಲವಾದದ್ದನ್ನು ಮಾಡಿ ಮನೆಯೊಳಗೆ ನುಗ್ಗಿ ಅದು ಶಿವಭಕ್ತರ ಮನೆಯಾಗಿದ್ದರೆ ದೀಪವನ್ನು ಹಚ್ಚಿ ಮನೆಯವರನ್ನು ಎಬ್ಬಿಸಿ ಅವರ ಪಾದಗಳಿಗೆ ನಮಸ್ಕರಿಸಿ ನಾನು ಪರಶಿವನ ಬಂಟನು ನನ್ನ ಹೆಸರು ಕನ್ನದ ಬೊಮ್ಮಯ್ಯ ಎಂದು ಹೇಳಿ ಅವರಿಂದ ತೀರ್ಥಪ್ರಸಾದಗಳನ್ನು ಪರಿಗ್ರಹಿಸಿ ಹೊರಟುಹೋಗುತ್ತಿದ್ದನು ಅದು ಭವಿಗಳ ಮನೆಯಾಗಿದ್ದರೆ ಇದ್ದ ಹಣವನ್ನು ದೋಚಿಕೊಂಡು ಬಂದು ಅದರಿಂದ ಜಂಗಮಾರ್ಚನೆಯನ್ನು ಮಾಡುತ್ತ ಇದ್ದನು. ಹೀಗಿರಲು ಒಂದು ದಿವಸ ಆತನ ಮನೆಗೆ ಜಂಗಮರ ಗುಂಪು ಬರಲಾಗಿ ಅವರನ್ನು ನೋಡಿ ಸಂತೋಷ ಪಟ್ಟು ಅವರೆಲ್ಲರನ್ನು ಪೂಜಿಸಬೇಕಾದರೆ ಅಧಿಕ ಹಣ ಬೇಕಾಗುವದೆಂದೂ, ಅರಮನೆಗೆ ಕನ್ನವಿಕ್ಕಿ ಅಪಾರದ್ರವ್ಯ ತೆಗೆದುಕೊಂಡು ಬರಬೇಕೆಂದೂ

ಯೋಚಿಸಿ ತನ್ನ ಮನೆಯಿಂದ ಹೊರಟು ರಾಜಬೀದಿಯಲ್ಲಿ ಬರುತ್ತಿರುವಾಗ ಎದುರಿನಲ್ಲಿ ತನ್ನನ್ನು ಕಂಡು ನಮಸ್ಕಾರ ಮಾಡಿದ ಬಸವೇಶ್ವರನನ್ನು ನೋಡಿ ಅಯ್ಯಾ, ಈ ದಿವಸ ನನ್ನ ಮನೆಗೆ ಬಹು ಜಂಗಮರು ಬಂದಿರುವರು. ಅವರ ಪೂಜೆಗಾಗಿ ಅರಮನೆಗೆ ಕನ್ನವನ್ನಿಕ್ಕಿ ನುಗ್ಗಿ ಹೆಚ್ಚಾಗಿ ಹಣವನ್ನು ತೆಗೆದು ಕೊಂಡು ಬರುವೆನು. ಆದಕಾರಣ ನನಗೆ ಆ ಬೊಕ್ಕಸದ ಮನೆಯನ್ನು ತೋರಿಸು ಅದನ್ನು ಬಿಟ್ಟು ಬೇರೆ ಮನೆಯನ್ನು ಒಡೆದರೆ ಅಷ್ಟು ಹಣವು ಸಿಕ್ಕಲಾರದು. ಅದ್ದರಿಂದ ಈಗಲೇ ನಡೆಯಿರಿ. ಎಂದು ಹೇಳಲು ಬಸವೇಶ್ವರನು ಯಾವ ಪ್ರತ್ಯುತ್ತರವನ್ನೂ ಕೊಡದೆ ಹಾಗೂ ಅದು ಅನುಚಿತ ವೆಂದು ಯೋಚಿಸದೆ ಹಾಗೆಯೇ ಆಗಲಿ ಎಂದು ಅವನೊಡನೆಯೇ ನಿರ್ಭಯವಾಗಿ ಬಂದು ಹಗಲಿನಲ್ಲಿಯೇ ಅರಮನೆಯನ್ನು ಹೊಕ್ಕು ಬೊಕ್ಕಸದ ಮನೆಯನ್ನು ತೋರಿಸಿದನು. ಆಗ ಬೊಮ್ಮಯ್ಯನು ಕತ್ತರಿಯಿಂದ ಕನ್ನವನ್ನು ತೋಡಲಾಗಿಬಿದ್ದ ಮಣ್ಣೆಲ್ಲವೂ ಚಿನ್ನದ ಪುಡಿಯಾಗಿ ಉದುರುತ್ತಿದ್ದಿತು. ಕೂಡಲೇ ಒಳಹೊಕ್ಕು ಅಲ್ಲಿ ಅಡಕಲಾಗಿರುವ ಹೊನ್ನಿನ ಚೀಲಗಳನ್ನು ತೆಗೆದುಕೊಂಡು ಹೊರೆಕಟ್ಟಿ ಹೊತ್ತುಕೊಂಡು ಹೋಗುತ್ತಿರಲು ಕಾವಲುಗಾರರು ಕಂಡು ಓಡಿಬಂದು ದೊರೆಗೆ ನಡೆದ ಸಂಗತಿಯೆನ್ನೆಲ್ಲ ಹೇಳಲು ಬಿಜ್ಜಳನು ಕೋಪೋದ್ರೇಕದಿಂದ ಕಣ್ಣು ಕೆಂಪಗೆಮಾಡಿ ನಾನು ಬಸವೇಶ್ವರನನ್ನು ಸತ್ಯಸಂಧನು, ಶಿವಭಕ್ತನು ಆಪ್ತಮಿತ್ರನು, ಸದ್ಗುಣವಂತನು ಎಂದು ತಿಳಿದು ನನ್ನ ಸರ್ವ ಅಧಿಪತ್ಯವನ್ನು ಆತನಿಗೆ ಕೊಟ್ಟು ನಂಬಿಕೊಂಡಿರಲು ಈಗ ಒಳ್ಳೆಯ ಕೆಲಸವನ್ನು ಮಾಡಿದನು. ಹಗಲು ಹೊತ್ತಿನಲ್ಲಿ ಕಳ್ಳನನ್ನು ಕರೆದು ತಂದು ಕನ್ನವನ್ನಿಕ್ಕಿಸಿ ಹಣವನ್ನು ಕಳುವು ಮಾಡಿಸಿದನು. ನನ್ನನ್ನೇ ಬೇಡಿದ್ದರೆ ಬೇಕಾದಷ್ಟು ಹಣ ಕೊಡದೆ ಇದ್ದೆನೇ ? ಕನ್ನವನ್ನು ತೋಡಿಸಿ ಹಣವನ್ನೇಕೆ ದೋಚಿಕೊಂಡನು ? ಇದು ದುಷ್ಕರ ಕೆಲಸವೆಂದು ಯೋಚಿಸದೆ ಅಪಕೀರ್ತಿಗೆ ಪಾತ್ರನಾದನು. ನಾನು ಇದುವರೆಗೆ ಮಾಡಿದ ಉಪಕಾರವನ್ನು ತೀರಿಸಿದನು. ಹೀಗಿರಲು ಇವನನ್ನು ನಂಬುವದು ಹೇಗೆ ? ಹಣಕ್ಕೆ ಬಾಹ್ಯಪ್ರಾಣವೆಂದು ನೀತಿಶಾಸ್ತ್ರವಿದೆ. ಈಗ ಮೋಸಮಾಡಿ ಆ ಹಣವನ್ನು ಕಳುವು ಮಾಡಿಸಿದವನು. ನಾಳೆ ನನ್ನ ಪ್ರಾಣವನ್ನು ತೆಗೆದುಕೊಳ್ಳುವದಕ್ಕೆ ಹಿಂಜರಿಯನು. ಆದ್ದರಿಂದ ಈತನ ಮಂತ್ರಿತ್ವದ ಸಹವಾಸವು ಯೋಗ್ಯವಾದದ್ದಲ್ಲ. ಎಂದು ಅನ್ನುತ್ತ ಅಲ್ಲಿಂದ ಎದ್ದು ಬೊಕ್ಕಸದ

ಮನೆಯವರೆಗೆ ಬಂದು ಕನ್ನವನ್ನು ನೋಡಲು ಅಲ್ಲಿ ಸುರಿದಿದ್ದ ಮಣ್ಣೆಲ್ಲವು ಬಂಗಾರದ ಪುಡಿಯಾಗಿ ಶೋಭಿಸುತ್ತಿರುವದನ್ನು ದೊರೆಯು ನೋಡಿ ಕೋಪವನ್ನು ಬಿಟ್ಟು ಆಶ್ಚರ್ಯಭರಿತನಾಗಿ ತಲೆದೂಗುತ್ತ ಬಸವೇಶ್ವರನನ್ನು ಅಲ್ಲಿಗೆ ಬರಮಾಡಿಕೊಂಡು– ಎಲೈ ಬಸವೇಶ್ವರನೇ, ಇದೇನಾಶ್ಚರ್ಯವು ? ಈ ನೆಲದ ಮೇಲೆ ಚಿನ್ನದ ಹುಡಿ ಸುರಿದಿರುವದಕ್ಕೆ ಕಾರಣವೇನು? ಬಂದಿದ್ದ ಕಳ್ಳನಾರು? ಎಂದು ಕೇಳಲು ಬಸವೇಶನು ಮುಗುಳು ನಗೆನಗುತ್ತ ಎಲೈ ದೊರೆಯೇ, ಈ ಊರಲ್ಲಿ ಕನ್ನದಬೊಮ್ಮಯ್ಯನೆಂಬ ಒಬ್ಬ ಸದ್ಭಕ್ತನಿರುವನು. ಆತನ ಮಹಿಮೆಯನ್ನು ವರ್ಣಿಸುವದಕ್ಕೆ ಪರಶಿವನಿಗೂ ಅಶಕ್ಯವು. ಆತನ ಪಾದಗಳು ಕಲ್ಪವೃಕ್ಷದ ಬುಡವು. ಕಣ್ಣಿನ ನೋಟವು ಕಾಮಧೇನುವಿನ ಜನ್ಮಸ್ಥಳವು. ಆತನ ಮಾತು ಸುಜ್ಞಾನದ ಆಶ್ರಯವು. ಆತನ ಪಾದಸ್ಪರ್ಶವು ಚಿಂತಾಮಣಿಯ ಸೋಂಕು. ಆತನ ಕೋಪವು ಪ್ರಳಯಕಾಲದ ಯಮನು. ಆತನ ಕೃಪೆಯು ಮೋಕ್ಷಕ್ಕೆ ಕಾರಣವು. ಅವನ ಸೇವೆಯನ್ನು ಮಾಡುವವರಿಗೆ ಅಣಿಮಾದಿ ಅಷ್ಟಸಿದ್ಧಿಗಳು ಸುಲಭವಾಗುವವು. ಇಷ್ಟೊಂದು ಮಹಿಮಾತಿಶಯನಾಗಿದ್ದರೂ ಆತನು ಕನ್ನವನ್ನಿಕ್ಕಿ ತಂದ ಹಣದಿಂದ ಜಂಗಮ ಪಾದಪೂಜೆಯನ್ನು ಮಾಡುತ್ತಿರುವನು. ಇದುಆತನ ವ್ರತವು. ತನ್ನ ಮಹಿಮೆಯಿಂದ ಹೊನ್ನನ್ನು ಎಂದೂ ಸಂಪಾದಿಸುವದಿಲ್ಲ. ಎಲೈ ದೊರೆಯೇ, ಶಿವಭಕ್ತಿಯೆತ್ತ ? ಕಳ್ಳತನ ಮಾಡುವದೆತ್ತ ? ಶಿವಭಕ್ತನು ಮಾಡುವ ಕೆಟ್ಟ ಕೆಲಸವೂ ಕೂಡ ಒಳ್ಳೆಯ ಫಲವನ್ನೇ ಕೊಡುವದು. ಆದರೆ ಅದು ಭಕ್ತಿ ಹೀನರಿಗೆ ಮಾತ್ರ ದುಃಖವನ್ನುಂಟು ಮಾಡುವದು. ಧರ್ಮರಾಜನು ಜೂಜನ್ನು ಆಡಿ ರಾಜ್ಯವನ್ನು ಸೋತು ತಮ್ಮಂದಿರೊಡನೆ ವನವಾಸವನ್ನು ಅನುಭವಿಸಿದನು. ಆದರೆ ಶಿವಭಕ್ತನಾದ ಮೂರ್ಖನಾಥನು ಅದೇ ಜೂಜನ್ನು ಆಡಿ ಕೈಲಾಸವನ್ನು ಸೇರಿದನು. ಬೇಟೆಯನ್ನಾಡಲು ಹೋದ ರಾಮನು ಸೀತೆಯನ್ನು ಕಳೆದುಕೊಂಡು ದುಃಖಕ್ಕೀಡಾದನು. ಆದರೆ ಬೇಡರ ಕಣ್ಣಪ್ಪನು ಅದೇ ಬೇಟೆಯನ್ನಾಡಿ ಮುಕ್ತಿಯನ್ನು ಪಡೆದನು. ಅನೇಕ ರಾಜರು ಹೊನ್ನು, ಹೆಣ್ಣುಗಳಿಗೆ ಮೋಹಿಸಿ ನಷ್ಟಕ್ಕೀಡಾದರು. ಆದರೆ ಹೊನ್ನು, ಹೆಣ್ಣುಗಳಿಗೆ ಮೋಹಿಸಿದ ಸೌಂದರ ನಂಬಿಯಣ್ಣನು ಶಿವಲೋಕವನ್ನು ಹೊಂದಿದನು. ಬ್ರಹ್ಮನು ಸುಳ್ಳನ್ನು ಹೇಳಿ ಪೂಜೆಗೆ ಅಯೋಗ್ಯನಾ

ದನು. ಆದರೆ ಸಿರಿಯಾಳಸೆಟ್ಟಿಯು ಸುಳ್ಳನ್ನು ಮಾತಾಡಿ ಕೈಲಾಸಕ್ಕೆ ಹೋದನು. ಮಾಂಡವ್ಯ ಋಷಿಯು ಹಿಂಸೆಯನ್ನು ಮಾಡಿ ಶೂಲಕ್ಕೆ ಗುರಿಯಾದನು. ಆದರೆ ಚಂಡೇಶ್ವರನು ತನ್ನ ತಂದೆಯನ್ನು ಕೊಂದು ಶಿವಾನುಗ್ರಹಕ್ಕೆ ಪಾತ್ರನಾದನು. ರಾಜರಿಗೆ ರಾಜ್ಯದ ಅಂತ್ಯದಲ್ಲಿ ನರಕವು ಪ್ರಾಪ್ತವಾಗುವದೆಂದು ಶಾಸ್ತ್ರವಚನ ವಿದ್ದಾಗ್ಯೂ ಶಿವಭಕ್ತಿ ಸಂಪನ್ನರಾದ ಚೇರಮಾಂಕ, ಚೋಳ ಮೊದಲಾದ ರಾಜರು ಮುಕ್ತಿಯನ್ನು ಪಡೆದರು. ಭಕ್ತರು ತಮ್ಮ ಕೃತ್ಯವನ್ನೆಲ್ಲ ಸ್ವಾರ್ಥಕ್ಕೆ ಉಪಯೋಗಿಸದೆ ಶಿವಾರ್ಪಿತಕ್ಕೆ ಮಾಡುವದರಿಂದ ಸದ್ಭಕ್ತರು ಮಾಡಿದ ದುಷ್ಟ ಕರ್ಮಗಳೂ ಸಹ ಒಳ್ಳೇ ಫಲವನ್ನೇ ಕೊಡುವವು. ಈ ಮಾತು ದಿಟವಾದುದು. ಏಕಂದರೆ— ಶಿವಭಕ್ತನಿಗೆ ಅಧರ್ಮವೂ ಸಹ ಧರ್ಮವಾಗುವದೆಂದು ಆಗಮವು ಸಾರುತ್ತಿದೆ. ಆದ್ದರಿಂದ ಕನ್ನದ ಬೊಮ್ಮಯ್ಯನ ನಡತೆಯು ದುಷ್ಕರ್ಮವಲ್ಲ. ಆ ಬೊಮ್ಮಯ್ಯನು ತನ್ನ ಮನೆಗೆ ಶಿವಭಕ್ತರು ಬಂದರೆ ಹಗಲು, ಇರುಳು ಎಂದು ನೋಡದೆ ಬಂದು ಕನ್ನವನ್ನು ತೆಗೆದು ಅದು ಭಕ್ತರಮನೆಯಾಗಿದ್ದರೆ ಅವರಿಗೆ ತನ್ನ ಹೆಸರನ್ನು ಹೇಳಿ ಅಡ್ಡಬಿದ್ದು ಹೊರಟು ಹೋಗುವನು. ಭವಿಗಳ ಮನೆಯಾಗಿದ್ದರೆ ಹಣವನ್ನು ದೋಚಿಕೊಂಡು ಅವರ ಪಾಪವನ್ನು ಹೋಗಾಡಿಸಿ ಧನ್ಯರನ್ನಾಗಿ ಮಾಡಿ ಹೋಗುವನು. ಎಲ್ಲೈ ದೊರೆಯೇ, ಆತನು ಮುಟ್ಟಿದ, ಮೆಟ್ಟಿದ ಸ್ಥಳದಲ್ಲಿಯ ಮಣ್ಣೆಲ್ಲವೂ ಚಿನ್ನವಾಗಿದೆ. ಆ ಗುರುವಿನ ಮಹಿಮೆಗೆ ಇದೇ ನಿದರ್ಶನವಲ್ಲವೇ? ಆತನು ನಿನ್ನನ್ನು ಕಾಪಾಡುವದಕ್ಕಾಗಿ ಇಲ್ಲಿಗೆ ಬಂದನೇ ಹೊರತು ಹಣದಾಶೆಗಾಗಿ ಬಂದವನಲ್ಲ. ಎಂದು ತಿಳಿ. ಮತ್ತು ಆತನು ನಿನ್ನ ಬೊಕ್ಕಸದ ಹಣವನ್ನು ಕಳವುಮಾಡಿಲ್ಲ. ನಾನು ಈಗ ಅದನ್ನು ಪರೀಕ್ಷೆಮಾಡಿ ತೋರಿಸುತ್ತೇನೆ. ಎಂದು ಹೇಳಿ ಖಜಾಂಚಿಗಳನ್ನು ಕರೆಯಿಸಿ ಲೆಕ್ಕವನ್ನು ಓದಿಸಿ ಹಣದ ಪೆಟ್ಟಿಗೆಗಳನ್ನು ಒಡೆದು ಎಣಿಸಲಾಗಿ ಒಂದಕ್ಕೆರಡರಷ್ಟು ಹೆಚ್ಚಾಗಿರುವದನ್ನು ಬಿಜ್ಜಳರಾಯನು ಕಂಡು ಆಶ್ಚರ್ಯಪಟ್ಟು ಕೊಂಡಾಡುತ್ತಿದ್ದನು. ಅತ್ತ ಬೊಮ್ಮಯ್ಯನು ಹಣವನ್ನು ತಂದು ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟು ಸತಿ-ಪತಿಗಳಿಬ್ಬರೂ ಜಂಗಮಾರ್ಚನೆಯನ್ನು ಮಾಡಿ ನಾನಾವಿಧ ಭಕ್ಷ್ಯ-ಭೋಜ್ಯಗಳಿಂದ ಭೋಜನ ಮಾಡಿಸಿ ತೃಪ್ತಿಗೊಳಿಸಿ ಧನ, ಕನಕ, ಮಣಿ, ಭೂಷಣಗಳನ್ನು ಅವರಿಗೆ ಸಮರ್ಪಿಸಿ

ಅವರ ಪ್ರಸಾದವನ್ನು ಸ್ವೀಕರಿಸಿ ಆನಂದದಿಂದ ಇದ್ದರು. ಇತ್ತ ಬಸ
ರನು ಈ ಪ್ರಕಾರ ಬಿಜ್ಜಳ ದೊರೆಯ ಮನೋಭ್ರಾಂತಿಯನ್ನು ಹೋ
ಡಿಸಿ ಆತನಿಂದ ಗೌರವವನ್ನು ಹೊಂದಿ ಅಲ್ಲಿಂದ ಬಂದು ಕರುಣಾಳು
ಬೊಮ್ಮಯ್ಯನ ಪಾದಕಮಲವನ್ನು ಧ್ಯಾಸಿಸುತ್ತ ತನ್ನ ಮನೆಯಲ್ಲಿ
ಲಿಂಗ ಜಂಗಮಾರ್ಚನೆ ಮಾಡಿಕೊಂಡು ಸುಖದಿಂದಿದ್ದನು.

## — ಮುಸುಟೆ ಚೌಡಯ್ಯನ ಕಥೆಯು —

ಹಿಂದಕ್ಕೆ ಅಸದೃಶವಾದ ವೈಭವದಿಂದ ಮೆರೆಯುತ್ತಲಿದ್ದ ಮು
ಎಂಬ ಗ್ರಾಮವಿತ್ತು ಆ ಊರಲ್ಲಿ ಅಗಾಧ ಪಂಡಿತನೂ, ಮಹಿಮಾನ್ವಿತ
ಸುಸ್ವರೂಪಿಯೂ, ಲಿಂಗಾಂಗ ಸಾಮರಸ್ಯ ಸುಖವನ್ನನುಭವಿಸುವವನೂ
ಚೌಡಯ್ಯನೆಂಬ ಪರಮ ಶಿವಭಕ್ತನಿದ್ದನು. ಆತನು ಶಾಪಾನುಗ್ರಹ ಸಮ
ನಾಗಿ, ಭಕ್ತರ ಅಪೇಕ್ಷೆಗಳನ್ನು ಪೂರೈಸುತ್ತ ಸುಖದಿಂದ ಇದ್ದನು. ಆ
ಬಸವೇಶ್ವರನ ಶಿವಭಕ್ತಿಯ ಮಹಿಮೆಯನ್ನು ಕೇಳಿ ಆನಂದದಿಂದ
ದರ್ಶನ ಪಡೆಯಲು ಶಿವಗಣಂಗಳೊಡನೆ ಕಲ್ಯಾಣ ಪಟ್ಟಣಕ್ಕೆ ಪ್ರಯಾ
ಬೆಳೆಸಿದನು. ಆಗ ಮಾರ್ಗದಲ್ಲಿ ಒಂದು ಅರಣ್ಯವು ಪ್ರಾಪ್ತವಾಯಿತು.
ಅನೇಕ ತರದ ಹಣ್ಣಿನ ಗಿಡಗಳಿಂದಲೂ, ಹೂ ಬಳ್ಳಿಗಳಿಂದಲೂ ಶೋಭಾ
ಮಾನವಾಗಿತ್ತು. ಆ ವನದಲ್ಲಿಯ ಸುಮಧುರವಾದ ಮಾವಿನ ಹಣ್ಣುಗಳ
ಕಂಡು ಶಿವ ಶರಣರು ಅವುಗಳನ್ನು ಸವಿಯಲು ಅಪೇಕ್ಷಿಸಲಾಗಿ ಆಗಲೇ ಚೌ
ಯ್ಯನು ನಸುನಕ್ಕು ತನ್ನ ಕತ್ತಿಯನ್ನು ಆ ಗಿಡಗಳ ಬುಡದಲ್ಲಿ
ಕೊಂಡು ಆ ಹಣ್ಣುಗಳನ್ನು ದೃಷ್ಟಿಸಿ ನೋಡಲು ಅವು ಧಪ ಧಪನೆ ಕೆ
ಬೀಳತೊಡಗಿದವು ಅವುಗಳನ್ನು ಶರಣ ಸಮೂಹವು ಮನಸ್ಸು ತಣಿಯುವ
ತಿಂದು ತೃಪ್ತಿಪಟ್ಟು ಚೌಡಯ್ಯನನ್ನು ಹೊಗಳುತ್ತ ಬರುತ್ತಿರಲಾಗಿ,
ಚೌಡಯ್ಯನನ್ನು ಬಸವೇಶ್ವರನು ತನ್ನ ಲಿಂಗದಲ್ಲಿಯೇ ಕಂಡು ಸಂತೋ
ಗೊಂಡು ಸಡಗರದಿಂದ ಆತನನ್ನು ಎದುರುಗೊಂಡು ಸಾಷ್ಟಾಂಗ ನಮಸ್ಕಾ
ಮಾಡಿ ಕರೆತಂದು ಸಿಂಹಾಸನದ ಮೇಲೆ ಕೂಡ್ರಿಸಿ ಸತ್ಕಾರ ಪೂರ್ವಕವಾ
ಪೂಜಿಸಿ ಆತನ ಕಾರುಣ್ಯವನ್ನು ಪಡೆದು ತನ್ನ ಗುರುವಾದ ಸಂಗಮನಾಥ
ದಯಮಾಡಿಸಿರುವನೆಂಬ ಭಾವದಿಂದ ಭಕ್ತಿಯೊಡನೆ ಭಜಿಸಿ ಸ್ತೋತ್ರಮಾ

ತ್ತಿರಲು ಚೌಡಯ್ಯನು ಪರಮಾನಂದದಿಂದ ಬಸವೇಶ್ವರನ ಭಕ್ತಿಯನ್ನು ಸ್ವೀಕರಿಸಿ ಸಂತೃಪ್ತನಾಗಿ ಆ ಕಲ್ಯಾಣ ಪಟ್ಟಣದಲ್ಲಿ ಸುಖವಾಗಿ ಇದ್ದನು.

ಒಂದು ದಿವಸ ಚೌಡಯ್ಯನು ಒಂದಾನೊಂದು ವಿವಾಹ ಕಾರ್ಯಕ್ಕಾಗಿ ಆಮಂತ್ರಣ ಬರಲು ಒಪ್ಪಿಕೊಂಡು ಮೆರವಣಿಗೆಯೊಂದಿಗೆ ನಯಮಾಡಿ ಸುತ್ತಿರಲು ರಾಜಬೀದಿಯಲ್ಲಿಯ ಜನಸಮೂಹವನ್ನು ನೋಡಿ ಆ ಭಕ್ತ ಜನರ ಮಧ್ಯದಲ್ಲಿ ನಾನಾ ವಿಧ ಹೂಮಾಲೆಗಳಿಂದಲೂ, ಮೇಲ್ಕಟ್ಟುಗಳಿಂದಲೂ, ಛತ್ರ, ಚಾಮರಗಳಿಂದಲೂ ಅಲಂಕೃತವಾದ ವಿಮಾನದಲ್ಲಿರುವ ಜಂಗಮನ ಮೃತದೇಹವನ್ನು ಕಂಡು ಎಲೈ, ಭಕ್ತಜನ ಸಮೂಹವೇ, ನಾನು ಮಂಗಲಕರವಾದ ವಿವಾಹಕ್ಕೆ ಹೊರಟಿರಲು ಈ ಜಂಗಮನನ್ನು ಬಿಟ್ಟು ಹೋಗುವದೇ ? ಎಂದಿಗೂ ಸಾಧ್ಯವಿಲ್ಲ. ಎಂದು. ಆ ಶವದ ಮುಂದುಗಡೆಯಲ್ಲಿ ಕುಣಿಯುತ್ತ ತನ್ನ ಕತ್ತಿಯನ್ನು ಹಿಡಿದು ಅಲ್ಲಾಡಿಸಿ ಏನು ಜಂಗಮರೇ, ಇದೇನು ಉತ್ಸವ? ಎಲ್ಲಿಗೆ ಪ್ರಯಾಣ ಮಾಡುತ್ತಿದ್ದೀರಿ? ಎಂದು ಕೇಳಲು ಆ ಶವವು ನಿಮಗೆ ಮಂಗಳವಾಗಲಿ. ಎಂದು ನುಡಿಯಿತು. ಆಗ ಚೌಡಯ್ಯನು ಎಲೈ ಶಿವಮೂರ್ತಿಯೇ, ಇದೇನು ಆಶ್ಚರ್ಯ? ನೀನು ವೃಷಭ ವಾಹನವನ್ನು ತೊರೆದು ನರವಾಹನವನ್ನು ಅಂಗೀಕರಿಸಬೇಕೇ? ಇದನ್ನು ನೋಡಿ ಲೋಕದ ಜನರು ಹಾಸ್ಯಮಾಡುವದಿಲ್ಲವೇ ? ಎಂದು ಹೇಳುತ್ತ ಆ ಶವದ ಕಾಲುಗಳನ್ನು ಹಿಡಿದು ಅಲ್ಲಾಡಿಸಲು ಆತನು ಪ್ರಾಣಯುಕ್ತನಾಗಿ ವಿಮಾನದಿಂದ ಕೆಳಗೆ ಇಳಿದು ಬಂದು ಚೌಡಯ್ಯನನ್ನು ತಬ್ಬಿ ಮುದ್ದಾಡುತ್ತ ಆಶೀರ್ವದಿಸಿ ಪಕ್ಕದಲ್ಲಿ ನಿಂತುಕೊಂಡನು. ಇದನ್ನು ನೋಡಿ ಸಕಲರೂ ಪರಮಾಶ್ಚರ್ಯ ಭರಿತರಾದರು. ಆಗ ಚೌಡಯ್ಯನು ಆ ಜಂಗಮನೊಡನೆ ಭಕ್ತಮಂಡಲಿಯುತನಾಗಿ ಮುಂದೆ ಪ್ರಯಾಣಮಾಡಿ ಬರುತ್ತಿರಲು ದನಗಳನ್ನು ಕಾಯುವ ಹುಡುಗರು ಎರಡು ಪಂಗಡಗಳಾಗಿ ನಿಂತು ಓಡಾಡುತ್ತ ಬೇಗನೆ ಓಡಿ ಬಂದು ಎದುರಿಗೆ ಕಾಣುವ ದೊಡ್ಡದಾದ ಬಸವನ ಆಲದ ಮರವನ್ನು ಮೊದಲು ಯಾರು ಮುಟ್ಟುವರೋ ಅವರು ಗೆದ್ದವರೆಂದು ಶಪಥಮಾಡುತ್ತ ಓಡುತ್ತಿರುವದನ್ನು ಕಂಡು ಅವರಲ್ಲಿ ಒಬ್ಬ ಹುಡುಗನನ್ನು ಕೈಬೀಸಿ ಹತ್ತಿರ ಕರೆದು ಏನಯ್ಯಾ, ಈ ಆಲದ ಮರಕ್ಕೆ ಬಸವನ ಆಲದ ಮರವೆಂದು ಹೆಸರಿಟ್ಟು ಕರೆದಿರುವಲ್ಲಾ ಅದು ಹೇಗೆ ? ಇದಕ್ಕೆ ಈ ಹೆಸರು ಹೇಗೆ ಬಂದಿತು ? ಎಂದು ಕೇಳಲು ಅದಕ್ಕೆ ಆ ಹುಡುಗನು

ಅಯ್ಯಾ, ಈ ಊರಲ್ಲಿ ಎರಡು ದೊಡ್ಡ ಗೂಳಿಗಳಿದ್ದವು. ಅವು ಯಾವದೋ ಕಾರಣದಿಂದ ಏಳು ದಿನಗಳವರೆಗೆ ಖಾಡಾಖಡಿಯಾಗಿ ಕಾದಾಡಲು ಒಂದು ಗೂಳಿಯು ಸೋತು ಮೈಯೆಲ್ಲಾ ರಕ್ತಮಯವಾಗಿ ಸಾಯಲು ಅದನ್ನು ಜನರು ಅಲಂಕಾರಮಾಡಿ ಪೂಜಿಸಿ ಮೆರೆಯಿಸಿ ಈ ಸ್ಥಳದಲ್ಲಿ ಸಮಾಧಿ ಮಾಡಲು ಆ ಸಮಾಧಿಯ ಮೇಲೆಯೇ ಈ ಆಲದ ಮರವು ಬೆಳೆಯಿತು. ಅದು ಈಗ ಹೆಮ್ಮರವಾಗಿದೆ. ಈಗಲೂ ಇದರ ಹಣ್ಣುಗಳನ್ನು ತಿಂದರೆ ಮಾಂಸದಂತಿರುವವು ಇದನ್ನು ಸೀಳಿದರೆ ಮತ್ತು ಇದರ ಹಾಲು ಸಹ ರಕ್ತ ದಂತೆ ಕೆಂಪಾಗಿರುವವು. ಎಂದು ನಮ್ಮ ಅಜ್ಜನು ಹೇಳಿದ್ದನ್ನು ನಮ್ಮ ತಂದೆ ಕೇಳಿಕೊಂಡು ನಮಗೆ ಹೇಳಿದ್ದನು. ಆದ್ದರಿಂದ ಇದಕ್ಕೆ ಬಸವನ ಆಲದ ಮರ ಎಂದು ಹೆಸರು ಬಂದಿದೆ ಎಂದು ನುಡಿಯಲು ಭಕ್ತರು ಇದು ಬಹು ಕಾಲದ ಗಿಡವು. ಇರಲಿ ಮುಂದೆ ಪ್ರಯಾಣ ಮಾಡೋಣ ನಡೆಯಿರಿ ಎಂದು ನುಡಿಯಲು ಚೌಡಯ್ಯನು ನಕ್ಕು ವೀರವ್ರತನಿಷ್ಠನಾದ ಬಸವನ ಮರಣವನ್ನು ಕೇಳಿ ಅಲಕ್ಷಿಸಿ ಮುಂದಕ್ಕೆ ಹೋದರೆ ವ್ರತಭಂಗವಾಗುವದು ಶಿವಶರಣರ ಕೃಪೆಯಿಂದ ಈ ಬಸವನನ್ನು ಮಡುವೆಗೆ ಕರೆದುಕೊಂಡು ಹೋಗುವೆನೆಂದು ಹೇಳುತ್ತ ಕತ್ತಿಯನ್ನು ಕೈಯಲ್ಲಿ ಹಿಡಿದು ಝಳಪಿಸುತ್ತ ತಿರುಗಿಸಿ ಅದನ್ನು ಮರದ ಬುಡದಲ್ಲಿ ಊರಿ ಬಸವೇಶನೇ, ಬೇಗನೆ ಹೊರಕ್ಕೆ ಬಾ ! ಬೇಗನೆ ಹೊರಗೆ ಬಾ ! ಎಂದು ಗಟ್ಟಿಯಾಗಿ ಕೂಗಿದ ಕೂಡಲೇ ಬೇರುಗಳು ಛಟ ಛಟನೆ ಒಡೆದು ಮರವು ನಡುಗಿ ಅಲ್ಲಾಡಿತು. ಹಣ್ಣುಗಳೂ, ಎಲೆಗಳೂ ಉದುರಿಬಿದ್ದವು. ಭೂಮಿಯು ಹೋಳಾಗಿ ಸೀಳಿಹೋಯಿತು. ಬಸವನು ಡುರಕಿ ಹಾಕುತ್ತ ಮೈಯನ್ನು ಕೊಡವಿ ಹೊರಗೆ ಬಂದನು. ಅಲಂಕರಿಸಿದ್ದ ಹೂಗಳೂ, ಧರಿಸಿದ್ದ ಭಸ್ಮ, ಅರಿಸಿಣ, ಕುಂಕುಮಗಳು ಆಗ ತಾನೆ ಹಚ್ಚಿ ದಂತೆ ಕಾಣಿಸುತ್ತಿದ್ದವು. ಗಂಧವು ಘಮಘಮಿಸುತ್ತಿತ್ತು. ಹೊದಿಸಿದ್ದ ಹೊಸಬಟ್ಟೆಯು ಮಾಸದೆ, ಕಾಲಿನಲ್ಲಿ ಹಾಕಿದ್ದ ಗಗ್ಗರಗಳು ಕಾಂತಿಯುಕ್ತ ವಾಗಿದ್ದವು. ಇಂತಪ್ಪ ಬಸವನು ಆಗ ತಾನೆ ಹೊರಗೆ ಬಂದು ಮೈಮುರಿದು ಕಾಲುಗಳನ್ನುಕುಣಿಸಿ, ಮೂಗನ್ನು ಅರಳಿಸಿ, ಹಲ್ಲುಗಳನ್ನುಸರಿಮಾಡಿಕೊಂಡು, ಹುಸಿನಗೆಯನ್ನು ಬೀರುತ್ತ, ಸಂತೋಷದಿಂದ ಅತ್ತಿತ್ತ ಅಲೆದಾಡಹತ್ತಿತು. ಇದನ್ನು ನೋಡಿ ಸರ್ವರೂ ಅತ್ಯಾಶ್ಚರ್ಯಪಟ್ಟರು. ಆಗ ಚೌಡಯ್ಯನು ಆ

ಗೂಳಿಯನ್ನು ತಬ್ಬಿ ಮುದ್ದಾಡಿ ಕಾಲುಗಳಿಗೆ ನಮಸ್ಕರಿಸಿ, ಗಂಧ ಪುಷ್ಪಾದಿ ಗಳಿಂದ ಪೂಜಿಸಿ ಹೊಸದಾದ ಎಳೆಹುಲ್ಲನ್ನು ನೈವೇದ್ಯಮಾಡಿ ಹಾಲು, ತುಪ್ಪ ಗಳನ್ನು ಎರೆದು ತೃಪ್ತಿಪಡಿಸಿ ಅನೇಕ ವಿಧಮಂತ್ರಗಳಿಂದ ಪೂಜಿಸಿ ಸತ್ಕರಿಸಿ ಸಂಗಡ ಕರೆದುಕೊಂಡು ಬರುತ್ತಿರಲು ದಾರಿಯಲ್ಲಿ ಇದೊರೆಯೆಂಬ ಹೊಳೆಯು ತುಂಬಿತುಳುಕಿ ಡೋಣಿಯು ಸಹ ತಿರುಗಾಡಲು ಸಾಧ್ಯವಿಲ್ಲದಂತೆ ಹರಿಯು ತ್ತಿತ್ತು. ಅದನ್ನು ನೋಡಿ ಚೌಡಯ್ಯನು ಅದರ ಮುಂದೆ ನಿಂತು ಎಲೈ— ನದಿಯೇ, ಶಿವಶರಣರ ಮುಂದೆ ನಿನ್ನ ಗರ್ವವನ್ನು ತೋರಿಸಬೇಡ ಪೂರ್ವ ದಲ್ಲಿ ಶಿವಭಕ್ತಿಸಂಪನ್ನನಾದ ಅಗಸ್ತ್ಯನು ಸಮುದ್ರವನ್ನು ಕುಡಿದು ಬಿಡಲಿ ಲ್ಲವೇ ? ಶಿವದಾಸ ನಾವಿಕನೆಂಬವನು ಮಹಾನದಿಯನ್ನು ಪಾದಚಾರಿಯಾಗಿ ದಾಟಿ ಅದರ ಗರ್ವವನ್ನು ಭಂಗಮಾಡಲಿಲ್ಲವೇ ? ಇದೂ ಅಲ್ಲದೆ ಮಸಣಗ ಜೀಶನು ಈಶ್ವರನನ್ನು ನದಿಯ ಮಧ್ಯದಲ್ಲಿ ಪೂಜಿಸುತ್ತಿರುವಾಗ ಬಂದ ಪೂರ್ಣ ಪ್ರವಾಹವು ಆ ಶರಣನ ಮಹಿಮೆಗೆ ಹೆದರಿ ಆ ಸ್ಥಳವನ್ನು ಬಿಟ್ಟು ಎರಡು ಭಾಗವಾಗಿ ಹರಿದು ಹೋಗಲಿಲ್ಲವೇ ? ಅದರಂತೆ ನೀನು ನಮಗೆ ದಾರಿಯನ್ನು ಕೊಟ್ಟರೆ ಸರಿ ಇಲ್ಲವಾದರೆ ಈಗಲೇ ನಿನ್ನ ಗರ್ವವನ್ನು ತೊಡೆದು ಬಿಡುವೆನು ಎಂದು ಕತ್ತಿಯನ್ನು ಝಳಪಿಸಲು ಹೊಳೆಯ ಪ್ರವಾಹವು ಆಕಾಶಕ್ಕೆ ಹಾರಿ ಹೋಯಿತು. ತಳದ ಮಳಲು ಕಾಣಹತ್ತಿತು. ಶಿವಶರಣರು ಸಂತೋಷ ಪಡುತ್ತಿರಲು ಚೌಡಯ್ಯನು ಸತ್ತು ಬದುಕಿದ ಜಂಗಮ ಮತ್ತು ಬಸವಗಳ ಸಂಗಡ ಸಮಸ್ತ ಶಿವಗಣಂಗಳೊಡನೆ ವಾದ್ಯ–ತಾಳ–ಮೇಳದೊಡನೆ ನದಿ ಯನ್ನು ದಾಟಿ ಮದುವೆಯಾಗುವ ಊರಿಗೆ ಹೋಗಿ ಎಲ್ಲ ಕಾರ್ಯ ಮುಗಿಸಿ ಪರಿವಾರಸಮೇತ ತಿರುಗಿ ಕಲ್ಯಾಣ ಪಟ್ಟಣಕ್ಕೆ ಬಂದು ಪಟ್ಟಣದ ಬೀದಿಯಲ್ಲಿ ಮೆರವಣಿಗೆಯಿಂದ ಬರುತ್ತಿರಲು ಒಬ್ಬ ಯುವತಿಯು ಮುಂದೆ ಬಂದು ಚೌಡ ಯ್ಯನ ಪಾದಗಳಿಗೆ ನಮಸ್ಕರಿಸಲು ಆತನು ಪೂರ್ಣಾಯುವಾಗೆಂದು ಆಶೀರ್ವ ದಿಸಿ ಮುಂದೆ ಹೋಗುವಷ್ಟರಲ್ಲಿಯೇ ಆ ಸ್ತ್ರೀಯು ಮರಣಹೊಂದಲು ಆಕೆಯ ತಾಯಿ-ತಂದೆಗಳು ಗೋಳಿಡುತ್ತ ಆ ಶವವನ್ನು ತೆಗೆದುಕೊಂಡು ಬಂದು ಚೌಡಯ್ಯನ ಮುಂದೆ ಇರಿಸಿ ಸ್ವಾಮೀ, ನಿನ್ನೆಯ ದಿನ ನಮ್ಮ ಮಗಳು ತಮ್ಮ ಪಾದಗಳಿಗೆ ನಮಸ್ಕರಿಸಿ ದೀರ್ಘಾಯುವಾಗೆಂದು ಆಶೀರ್ವಾದ ಪಡೆದು ಈಗ ಸತ್ತು ಹೋಗಿದ್ದಾಳೆ. ದಯೆಯಿಂದ ಇವಳಿಗೆ ಪ್ರಾಣದಾನಮಾಡಿ ಕಾಪಾಡ

ಬೇಕೆಂದು ಬೇಡಿಕೊಂಡರು. ಆಗ ಆತನು ತನ್ನ ಕೈಕತ್ತಿಯನ್ನು ಝಳಪಿಸಿ ಅದನ್ನು ವಿಮಾನಕ್ಕೆ ಮುಟ್ಟಿಸಿ, ಆ ಹುಡುಗಿಯ ಹೆಸರಿನಿಂದ ಕೂಗಿ, ಹೊರಗೆ ಬಾಯೆಂದು ಕೂಗಿದ ಕೂಡಲೆ ಶವಕ್ಕೆ ಕಟ್ಟಿದ್ದ ಕಟ್ಟುಗಳು ಪಟಪಟನೆ ಬಿಚ್ಚಲು ನಿದ್ರೆ ತಿಳಿದವರು ಏಳುವಂತೆ ಆ ಹುಡುಗಿಯು ಹೊರಕ್ಕೆ ಬಂದು ಚೌಡಯ್ಯನ ಪಾದಗಳಿಗೆ ನಮಸ್ಕರಿಸಿದಳು. ಆಕೆಯ ತಾಯಿ-ತಂದೆಗಳೂ ಆತನ ಪಾದಗಳಿಗೆ ನಮಸ್ಕರಿಸಿ ಕೈಮುಗಿದು ನಿಂತು "ಹರಸಿದವರು ಹರಣ ವನ್ನು ಕೊಡುವರೇ ?" ಎಂಬ ಮಾತು ತಮ್ಮಿಂದ ನಿಜವಾಯಿತು. ತಮ್ಮ ಕೃಪೆಯಿಂದ ನಮ್ಮ ಮಗಳು ಬದುಕಿದಳು. ತಮ್ಮ ಉಪಕಾರಕ್ಕೆ ಪ್ರತಿಯಾಗಿ ಉಪಕಾರಮಾಡಲು ಶಕ್ತರಲ್ಲದ ನಾವು ನಿಮ್ಮ ಸ್ಮರಣೆಯನ್ನು ಮಾಡುತ್ತ ಸೇವಕರಾಗಿರುವೆವು. ನಮ್ಮನ್ನು ಕಾಪಾಡಿರಿ ಎಂದು ಹೊಗಳಲು ಅವರನ್ನು ಲಿಂಗಾಂಗ ಸಂಗಿಗಳಾಗಿ ಮಾಡಿ ಶತಾಯುಷಿಗಳಾಗುವಂತೆ ಹರಸಿ ಕಳಿಸಿ ಕೊಟ್ಟನು. ಹೀಗೆ ಈತನು ಮಾಡಿದ ಮಹಿಮೆಗಳನ್ನು ಪರವಾದಿಗಳಾದ ದುಷ್ಟಭವಿಗಳು ಕಂಡು ಒಂದು ಗೋಣಿಯ ತಟ್ಟನ್ನು ತಂದು ಅದನ್ನು ಮನು ಷ್ಯಾಕಾರವಾಗಿ ಹೊಲಿದು ಅದರಲ್ಲಿ ಹುಲ್ಲುತುಂಬಿ ತಲೆಯಲ್ಲಿ ಜಡೆಗಳು, ಹಣೆಗೆ ಭಸ್ಮ, ಕೊರಳಲ್ಲಿ ರುದ್ರಾಕ್ಷಿ, ಧರಿಸಿ ಕೃತ್ರಿಮ ಮನುಷ್ಯನನ್ನುಮಾಡಿ ಒಂದು ಹಾಳು ಗುಡಿಯಲ್ಲಿ ಹಾಕಿ ಬೀದಿಯಲ್ಲಿ ಅಲೆದಾಡಿ ಹಾಸ್ಯಮಾಡಿ ನಗುತ್ತ ಯಾವನೋ ಬಡಜಂಗಮನು ಈ ಗುಡಿಯಲ್ಲಿ ಸತ್ತು ನಾರುತ್ತಿರು ವನು ಆದರೂ ಈ ಊರ ಜಂಗಮರು ಸುಮ್ಮನೇ ಇದ್ದಾರೆ. ಸಾವು ಎಲ್ಲರಿಗೂ ಬರತಕ್ಕದ್ದೇ. ಅವನು ನಿರ್ಗತಿಕನಾದ್ದರಿಂದ ಯಾರೂ ಅವನನ್ನು ನೋಡಲು ದಿಕ್ಕಿಲ್ಲ. ಹಣದ ಗಂಟು ಇದ್ದರೆ ಅವನ ಶವ ಈ ಸ್ಥಿತಿಗೆ ಬರುತ್ತಿತ್ತೇ? ಸತ್ತ ವರಿಗೆ ಸಂಸ್ಕಾರ ಮಾಡದಿರುವದು ಶಿವಭಕ್ತರಿಗೆ ಯೋಗ್ಯವೇ ? ಈ ಮೊದಲು ಸತ್ತುಹೋಗಿದ್ದ ಜಂಗಮ, ಯುವತಿಯರಿಗೆ ಪ್ರಾಣದಾನಮಾಡಿದ್ದ ಆ ಪುಣ್ಯಾತ್ಮನು ಈಗ ಇವನಿಗೆ ಜೀವದಾನಮಾಡಬಾರದೇ ? ಬಹುಶಃ ಇದು ಆತನಿಗೆ ತಿಳಿದಿರಲಿಕ್ಕಿಲ್ಲ. ಆದ್ದರಿಂದ ನಾವೇ ಈ ಶವವನ್ನು ಆತನಿಗೆ ತೋರಿಸೋಣ ಎಂದು ಹೇಳುತ್ತ ವಿಮಾನವನ್ನು ಸಿದ್ಧಮಾಡಿ ಅದರಲ್ಲಿ ಆ ಶವ ಇರಿಸಿ ಕೆಲವು ಬಡಜಂಗಮರ ಮೂಲಕ ಹೊರಿಸಿಕೊಂಡು ಚೌಡಯ್ಯನ ಮನೆಯ ಮುಂದುಗಡೆ ಹೀಯಾಳಿಸುತ್ತ ಬರುತ್ತಿರಲು ಚೌಡಯ್ಯನಿಗೆ ಇದು

ಕೃತ್ರಿಮವೆಂದು ತಿಳಿದು ಬರಲು ಈ ದುಷ್ಟರ ಗರ್ವವನ್ನು ಹರಣಮಾಡಬೇಕೆಂದು ಹುಸಿನಗೆನಕ್ಕು ಕೋಟ್ಯಾನುಕೋಟಿ ಬ್ರಹ್ಮಾಂಡಗಳನ್ನು ನಾಶಮಾಡುವ ಮತ್ತು ಸೃಷ್ಟಿಮಾಡುವ ಸಾಮರ್ಥ್ಯವನ್ನು ಪಡೆದಿರುವ ಜಂಗಮರಿಗೆ ಈ ಶವಕ್ಕೆ ಪ್ರಾಣದಾನ ಮಾಡುವದಾಗಲಾರದೇ ? ಆತನು ಶಿವಶರಣರ ಪಾದಗಳನ್ನು ನೆನೆಯುತ್ತ ತನ್ನ ಕತ್ತಿಯನ್ನು ಹಿರಿದು ತಿರುಗಿಸುತ್ತ ವಿಮಾನದ ಮುಂದೆ ಬಂದು ನಿಂತು ಆ ಶಿವನ ಕೈಹಿಡಿದು ಏಳು. ಎದ್ದು ಬಾ ಎಂದು ಕತ್ತಿಯನ್ನು ನೋಂಕಿಸಿ ಕರೆದನು. ಆ ಗೊಂಬೆಯು ಕೂಡಲೇ ಪ್ರಾಣಧಾರಿಯಾಗಿ ಹೊರಗೆ ಬಂದು ಚೌಡಯ್ಯನ ಪಾದಗಳಿಗೆ ನಮಸ್ಕರಿಸಿ ಸ್ವಾಮೀ, ನಿಮ್ಮ ದಯೆಯಿಂದ ನಾನು ಹುಟ್ಟಿದೆನು. ನನಗೆ ನೀವೇ ತಂದೆಯು, ಗುರುಗಳು, ಜಂಗಮರು ಆಗಿದ್ದೀರಿ. ನನ್ನನ್ನು ಕಾಪಾಡಬೇಕು ಎಂದು ನಮಸ್ಕರಿಸಿ ನಿಂತ ಮನುಷ್ಯನನ್ನು ನೋಡಿ ಆತನಿಗೆ ಶಿವದೀಕ್ಷೆಯನ್ನು ಕೊಟ್ಟು ಚಿರಂಜೀವಿ ಪದವಿಯನ್ನು ಅನುಗ್ರಹಿಸಿ ತನ್ನ ಮಹಿಮೆಯನ್ನು ತೋರ್ಪಡಿಸಿದನು. ಇದನ್ನು ನೋಡಿ ಪರವಾದಿಗಳು ಬೆದರಿ ಬೆಂಡಾಗಿ ಆಶ್ಚರ್ಯಪಟ್ಟು ಓಡಿ ಬಂದು ಸ್ವಾಮೀ, ಗುಣಹೀನರೂ, ಮದಾಂಧರೂ, ಅಜ್ಞಾನಿಗಳೂ ಆದ ನಾವು ಮಾಡಿದ ಅಪರಾಧವನ್ನು ಕ್ಷಮಿಸಿ ಕಾಪಾಡಬೇಕೆಂದು ಬೇಡಿಕೊಳ್ಳಲು ಅವರನ್ನು ಶಿವಭಕ್ತರನ್ನಾಗಿ ಮಾಡಿ ಅಪಾರ ಮಹಿಮೆಯನ್ನು ಹೊಂದಿ ಹೊಳೆಯುತ್ತಿದ್ದನು. ಈ ಮಹಿಮೆಗಳನ್ನು ಕಣ್ಣಾರೆ ನೋಡುತ್ತ ಪರಮಾನಂದದಿಂದ ಹೊಗಳುತ್ತ ಬಸವೇಶ್ವರನು ಪರಮಾನಂದ ಭರಿತನಾಗಿದ್ದನು.

## — ಸುರಗಿ ಚೌಡಯ್ಯನ ಕಥೆಯು —

ಕಲ್ಯಾಣಪಟ್ಟಣದಲ್ಲಿ ಗುರುಲಿಂಗಜಂಗಮಾರ್ಚನಾ ಭಕ್ತಿಪೂರ್ಣನಾದ ಸುರಗಿ ಚೌಡಯ್ಯನೆಂಬ ಒಬ್ಬ ಭಕ್ತನಿದ್ದನು. ಆತನು ಪ್ರತಿದಿವಸ ತನ್ನ ಮನೆಗೆಬಂದ ಜಂಗಮರನ್ನು ಸತ್ಕರಿಸಿ ಪೂಜಿಸಿ ಭಕ್ತಿಯಿಂದ ಸಿದ್ಧಮಾಡಿದ ಪಂಚ ಪಕ್ವಾನ್ನಗಳನ್ನು ಎಡೆಮಾಡಿ ಎಲೈ— ಪರಮೇಶ್ವರನೇ, ನೀನು ಭಕ್ತರ ಮುಖದಿಂದ ಊಟಮಾಡಿ ನಾಲಿಗೆಯರುಚಿ ನೋಡುತ್ತೇನೆಂದು ಹೇಳಿರುವ ಮಾತಿನಂತೆ ಭುಂಜಿಸಿ ತೃಪ್ತನಾಗಬೇಕು ಎಂದು ಹೇಳಿ ಆ ಜಂಗಮ ಮೂರ್ತಿಯನ್ನು ತೃಪ್ತಿಪಡಿಸಿದ ನಂತರ ತಾನು ಪೂರ್ವಾಭಿ

ಮುಖನಾಗಿ ಹುಲಿಯ ಚರ್ಮದ ಆಸನದ ಮೇಲೆ ಕುಳಿತುಕೊಂಡು ತನ್ನ ಕರಡಿಗೆಯಲ್ಲಿಯ ಇಷ್ಟಲಿಂಗವನ್ನು ತನ್ನ ಎಡಗೈಯಲ್ಲಿಟ್ಟುಕೊಂಡು ಆ ಲಿಂಗವನ್ನು ನೋಡುತ್ತ ಶುದ್ಧೋದಕ ಸ್ನಾನಕ್ಕಿಂತ ಮೊದಲು ಆನಂದ ಭಾಷ್ಪವನ್ನು ಸುರಿಸುತ್ತ, ಗಂಧಸಮರ್ಪಣಕ್ಕೆ ಪೂರ್ವದಲ್ಲಿ ಶಿವಜ್ಞಾನಾನುಭವ ಗಂಧವನ್ನು ಲೇಪಿಸುತ್ತ, ಹೂಗಳನ್ನು ಧರಿಸುವ ಮುಂಚೆಯೇ ಇಂದ್ರಿಯ ಕುಸುಮಗಳನ್ನು ಮುಡಿಸಿ, ಧೂಪವನ್ನು ಹಾಕುವದಕ್ಕಿಂತ ಮುನ್ನ, ಜ್ಞಾನಾಗ್ನಿದಗ್ಧವಾದ ಇಂದ್ರಿಯ ವಾಸನೆಯನ್ನಿಟ್ಟು, ದೀಪಾರಾಧನೆಗೆ ಮೊದಲು ಅಂತರ್ಜ್ಯೋತಿಯನ್ನು ಬೆಳಗಿ, ನೈವೇದ್ಯವನ್ನು ಸಮರ್ಪಣೆ ಮಾಡು ವದಕ್ಕೆ ಮುಂಚೆ ಆತ್ಮವನ್ನು ಸಮರ್ಪಿಸಿ, ತಾಂಬೂಲವನ್ನು ಕೊಡುವದಕ್ಕಿಂತ ಮುಂಚೆ ಅನುರಾಗವೆಂಬ ತಾಂಬೂಲವನ್ನು ಕೊಟ್ಟು, ಆ ಬಳಿಕ ಷೋಡಶೋಪ ಚಾರ ವಿಧಾನದಿಂದ ಪೂಜೆಯನ್ನು ಮಾಡಿ, ತನ್ನ ಖಡ್ಗವನ್ನು ಒರೆಯಿಂದ ತೆಗೆದು ಕೈಯಲ್ಲಿ ಹಿಡಿದುಕೊಂಡು ತನ್ನ ಇಷ್ಟಲಿಂಗಕ್ಕೆ ಆಹಾರ ಪದಾ ರ್ಥಗಳನ್ನು ಕೈಯಿಂದ ತುತ್ತು ಮಾಡಿ ಊಡುತ್ತಿರಲು ಶಂಕರನು ಅವುಗ ಳನ್ನು ಸಂತೋಷದಿಂದ ಪರಿಗ್ರಹಿಸಿ ಪ್ರತ್ಯಕ್ಷವಾಗಿ ಶಿವಶರಣರು ಊಟ ಮಾಡುವಂತೆ ಉಣ್ಣುತ್ತಿದ್ದನು. ಈ ಪ್ರಕಾರ ಆ ಭಕ್ತನು ತ್ರಿಕಾಲದಲ್ಲಿಯೂ ಶಿವನನ್ನು ತೃಪ್ತಿಪಡಿಸುತ್ತ ಇರುತ್ತಿರುವದನ್ನು ಸರ್ವ ಭಕ್ತರು ಕಂಡು ಪರ ಮಾನಂದದಲ್ಲಿದ್ದರು. ಅಲ್ಲದೆ ಪೂರ್ವಕಾಲದಲ್ಲಿ ಕರಿಕಾಲ ಚೋಳನೆಂಬವನು ನಿತ್ಯವೂ ಮೂರುನೂರಾ ಅರವತ್ತು ಖಂಡಗ ಅಕ್ಕಿಯ ಅನ್ನವನ್ನು ಸಿದ್ಧಪ ಡಿಸಿ ಅದಕ್ಕೆ ತಕ್ಕಂತೆ ಶಾಕ-ಪಾಕಗಳನ್ನು ಅಣಿ ಮಾಡಿ ಒಂದು ಸಾವಿರ ಬಂಗಾರದ ಬಟ್ಟಲುಗಳಲ್ಲಿ ಆ ನೈವೇದ್ಯವನ್ನು ತುಂಬಿ ಈಶ್ವರನಿಗೆ ಸಮ ರ್ಪಿಸುತ್ತಿರಲು ಆವನು ಅದನ್ನು ಅತ್ಯಂತ ಪ್ರೀತಿಯಿಂದ ಊಟ ಮಾಡುತ್ತಿ ದ್ದನು. ಚನ್ನಯ್ಯನೆಂಬವನು ತಾನು ಕುಡಿಯುವ ಅಂಬಲಿಯು ಬಲು ರುಚಿ ಯಾಗಿರಲು ಕಂಡು ಅದನ್ನು ಪರ ಶಿವನಿಗೆ ಕುಡಿಸಿದನು. ದ್ರಾಕ್ಷಾರಾಮ ಎಂಬ ಗ್ರಾಮದಲ್ಲಿ ಇದ್ದ ಚೋಳಿಕೆ ಎಂಬ ಭಕ್ತೆಯು ತಾನು ಊಟಮಾಡುವ ರುಚಿಕರವಾದ ಹೋಳಿಗೆಯನ್ನು ಉಣ್ಣುತ್ತಿರುವಾಗ ಅದನ್ನು ನಾಲಿಗೆಯ ಮೇಲಿಂದಲೇ ತೆಗೆದು ಒಂದು ಬಂಗಾರ ಬಟ್ಟಲಲ್ಲಿಟ್ಟು ಅದರ ಮೇಲೆ ಮಡಿ ಬಟ್ಟೆಯನ್ನು ಹೊದಿಸಿ ಆ ಊರಲ್ಲಿರುವ ಭೀಮೇಶ್ವರ ದೇವರಿಗೆ ಕೊಟ್ಟು

ಬಾಯೆಂದು ತನ್ನ ದಾಸಿಯ ಸಂಗಡ ಕಳಿಸಲು ಆ ದೂತಿಯು ದೇವಾಲ ಯಕ್ಕೆ ಬೇಗನೇ ಬಂದು ಹೇ ಶಿವನೇ, ನಿನಗೋಸ್ಕರ ನಮ್ಮ ಅಕ್ಕನು ರುಚಿ ಯಾಗಿರುವ ಹೋಳಿಗೆಯ ತುಂಡನ್ನು ಕಳಿಸಿದ್ದಾಳೆ ಇದನ್ನು ನೀನು ತಿಂದು ತೃಪ್ತನಾಗು ಎಂದು ಹೇಳಿದ ಕೂಡಲೇ ಶಂಭುವು ತಾಯೆಂದು ತೆಗೆದುಕೊಂಡು ಹೋಳಿಗೆಯನ್ನು ತಿಂದು ಬಟ್ಟಲನ್ನು ಹೊರಗೆ ಬೀಸಾಡಿದನು. ಎಂಬ ಕಥೆ ಯನ್ನು ಕೇಳಿದ್ದೆವು. ಆದರೆ ಈಗ ಚೌಡಯ್ಯನು ಪ್ರತ್ಯಕ್ಷ ಊಟ ಮಾಡಿಸು ವದನ್ನು ಕಂಡೆವು. ಎಂಬುದಾಗಿ ಕೊಂಡಾಡುತ್ತಿದ್ದರು. ಬಸವೇಶ್ವರನು ಸಹ ಆತನ ಮಹಿಮೆಯನ್ನು ಕೇಳಿ ತಿಳಿದು ಆತನಲ್ಲಿಗೆ ಬಂದು ನಮಸ್ಕರಿಸಿ ದಯೆ ಯನ್ನು ಸಂಪಾದಿಸಿಕೊಂಡು ಹೊರಟು ಹೋಗುತ್ತಿದ್ದನು.

## — ತೆಲುಂಗು ಬೊಮ್ಮಯ್ಯನ ಕಥೆಯು —

ತೆಲುಂಗಿ ಬೊಮ್ಮಯ್ಯನೆಂಬ ಶಿವಭಕ್ತನೊಬ್ಬನು ಅದೇ ಕಲ್ಯಾಣ ಪಟ್ಟ ಣದಲ್ಲಿ ಗುರುಲಿಂಗ ಜಂಗಮಾರ್ಚನಾ ತತ್ಪರನಾಗಿ ಇರುತ್ತಿದ್ದನು. ಇತ್ತಲ್ ಶಿವಾನಂದನೆಂಬ ಮುನಿವರ್ಯನು ಶ್ರೀಶೈಲವೆಂಬ ಪರ್ವತದಲ್ಲಿ ಶಿವಸಮಾಧಿ ಯಲ್ಲಿ ಕುಳಿತು ಇಂದ್ರಿಯ ವ್ಯಾಪಾರಗಳನ್ನು ಬಿಟ್ಟು ಈ ಲೋಕವನ್ನೇ ಮರೆತು ಜಡೆಗಳು ಬಳ್ಳಿಯಂತೆ ಹಬ್ಬಲು, ಉಗುರುಗಳು ಬೇರುಗಳಂತೆ ಭೂಮಿಗಿಳಿಯಲು, ಅಂತರ್ದೃಷ್ಟಿಯೋಗದಿಂದ ಸಮಾಧಿಸ್ಥನಾಗಿ ತಪಸ್ಸನ್ನಾ ಚರಿಸುತ್ತಿದ್ದನು. ಆ ಋಷಿಯ ಶಿಷ್ಯನೊಬ್ಬನು ಗಡ್ಡೆಗೆಣಸುಗಳನ್ನು ತರುವ ದಕ್ಕಾಗಿ ಅರಣ್ಯಗಳಿಗೆ ಹೋಗುತ್ತಿರಲು, ವಿಲಾಸಿಗಳಾದ ಗಂಧರ್ವರು ತಮ್ಮ ಸ್ತ್ರೀಯರೊಡನೆ ವಿನೋದದಿಂದ ಕೂಡಿಕೊಂಡು ತಿರುಗಾಡುತ್ತ ಅಲ್ಲಿಗೆ ಬರಲು ತಪೋನಿಯಮದಿಂದಿರುವ ಈ ಋಷಿಯನ್ನು ನೋಡಿ ಆಶ್ಚರ್ಯದಿಂದ ಹಾಸ್ಯ ಮಾಡುತ್ತ ಇದೊಂದು ಮುದಿಕರಡಿ ಎಂದು ನಗುತ್ತಿರುವದನ್ನು ನೋಡಿದ ಆ ಋಷಿಯ ಶಿಷ್ಯನು ಕೋಪದಿಂದ ಎಲೈ ಕಾಮಾಂಧರಾದ ಗಂಧರ್ವರೇ, ನೀವು ಯೌವ್ವನದ ಕೊಬ್ಬಿನಿಂದ ಮಹಿಮಾನ್ವಿತನಾದ ಈ ಋಷಿಯ ತಪಶಕ್ತಿಯನ್ನು ತಿಳಿಯದೆ ಮುದಿಕರಡಿ ಎಂದು ಹೇಳಿದ್ದರಿಂದ "ನೀವು ಭೂಲೋಕದಲ್ಲಿ ಕರಡಿ ಗಳಾಗಿಯೇ" ಹುಟ್ಟಿರಿ. ಎಂದು ಶಾಪವನ್ನು ಕೊಡಲು ಅವರು ಭಯದಿಂದ ನಡುಗಿ ಆತನ ಪಾದಗಳಿಗೆ ನಮಸ್ಕರಿಸಿ ಅತ್ಯಂತ ವಿನಯದಿಂದ ಹೇ ಮುನಿ

ವರಾ, ಕಮಲದ ಸುವಾಸನೆಯನ್ನು ಕಪ್ಪೆಗಳೂ, ಹಂಸದ ಮಹಿಮೆಯನ್ನು ಇ
ಪಕ್ಷಿಗಳೂ, ಸೂರ್ಯನ ತೇಜಸ್ಸನ್ನು ಗೂಬೆಗಳೂ, ಸಿಂಹದ ಸಾಮರ್ಥ್ಯವನ್ನು
ನರಿಗಳೂ ಕಾಣಲು ಅಯೋಗ್ಯರಾಗಿರುವಂತೆ ಮದಾಂಧರಾದ ನಾ
ಮಹಿಮಾಶಾಲಿಯಾದ ಈ ಋಷಿವರನ ಮಹಿಮೆಯನ್ನು ಕಾಣದಾದ್ದ
ಆದ್ದರಿಂದ ನಾವು ಮಾಡಿದ ತಪ್ಪನ್ನು ಕ್ಷಮಿಸಿ ನಿಶ್ಯಾಪವನ್ನು ಬೇಡಲು
ಗಂಧರ್ವರೇ, ಕಲ್ಯಾಣ ಪಟ್ಟಣದಲ್ಲಿರುವ ಮಹಾಶಿವಶರಣ ತೆಲು
ಬೊಮ್ಮಯ್ಯನ ಹಸ್ತದಿಂದ ನಿಮಗೆ ಮರಣವುಂಟಾದರೆ ಸಪ್ತರಾಕ್ಷಸರಿಗೆ
ರನ ಹಸ್ತದಿಂದ ಮುಕ್ತಿಯು ದೊರೆತ ಪ್ರಕಾರ ನಿಮಗೂ ಮುಕ್ತಿಯಾ
ದೆಂದು ಹೇಳಲು ಅವರು ಅದೇ ಮೇರೆಗೆ ಕಲ್ಯಾಣ ಪಟ್ಟಣದ ಸಮೀ
ಕಾಡಿನಲ್ಲಿ ಕರಡಿಗಳಾಗಿ ಹುಟ್ಟಿ ತೆಲುಂಗು ಬೊಮ್ಮಯ್ಯನು ಬಂದು ಈ ನೀ
ಜನ್ಮವನ್ನು ತಪ್ಪಿಸಿ ಯಾವಾಗ ನಮ್ಮ ಶಾಪವನ್ನು ಕಳೆಯುವನೋ ಎ
ಹುಡುಕುತ್ತ ಅಲೆದಾಡುತ್ತಿದ್ದರು. ಹೀಗಿರಲು ಒಂದಾನೊಂದು ದಿ
ಬೊಮ್ಮಯ್ಯನು ಶಿವಪೂಜೆಗಾಗಿ ಪತ್ರಿ-ಪುಷ್ಪಗಳನ್ನು ಹುಡುಕುತ್ತ
ಅರಣ್ಯದಲ್ಲಿ ಅಲೆದಾಡುತ್ತಿರುವಾಗ ಕರಡಿಗಳು ಆತನನ್ನು ಕಂಡು
ಶಿಷ್ಯನು ಹೇಳಿದ್ದ ಗುರುತುಗಳಿಂದ ಈತನೇ ತೆಲುಂಗು ಬೊಮ್ಮಯ್ಯನೆ
ನಿಶ್ಚಯಿಸಿ ಅವೆಲ್ಲವುಗಳೂ ಬಂದು ಆತನ ಸುತ್ತಲೂ ಮುತ್ತಿಕೊಂಡವು.
ಗಳಲ್ಲಿ ಒಂದು ಕರಡಿಯು ಮುಂದೆ ಬಂದು ನಮಸ್ಕಾರಮಾಡಿ ಮ
ಸ್ವಾಮೀ, ಶ್ರೀಶೈಲದಲ್ಲಿ ತಪೋನಿಷ್ಠನಾಗಿದ್ದ ಒಬ್ಬ ಋಷಿಯನ್ನು ತಿಳಿಯ
ನಾವು ಕರಡಿ ಎಂದು ನುಡಿದ ತಪ್ಪಿಗಾಗಿ ನಮಗೆ ಈಗ ಈ ಜನ್ಮ ಬಂದಿ
ನಾವೆಲ್ಲರೂ ತಮ್ಮ ಹಸ್ತಗಳಿಂದ ಮೃತರಾದರೆ ಕೂಡಲೇ ಮೋಕ್ಷವುಂಟಾ
ವದೆಂದು ನಿಶ್ಯಾಪವಾಗಿದೆ. ಆದ್ದರಿಂದ ತಾವು ನಮ್ಮಗಳ ಬೇಟೆಯಾಡಿ ನ
ಗಳಿಗೆ ಮೋಕ್ಷವನ್ನು ಕೊಟ್ಟು ಈ ನೀಚ ಜನ್ಮವನ್ನು ಹೋಗಲಾಡಿಸಬೇಕೆಂ
ಬೇಡಿಕೊಂಡವು. ಅವನ್ನು ಕೇಳಿ ಮನಸ್ಸಿನಲ್ಲಿ ಯೋಚಿಸಿ ತನ್ನ ಜ್ಞಾ
ದೃಷ್ಟಿಯಿಂದ ತಿಳಿದುಕೊಂಡು ಒಪ್ಪಿಗೆಕೊಟ್ಟು, ಮನೆಗೆ ಬಂದು ಲಿಂಗ, ಜಂ
ಮಾರ್ಚನೆ ನೆರವೇರಿಸಿ ಆ ದಿವಸ ಸುಖವಾಗಿ ಕಳೆದು ಮರುದಿವಸ ನಸುಕಿ
ಎದ್ದು ಈಶ್ವರನನ್ನು ಪೂಜಿಸಿ ಪ್ರಸಾದವನ್ನು ಸ್ವೀಕರಿಸಿ ಬೇಟೆಗೆ ಬೇಕಾದ ಹ
ರಂಗಿ, ಬಾಣ, ಬಿಲ್ಲು, ಬತ್ತಳಿಕೆಗಳನ್ನು ತೆಗೆದುಕೊಂಡು ಕಾಡಿಗೆ ಹೊರಟ

ಸಂಗಡ ನಾಯಿಗಳನ್ನೂ, ಇತರ ಬೇಟೆಗಾರರನ್ನೂ ಕೂಡಿಕೊಂಡು ಅರಣ್ಯ ವನ್ನು ಹೊಕ್ಕು ಬಿಲ್ಲುಗಳಿಗೆ ಬಾಣಗಳನ್ನು ಹೂಡಿದರು. ನಾಯಿಗಳನ್ನು ಮೇಲೆ ಬಿಟ್ಟರು. ಗದ್ದಲು ಮಾಡುತ್ತ ಹುಯಿಲೆಬ್ಬಿಸಿದರು. ಆದರೆ ಆ ಕರಡಿ ಗಳು ಇತರ ಬೇಟೆಗಾರರಿಗೆ ಸಿಕ್ಕದೆ ಬೊಮ್ಮಯ್ಯನನ್ನೇ ಹುಡುಕಿಕೊಂಡು ಬಂದು ನಿಂತುಕೊಂಡವು. ಆಗ ಬೊಮ್ಮಯ್ಯನು ತನ್ನ ಬಾಣಗಳಿಂದ ಹೊಡೆದು ಅವುಗಳನ್ನು ಕೊಂದು ಹಾಕಿದನು. ಆಗ ಆ ಕರಡಿಗಳೆಲ್ಲ ಗಂಧರ್ವ ರಾಗಿ ಬೊಮ್ಮಯ್ಯನ ಪಾದಗಳಿಗೆರಗಿ ಸ್ವಾಮೀ, ತಮ್ಮ ದಯೆಯಿಂದ ನಾವು ಧನ್ಯರಾದೆವು. ನಮ್ಮ ಶಾಪವು ಕಳೆದು ಹೋಯಿತು. ಎಂದು ಹೊಗಳುತ್ತ ಸಿದ್ಧವಾಗಿದ್ದ ಪುಷ್ಪಕ ವಿಮಾನದಲ್ಲಿ ಕುಳಿತು ಶಿವಲೋಕಕ್ಕೆ ಹೊರಟು ಹೋದರು. ಈ ತೆರನಾಗಿ ಬೊಮ್ಮಯ್ಯನು ಆ ಕಾಡಿನಲ್ಲಿದ್ದ ಕರಡಿಗಳನ್ನೆಲ್ಲ ಬೇಟೆಯಾಡಿ ಮುಗಿಸಿದನು. ಈ ವಾರ್ತೆಯನ್ನು ಕೇಳಿ ಅರಸು ಬಿಜ್ಜಳನು ತನ್ನ ಪರಿವಾರಸಮೇತ ಬಂದು ಬೊಮ್ಮಯ್ಯನ ಕೃತ್ಯವನ್ನು ಕಂಡು ಸಂತುಷ್ಟನಾ ದನು. ಆಗ ಭಕ್ತರುಗಳು ಈತನು ವಿವೇಕವೆಂಬ ಈಟಿಯಿಂದ ಮೋಹವೆಂಬ ಸಿಂಹವನ್ನೂ, ಜ್ಞಾನವೆಂಬ ಖಡ್ಗದಿಂದ ಅಜ್ಞಾನವೆಂಬ ಆನೆಯನ್ನೂ, ಶಿವ ಭಕ್ತಿಯೆಂಬ ಚಾಕುವಿನಿಂದ ಸಂಸಾರವೆಂಬ ಜಿಂಕೆಯನ್ನೂ, ನಿರಹಂಕಾರವೆಂಬ ಕಠಾರಿಯಿಂದ ಮದವೆಂಬ ಹಂದಿಯನ್ನೂಕೊಂದು, ಆಸೆಯೆಂಬ ಕೋಣಗಳನ್ನು ಧ್ಯಾನದಿಂದಲೂ, ದುರಾಚಾರಗಳೆಂಬ ಕರಡಿಗಳನ್ನು ವೀರಶೈವಾಚಾರವೆಂಬ ಶೂಲದಿಂದಲೂ, ಇಂದ್ರಿಯ ಕರ್ಮಗಳೆಂಬ ಸಾರಂಗಗಳನ್ನು ವೈರಾಗ್ಯವೆಂಬ ಕೊಡಲಿಯಿಂದಲೂ, ಪರವಾದಿಗಳನ್ನು ಮಹಿಮೆ ಎಂಬ ಗದೆಯಿಂದಲೂ ಯಾವಾಗಲೂ ಬೇಟೆಯಾಡುತ್ತಿರುವನೆಂದು ಹೊಗಳುತ್ತಿದ್ದರು. ಆ ಕಾಲದಲ್ಲಿ ಬಸವೇಶ್ವರನು ಬಂದು ಬೊಮ್ಮಿದೇವನ ಪಾದಗಳಿಗೆ ನಮಸ್ಕರಿಸಿ ತಮ್ಮ ಪಾದ ಧೂಳಿ ಧರಿಸಿದ ಕ್ರಿಮಿಕೀಟಕಗಳೂ ಮೋಕ್ಷವನ್ನು ಹೊಂದುವವು. ಎಂದು ಶಿವಶರಣರು ಹೇಳುತ್ತಿರುವಾಗ ನೀವು ಕೊಂದ ಕರಡಿಗಳಿಗೆ ಮುಕ್ತಿಯಾಗುವ ದರಲ್ಲಿ ಆಶ್ಚರ್ಯವೇನು? ಎಂದು ಹೊಗಳಿ ಮನೆಗೆ ಬಂದು ಗುರುಲಿಂಗ ಜಂಗ ಮಾರ್ಚನಾತತ್ಪರನಾಗಿದ್ದನು.

## — ಬಸವೇಶ್ವರನ ಶಿವಯೋಗ ನಿದ್ರಾಮುದ್ರೆ —

ವೀರಶೈವ ಆಚಾರ ಸಮುದ್ರವನ್ನು ಉಕ್ಕೇರಿಸಲು ಹುಣ್ಣಿಮೆಯ ಪೂರ್ಣ ಚಂದ್ರನಂತೆ ಇರುವ ಬಸವೇಶ್ವರನು ಈ ರೀತಿಯಾಗಿ ಗುರು-ಲಿಂಗ ಜಂಗಮಾ ರ್ಚನಾ ತತ್ಪರನಾಗಿ ಹೊಳೆಯುತ್ತ ಎಂದಿನಂತೆ ಒಂದುದಿವಸ ಲಿಂಗ ಪೂಜೆ ಪ್ರಾರಂಭಿಸಿ ಶಿವ ಮಂತ್ರಗಳನ್ನು ಧ್ಯಾನಮಾಡುತ್ತ ಇಷ್ಟಲಿಂಗವನ್ನು ಕ ರದಲ್ಲಿಟ್ಟು ಆ ಲಿಂಗದಲ್ಲಿ ದೃಷ್ಟಿಯನ್ನೂ, ದೃಷ್ಟಿಯಲ್ಲಿ ಮನಸ್ಸನ್ನೂ, ಮನ ನಲ್ಲಿ ಭಾವವನ್ನೂ, ಆ ಭಾವದಲ್ಲಿ ತನ್ನ ಇಷ್ಟಲಿಂಗವನ್ನೂ ಏಕಮು ಅದರಿಂದ ಉಂಟಾದ ಆನಂದಾಮೃತವನ್ನು ಪಾನಮಾಡಿ ಆನಂದಾಶ್ರುಗ ನೇತ್ರಗಳು ತುಂಬಿಕೊಂಡಿರಲು ಮೈಯುಬ್ಬಿ ರೋಮಾಂಚನವನ್ನು ಹೊ ಶಿವಯೋಗ ಸಮಾಧಿಯಲ್ಲಿ ಕುಳಿತಿದ್ದನು. ಇಂತು ಯೋಗ ಸಮಾಧಿಯಲ್ಲಿ ಬಸವೇಶ್ವರನ ಹಸ್ತಗಳು ಸಾತ್ವಿಕ ಭಾವವನ್ನು ಹೊಂದಿ ನಡುಕವೇರಿ ಇ ಕೆಲಸಗಳಿಗೆ ಅಗೋಚರಗಳಾದವು. ಸಂತೋಷ ಬಿಂದುಗಳು ಕಣ್ಣುಗ ತುಂಬಲು ಲಿಂಗದರ್ಶನವೂ ಭಂಗವಾಯಿತು. ಕುತ್ತಿಗೆಯು ಗದ್ಗದ ಯುಕ್ತವಾಗಿ ಸ್ತೋತ್ರಪಾಠವನ್ನು ಮರೆತುಬಿಟ್ಟಿತು. ಪರವಶತೆಯಿಂದ ರವು ಲಿಂಗಾಲಿಂಗನ ಸಂಗವನ್ನು ಕಾಣದಾಯಿತು. ಸ್ಫಟಿಕಮಯ ಕಲ ಮಧ್ಯಭಾಗದಲ್ಲಿ ಹೊಳೆಯುತ್ತಿರುವ ದೀಪದಂತೆ ಬಸವೇಶ್ವರನು ಅಂತರ್ಬಾ ವೃತ್ತಿಗಳೆರಡರಲ್ಲಿಯೂ ಹೊಳೆದು ತೇಜೋಮಯನಾದನು. ಶಿವಲಿಂ ಕಾಂತಿಯೆಂಬ ಬೆಳದಿಂಗಳು ಆವರಿಸಲು ಮೈಯೆಂಬ ಚಂದ್ರಕಾಂತದ ಶಿಲೆ ನೀರನ್ನು ಸುರಿಸುತ್ತಿರುವಂತೆ ಆನಂದಭಾಷ್ಪಗಳು ಉಕ್ಕಿದವು. ಈ ತೆರದಿ ಬಸವೇಶ್ವರನು ಒಳಗೂ ಹೊರಗೂ ಅಮೃತವಾದ ಭಕ್ತಿರಸದಿಂದ ಒಂ ಕೂಡಿ ಬಾಹ್ಯವ್ಯಾಪಾರಗಳನ್ನು ತೊರೆದು ಶಿವಾನಂದ ಸಾಗರದಲ್ಲಿ ಮು ದ್ದನು. ಹಾಗೂ ಒಂದು ಕನ್ನಡಿಯ ಎದುರಿಗೆ ಮತ್ತೊಂದು ಕನ್ನಡಿಯ ಪ್ರತಿಫಲಿಸಿ ಹೊಳೆಯುವಂತೆ ತನ್ನಲ್ಲಿ ಪರಶಿವನೂ, ಪರಶಿವನಲ್ಲಿ ತಾನ ಪ್ರಕಾಶಗೊಂಡು ಮೆರೆಯುತ್ತಿದ್ದನು. ಪಸರಿಸಿದ್ದ ಕಿರಣಗಳನ್ನೆಲ್ಲ ಸೆಳೆ ಕೊಂಡು ಸಮುದ್ರದಲ್ಲಿ ಮುಳುಗಿ ಹೋಗುವ ಸೂರ್ಯನಂತೆ ಬಸವೇಶ್ವರ ಹೊರಗಿನ ಇಂದ್ರಿಯ ಧರ್ಮಗಳನ್ನೆಲ್ಲ ಈಶ್ವರನಲ್ಲಿಯೇ ಅಡಗಿಸಿ ಬಿಟ್ಟ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಭಾವವನ್ನು ತೊರೆದು ಹೃದಯಕಮ

ದಲ್ಲಿರುವ ಇಷ್ಟಲಿಂಗದಲ್ಲಿ ಬೆರೆದು ಅಭಿನ್ನನಾಗಿ ಪರಮಾನುಭವ ಶಿವಾನಂದದಲ್ಲಿ ಮಗ್ನನಾಗಿರಲು ಚನ್ನಬಸವೇಶ್ವರನು ಅಲ್ಲಿಗೆ ಬಂದು ತನ್ನ ಗುರುವಾದ ಬಸವೇಶ್ವರನ ಯೋಗನಿದ್ರೆಯನ್ನು ನೋಡಿ ಮಾಯಾನಿದ್ರೆಯಿಲ್ಲದವನಾದ ನನ್ನ ಗುರುವಿಗೆ ಪೂರ್ಣಜ್ಞಾನದ ಶಿವಯೋಗ ನಿದ್ರೆಯು ಎರಕವೆರೆದಂತಿರುವದು. ಇಂತಹ ಯೋಗ ಸುಖವು ಮಾಯಾನಿದ್ರಿತರಾದ ಇತರರಿಗೆ ಸಿಗುವದೇ? ಆಹಾ! ಇದೇನು ? ತರಂಗಗಳಿಲ್ಲದ ಶಾಂತ ಸಮುದ್ರವೋ, ಮೋಡಗಳಿಲ್ಲದ ಸ್ವಚ್ಛವಾದ ಆಕಾಶವೋ, ಸ್ವಲ್ಪವೂ ಅಲುಗಾಡದೆ ನಿಂತಿರುವ ಎಲೆಗಳುಳ್ಳ ಮರವೋ ಎಂಬಂತೆ ಈತನ ಯೋಗಮುದ್ರೆಯು ಕಂಗೊಳಿಸುವದು. ಶಿವನನ್ನು ನೋಡುವದಕ್ಕೆ ಭಾಷ್ಪ ಕಣಗಳು ಮಾರ್ಗಗೊಡಲೊಲ್ಲವಲ್ಲಾ ಎಂದು ಜ್ಞಾನ ನೇತ್ರದಿಂದ ನೋಡುತ್ತಿರುವನೋ? ತನ್ನ ತೋಳುಗಳಿಂದ ಶಿವನನ್ನು ತಬ್ಬಿಕೊಂಡರೆ ಆ ಕೋಮಲಾಂಗನು ಕಂದಿ ಹೋಗುವನೆಂದು ಭಾವಿಸಿ ಅಂತರ್ಭಾವನಾರೂಪವಾದ ಬಾಹುಗಳಿಂದ ಆಲಂಗಿಸಿರುವನೋ ಎಂಬಂತೆ ತೋರುವನು. ಕೋಮಲಾಂಗನಾದ ಶಿವನಿಗೆ ಹಸ್ತಪೀಠವು ಕಠಿಣವೆಂದು ತಿಳಿದು ಮೃದುವಾದ ಹೃದಯವನ್ನು ಲಿಂಗಪೀಠವನ್ನಾಗಿ ಏರ್ಪಡಿಸಿ,ಶೀತೋಷ್ಣ ರೂಪಜಲದಿಂದ ಅಭಿಷೇಕ ಮಾಡಿದರೆ ಈಶ್ವರನಿಗೆ ತೊಂದರೆಯಾಗುವದೆಂದು ತಿಳಿದು ಶಾಂತಿ ಜಲದಿಂದ ಅಭಿಷೇಕ ಮಾಡಿ, ಕಮಲಗಳನ್ನು ಧರಿಸಿದರೆ ಅವುಗಳ ಕಠಿಣತೆಯಿಂದ ಶಿವನಪಾದಗಳು ಕಂದಿ ಹೋಗುವವೆಂದು ಅತಿ ಮೃದುಳವಾದ ಸಹಸ್ರಾರ ಕಮಲವನ್ನು ಮುಡಿಸಿ, ಧೂಪ ಹಾಕಿದರೆ ಶಿವನಕಾಂತಿ ಕಪ್ಪಾಗುವದೆಂದು ಇಂದ್ರಿಯ ದಶಾಂಗಗಳನ್ನು ಜ್ಞಾನಾಗ್ನಿಯಲ್ಲಿ ಹೊತ್ತಿಸಿ, ದೀಪವನ್ನು ಬೆಳಗಿದರೆ ಅದರ ತಾಪವನ್ನು ಸಹಿಸಲಾರನೆಂದು ತಿಳಿದು ಎಂದಿಗೂ ನಂದದಿರುವ ತಂಪಾದ ಬೆಳಕನ್ನು ಕೊಡುವ ಆತ್ಮ ದೀಪವನ್ನು ಬೆಳಗಿ, ಷಡ್ರಸಯುತ ಆಹಾರವನ್ನು ನೈವೇದ್ಯ ಮಾಡಿದರೆ ಶಂಕರನು ಮೆಚ್ಚನೆಂದು ತನ್ನ ಪ್ರಾಣವನ್ನೇ ನಿವೇದನೆ ಮಾಡಿ, ಹೊರಗಿನ ಪೂಜೆಯನ್ನು ತೊರೆದು ಆಂತರಿಕ ಪೂಜೆಯಿಂದ ತೃಪ್ತಿಪಡಿಸಿ ತನ್ನ ಸ್ವಾಮಿಯನ್ನು ತಬ್ಬಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿರುವಂತೆ ತೋರುವನು. ದಶ ಇಂದ್ರಿಯಗಳೆಂಬ ಸೇವಕರನ್ನು ಹೊರಗೆ ಕಳಿಸಿ ಮನೋಗೃಹದಲ್ಲಿ ಈಶ್ವರನೆಂಬ ಪತಿಯೊಡನೆ ಕ್ರೀಡಿಸುತ್ತಿರುವನು. ಇಂದ್ರಿಯಗಳನ್ನು ಗೆಲ್ಲುವದೇ ಯಮ, ಸರ್ವವಸ್ತುಗಳನ್ನು ತನ್ನ ಪ್ರಾಣಲಿಂಗವೆಂದು ತಿಳಿಯು

ವಡೇ ನಿಯಮು. ಯೋಗದಲ್ಲಿ ನಿರತನಾಗಿ ಬಾಹ್ಯವೃತ್ತಿ ಬಿಡುವದೇ ಆಸನ, ಅಹಂಕಾರವನ್ನು ತೊರೆದು ಶ್ವಾಸವನ್ನು ರೇಚಕ, ಪೂರಕಗಳಿಂದ ತುಂಬಿ ಸಾವಕಾಶವಾಗಿ ಹೊರಡಿಸುವದೇ ಪ್ರಾಣಾಯಾಮು. ಬಾಹ್ಯವೃತ್ತಿಯ ಇಂದ್ರಿಯ ಧರ್ಮಗಳನ್ನು ಅಂತರ್ಮುಖ ಮಾಡಿಕೊಂಡಿರುವದೇ ಪ್ರತ್ಯಾಹಾರ, ಕನಸಿನಲ್ಲಿ ಕಂಡಂತೆ ಜಂಗಮಲಿಂಗಗಳನ್ನು ನೋಡುತ್ತಿರುವದೇ ಧ್ಯಾನ, ಮೇಲೆ ಹೇಳಿದವುಗಳನ್ನು ಬಿಡದೆ ಆಚರಿಸುವದೇ ಧಾರಣ, ದೃಢವಾದ ಶಿವ ಭಕ್ತಿಯಿಂದ ಶಿವಯೋಗ ನಿದ್ರೆಯಲ್ಲಿ ಮನಸ್ಸನ್ನು ನಿಲ್ಲಿಸುವದೇ ಚಿತ್ತಕ್ಕೆ ಸಮಾಧಿಯು. ಹೀಗೆ ಆಧಾರ ಮೊದಲು ಷಡ್ವರಣಗಳಲ್ಲಿರುವ ಷಡಾಚಾರಲಿಂಗಗಳನ್ನು ನೋಡುತ್ತ ಮುಂಡಿಸಿರುವನು. ಹೃತ್ಕಮಲವೆಂಬ ರತ್ನಮಂಚದಲ್ಲಿ ಭಕ್ತಿ ಎಂಬ ದಾಸಿಯು ಹಾಸಿರುವ ಶ್ರದ್ಧೆ ಎಂಬ ಮೃದುವಾದ ಹಾಸಿಗೆಯಲ್ಲಿ ಪ್ರೀತಿಪಾತ್ರನಾದ ತನ್ನ ಪ್ರಾಣಕಾಂತನನ್ನು ಜ್ಞಾನದೃಷ್ಟಿಯಿಂದ ನೋಡಿ ಅಹಂಭಾವ ಎಂಬ ಲಜ್ಜೆಯನ್ನು ತೊರೆದು ದೃಢೀಭಾವ ಎಂಬ ಭಕ್ತಿಯ ತೋಳುಗಳಿಂದ ಬಿಗಿದಪ್ಪಿ ಆಲಂಗಿಸಿಕೊಂಡಿರುವ ಭಾವವನ್ನು ನೋಡುವದಕ್ಕೂ, ಹೊಗಳುವದಕ್ಕೂ ಶಕ್ಯವಿಲ್ಲವು. ಬಾಹ್ಯ ಆಚರಣೆಗಳಿಲ್ಲದ ಅಹಂಕಾರವಳಿದ ಒಳಗೂ ಹೊರಗೂ ಆನಂದವೇ ತುಂಬಿಕೊಂಡ ಶಿವನೇ ತಾನಾದ ಅಥವಾ ತಾನೇ ಶಿವನಾದ ಗುಣಗಳನ್ನು ವರ್ಣಿಸುವದಕ್ಕೆ ಹಾಗೂ ದ್ವೈತ, ಅದ್ವೈತ ಸಿದ್ಧಾಂತಗಳಿಗೂ, ವೇದ, ಉಪನಿಷತ್ತುಗಳಿಗೂ ಆಗೋಚರವಾದ ಲಿಂಗಾಂಗ ಸಾಮರಸ್ಯವನ್ನು ಹೊಗಳುವದಕ್ಕೆ ಸಾಧ್ಯವಿಲ್ಲ. ಯಾವಾಗಲೂ ಗಂಡನ ಸಂಗಡವೇ ಇದ್ದರೂ ಏಕಾಂತ ಸ್ಥಳದಲ್ಲಿ ಆವನೊಡನೆ ಬೆರೆದು ರತಿಸುಖವನ್ನು ಪಡೆಯುವ ಸಾಧ್ವೀ ಸ್ತ್ರೀಯಂತೆ ಶಿವನು ತನ್ನಲ್ಲಿ ನಿರಂತರ ಇದ್ದರೂ ಇಂದ್ರಿಯ ವ್ಯಾಪಾರಗಳು ಅಡಗಿದ ನಂತರ ಶಿವನಲ್ಲಿ ಬೆರೆದು ಸುಖಿಸುತ್ತಿರುವನು. ಎಂದು ಅನೇಕ ಪ್ರಕಾರವಾಗಿ ಬಸವೇಶ್ವರನ ಮಹಿಮೆಯನ್ನು ಚನ್ನಬಸವೇಶ್ವರನು ಹೊಗಳಿ ಸ್ತೋತ್ರ ಮಾಡುತ್ತಿರುವಷ್ಟರಲ್ಲಿ ಒಬ್ಬ ಜಂಗಮ ಮೂರ್ತಿಯು ಬಸವೇಶ್ವರನ ದರ್ಶನ ಪಡೆಯಲು ಆತನ ಮನೆಗೆ ಬಂದು ಆತನ ಯೋಗನಿದ್ರಾ ವಿಚಾರವನ್ನು ಸೇವಕರ ಮುಖದಿಂದ ಕೇಳಿ ತಿಳಿದು ಹಿಂದಿರುಗಿ ಹೊರಟು ಹೋಗುತ್ತಿರಲು ಜಂಗಮ ಪ್ರಾಣಿಯಾದ ಬಸವೇಶ್ವರನ ಪ್ರಾಣವೂ ಆವನ ಹಿಂದೆಯೇ ಹೊರಟು ಹೋಯಿತು. ಆಗ

ಪರಿಚಾರಕರು ಬಸವೇಶ್ವರನ ಈ ಸ್ಥಿತಿಯನ್ನು ಕಂಡು ಹೆದರಿದರು. ಪ್ರತಿ ದಿವಸದಂತೆ ಸಂಧ್ಯಾ ಕಾಲದಲ್ಲಿ ಮಾಡುವ ಶಿವಶರಣರ ಪೂಜೆಗೆ ಜಂಗಮರು ಬಂದು ಸಾಲಾಗಿ ಕುಳಿತು ಬಸವೇಶ್ವರನ ವರ್ತಮಾನವನ್ನು ಕೇಳಿ ಆಶ್ಚರ್ಯಗೊಂಡು ಹೀಗಾಗಲು ಕಾರಣವನ್ನು ತಿಳಿಯಬೇಕೆನ್ನುವಷ್ಟರಲ್ಲಿ ಚನ್ನಬಸವೇಶ್ವರನು ಬಂದು ಎಲ್ಲ ಜಂಗಮರ ಪಾದಗಳಿಗೆರಗಿ ಹೀಗೆಂದು ಹೇಳಿದನು— ಎಲೈ ಶಿವಭಕ್ತರುಗಳಿರಾ, ನಮ್ಮ ಬಸವೇಶ್ವರನು ಶಿವಪೂಜಾ ಸಮಯದಲ್ಲಿ ಯೋಗನಿದ್ರೆಯಲ್ಲಿರುವಾಗ ಒಬ್ಬ ಜಂಗಮನು ಬಂದು ಚಾರರ ಮುಖದಿಂದ ಈತನು ಯೋಗನಿದ್ರೆಯಲ್ಲಿರುವದನ್ನು ಕೇಳಿ ಹಾಗೆಯೇ ಹೊರಟು ಹೋದನು. ಆಗ ಈ ಬಸವೇಶ್ವರನ ಪ್ರಾಣವೂ ಸಹ ಆತನ ಸಂಗಡವೇ ಪ್ರಯಾಣಮಾಡಿತು. ಈತನಂತೆ ನಡೆಯುವದಕ್ಕೆ ಇತರರಿಗೆ ಹೇಗೆ ಸಾಧ್ಯವಾದೀತು ? ಆತನು ಹೇಳಿದ ಗೀತೆಯನ್ನು ಹೇಳುತ್ತೇನೆ ಕೇಳಿರಿ— ಶಿವಭಕ್ತರಿಗೆ ಲಿಂಗವೇ ಪ್ರಾಣವು. ಆ ಲಿಂಗಕ್ಕೆ ಗುರುವೇ ಪ್ರಾಣವು. ಆ ಗುರುಸ್ವರೂಪನಾದ ಜಂಗಮನೇ ನನಗೆ ಪ್ರಾಣವು ಎಂದು ಹೇಳಿ ಅದರಂತೆ ನಡೆಸುತ್ತ ಬಂದಿರುವ ನಿಮ್ಮಗಳ ಪಾದಕಿಂಕರನಾದ ಬಸವೇಶ್ವರನಿಗೆ ಯಾವದು ತಾನೆ ಅಸಾಧ್ಯವು. ಎಂದು ಆಶ್ಚರ್ಯಯುತರಾಗಿ ಕೊಂಡಾಡುತ್ತಿದ್ದರು. ಮತ್ತು ಚನ್ನಬಸವೇಶ್ವರನು ಉತ್ತಮರಾದ ಸೇವಕರನ್ನು ಕರೆಯಿಸಿ ನೀವು ಈ ಊರನ್ನೆಲ್ಲ ಹುಡುಕಿ ಇಲ್ಲಿಗೆ ಮೊದಲು ಬಂದಿದ್ದ ಜಂಗಮನನ್ನು ಕರೆದುಕೊಂಡು ಬನ್ನಿರಿ ಎಂದು ಹೇಳಿ ಕಳಿಸಲು ಅದರಂತೆ ಆ ಜಂಗಮನನ್ನು ಹುಡುಕಿ ಕರೆತರಲು, ಬಸವೇಶ್ವರನ ಪ್ರಾಣವೂ ಬಂದು ಅವನ ದೇಹವನ್ನು ಸೇರಿಕೊಂಡಿತು. ಆಗ ಶಿವಶರಣರೆಲ್ಲರೂ ಸಂತೋಷಪಡುತ್ತಿರಲು ಬಸವೇಶ್ವರನು ನಿದ್ರೆಯಿಂದ ತಿಳಿದೆದ್ದು ಆಗಲೇ ಆ ಜಂಗಮರ ಪಾದಸೇವೆಯನ್ನು ಮಾಡಿ ತೀರ್ಥ ಪ್ರಸಾದಗಳನ್ನು ಗ್ರಹಿಸಿ ಸುಖದಿಂದ ಇದ್ದನು.

## — ಕಿನ್ನರ ಬಸವ ಪ್ರಾಣದಾನದ ಕಥೆಯು —

ಚನ್ನಬಸವೇಶ್ವರನು ಶಿವಗಣಂಗಳನ್ನು ಕುರಿತು ಈ ಬಸವೇಶ್ವರನ ಪ್ರಾಣವು ಈ ಮೊದಲು ಒಂದು ಸಾರೆ ಕಿನ್ನರಯ್ಯನ ಪ್ರಾಣದೊಡನೆ ಹೊರಟು ಹೋಗಿತ್ತು ಎಂದು ಆ ಕಥೆಯನ್ನು ಹೇಳತೊಡಗಿದನು. ಇದೇ

ಕಲ್ಯಾಣ ಪಟ್ಟಣದಲ್ಲಿ ವಾಸಮಾಡಿಕೊಂಡು ಇದ್ದ ಕಿನ್ನರಯ್ಯನನ್ನು ತನ್ನ ಪ್ರಾಣದಂತೆ ನೋಡಿಕೊಂಡು ಶಿವಶರಣ ಸೇವಾಧುರೀಣನಾಗಿ ಬಾಳುತ್ತಿರುವ ಬಸವೇಶ್ವರನ ಮನಸ್ಸಿನ ಸ್ಥಿತಿಯನ್ನು ತಿಳಿಯಬೇಕೆಂದು ಯೋಚಿಸಿ ಶಿವನು ಆ ಕಿನ್ನರಯ್ಯನನ್ನು ತನ್ನಲ್ಲಿ ಐಕ್ಯಮಾಡಿಕೊಂಡನು. ಈ ಸಂಗತಿಯನ್ನು ಬಸವೇಶ್ವರನು ಕೇಳಿ ಕಿನ್ನರಯ್ಯನ ಹತ್ತಿರ ಬಂದು ಅವನ ಪ್ರಾಣವು ಹೋಗಿರುವದನ್ನು ನೋಡಿ ಅಯ್ಯೋ ! ಕಿನ್ನರಯ್ಯಾ ! ನನ್ನ ಪ್ರಾಣ ಸಂಜೀವನೇ ! ಭಕ್ತ ಬಂಧುವೇ ! ಶಿವಭಕ್ತಿ ಸಂಪನ್ನನೇ ! ನೀನು ಇಷ್ಟು ಬೇಗ ಯಾರಿಗೂ ಹೇಳದಂತೆ ಕೈಲಾಸವನ್ನು ಸೇರಬೇಕೇ ! ನಿನ್ನ ಭಕ್ತಿ, ವಿದ್ಯಾ, ವಿನಯ, ಗುಣ ರೂಪ, ಸೌಂದರ್ಯಾದಿಗಳು ನನ್ನ ಹೃದಯದಲ್ಲಿ ಬೆಸುಗೆ ಹಾಕಿದಂತೆ ನಿಂತುಕೊಂಡು ನೋಯಿಸುವವು. ಈ ದಿವಸ ಆಶ್ಚರ್ಯಕರ ಸಂಗತಿಯು ನಡೆಯಿತು. ನನ್ನೊಡನೆ ಏಕೆ ಮಾತಾಡುವದನ್ನು ಬಿಟ್ಟಿರುವೆ. ಮುದ್ದು ಮುಖದಲ್ಲಿರುವ ನಿನ್ನ ಕಣ್ಣುಗಳನ್ನು ತೆರೆದು ನೋಡು. ಎಂದು ಬಸವೇಶ್ವರನು ನಾನಾ ವಿಧವಾಗಿ ಗೋಳಿಡುತ್ತಿರಲು ಇದನ್ನು ಪಡಿಯರ ಬಾಚಯ್ಯನೆಂಬ ಸೇವಕನು ನೋಡಿ ಶಿವಗಣಂಗಳ ಅಪ್ಪಣೆ ಪಡೆದುಕೊಂಡು ಶಿವಗಣ ಸಮೂಹಕ್ಕೆ ಪಟ್ಟದಾನೆಯಂತೆ ಇದ್ದ ಮಡಿವಳಮಾಚಯ್ಯನ ಹತ್ತಿರ ಬಂದು ನಮಸ್ಕರಿಸಿ ಕಿನ್ನರಯ್ಯನ ಮರಣವನ್ನೂ, ಬಸವೇಶ್ವರ ಪ್ರಲಾಪವನ್ನೂ ಬಿನ್ನವಿಸಲು ಆತನು ಶಿವಶರಣರು ಬಂದಿರುವರೋ ? ಎಂದು ಕೇಳಿದನು. ಅದಕ್ಕೆ ಆ ಚಾರನು ಸಕಳೇಸ ಮಾದರಸ ಮೊದಲಾದ ಸರ್ವ ಶಿವ ಗಣಂಗಳು ಬಂದಿರುವರೆಂದು ನುಡಿಯಲು ಅಹಾ ! ಬಸವೇಶನಂತಹ ವಿವೇಕಶಾಲಿಯು ಈ ಲೋಕದಲ್ಲಿರುವನೇ ! ಭಕ್ತರು ಅಳಿದು ಹೋದರೆ ಅಳುವದು ಯುಕ್ತವೇ ! ಈತನು ತನಗೆ ಜಂಗಮಪ್ರಾಣವನ್ನು ಹೇಳಿ ಹಾಡಿದ ಗೀತೆಗಳನ್ನು ಮರೆತುಬಿಟ್ಟರೂ ಅದನ್ನು ಚನ್ನಾಗಿ ನೆರವೇರಿಸಿದನು. ಈಶ್ವರನು ತನಗೆ ಹೇಳಿದ ಮಾತನ್ನೂ, ತಾನು ಅವನ ಬಳಿಯಲ್ಲಿ ಮಾಡಿದ ಪ್ರತಿಜ್ಞೆಯನ್ನೂ ಎಲ್ಲಿಯೋ ಮೂಲೆಗೆ ಹಾಕಿದನು. ಹಾಗಿದ್ದರೆ ಇತರ ಗಣ ಸಮೂಹದ ಭಕ್ತರಂತೆ ಸುಮ್ಮನೆ ಇರದೆ ಪ್ರತಿಜ್ಞೆಯನ್ನು ಏಕೆ ಮಾಡಿದನು ? ಅಹಾ ! ಇವನೆಂತಹ ಕರುಣಾಳುವು ! ಕಿನ್ನರಯ್ಯನ ಗುಣಗಳನ್ನು ಹೊಗಳುವದೇ ಶಿವಭಕ್ತಿಯ ಸಾರವೋ? ಈ ಬಸವೇಶ್ವರನಂತೆ ಅವನ ಗುಣಗಳನ್ನು ನೆನೆದು ಅಳುವದನ್ನು ನಾನು ತಿಳಿಯಲಾರೆನೇ ?

ನಾನು ಬರುವದರಿಂದ ಪ್ರಯೋಜನವೇನು? ಇಲ್ಲ ಸರ್ವಥಾ ಬರುವದಿಲ್ಲ ಎಂದು ಹೇಳಿ ಸುಮ್ಮನಾದನು. ಮಾಚಿದೇವನ ಈ ಮಾತುಗಳನ್ನು ಕೇಳಿ ಸೇವಕನು ಹೆದರಿ ಹಿಂದಕ್ಕೆ ಬಂದು ಶಿವಗಣ ಸಮೂಹಕ್ಕೆ ಈ ವಾರ್ತೆಯನ್ನು ಹೇಳಲು ಅದನ್ನು ಕೇಳಿದ ಕೂಡಲೇ ಬಸವೇಶ್ವರನು ಬೇಗನೆ ಎದ್ದು ಆಳುವ ದನ್ನು ಬಿಟ್ಟು ತನ್ನ ಪ್ರತಿಜ್ಞೆಯಂತೆ ಆ ಕಿನ್ನರಯ್ಯನ ಪ್ರಾಣವಿರುವಲ್ಲಿಗೆ ತನ್ನ ಪ್ರಾಣವನ್ನೂ ಕಳಿಸಿದನು. ಇದನ್ನು ನೋಡಿ ಭಕ್ತರೆಲ್ಲರೂ ಆಹಾ! ಮಾಚಿ ದೇವನು ಹೇಳಿದಂತೆ ತನ್ನ ಪ್ರತಿಜ್ಞೆಯನ್ನು ನೆರವೇರಿಸುವದಕ್ಕಾಗಿ ಸ್ವಲ್ಪವೂ ತಡಮಾಡದೆ ಬಸವೇಶನು ತನ್ನ ಪ್ರಾಣವನ್ನೂ ಕಳುಹಿಸಿದನು. ಇಂತಹ ಕೃತಿಯನ್ನು ಹಿಂದೆ ಕಂಡವರೂ, ಕೇಳಿದವರೂ ಇಲ್ಲ ಎಂದು ಹೊಗಳುತ್ತ ಮತ್ತೊಂದು ಸಾರೆ ಈ ವಾರ್ತೆಯನ್ನು ಮಾಚಿದೇವನಿಗೆ ತಿಳಿಸಿ ಬರುವಂತೆ ಮಡಿಯವ ಬಾಚಯ್ಯನನ್ನು ಕೇಳಿಕೊಳ್ಳಲು ಆತನು ತೀವ್ರವಾಗಿ ಮಾಚಯ್ಯನ ಬಳಿಗೆ ಬಂದು ಬಸವೇಶ್ವರನು ತನ್ನ ಪ್ರಾಣವನ್ನು ಕಿನ್ನರಯ್ಯನ ಪ್ರಾಣದ ಬಳಿಗೆ ಕಳಿಸಿರುವದನ್ನು ವಿವರಿಸಿದನು. ಇದನ್ನು ಕೇಳಿ ಮಾಚಿದೇವನು ಬಹು ಸಂತೋಷದಿಂದ ಗಣಸಮೂಹದೊಡನೆ ಬಸವೇಶ್ವರನ ಬಳಿಗೆ ಬರುತ್ತ ಭಲಾ! ಬಸವೇಶಾ! ಜಂಗಮ ಪ್ರಾಣಿಯೇ! ಶಹಬಾಸ್! ಭಕ್ತ ಶಿಖಾ ಮಣಿಯೇ ಭಾಪು! ನೀನು ನುಡಿಯುವದಕ್ಕೆ ಅಸಾಧ್ಯವಾದ ಪ್ರತಿಜ್ಞೆಯನ್ನು ಮಾಡಿ ಅದರಂತೆ ನಡೆದೆ! ಅದರಂತೆ ನಡೆಯುವದು ಮತ್ತೊಬ್ಬರಿಗೆ ಅಸಾಧ್ಯ ಎಂದು ಹೊಗಳುತ್ತ ಶಿವತೇಜೋರಾಶಿಯಾಗಿ ಹೊಳೆಯುತ್ತಿದ್ದನು. ಇಂತಪ್ಪ ಮಾಚಿದೇವನು ತನ್ನನ್ನು ಕಂಡು ನಮಸ್ಕರಿಸುವ ಶಿವಶರಣರಿಗೆ ಪ್ರತಿಯಾಗಿ ನಮಸ್ಕಾರಮಾಡುತ್ತ ಕಿನ್ನರಯ್ಯನ ದೇಹದ ಬಳಿಗೆ ಬಂದು ಅಯ್ಯಾ, ನಿನ್ನ ಪ್ರಾಣ ಪದಕನಾದ ಬಸವೇಶ್ವರನನ್ನು ತೊರೆದು ನೀನೊಬ್ಬನೇ ನಡೆಯಲು ಹೊರಡಬಹುದೇ? ಈ ಬಸವೇಶ್ವರನು ಪರಶಿವನ ಸನ್ನಿಧಿಯಲ್ಲಿ ಮಾಡಿದ ಶಪಥವನ್ನು ಪೂರ್ಣಮಾಡದೆ ನಿನ್ನ ಸಂಗಡ ಬಂದರೆ ನೀನು ಕರೆದುಕೊಂಡು ಹೋಗಬಹುದೇ? ಉಳಿದ ಭಕ್ತರನ್ನು ತೊರೆದು ನಿಮ್ಮಿ ಬ್ಬರನ್ನು ಮಾತ್ರ ಬರಮಾಡಿಕೊಂಡ ಪರಶಿವನನ್ನು ಭಕ್ತರು ನಂಬುವರೇ? ಬಸವೇಶನು ಇಲ್ಲದ ಮೇಲೆ ಶಿವಮಹಿಮೆಯೂ, ಆ ಮತದ ಆಧಿಕ್ಯವೂ ಈ ಭೂಲೋಕದಲ್ಲಿ ವೃದ್ಧಿ ಹೊಂದುವದೇ? ಬಸವೇಶ್ವರನು ತನ್ನ ಶಪಥ

ವನ್ನು ನೆರವೇರಿಸುವದಕ್ಕಾಗಿ ಹೀಗೆ ಮಾಡಬಾರದಾಗಿದ್ದಿತು. ಸೂರ್ಯ ಕಿರಣಗಳಿಲ್ಲದೆ ಕಮಲಗಳೂ, ಹಗಲಿನ ಸೊಬಗೂ ಮೆರೆಯುವವೇ? ಎಲೈ ಕಿನ್ನರೇಶಾ, ಏಳು ಎಂದು ನುಡಿಯಲು ಮಲಗಿ ನಿದ್ರಿಸಿ ಕನಸು ಕಂಡವನು ಕಣ್ಣನ್ನು ಒರೆಸಿಕೊಂಡು ಮೇಲಕ್ಕೇಳುವಂತೆ ಬಸವೇಶ್ವರನೂ, ಕಿನ್ನರೇಶನೂ ಎದ್ದು ಮಾಚಿದೇವನ ಪಾದಗಳಿಗೆ ನಮಸ್ಕರಿಸಿದರು. ಆಗ ಆ ಮೂವರು ಜನರು ಶಿವಗಣಂಗಳ ಸಭೆಗೆ ಸಾಷ್ಟಾಂಗ ನಮಸ್ಕಾರ ಮಾಡಿ ನಿಂತುಕೊಂಡರು. ಆಗ ಶಿವಶರಣರು ಮಾಚಿದೇವನನ್ನು ನೋಡಿ ಈ ಲೋಕದಲ್ಲಿ ಪರಮತದವರನ್ನು ಸೋಲಿಸಿ ಶಿವಭಕ್ತರನ್ನು ಸಲಹುವದಕ್ಕಾಗಿ ಅವತರಿಸಿದ ಮಹಾ ಮಹಿಮನೇ, ಕರುಣಾನಿಧಿಯೇ, ಶಿವಶರಣರ ಪ್ರಾಣದಾತನೇ, ಜನನ ಮರಣಗಳನ್ನು ಗೆದ್ದ ಮಾಚಿಯಾರ್ಯನೇ, ನೀನು ಬಸವೇಶ, ಕಿನ್ನರೇಶ ಈ ಇಬ್ಬರಿಗೂ ಹೋಗಿದ್ದ ಪ್ರಾಣವನ್ನು ಬರಮಾಡಿಕೊಂಡು ನಮ್ಮಗಳಿಗೆ ಸಂತೋಷವನ್ನುಂಟುಮಾಡಿದೆ. ನಿನ್ನ ಕಠೋರ ಮಾತುಗಳು ಸಹ ಅಮೃತಪ್ರಾಯವಾದ ಮೋಕ್ಷ ಸುಖವನ್ನು ಕೊಡುವವು ಎಂಬುದಕ್ಕೆ ಈ ದಿವಸ ನಡೆದುದೇ ದೃಷ್ಟಾಂತವು. ಎಂದು ಹೊಗಳಲು ಮಾಚಿದೇವನು ಶಿವಶರಣ ಸಮೂಹಕ್ಕೆ ನಮಸ್ಕರಿಸಿ ಸುಮ್ಮನಾದನು. ಶರಣರು ಬಸವೇಶನನ್ನು ಕುರಿತು, ಬಸವರಾಜನೇ, ಈ ಲೋಕದಲ್ಲಿ ಯಾರಾದರೂ ಹಣವನ್ನು ಕೊಡಬಲ್ಲರು. ಆದರೆ ಶರೀರವನ್ನು ಹೇಗೆ ಕೊಟ್ಟಾರು? ಒಂದು ವೇಳೆ ದೇಹವನ್ನು ಕೊಟ್ಟರೂ ಮನಸ್ಸನ್ನು ಕೊಡುವದಕ್ಕಾಗುವದೇ? ಮನಸ್ಸನ್ನು ಕೊಟ್ಟರೂ ಪ್ರಾಣವನ್ನು ಕೊಡಬಲ್ಲರೇ? ಅಥವಾ ಶೌರ್ಯದಿಂದ ಪ್ರಾಣವನ್ನು ಕೊಟ್ಟರೂ ಶಿವಶರಣರ ಪ್ರಾಣದ ಸಂಗಡ ತನ್ನ ಪ್ರಾಣವನ್ನು ಎರಕವೆರೆದು ಕೊಡಲಾಗುವದೇ? ಛೇ! ಛೇ! ಸಾಧ್ಯವಿಲ್ಲವು! ನಿನ್ನ ಭಕ್ತಿಯು ಹೇಳಲಸಾಧ್ಯವಾದುದು. ಪೂರ್ವಕಾಲದಲ್ಲಿ ಲಿಂಗಾಂಗ ಪ್ರಾಣ ಪ್ರತಿಷ್ಠೆಯನ್ನು ಮಾಡಿ ಸತ್ಯೇಶ, ಕೇಶಿರಾಜ, ಚನ್ನಯ್ಯ, ಕಮಳವ್ವೆ, ತುಗಳೂರ ಮಾರಯ್ಯ ಮೊದಲಾದವರು ಪ್ರಖ್ಯಾತರಾಗಿದ್ದರೆಂದು ಕೇಳಿದ್ದೆವು. ಈಗ ನಿನ್ನಲ್ಲಿ ಪ್ರತ್ಯಕ್ಷವಾಗಿ ಜಂಗಮ ಪ್ರಾಣವ್ರತವನ್ನು ನೋಡಿದೆವು. ಲಿಂಗದಲ್ಲಿ ಪ್ರಾಣವಿರುವದು ಹೊಸದಲ್ಲ. ಜಂಗಮದಲ್ಲಿ ಪ್ರಾಣವಿರುವದು ಹೊಸದೂ, ಅಪೂರ್ವವೂ ಆಗಿರುವದು ಎಂದು ಶಿವಶರಣರು ಹೊಗಳುತ್ತಿರಲು ಬಸವೇಶನು ಅವರ

ಧ್ಯಾನವನ್ನು ಮಾಡುತ್ತ ಆನಂದ ತುಂದಿಲನಾಗಿದ್ದನು ಎಂದು ಚನ್ನಬಸವೇಶ್ವರನು ಗಣಸಮೂಹಕ್ಕೆ ಬಿನ್ನವಿಸಿದನು.

## — ಮೋದಾರ ಕೇತಯ್ಯನ ಕಥೆಯು —

ಜಂಗಮರೇ ಸ್ವಾಮಿಯು, ಶಿವಜ್ಞಾನವೇ ಮಂತ್ರಿಯು, ಸದ್ಗುಣವೇ ಮಿತ್ರನು, ಶಿವಮಂತ್ರವೇ ಭಾಂಡಾರವು, ವೀರಶೈವಾಚಾರಗಳೇ ರಾಷ್ಟ್ರವು, ಶಾಂತಿಯೇ ಕೋಟೆಯು, ನಿರ್ಮಲ ಹೊಂದಿದ ಬುದ್ಧಿ ಮೊದಲಾದ ಇಂದ್ರಿಯಗಳೇ ಸೈನ್ಯವು. ಈ ಪ್ರಕಾರ ಏರ್ಪಟ್ಟ ಭಕ್ತಿ ರಾಜ್ಯಕ್ಕೆ ಬಸವೇಶ್ವರನು ದೊರೆಯಾಗಿ ಆನಂದದಿಂದ ಇದ್ದನು. ಒಂದಾನೊಂದು ದಿವಸ ಪರಶಿವನು ಆ ಕಲ್ಯಾಣಪಟ್ಟಣದಲ್ಲಿದ್ದ ಮೋದಾರಕೇತಯ್ಯನೆಂಬ ಶಿವಭಕ್ತನ ಪ್ರಾಣವನ್ನು ತನ್ನಲ್ಲಿ ಐಕ್ಯ ಮಾಡಿಕೊಂಡನು. ಬಸವೇಶ್ವರನು ಕೂಡಲೇ ಗಣಂಗಳ ಸಮೇತನಾಗಿ ಮೋದಾರಕೇತಯ್ಯನ ಮನೆಗೆ ಬಂದು ನಾನಾವಿಧ ವಾದ್ಯಗಳ ಧ್ವನಿಯಿಂದ ದಿಕ್ಕುಗಳು ಘೋರ್ಗರೆಯುವಂತೆ ಮಾಡಿ ಉಘೇ ಎಂದು ಜಯಘೋಷವನ್ನು ಮಾಡುತ್ತಿರುವ ಶಿವಶರಣರನ್ನು ಕಂಡು ನಮಸ್ಕರಿಸಿ ಅವರ ಪಕ್ಕದಲ್ಲಿ ಕುಳಿತು ಮಾತನಾಡುತ್ತ ಆ ಶರಣನು ಮಡಿದ ವಾರ್ತೆಯನ್ನು ಕೇಳುತ್ತ ಮರುಕದಿಂದ ತನ್ನ ಶಪಥವನ್ನು ಸ್ಮರಿಸಿಕೊಂಡು ತನ್ನ ಪ್ರಾಣವನ್ನು ಕಳುಹಿಸಿಕೊಟ್ಟನು. ಗಣಂಗಳು ಇದನ್ನು ತಿಳಿದು ಪಡಿಯರ ಬಾಚಯ್ಯನನ್ನು ಕರೆದು ಕೂಡಲೆ ಈ ವಿವರವನ್ನು ಮಾಚಿದೇವನಿಗೆ ತಿಳಿಸಿ ಅವರನ್ನು ಕರೆದುಕೊಂಡು ಬರುವಂತೆ ಹೇಳಿಕಳಿಸಿದರು. ಆತನು ಬೇಗನೇ ಬಂದು ಮಾಚಿದೇವನನ್ನು ಕಂಡು ನಮಸ್ಕರಿಸಿ ಓ ಸ್ವಾಮಿಗಳೇ, ಮೋದಾರ ಕೇತಯ್ಯನು ಶಿವೈಕ್ಯವಾದದ್ದನ್ನು ನೋಡಿ ಬಸವೇಶನು ಸಹಿಸಲಾರದೆ ತನ್ನ ಪ್ರಾಣವನ್ನು ಬಿಟ್ಟನು. ಇದನ್ನು ನೋಡಿ ಅಲ್ಲಿ ಕೂಡಿದ್ದ ಭಕ್ತರೆಲ್ಲರೂ ನಿಮ್ಮನ್ನು ಧ್ಯಾನಿಸಿಕೊಂಡು ಎಲ್ಲ ವೃತ್ತಾಂತವನ್ನು ತಮಗೆ ತಿಳಿಸಿ ಸಂಗಡ ಕರೆದು ತರುವಂತೆ ನನ್ನನ್ನು ಕಳಿಸಿದ್ದಾರೆ ಎಂದು ಬಿನ್ನವಿಸಲು, ಮಾಚಿದೇವರು ಸಂತೋಷ ಚಿತ್ತರಾಗಿ ಬಸವೇಶನು ಶಿವೈಕ್ಯನಾದ ಭಕ್ತನಿಗಾಗಿ ತನ್ನ ಪ್ರಾಣವನ್ನು ಕಳುಹಿಸಿ ಈಶ್ವರನಿಗಿದ್ದ ಮಾಯಾ ಸಂಬಂಧವಾದ ತೊಡಕನ್ನು ಕತ್ತರಿಸಿದನೇ, ಅವನು ತನ್ನ ಭಾಷೆಯನ್ನು ತಪ್ಪಿಲ್ಲದಂತೆ ನೆರವೇರಿಸಿದನು.

ಅಗ್ನಿಯು ಆರಿಹೋದರೂ, ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮೂಡಿದಷ್ಟು, ನಕ್ಷತ್ರಗಳು ನೆಲಕ್ಕುರುಳಿದರೂ, ಮೇರು ಪರ್ವತವು ನಡೆದುಬಂದರೂ, ಸಮು ದ್ರವು ಉಕ್ಕಿ ಹರಿದರೂ ಬಸವೇಶನ ವಾಕ್ಯ ಸುಳ್ಳಾಗಲಾರದು. ಎಂದು ಸ ಗರದಿಂದ ಬಂದು ನಮಸ್ಕರಿಸಲು ಶಿವಗಣಂಗಳು ಬನ್ನಿರಿ ಎಂದು ಕೈಹಿಡಿದು ಕುಳ್ಳಿರಿಸಲು ಕೆಲವರು ಜಂಗಮರು ಬಸವೇಶನಮಹಿಮೆಯನ್ನು ನೋಡಿದಿರಾ! ತಾನು ಆಡಿದ ಮಾತನ್ನು ನೆರವೇರಿಸಲು ಮಡಿದುಹೋದ ಭಕ್ತನ ಸಂಗ ತನ್ನ ಪ್ರಾಣವನ್ನು ಕಳಿಸಿದನು. ಇಂತಹ ಮಹಿಮೆಯನ್ನು ನಾವು ಎಂದೂ ಕಂಡು, ಕೇಳಿ ಅರಿಯೆವು. ಎಂದು ನುಡಿಯುತ್ತಿರುವಷ್ಟರಲ್ಲಿ ಬೇರೆ ಕೆಲವರು ಓ ಜಂಗಮ ಕಲ್ಪವೃಕ್ಷನಾದ ಬಸವೇಶನೇ, ಕಲ್ಯಾಣರೂಪನಾದ ನೀನು ವಾಸ ಮಾಡುತ್ತಿದ್ದುದರಿಂದಲೇ ಇದು ಕಲ್ಯಾಣಪಟ್ಟಣವಾಗಿತ್ತು. ಈಗ ನೀನಿಲ್ಲದ್ದ ರಿಂದ ಈ ಪುರವು ಅಮಂಗಲಪುರಿಯೆಂದೆನಿಸಿದೆ. ಈ ಭೂಲೋಕದಲ್ಲಿ ನೀನಿಲ್ಲ ದ್ದರಿಂದ ಶಿವಾಚಾರ ಸಂಪತ್ತು, ಶಿವಭಕ್ತಿ, ಶಿವಜ್ಞಾನ ಅಭಿವೃದ್ಧಿ, ಶಿವಧ್ಯಾನಾ ಸಕ್ತಿ ಎಂಬಿವು ನಾಶವಾಗುವವು. ಗುರು, ಲಿಂಗ, ಜಂಗಮ ತೃಪ್ತಿಯು ಆಳವ ಲಾರದು. ತಾವರೆಯಿಲ್ಲದ ಕೊಳವೂ, ಸೂರ್ಯನಿಲ್ಲದ ಹಗಲೂ, ನೀತಿ ಯಿಲ್ಲದ ಬಾಳೂ, ಕವಿತ್ವವಿಲ್ಲದ ವಿದ್ಯೆಯೂ, ಚಂದ್ರನಿಲ್ಲದ ರಾತ್ರಿಯೂ, ಮಾವು ಇಲ್ಲದ ವನವೂ, ರಾಜನಿಲ್ಲದ ರಾಜ್ಯವೂ, ಮಿಂಚಿಲ್ಲದ ಮೋಡವೂ, ನೇತ್ರಗಳಿಲ್ಲದ ಮುಖವೂ, ವೇದವಿಲ್ಲದ ಬ್ರಾಹ್ಮಣನೂ, ಸೊಗಸಾಗಿ ಕಾಣ ಲಾರವು. ಸೂರ್ಯನಿಲ್ಲದೆ ಕಮಲಗಳೂ, ಚಂದ್ರನಿಲ್ಲದೆ ನೈದಿಲೆಗಳೂ ಅರ ದಿರುವ ಹಾಗೆ ಬಸವೇಶನಿಲ್ಲದೆ ಜಂಗಮರಿಗೆ ಸುಖವುಂಟೇ ? ಓ ಶಿವಶರಣ ಆನಂದಸಾಗರನಾದ ಬಸವೇಶನೇ, ನಾಳೆಯಿಂದ ಶಿವಶರಣರು ಮತ್ತಾರನ್ನು ಬೇಡುವರು ? ಆರೊಡನೆ ವಿನೋದಿಸುವರು ? ಆರನ್ನು ಹೊಗಳುವರು ? ಆರಲ್ಲಿ ತಮ್ಮ ಇಷ್ಟಾರ್ಥಗಳನ್ನು ಬೇಡುವರು ? ನೀನು ಮನಸ್ಸನ್ನು ಶಿವನ ಪಾದಾರವಿಂದಗಳಲ್ಲಿಯೂ, ಕೀರ್ತಿಯನ್ನು ದಶದಿಕ್ಕುಗಳಲ್ಲಿಯೂ, ಶಿವಜ್ಞಾನ ವನ್ನು ಚನ್ನಬಸವೇಶ್ವರನಲ್ಲಿಯೂ, ಪ್ರಾಣವನ್ನು ಮೇದಾರ ಕೇತಯ್ಯ ನಲ್ಲಿಯೂ ಇಟ್ಟಿರುವಹಾಗೆ ನಿನ್ನಲ್ಲಿದ್ದ ಉದಾರ ಗುಣವನ್ನು ಯಾರಿಗೆ ಕೊಟ್ಟು ಹೋಗಿರುವೆ ಹೇಳು ಎಂದು ನಾನಾವಿಧವಾಗಿ ಹಂಬಲಿಸಿ ಹಲಬುತ್ತಿದ್ದರು. ಆಗ ಮಾಚಿದೇವನು ಎಚ್ಚೆ ಶಿವನೇ, ನೀನು ನಮ್ಮ ಪುರಾತನರೂ, ಪ್ರಮಥ

ಗಣಂಗಳೂ, ರುದ್ರಸಮೂಹದವರೂ ಕಾಣಧಂತೆ ಈ ಇಬ್ಬರು ಭಕ್ತರ ಪ್ರಾಣವನ್ನು ಅಡಗಿಸಿಕೊಂಡರೆ ನಾನು ಸೈರಿಸುವೆನೇ? ಭಕ್ತಪ್ರಾಣಿಯಾದ ಬಸವೇಶನು ತನ್ನ ಪ್ರತಿಜ್ಞಾನುಸಾರವಾಗಿ ತಾನು ದುಡಿದು ಹೋದುದು ಸರಿಯಾದದ್ದು. ಆದರೆ ಪರಶಿವನಾದ ನೀನು ಇವರಿಬ್ಬರ ಪ್ರಾಣಗಳನ್ನು ನುಂಗಿ ಮಾಡಬಾರದ ಕಾರ್ಯಮಾಡಬಹುದೇ ? ಹೇ ಶಿವನೇ, ನೀನು ವಿಚಾರ ಶೂನ್ಯನಾಗಿ ಅಕಾಲದಲ್ಲಿ ಇವರಿಬ್ಬರನ್ನು ಐಕ್ಯಮಾಡಿಕೊಳ್ಳುವದು ಉತ್ತಮ ನಡತೆಯಾಗಬಾರದು. ತಡಮಾಡದೆ ಮೇದಾರ ಕೇತಯ್ಯನ ಪ್ರಾಣವನ್ನು ಕಳುಹು. ಅದರ ಸಂಗಡವೇ ಬಸವೇಶನ ಪ್ರಾಣವೂ ಬರುವದು ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಆಗ ಪರಶಿವನು ಯಾವದನ್ನೂ ಮಾಡದೆ ಸ್ವಸ್ಥನಾಗಿದ್ದನು. ಮಾಚಿದೇವನು ಇನ್ನು ನಾನು ಸೈರಿಸಲಾರೆನು. ನಿನ್ನ ದುರ್ನಡತೆಯನ್ನು ಕುರಿತು ಡಂಗುರವನ್ನು ಹೊಡೆಯಿಸುವೆನೆಂದು ಹೇಳಿ ಕಿಡಿಕಿಡಿಯಾಗಿ ಕೋಪದಿಂದ ಡಂಗುರ ಸಾರಿಸಿದನು. ಆ ಕಾಲದಲ್ಲಿ ಆಕಾಶವು ನಡುಗಿತು. ಭೂಮಿಯು ಗುಡುಗಿತು. ತಾರೆಗಳು ಉದುರಿದವು. ಸಮುದ್ರವು ಬತ್ತಿ ಹೋಯಿತು. ಆದಿಶೇಷನು ನಡುಗಿ ಹೋದನು. ಈಶ್ವರನ ಸಭೆಯಲ್ಲಿ ಕಿವಿ ಮಾತುಗಳು ಕವಿದುಕೊಂಡವು. ಶಿವಭಕ್ತರು ಮಾಚಿದೇವನ ಶೌರ್ಯವನ್ನು ಕೊಂಡಾಡಿದರು. ಹಿಂದಿನ ಕಾಲದಲ್ಲಿ ಸುಂದರ ನಂಬಿ, ಸಿರಿಯಾಳ, ಹಲಾಯುಧ, ಮೆರೆಮಿಂಡಿದೇವ ಮೊದಲಾದವರು ಶಂಕರನು ಬಾಹಿರನೆಂದು ಡಂಗುರವನ್ನು ಸಾರಿಸಿದ್ದರು. ಈಗ ಭೂಲೋಕವೆಲ್ಲ ಆಶ್ಚರ್ಯಗೊಳ್ಳುವ ಹಾಗೆ ಮಹಾದೇವನಿಗೆ ಬಹಿಷ್ಕಾರ ಹಾಕಿ ಮಾಚಿದೇವನು ಡಂಗುರವನ್ನು ಹೊಯ್ಸಿದನೆಂದು ಹೊಗಳುತ್ತಿದ್ದರು. ಆಗ ಶಿವಸಭೆಯಲ್ಲಿದ್ದ ಪ್ರಮಥ ಗಣಂಗಳು ಶಿವನನ್ನು ಕುರಿತು ಅಯ್ಯಾ ಪರಶಿವನೇ, ಕೇತದೇವ, ಹಾಗೂ ಬಸವೇಶರ ಪ್ರಾಣಗಳನ್ನು ಕೂಡಲೇ ಕಳುಹಿಸಿಬಿಡು ಇಲ್ಲವಾದರೆ ರುದ್ರಮೂರ್ತಿಯಾದ ಮಾಚಿದೇವನು ಇನ್ನೂ ಕೋಪಿಸಿಕೊಳ್ಳುವನು. ಶಿವಭಕ್ತರ ಗುಂಪಿಗೆ ಹೊರಗಾದ ಮೇಲೆ ನಿನ್ನನ್ನು ಯಾರೂ ಪೂಜಿಸಲಾರರು. ಆಗ ನಿನ್ನ ವಿಲಾಸವನ್ನು ಯಾರಲ್ಲಿ ತೋರಿಸುವೆ ? ನಿನ್ನ ಸಂಚಾರವೇ ನಿಂತುಹೋಗುವದು. ಆದ್ದರಿಂದ ಅವರ ಪ್ರಾಣಗಳನ್ನು ಕೂಡಲೇ ಕಳುಹಿಸಿಕೊಡು ಎನ್ನಲು ಈಶ್ವರನು ಅವರ ಮಾತುಗಳನ್ನು ಕೇಳಿ ನಸುನಗೆಯನ್ನು ಬೀರುತ್ತ ಇಂತೆಂದನು—

ಎಲೈ ಗಣವರ್ಯರೇ, ಇವರಿಬ್ಬರನ್ನು ನೀವೇ ಕರೆದುಕೊಂಡು ಹೋಗಿರಿ ಎಂದು ಹೇಳಲು ಬಸವೇಶ್ವರ ಮತ್ತು ಕೇತಯ್ಯ ಇಬ್ಬರೂ ಆ ಶಿವಶರಣರ ಪಾದಗಳಿಗೆ ನಮಸ್ಕರಿಸಿ ಗಣಾಧೀಶ್ವರರೇ, ನಾವು ಭೂಲೋಕದ ಸಮಸ್ತ ಸುಖಗಳನ್ನು ಅನುಭವಿಸಿ ಆನಂದ ರೂಪಿಗಳಾದ ನಿಮ್ಮ ಪಾದಗಳನ್ನು ಹಿಡಿದಿದ್ದೇವೆ ಈಗ ನಾವು ಪುನಃ ಭೂಲೋಕಕ್ಕೆ ಹೋಗಲಾರೆವೆನ್ನಲು ಎಲೈ ಬಸವೇಶನೇ, ನೀನು ದಾಸೋಹಂಭಾವವನ್ನು ತೊರೆದು ಸೋಹಂಭಾವವನ್ನು ಹೊಂದಿರುವೆ. ಮತ್ತು ಗುರು-ಲಿಂಗ, ಜಂಗಮದ ಮಹಿಮೆಯನ್ನು ಭೂಲೋಕದ ಜನರಿಗೆ ತಿಳಿಸಿ ಅದನ್ನು ಪೂಜಿಸುವದನ್ನು ಬಿಟ್ಟು ಇಲ್ಲಿರುವದು ಅನ್ಯಾಯವಲ್ಲವೇ ? ಮಳೆಯನ್ನು ಅಪೇಕ್ಷಿಸುವ ಬೆಳೆಗಳಂತೆ ಭೂಲೋಕದ ಜನರೆಲ್ಲರೂ ನಿಮ್ಮ ಬರುವಿಕೆಯನ್ನು ಹಾರೈಸುತ್ತಿರುವರು. ಆದ್ದರಿಂದ ಈಗ ಭೂಲೋಕಕ್ಕೆ ಹೋಗಿ ಶಿವಭಕ್ತಿ, ಶಿವಾಚಾರಗಳನ್ನು ಪ್ರಕಟಪಡಿಸುತ್ತಿರು. ಬಳಿಕ ಇಲ್ಲಿಗೆ ಕರೆಯಿಸಿಕೊಳ್ಳುವೆನೆಂದು ಶಂಕರನು ಹೇಳಲು ಅವರಿಬ್ಬರೂ ಈಶ್ವರನ ಹಾಗೂ ಪ್ರಮಥ ಗಣಂಗಳ ಪಾದಗಳಿಗೆ ನಮಸ್ಕರಿಸಿ ಮೇದಾರ ಕೇತಯ್ಯನ ಸಂಗಡ ಹೊರಟು ಕಲ್ಯಾಣ ಪಟ್ಟಣವನ್ನು ಸೇರಿದರು. ಕೂಡಲೇ ಅವರ ಶರೀರಗಳಲ್ಲಿ ಪ್ರಾಣಗಳು ಕೂಡಿಕೊಳ್ಳಲು ಅವರಿಬ್ಬರೂ ಎದ್ದು ಮಾಚಿದೇವನ ಪಾದಗಳಿಗೆ ನಮಸ್ಕರಿಸಿ ನಿಂತಿರಲು ಆಗ ಆತನು ಗಣಂಗಳ ಸಭೆಗೆ ಕೈಮುಗಿದು ಇಗೋ ನಿಮ್ಮ ಪ್ರಾಣಪ್ರಿಯನಾದ ಕಂದನು ಬಂದನು. ಶಿವಪಾದ ಸೇವಕರೆಂಬ ಕಮಲಗಳ ಭ್ರಮರ ಬಂದನು. ಎಲೈ ಶರಣರುಗಳಿರಾ, ನಿಮ್ಮ ಪಾದಸೇವಕನು ಬಂದಿರುವನು. ಈತನಿಂದ ಪಾದಪೂಜೆಯನ್ನು ಮಾಡಿಸಿಕೊಳ್ಳುತ್ತ ತೀರ್ಥ ಪ್ರಸಾದಗಳನ್ನು ನನಗೆ ಅನುಗ್ರಹಿಸಬೇಕು ಎಂದು ಮಾಚಿದೇವನು ಬೇಡಿಕೊಳ್ಳುತ್ತಿರಲು ಆತನನ್ನು ಬಸವೇಶ್ವರನು ಬಿಗಿದಪ್ಪಿಕೊಂಡು ಎಲೈ ಮಾಚಿದೇವನೇ, ನಿನ್ನ ಮಹಿಮೆಯನ್ನು ವರ್ಣಿಸುವದಕ್ಕೆ ಯಾರಿಂದಲೂ ಶಕ್ಯವಿಲ್ಲ. ಈ ಲೋಕದಲ್ಲಿ ನಿನ್ನಂತೆ ಮತ್ತಾರು ಪ್ರಖ್ಯಾತಿಯನ್ನು ಪಡೆದಿರುವರು. ಕೋಪದಿಂದ ಶಿವನ ಮೇಲೆ ಡಂಗುರ ಸಾರಿಸಿ ಶಿವನಲ್ಲಿ ಐಕ್ಯರಾಗಿದ್ದ ನಮ್ಮಿಬ್ಬರು ಭಕ್ತರ ಪ್ರಾಣಗಳನ್ನು ಕರೆಯಿಸಿಕೊಂಡ ನಿನ್ನ ಮಹಿಮೆಗೆ ಸಮಾನರಾದವರು ಕೈಲಾಸದಲ್ಲಿಯೂ, ಭೂಲೋಕದಲ್ಲಿಯೂ ಯಾರೂ ಇಲ್ಲ ಎಂದು ಹೊಗಳಿ ನಮಸ್ಕರಿಸಲು ಬಳಿಕ

ಮಾಚಿದೇವನು ಗಣಸಮೂಹಕ್ಕೆ ವಂದಿಸಿ ಅವರನ್ನು ಹೊಗಳುತ್ತ ಮೇದಾರ ಕೇತಯ್ಯ, ಬಸವೇಶ್ವರನ ಸಹಿತನಾಗಿ ತನ್ನ ಮನೆಯನ್ನು ಸೇರಿ ಸುಖಸಂತೋಷದಿಂದ ಇದ್ದನು.

## — ದಸರಯ್ಯಗಳ ಕಥೆಯು —

ಅದೇ ಕಲ್ಯಾಣ ಪಟ್ಟಣದಲ್ಲಿ ವೇದ, ಆಗಮಾರ್ಥಗಳಲ್ಲಿ ನಿಪುಣನಾಗಿಯೂ, ಅಹಿಂಸಾಪರನಾಗಿಯೂ, ಶಿವಭಕ್ತಿ ಸಂಪನ್ನರೆಂಬ ಶ್ರೀದೇವಿಯರ ಕೈಗನ್ನಡಿಯಾಗಿಯೂ, ಕಾಮ, ನಿಯಮರಹಿತನಾಗಿಯೂ ಶರಣ ಜನಸೇವಕನಾಗಿಯೂ ಪರಿಶುದ್ಧನೆನಿಸಿದ ದಸರಯ್ಯನೆಂಬ ಶಿವಭಕ್ತನು ಮಹಿಮಾ ಸಂಪನ್ನನಾಗಿ ಬಾಳುತ್ತಿದ್ದನು. ಈ ದಸರಯ್ಯನು ತಾನು ಅಡ್ಡಾಡುವಾಗ ಸಣ್ಣ ಸಣ್ಣ ಹುಳಗಳು ಕಾಲುಗಳಲ್ಲಿ ಸಿಕ್ಕುಸಾಯುವವೆಂಬ ಭಯದಿಂದ ನಡುಗಿ ದಾರಿಯಲ್ಲಿ ಹುಡುಕಿ, ಹುಡುಕಿ ಕಾಲುಗಳನ್ನಿಟ್ಟು ಮೆತ್ತಗೆ ನಡೆಯುತ್ತ, ನಡೆದಾಡುವಾಗ ಕೈ ಬೀಸಿದ ರಭಸಕ್ಕೆ ಸೊಳ್ಳೆ ಮೊದಲಾದ ಪ್ರಾಣಿಗಳು ಸಿಕ್ಕು ಸಾಯುವವೆಂದು ತಿಳಿದು, ಕೈಗಳನ್ನು ಅಲುಗಾಡಿಸದೆ ನಡೆಯುತ್ತಿದ್ದನು. ಮತ್ತು ಶಿವಪೂಜೆಗಾಗಿ ಹೂ, ಪತ್ರಿಗಳನ್ನು ಗಿಡಬಳ್ಳಿಗಳಿಂದ ಕೊಯ್ಯಲು, ಅವುಗಳ ತೊಟ್ಟಿನಿಂದ ಹಾಲು ಸೋರುತ್ತಿರುವದನ್ನು ಕಂಡು, ಈ ಗಿಡ-ಬಳ್ಳಿಗಳು ನೊಂದುಕೊಂಡು ರಕ್ತವನ್ನು ಸುರಿಸುತ್ತಿರುವವೆಂದು ತಿಳಿದು ಹೂಗಳನ್ನು ಕೊಯ್ಯದೆ, ಆ ಗಿಡ-ಬಳ್ಳಿಗಳ ಬುಡದಲ್ಲಿ ಬಟ್ಟೆಯನ್ನು ಕಟ್ಟಿ ತಾನಾಗಿಯೇ ಉದುರಿದ ಹೂ, ಪತ್ರಿಗಳನ್ನು ತಂದು ಅದರಿಂದ ಶಿವಪೂಜೆಯನ್ನು ಮಾಡುತ್ತ ಅತ್ಯಂತ ಶಾಂತಿ ಸಂಪನ್ನನಾಗಿರುತ್ತಿರಲು, ಕೆಲವು ಜನ ನೀಚರು ಅಸೂಯೆಗೊಂಡು ಒಂದು ಕಪಟ ಉಪಾಯವನ್ನು ಹೂಡಿದರು. ಕೈ ಮೋಟಕಾಗಿರುವ ಒಬ್ಬ ಮೋಟಮಲ್ಲನ ತಲೆಯನ್ನು ನುಣ್ಣಗೆ ಬೋಳಿಸಿ ಕೊರಳಲ್ಲಿ ರುದ್ರಾಕ್ಷಿಯನ್ನು ಕಟ್ಟಿ, ಹಣೆಯಲ್ಲಿ ವಿಭೂತಿಯನ್ನು ಹಚ್ಚಿ, ಬಟ್ಟೆಯನ್ನು ತುಂಬಿದ ಟೊಳ್ಳು ಕರಡಿಗೆಯನ್ನು ಹಾಕಿ ಮೂರೆಳೆಯ ನೂಲಿನ ಉಡುದಾರವನ್ನು ಕಟ್ಟಿ, ಕೌಪೀನವನ್ನೂ ಹಾಕಿ ಹಾಲಿಹುಲ್ಲುಗಳನ್ನೂ, ಕಾಲುಗಳನ್ನೂ ಚನ್ನಾಗಿ ತೊಳೆದು ಸಕಲವಿಧದಿಂದ ಶಿವಭಕ್ತನಂತೆ ಕಾಣುವ ಹಾಗೆ ವೇಷ-ಭೂಷಣಗಳನ್ನು ಹಾಕಿ, ಅವನನ್ನು ನೋಡಿ ನಕ್ಕು ಓ ಮೋಟಮಲ್ಲಯ್ಯ, ನೀನು ದಸ

ರಯ್ಯನು ಬರುವ ಮಾರ್ಗದಲ್ಲಿ ಕುಳಿತಿದ್ದು ಅವನಿಂದ ಶರಣಾರ್ಥಿಯನ್ನು ಹೊಂದಿ ನೀನು ನಮಸ್ಕಾರಮಾಡಿ ನಿನ್ನ ಮೋಟುಕೈಗಳಿಂದ ಅವನನ್ನು ಚನ್ನಾಗಿ ಹೊಡೆದು ಬಾ ಎಂದು ಹೇಳಿಕಳಿಸಿದರು. ಆಗ ಆ ಮೋಟಮಲ್ಲನು ದಸರಯ್ಯನು ಬರುವ ಹಾದಿಯಲ್ಲಿ ಕುಳಿತು ಹೂ-ಪತ್ರಿ ತರುವದಕ್ಕಾಗಿ ಹೋಗುತ್ತಿರುವ ಆತನನ್ನು ನೋಡಿ ಜನರೆಲ್ಲ ನಗುವಹಾಗೆ ಹಲ್ಲು ಕಿರಿಯುತ್ತ, ಆಗಾಗ್ಗೆ ಡರ್ ಎಂದು ಡೇಗುತ್ತ, ಮೋರೆಯನ್ನು ಓರೆಮಾಡಿ ಅತ್ತಿತ್ತ ತಿರುಗಿಸುತ್ತ, ಕೇಕರಿಸಿ ಉಗುಳುತ್ತ ಹೀಗೆ ನಾನಾವಿಧ ದುಷ್ಟಚೇಷ್ಟೆಗಳನ್ನು ಮಾಡುತ್ತ ದಸರಯ್ಯನ ಬಳಿಗೆ ಬಂದು ನಿಂತುಕೊಂಡು ಧೈರ್ಯ ಸಾಲದೆ, ನಾಚಿಕೆಯಿಂದ ತೊದಲಿಸುತ್ತ, ಎಲೈ— ದಸರಯ್ಯನೇ, ಶರಣಾರ್ಥಿ, ನೀನು ಕ್ಷೇಮವಾಗಿರುವೆಯಾ ? ಎಲ್ಲಿಗೆ ಹೊರಟಿರುವೆ ? ನಿನ್ನ ಕೀರ್ತಿಯನ್ನು ಕೇಳಿ ನಿನ್ನ ದರ್ಶನಕ್ಕಾಗಿ ಬಂದಿರುವೆನು. ನನ್ನ ಹೆಸರು ಮೋಟಮಲ್ಲನಾಥಸ್ವಾಮಿ, ನಾನು ಪರ್ವತರಾಜನ ಕುಮಾರನು. ಸಾಮಾನ್ಯನೆಂದು ತಿಳಿಯಬೇಡ. ಈ ಭೂಮಿಯಲ್ಲಿ ನನಗೆ ಸಮಾನ ಮಹಿಮೆಯುಳ್ಳವರು ಯಾರೂ ಇಲ್ಲ. ಹೀಗಿದ್ದು ನೀನು ನನ್ನ ಸಂಗಡ ಮಾತಾಡದೆ ಹೋಗುವ ನಿನಗೆ ಎಷ್ಟು ಗರ್ವವಿದೆ ? ಇದು ನಿನಗೆ ಯೋಗ್ಯವೇ ? ಮಾತನಾಡಿಸಿದರೆ ನಿನ್ನ ಮಹಿಮೆಗೆ ಭಂಗಬರುವದೇ ? ನಮಸ್ಕಾರ ಮಾಡಿದರೆ ನಿನ್ನ ಶಿವಭಕ್ತಿಯು ಹಾಳಾಗುವದೇ ? ನಾನು ಜಂಗಮಮೂರ್ತಿ ಇದ್ದು ನಿನ್ನನ್ನು ಕರೆಯುತ್ತಿದ್ದರೂ ಕಾಣದವನಂತೆ ಹೊರಟು ಹೋಗಬೇಕೇ ? ಅಹಿಂಸಾಪರನು, ಶಿವಭಕ್ತಿ ಸಂಪನ್ನನು, ಕರುಣಾಸಾಗರನು ಎಂದು ನೋಡುವದಕ್ಕೆ ಬಂದ ನನ್ನ ಆಸೆಯನ್ನು ಸಾರ್ಥಕ ಮಾಡಿದೆಯಲ್ಲ ! ಗುರುಗಳು ಜಂಗಮರು ಇರುವಲ್ಲಿಗೆ ಹೋಗಿ ಅವರನ್ನು ಪೂಜಿಸಿ ಆಶೀರ್ವಾದವನ್ನು ಪಡೆದುಕೊಂಡು ಬರಬೇಕಾದುದು ಧರ್ಮವು. ಆದರೆ ನಾನಾಗಿಯೇ ನಿನ್ನಲ್ಲಿ ಬಂದಿದ್ದರೂ ನೀನು ಸುಮ್ಮನಿರುವೆಯಲ್ಲಾ ! ಇದು ಎಂತಹ ಅಹಂಕಾರ ! ಮೋಟುಮಲ್ಲಿನಾಥನಾದ ನನ್ನ ಮಹಿಮಾಧಿಕ್ಯವನ್ನು ತಿಳಿದಿದ್ದರೂ ಗರ್ವೋಪೇತನಾಗಿ ನಮಸ್ಕರಿಸದೆ ಇರುವೆಯಲ್ಲ ಎಂದು ಗರ್ಜಿಸಿ ಗಳಹುತ್ತ ಬರುತ್ತಿರುವದನ್ನು ದಸರಯ್ಯನು ಹಿಂತಿರುಗಿ ನೋಡಿ ಕಪಟವೇಷಧಾರಿಯೆಂದು ತಿಳಿದರೂ ಅವನ ಶಿವಲಾಂಛನಗಳಿಗಾಗಿ ಭಕ್ತಿಯಿಂದ ನಮಸ್ಕರಿಸಿ .ದಯಾಳುವಾದ ಜಂಗಮೇಶ್ವರನೇ, ನೀನು ನನ್ನಲ್ಲಿರುವ ಸಹಸ್ರ ಅಪರಾಧ

ಗಳನ್ನು ಮನ್ನಿಸಿ ಉದ್ಧರಿಸಬೇಕೆಂದು ನುಡಿಯುತ್ತ ವಂದಿಸುತ್ತಿರುವ ದಸರಯ್ಯನನ್ನು ಕಪಟ ಜಂಗಮನಾದ ಮಲ್ಲಿನಾಥನು ಜಿಡ್ಡುಗಟ್ಟಿದ ತನ ಮೋಟುಕೈಗಳಿಂದ ಆತನ ತಲೆಗೆ ಹೊಡೆದು, ತಿವಿದು, ತಲೆ ಒಡೆದು, ರಕ್ತವು ಸುರಿಯುವಂತೆ ಪೆಟ್ಟು ಕೊಟ್ಟರೂ ನಿರಪರಾಧಿಯಾದ ನನ್ನನ್ನು ಏಕೆ ಹೊಡೆದೆ ಎಂದು ಕೇಳದೆ ಪ್ರತಿಯಾಗಿ ಸ್ವಾಮೀ, ತಾವು ನನ್ನ ಕಠಿಣವಾದ ತಲೆಗೆ ಕೋಮಲವಾದ ಕೈಗಳಿಂದ ಬಡಿದ ಮೂಲಕ ನಿಮ್ಮ ಹಸ್ತಗಳು ನೊಂದು ಹೋಗಿರುವವು. ಹಾಗಲ್ಲದೆ ಮೃದುವಾದ ಭಾಗದಲ್ಲಿ ಹೊಡೆದಿದ್ದರೆ ತಮಗೆ ಯಾವ ತೊಂದರೆಯೂ ಆಗುತ್ತಿರಲಿಲ್ಲ. ಅಯ್ಯಾ, ನನ್ನ ತಲೆಬುರುಡೆಗೆ ಹೊಡೆದ ನಿಮ್ಮ ಕೈಗಳಿಗೆ ನೋವಾಗಿರಬಹುದು ಎಂದು ಅವನ ಮೋಟು ಕೈಗಳನ್ನು ಹಿಡಿದು ಸವರಿ, ಹಿಸುಕಿ ಉಪಚರಿಸಲು ಮಹದಾಶ್ಚರ್ಯಕರವಾದ ಒಂದು ಸಂಗತಿ ನಡೆಯಿತು. ಅದೇನಂದರೆ— ಆ ಮೋಟುಮಲ್ಲಿನಾಥನ ಮೋಟಾಗಿದ್ದ ಕೈಗಳು ಕೆಂದಾವರೆಯಂತೆ ವಿಕಸಿತವಾದವು. ಒಣ ಮೋಟು ಮರವು ವಸಂತಕಾಲದಲ್ಲಿ ಚಿಗುರೆಲೆಗಳಿಂದ ತುಂಬಿಕೊಳ್ಳುವಂತೆ ಮಲ್ಲಿನಾಥನ ಸರ್ವಾಂಗಗಳೂ ಸುಂದರವಾಗಿ ಬೆಳೆದವು. ಕೊರಳಲ್ಲಿಯ ಕರಡಿಗೆಯಲ್ಲಿ ಒಂದು ಲಿಂಗವೂ ಬಂದು ಸೇರಿತು. ಆಗ ಅವನು ನಿಜವಾದ ಜಂಗಮನಾದನು. ಆಗ ಅವನು ಹೊಸದಾಗಿ ಸುಂದರವಾಗಿ ಹುಟ್ಟಿದ ಕೈಗಳನ್ನೂ, ಕರಡಿಗೆಯಲ್ಲಿಯ ಲಿಂಗವನ್ನೂ ನಾಚಿಕೆಯಿಂದ ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತ ದಸರಯ್ಯನ ಶಾಂತಿಗುಣವನ್ನು ಹೊಗಳುತ್ತ ತಲೆತಗ್ಗಿಸಿ ನಿಂತುಕೊಂಡಿರಲು ದಸರಯ್ಯನು ಪುನಃ ಅವನ ಪಾದಗಳಿಗೆ ನಮಸ್ಕರಿಸಿ ಕುಳಿತುಕೊಳ್ಳಲು ಅನೇಕ ಭಕ್ತರು ಬಂದು ಆಶ್ಚರ್ಯದಿಂದ ನೋಡಿ ನಿನ್ನ ಚರಿತ್ರೆಯು ಪರಮಪವಿತ್ರವಾದುದು. ಇದನ್ನು ಶಿವನಲ್ಲದೆ ಬೇರೆಯವರು ತಿಳಿಯಲಾರರು. ಕಳ್ಳತನದಿಂದ ಜಂಗಮ ರೂಪಧರಿಸಿ ಬಂದ ಮೋಟುಮಲ್ಲನಿಗೆ ಕೈಗಳನ್ನು ಕೊಟ್ಟು, ಲಿಂಗಧಾರಿಯನ್ನಾಗಿ ಮಾಡಿ, ಅವನನ್ನು ಜಂಗಮಮೂರ್ತಿಯನ್ನಾಗಿ ಮಾಡಿದೆ. ಈ ಮೊದಲು ಬಸವೇಶ್ವರನು ತನ್ನ ಮನೆಗೆ ಕನ್ನ ಹಾಕಿ ಕಳವು ಮಾಡಲಿಕ್ಕೆ ಬಂದಿದ್ದ ಕಳ್ಳರ ಕೊರಳಲ್ಲಿರುವ ಕರಿಯಬದನೇಕಾಯಿಗಳನ್ನು ಲಿಂಗವನ್ನಾಗಿ ಮಾಡಿದನು. ಈಗ ನೀನು ಮೋಟುಮಲ್ಲನ ಟೊಳ್ಳು ಕರಡಿಗೆಯನ್ನೇ ಲಿಂಗವನ್ನಾಗಿಮಾಡಿದೆ ಎಂದು ಹೊಗಳುತ್ತ ಹತ್ತಿರಕ್ಕೆ ಬಂದು ಅವನ

ತಲೆಯನ್ನು ನೋಡಲಾಗಿ ಒಂದು ಕಡೆಗೆ ಸಾಂಖ್ಯಕೊಂಡನು ಹೊಡೆದ ಕಲ್ಲಿ ನೇಟುಗಳಿಂದ ಹೋಳಾಗಿದ್ದ ಈಶ್ವರನ ತಲೆಯಂತೆಯೂ, ಚೋಳರಾಜನ ನೆಪ ದಿಂದ ಭಕ್ತಿಗಾಗಿ ಮಣ್ಣು ಹೊತ್ತು ಹುಣ್ಣಾಗಿದ್ದ ಪಿಟ್ಟವ್ವೆಯ ಮಂಡೆ ಯಂತೆಯೂ, ಇನ್ನೊಂದುಕಡೆ ಕಣ್ಣಪ್ಪನ ಕೆರವಿನ ಕಾಲಿನಿಂದ ಭೊಕ್ಕೆಗಳುಂಟಾ ಗಿದ್ದ ಮೃತ್ಯುಂಜಯನ ಶಿರಸ್ಸಿನಂತೆಯೂ, ಇನ್ನೊಂದೆಡೆ ಬಿಳಿಬೋಗಯ್ಯನ ಹಿಂದೆ ಉರುಳಿಕೊಂಡು ಹೋದುದರಿಂದ ಗಾಯಗಳಾದ ಪಾರ್ವತೀಪತಿಯ ಮಸ್ತಕದಂತೆಯೂ, ಬೇರೊಂದೆಡೆಯಲ್ಲಿ ಸಿರಿಯಾಳನಿಗಾಗಿ ಕಬ್ಬಿನ ಹೊರೆ ಯನ್ನು ಹೊತ್ತುದರಿಂದ ಉಬ್ಬಾಗಿ ಹೊಳೆಯುತ್ತಿರುವ ಈಶ್ವರನ ತಲೆ ಯಂತೆಯೂ ಕಾಣುತ್ತಿರುವದನ್ನು ನೋಡಿ ಆಶ್ಚರ್ಯಭರಿತರಾಗಿ ಹೇ ಭಕ್ತಾಗ್ರ ಗಣ್ಯನೇ, ನಿನ್ನ ತಲೆಯು ಪರಮೇಶ್ವರನ ತಲೆಗೆ ಮಾತ್ರ ಸರಿ ಹೋಲುವದು. ಭೂಲೋಕದಲ್ಲಿ ಅನೇಕ ಶಾಸ್ತ್ರಗಳನ್ನು ಓದಿ ತಿಳಿದುಕೊಳ್ಳಬಹುದು. ಓದಿ ದ್ದನ್ನು ಮತ್ತೊಬ್ಬರಿಗೆ ಹೇಳಬಹುದು. ಆದರೆ ನಿನ್ನಂತೆ ಮಹಿಮೆಯನ್ನು ತೋರ್ಪಡಿಸುವದು ತುಂಬಾ ಆಶ್ಚರ್ಯಕರವಾದುದು. ಶಾಂತಿಯೆಂಬ ಖಡ್ಗ ದಿಂದ ನಿನ್ನ ಶಿರಸ್ಸನ್ನು ಕಡಿದರೂ ಹಿಂಸಾನಾಶಕ, ಸರ್ವದಯಾಪರ ಎಂಬ ಬಿರುದುಗಳು ನಿನಗಾಗಿಯೇ ಬಂದಿರುವವು. ಕಪಟ ವೇಷಧಾರಿಯಾದ ಜಂಗಮನಿಗೆ ನಿಜವಾದ ಜಂಗಮರೂಪವನ್ನು ಬರಮಾಡಿದ್ದರಿಂದ ಈ ಲೋಕ ದಲ್ಲಿ ನೀನೊಬ್ಬನೇ ಜಂಗಮನು. ನಿನ್ನ ಸಮಾನರು ಯಾರೂ ಇಲ್ಲ ಎಂದು ಹೊಗಳುತ್ತಿರಲು ಆ ನೀಚಜನರೂ ಸಹ ಬಂದು ಆತನ ಪಾದಗಳಿಗೆರಗಿ ಎಲೈ-ಮಹಿಮಾನ್ವಿತನಾದ ಜಂಗಮನೇ, ಅಪರಾಧಿಯಾದ ಮೋಟುಮಲ್ಲನಿಗೆ ಕೈ ಗಳನ್ನು ಕೊಟ್ಟು ಉದ್ಧರಿಸಿದೆ. ಈ ಕಪಟಯೋಚನೆ ಮಾಡಿದ ಪಾಪಿಗಳು ನಾವೇ ಇದ್ದು ಅವನನ್ನು ಇಲ್ಲಿಗೆ ಕಳಿಸಿದ್ದೆವು. ಮೂಢರೂ, ನೀಚರೂ, ಪಾಪಿಗಳೂ, ಕೃತಜ್ಞರೂ. ದುರಾಚಾರಿಗಳೂ ಆದ ನಮ್ಮ ಅಪರಾಧಗಳನ್ನು ಕ್ಷಮಿಸಿ ಕಾಪಾಡಬೇಕೆಂದು ಕಾಲಿಗೆರಗಿದರು. ಆಗ ದಸರಯ್ಯನು ಅವರೆಲ್ಲರಿಗೆ ಅಭಯವನ್ನು ಕೊಡಲು ಶಿವಶರಣರು ಆಶೀರ್ವದಿಸಿದರು. ಈ ವಾರ್ತೆಯನ್ನು ಕೇಳಿ ಬಸವೇಶ್ವರನು ಶಿವಗಣ ಸಮೇತನಾಗಿ ದಸರಯ್ಯನ ಬಳಿಗೆ ಬಂದು ನಮಸ್ಕರಿಸಿ ಆತನನ್ನು ಪೂಜಿಸಿ ಆತನ ಕರುಣಾಕಟಾಕ್ಷಗಳಿಗೆ ಪಾತ್ರನಾಗಿ ತನ್ನ ಮನೆಯನ್ನು ಸೇರಿ ಗುರು-ಲಿಂಗ ಜಂಗಮಾರ್ಚನಾತತ್ಪರನಾಗಿ ಸುಖ ದಿಂದ ಇದ್ದನು.

## — ಗುರುಭಕ್ತಾರ್ಯನ ಕಥೆಯು —

ಅದೇ ಕಲ್ಯಾಣಪಟ್ಟಣದಲ್ಲಿ ಗುರುಭಕ್ತಾರ್ಯನೆಂಬ ಜಂಗಮನೊಬ್ಬನು ಗುರುವಿನ ಕರುಣಾಕಟಾಕ್ಷವನ್ನು ಹೊಂದಿ ಗುರುಪಾದ ಧ್ಯಾನಾಸಕ್ತನಾಗಿ, ಗುರುವಾಕ್ಯ ಪರಿಪಾಲನಾನಿಯಮನಾಗಿ, ಗುರುಭಕ್ತಿಗೆ ರತ್ನಾಕರನಾಗಿ, ಸದಾ ಗುರುಪಾದಪೂಜೆ, ತೀರ್ಥ ಪ್ರಸಾದಗಳನ್ನು ಗ್ರಹಿಸುತ್ತ, ಗುರುವಿಗಿಂತ ಅಧಿಕ ವಾದ ವಸ್ತುವು ಮತ್ತೊಂದಿಲ್ಲವೆಂದು ಹೇಳುವ ಶಾಸ್ತ್ರ ವಚನವನ್ನು ನಂಬಿದವ ನಾಗಿ, ಗುರುವಿನ ನಾಮಸ್ಮರಣೆಯೇ ಮಂತ್ರವಾಗಲು, ಅವನ ಸೇವೆಯೇ ಆಶೀರ್ವಾದವೆನಿಸಿರಲು, ಆ ಗುರುವಿನ ಪೂಜೆಯೇ ಶಿವಪೂಜೆಯಾಗಲು, ಗುರು ಪಾದ ಧೂಳಿಯೇ ಭಸ್ಮವಾಗಿ ಒಪ್ಪುತ್ತಿರಲು ಸಕಲ ಸಂಪತ್ತಿಗಾಕರವಾದ ಗುರುಪಾದವೇ ಇಷ್ಟವಾಗಿರಲು, ಆತನ ಪರಮ ಪವಿತ್ರವಾದ ಆಜ್ಞೆಯೇ ತನ್ನ ಪ್ರಾಣವಾಗಿರಲು, ಆತನ ಸೇವೆಯಿಂದ ಲಭಿಸುವ ಸುಖವೇ ಮುಕ್ತಿಯಾಗಲು ಸದಾ ಗುರುಪಾದ ಸೇವೆಯನ್ನು ಮಾಡುತ್ತ ಇದ್ದನು. ಹೀಗಿರುತ್ತಿರಲು ಒಂದು ದಿವಸ ಗುರುವಿನ ಪಾದಗಳನ್ನು ಪರಿಮಳ ಜಲದಿಂದ ಅಭಿಷೇಕಿಸಿ, ಗಂಧಮಾಲ್ಯಾದಿಗಳಿಂದ ಪೂಜಿಸಿ, ಅಕ್ಷತಾದಿಗಳಿಂದ ಅಲಂಕರಿಸಿ ನೈವೇದ್ಯ, ತಾಂಬೂಲಗಳನ್ನು ಸಮರ್ಪಿಸಿ,ಗುರುಮಹಾತ್ಮೆಯನ್ನು ನೆನೆದು, ಹರ್ಷಿಸಿ ಗುರು ವಿನ ಮಂಗಲಾಕಾರವನ್ನು ಕಣ್ತುಂಬನೋಡಿ, ಎಲೈ— ದಯಾಸಾಗರನೇ, ಶರಣಾಗತವತ್ಸಲನೇ, ಸುಜ್ಞಾನಮೂರ್ತಿಯೇ, ವೀರಶೈವರ ಸಾರಭೂಮಿಯೇ' ಸಾಕ್ಷಾತ್ ಪರಶಿವನೇ, ಗುರುವರ್ಯನೇ, ಇಗೋ ನಿನಗೆ ವಂದಿಸುವೆನು' ಬ್ರಹ್ಮಾದಿಗಳು ಕಾಣದೆ ಭವಬಂಧದಲ್ಲಿ ಹೊರಳಿ ನರಳುತ್ತ ಬಯಸುತ್ತಿರುವ ಜ್ಞಾನಮಯಲಿಂಗ ಮೂರ್ತಿಯನ್ನು ನನಗೆ ಕರುಣಿಸಿ, ಆಳವಡಿಸಿ ಜೀವನ್ಮುಕ್ತ ನನ್ನಾಗಿ ಮಾಡಿದೆ. ಮಾಂಸ ಖಂಡಗಳಿಂದ ಕೂಡಿದ್ದ ದೇಹವನ್ನು ಮಂತ್ರ ಮಯವನ್ನಾಗಿಮಾಡಿ ಅದರಲ್ಲಿ ಪರಶಿವನನ್ನು ತುಂಬಿದೆ. ಸರ್ವವ್ಯಾಪಿಯಾದ ಪರಶಿವನನ್ನು ನನ್ನ ಹೃದಯ ಕಮಲದಲ್ಲಿ ನಿಲ್ಲಿಸಿ, ಜಗತ್ಪ್ರಾಣಿಯಾದವನನ್ನು ಭಕ್ತಪ್ರಾಣಿಯನ್ನಾಗಿ ಮಾಡಿದೆ, ಜ್ಞಾನಮಯನಾಗಿದ್ದ ಸದಾಶಿವಮೂರ್ತಿ ಯನ್ನು ಇಷ್ಟಲಿಂಗರೂಪದಿಂದ ಪ್ರಕಟಗೊಳಿಸಿ ನನ್ನಹಸ್ತಕಮಲದಲ್ಲಿ ಇರಿಸಿದೆ. ಸಚ್ಚಿದಾನಂದ ರೂಪನೂ, ಜ್ಞಾನಮೂರ್ತಿಯೂ, ತತ್ವಾತೀತನೂ ಆದ ನಿನ ಗಿಂತ ಅಧಿಕನಾದ ದೇವನು ಮತ್ತೊಬ್ಬನಿಲ್ಲ. ಈ ಪ್ರಪಂಚವು ಹಾಗೂ

ಇದರಲ್ಲಿ ಕಂಡೂ ಕಾಣದಂತಿರುವ ಲಿಂಗಜಂಗಮಾದಿಗಳು ನಿನಗೆ ಅಧೀನ ವಾಗಿರುವವು. ನಿನ್ನ ಉಪದೇಶವು ನನ್ನ ಹೃದಯದ ಅಜ್ಞಾನವನ್ನು ನೂಂಕಿ, ಕಾಮವನ್ನು ಕಡಿದು, ಅಹಂಕಾರವನ್ನು ಅಪ್ಪಳಿಸಿ, ವ್ಯಸನಗಳನ್ನು ಸುಟ್ಟು, ಮಾಯೆಯನ್ನು ಓಡಿಸಿ, ಇಂದ್ರಿಯ ಗುಣಗಳನ್ನು ನಾಶಮಾಡಿ, ವಿಷಯ ಸುಖಗಳನ್ನು ನಿಸ್ಸಾರಗೊಳಿಸಿ, ಕಾಯಕ್ಲೇಶಗಳನ್ನು ಹೋಗಲಾಡಿಸಿ, ಮೋಕ್ಷ ರೂಪವಾದ ಶಿವಜ್ಞಾನವನ್ನು ಇತ್ತು ನನ್ನನ್ನು ಉದ್ಧಾರಮಾಡಿತು. ಹಾಗು ನಿನ್ನ ಕಟಾಕ್ಷಪಾತವು ಕಲ್ಪವೃಕ್ಷವಾಗಿರುವದು. ಪಾದಗಳು ಚಿಂತಾಮಣಿ ಯನ್ನು ಮೀರಿಸಿರುವವು. ಹಸ್ತಗಳು ಕಾಮಧೇನುವಿನಂತಿರುವವು. ಓ ಗುರುವರಾ, ಹೆಚ್ಚು ಹೇಳುವದರಿಂದ ಪ್ರಯೋಜನವೇನು ? ಜನ್ಮಬಂಧ ವನ್ನು ಕಿತ್ತುಹಾಕಿ ಬ್ರಹ್ಮಾನಂದವನ್ನುಂಟುಮಾಡುವ ಶಕ್ತಿಯು ಕಾಮಧೇನು ಕಲ್ಪವೃಕ್ಷಗಳಿರುವದೇ ? ಇಲ್ಲ. ನಿಷ್ಕಾರಣ ಬಂಧುವಾದ ನೀನು ಮನುಮು ನಿಗಳಿಗೆ ಅಗೋಚರವಾದ ಲಿಂಗರೂಪವನ್ನು ನನ್ನ ತನು, ಮನಗಳಲ್ಲಿ ನೆಲೆ ಗೊಳಿಸಿ ನನ್ನನ್ನು ಪರಿಪಾಲಿಸಿದೆ. ಎಂದು ಸ್ತೋತ್ರಮಾಡಿ ಅವರ ಕರುಣೆ ಯನ್ನು ಹೊಂದಿ ತನ್ನಲ್ಲಿದ್ದ ಜಡಭಾವವನ್ನು ತೊರೆದು ಶಿವಭಾವವನ್ನು ಹೊಂದಿದವನಾಗಿ ಗುರುದಕ್ಷಿಣೆಯೆಂದು ತನ್ನ ತನು, ಮನ, ಧನಗಳನ್ನು ಸಮರ್ಪಿಸಿ, ಲೋಕದಲ್ಲಿರುವ ಜನರಿಗೆ ಗುರುಪಾದಭಕ್ತಿಯು ಪಾಪವೆಂಬ ಪರ್ವತಕ್ಕೆ ವಜ್ರಾಯುಧವು. ಸಂಸಾರವೆಂಬ ಮೋಡಗಳಿಗೆ ಬಿರುಗಾಳಿಯು. ಕಾಮ ಎಂಬ ಆನೆಗೆ ಸಿಂಹವು. ಮಾಯೆಯೆಂಬ ಸರ್ಪಕ್ಕೆ ಗರುಡನು. ಸಪ್ತವ್ಯಸನಗಳೆಂಬ ಗಿಡಗಳಿಗೆ ಕೊಡಲಿಯು. ಯಮನೆಂಬ ಅರಣ್ಯಕ್ಕೆ ದಾವಾನಲವು. ಗುರುಭಕ್ತಿಯೆಂಬ ಕಲ್ಪವೃಕ್ಷಕ್ಕೆ ಶಿವನ ಕಟಾಕ್ಷವೇ ಬೊಡ್ಡೆಯು. ಜಂಗಮ ಪಾದದಲ್ಲಿ ನೆಲೆಸಿದ ಭಕ್ತಿಯೇ ಚಿಗುರುಲೆಗಳು. ಶೈವಾಗಮಗಳಲ್ಲಿ ಶ್ರದ್ಧೆ ಇರುವದೇ ಟೊಂಗೆಗಳು. ಶಿವಜ್ಞಾನವೇ ಹೂಗಳು. ಶಾಂತಿಯೆಂಬುದೇ ಮಕರಂದವು. ಲಿಂಗಾಂಗ ಸುಖವೆಂಬ ಮುಕ್ತಿಯೇ ಫಲ ವಾಗಿ ಹೊಳೆಯುತ್ತಿರುವದು. ಪಾಪರಾಶಿಯನ್ನು ಸುಡುವದಕ್ಕೂ, ಸಂಸಾರ ವೆಂಬ ಅರಣ್ಯವನ್ನು ನಾಶಮಾಡುವದಕ್ಕೂ, ಮೋಕ್ಷ ಸುಖವನ್ನು ಹೊಂದುವ ದಕ್ಕೂ ಗುರುಭಕ್ತಿಯೇ ಮೂಲಕಾರಣವು. ಭವರೋಗ ನಾಶಕವಾದ ಈ ಗುರುಭಕ್ತಿಯು ಸಮಸ್ತ ರೋಗಗಳನ್ನು ನಾಶಮಾಡಿ ಕಂಟಕಗಳನ್ನು ಕಡಿದು

ಮೋಕ್ಷ ಸುಖವನ್ನು ಕೊಡುವದು. ಶಿವನಲ್ಲಿಯೂ, ಶಿವಶರಣರಲ್ಲಿಯೂ, ಜಂಗಮರಲ್ಲಿಯೂ ಭಕ್ತಿಯುಂಟಾಗುವದಕ್ಕೆ ಗುರುಭಕ್ತಿಯೇ ಮೂಲವಾದುದು. ಶರೀರವನ್ನು ಗುರುವಿಗೂ, ಪ್ರಾಣವನ್ನು ಲಿಂಗಕ್ಕೂ, ಧನ–ಮನಗಳನ್ನು ಜಂಗಮರಿಗೂ, ವಂಚನೆಯಿಲ್ಲದೆ ಸಮರ್ಪಣೆ ಮಾಡುವ ಮನುಜನು ಅವರ ಕಟಾಕ್ಷಕ್ಕೆ ಪಾತ್ರನಾಗುವನು. ಈಶ್ವರನ ಮೂರ್ತಿತ್ರಯಗಳಾದ ಗುರು–ಲಿಂಗ–ಜಂಗಮರಿಗೆ ತನ್ನ ತನು–ಮನ–ಧನಗಳನ್ನು ಕೊಡದಾತನು ಇಷ್ಟಲಿಂಗವನ್ನು ಧರಿಸಲು ಅಯೋಗ್ಯನು. ಕಪಟಿಯೂ, ಡಾಂಭಿಕನೂ, ಚಂಚಲನೂ, ನೀಚನೂ, ಅಜ್ಞಾನಿಯೂ, ದುರಾಶೆಯುಳ್ಳವನೂ, ಕೃಪಣನೂ, ಕೋಪಿಯೂ, ದುರಾಚಾರಿಯೂ, ಹಿಂಸಕನೂ, ಪಾಪಿಯೂ, ಅಹಂಕಾರಿಯೂ, ಸಂಶಯ ಚಿತ್ತನೂ, ಆದವನಿಗೆ ಗುರು–ಲಿಂಗ–ಜಂಗಮ ಭಕ್ತಿಯು ಜನ್ಮಜನ್ಮಾಂತರಕ್ಕೂ ಬಾರದು ಎಂದು ಶಿವಾಗಮಗಳನ್ನು ಬಲ್ಲವರು ಹೇಳುವರು. ನಿರ್ಮಲ ಚಿತ್ತನೂ, ವಿದ್ಯಾವಿನಯ ಸಂಪನ್ನನೂ, ಸ್ಥಿರಮನಸ್ಸುಳ್ಳವನೂ, ಅಹಂಕಾರರಹಿತನೂ, ಮೋಕ್ಷಸುಖ ಬಯಸತಕ್ಕವನೂ, ಈಶ್ವರಾನುಗ್ರಹದಿಂದ ಗುರುಲಿಂಗ ಜಂಗಮ ಭಕ್ತಿಯನ್ನು ಪಡೆಯುವರು. ಸ್ವಪ್ನದಲ್ಲಿ ಕಾಣುವ ಐಶ್ವರ್ಯದಂತೆ ಅಶಾಶ್ವತಗಳಾದ ತನು-ಮನ-ಧನಗಳನ್ನು ಗುರುಲಿಂಗ ಜಂಗಮರಿಗೆ ಸಮರ್ಪಿಸಿ ಶಾಶ್ವತವಾದ ಮೋಕ್ಷ ಸುಖವನ್ನು ಪಡೆಯುವ ಮನುಷ್ಯನು ಈ ಲೋಕದಲ್ಲಿ ಜಾಣನೆನಿಸುವನು. ಸಾವಿರಾರು ಕೋಟಿ ವರ್ಷಗಳ ವರೆಗೆ ಅಷ್ಟಾಂಗಯೋಗದಿಂದ ಅರಣ್ಯದಲ್ಲಿದ್ದು ಮಾಡಿದ ತಪಸ್ಸು ಒಂದು ದಿವಸ ಭಕ್ತಿಸಂಪನ್ನನಾಗಿ ಗುರುಜಂಗಮಾರ್ಚನೆಯನ್ನು ಮಾಡಿದ ಫಲಕ್ಕೆ ಸಮನಾಗಲಾರದು. ಎಂದು ಬೋಧಿಸುವ ಶೈವಾಗಮ ವಾಕ್ಯದಲ್ಲಿ ನಂಬಿಗೆಯುಳ್ಳವನಾಗಿ ಲಿಂಗ–ಜಂಗಮಾರ್ಚನಾ ತತ್ಪರನಾಗಿದ್ದನು. ಹೀಗಿರುತ್ತಿರಲು ಆತನು ಒಂದು ದಿವಸ ನಸುಕಿನಲ್ಲೆದ್ದು ಹೂ–ಪತ್ರಿಗಳನ್ನು ತರಲು ಕೈಯಲ್ಲಿ ಕರಡಿಗೆಯನ್ನು ತೆಗೆದುಕೊಂಡು ಬರುತ್ತಿರುವಾಗ ಮಾರ್ಗದಲ್ಲಿ ತನ್ನ ಗುರುವಿನ ಪಾದರಕ್ಷೆಯು ತನ್ನ ಕಾಲಿಗೆ ಸೋಂಕಿದುದನ್ನು ತಿಳಿದು ಅಯ್ಯೋ! ನನ್ನ ಕಾಲುಗಳಿಗೆ ಪವಿತ್ರವಾದ ಪಾದುಕೆಯು ತಗಲಿತಲ್ಲಾ! ನನ್ನ ಪುಣ್ಯವು ಉರಿದು ಹೋಗಿ ಪಾಪವು ಸಂಘಟಿಸಿತು. ನಾನು ಗುರುದ್ರೋಹಿಯಾದೆನು. ಈ ಪಾಪಕೃತ್ಯಕ್ಕಾಗಿ

ನನ್ನ ಕಾಲುಗಳನ್ನು ಕತ್ತರಿಸುವದೇ ತಕ್ಕ ಪ್ರಾಯಶ್ಚಿತ್ತವೆಂದು ಗೊತ್ತು ಮಾಡಿ ತನ್ನಲ್ಲಿದ್ದ ಕತ್ತಿಯಿಂದ ರಕ್ತವು ಚಿಮ್ಮಿ ಹಾರುವಂತೆ ಎರಡೂ ಕಾಲುಗಳನ್ನು ಕತ್ತರಿಸಿ ಒಂದು ಕಡೆಯಲ್ಲಿಡಲು ಅವೆರಡೂ ಗುರುಭಕ್ತಿಯೆಂಬ ದೇವತೆಗೆ ಅಲಂಕಾರ ಮಾಡಿದ ಕೆಂದಾವರೆಗಳಂತೆ ಕಾಣುತ್ತಿದ್ದವು. ಆಗ ಆತನ ಗುರುವಾದ ಅಮರಗುಂಡದ ಮಲ್ಲಿನಾಥಾರ್ಯನು ಶಿಷ್ಯನು ಮಾಡಿದ ಸಾಹಸದ ಈ ಆಶ್ಚರ್ಯ ಕಾರ್ಯವನ್ನು ಕೇಳಿ ಶಿವಗಣ ಸಮೂಹದೊಡನೆ ಕೃಪಾನ್ವಿತನಾಗಿ ಬರುತ್ತಿರಲು ಗುರುಭಕ್ತಾರ್ಯನು ತನ್ನ ಗುರುಗಳ ಆಗಮನವನ್ನು ನೋಡಿ ಭಕ್ತಿಯಿಂದ ನಮಸ್ಕರಿಸುವದಕ್ಕಾಗಿ ಮೇಲಕ್ಕೇಳಲು ಹೋಗಿ ಶಕ್ತಿಸಾಲದೆ ಗಡಗಡನೆ ನಡುಗುತ್ತಿದ್ದನು. ಶಿವಶರಣರು ಇದನ್ನು ನೋಡಿ ಆಶ್ಚರ್ಯದಿಂದ ಇದು ಅಸಾಧ್ಯವೆಂಬುದಾಗಿ ಹೊಗಳುತ್ತಿರಲು ಗುರು ಪ್ರಸಾದದ ಬಲದಿಂದ ಆತನಿಗೆ ಕೂಡಲೆ ಕಾಲುಗಳು ಬಂದವು. ಗಿಡಗಳಲ್ಲಿಯ ಚಿಗುರು ಉದುರಿ ಹೋದಲ್ಲಿ ಹೊಸದಾಗಿ ಹುಟ್ಟುವದು. ಆದರೆ ಹೂ ಮುರಿದು ಹೋದಲ್ಲಿ ಹೊಸದಾಗಿ ಹೂ ಹುಟ್ಟುವದುಂಟೇ ? ಹೀಗಿರುವಾಗ ಆತನ ಕತ್ತರಿಸಿದ ಕಾಲುಗಳು ಮತ್ತೆ ಹುಟ್ಟಬಂದದ್ದು ಆಶ್ಚರ್ಯವಲ್ಲವೇ! ತನ್ನ ಗಣಸಮೂಹದಲ್ಲಿ ತಾಂಡವಮೂರ್ತಿಯಾಗಿದ್ದು ಕಾಲಿಲ್ಲದೆ ಸಂಕಟಪಡುತ್ತಿದ್ದ ಭೃಂಗೀಶ್ವರನಿಗೆ ಒಂದು ಕಾಲನ್ನು ದಯಪಾಲಿಸಿದ ಪರಮೇಶ್ವರನು ತನ್ನ ಶಿಷ್ಯನಿಗೆ ಎರಡು ಕಾಲುಗಳನ್ನು ಕೊಡಮಾಡಿದ ಮಲ್ಲಿನಾಥಾರ್ಯನಿಗೆ ಸಮಾನನೆನಿಸುವನೇ ಎಂದು ಭಕ್ತರು ಹೊಗಳುತ್ತಿದ್ದರು. ಆಗ ಗುರುಭಕ್ತಾರ್ಯನು ತನ್ನ ಗುರುವಿನ ಪಾದುಕೆಯನ್ನು ತಲೆಯ ಮೇಲೆ ಟ್ಟುಕೊಂಡು ಪರಮಾನಂದ ಭರಿತನಾಗಿ ಆತನ ಪಾದಗಳಿಗೆ ನಮಸ್ಕರಿಸಿದನು. ಆಗ ಹತ್ತಿರವಲ್ಲಿದ್ದ ಶಿವಶರಣರು ಎಲೈ ಗುರುಭಕ್ತನೇ, ನಿನ್ನ ಗುರುಭಕ್ತಿಯು ಅತಿ ಅದ್ಭುತವಾದುದು. ಈ ಮೊದಲು ನೀನು ಗುರುಗಳಲ್ಲಿದ್ದಾಗ ನಿನ್ನ ಯೋಗ್ಯತೆಯನ್ನು ತಿಳಿಯದ ಕೆಲವು ಇತರ ಶಿಷ್ಯರು ಅಸೂಯೆಪಡುತ್ತಿರಲು ನಿನ್ನ ಗುರುವು ನಿನ್ನ ಮಹಾತ್ಮೆಯನ್ನು ಅವರಿಗೆ ತೋರಿಸಿ ಅವರ ಹೊಟ್ಟೆಯ ಕಿಚ್ಚನ್ನು ಹೋಗಲಾಡಿಸಬೇಕೆಂದು ಬಯಸಿ ತಾನು ನೆಲದ ಮೇಲೆ ಹಾಸಿ ಹಾಸಿಗೆಯ ಮೇಲೆ ಕುಳಿತುಕೊಂಡು ಎಲ್ಲ ಶಿಷ್ಯರನ್ನು ಕರೆದು ನೀವು ಈ ಮಂಚದ ಮೇಲೆ ಹತ್ತಿ ಕುಳಿತುಕೊಳ್ಳಿರೆಂದು ಆಜ್ಞಾಪಿಸಲು ಅವರು ಭಯ

ಗ್ರಸ್ತರಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತ ಗುರುಗಳು ಕುಳಿತು ಕೊಳ್ಳುವ ಮಂಚವನ್ನು ಶಿಷ್ಯರಾದ ನಾವು ಹತ್ತುವದು ಪಾಪಕಾರ್ಯವೆಂದು ಗುರುಗಳ ಮಾತನ್ನು ಮೀರಿದರು. ಆಗ ಗುರುಗಳ ಪಾದಸೇವೆಯನ್ನು ಮಾಡುತ್ತಿದ್ದ ನಿನ್ನನ್ನು ಕರುಣಾ ದೃಷ್ಟಿಯಿಂದ ನೋಡಿ ಅಯ್ಯಾ, ನೀನು ಈ ಮಂಚದ ಮೇಲೆ ಕುಳಿತುಕೋ ಎಂದು ಹೇಳಲಾಗಿ ಆ ಗುರು ವಾಕ್ಯವನ್ನು ಶಿರದಲ್ಲಿ ಧರಿಸಿ ಆತನ ಪಾದಕಮಲಗಳನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ ಗುರುವೇ ಗತಿಯೆಂದು ಹೇಳುತ್ತ ನೀನು ಮಂಚವನ್ನೇರಿ ಕುಳಿತುಕೊಳ್ಳಲು ಇತರ ಶಿಷ್ಯರು ಇದನ್ನು ನೋಡಿ ಕೋಪಾವಿಷ್ಟರಾಗಿ ನೀಚನಾದ ಇವನು ಗುರುಗಳಾಜ್ಞೆಯನ್ನು ಪಡೆದನೆಂಬ ಗರ್ವದಿಂದ ಕೆಳಗೆ ಕುಳಿತ ನಮ್ಮನ್ನು ಲಕ್ಷ್ಯಮಾಡದೆ ಗುರುಗಳು ನಮ್ಮ ಮನಸ್ಸನ್ನು ಪರೀಕ್ಷಿಸಬೇಕೆಂದು ನುಡಿದರೆ ಅದನ್ನು ತಿಳಿಯದೆ ದುರಹಂಕಾರದಿಂದ ಮಂಚವನ್ನು ಹತ್ತಬೇಕೇ ? ತನ ಗಿಂತಲೂ ಮಹಿಮಾಶಾಲಿಗಳೂ, ಹಿರಿಯರೂ ಆದ ನಾವು ಹತ್ತುವದಕ್ಕೆ ಹೆದ ರಿದರೂ ಮಂಚವನ್ನು ಹತ್ತಿದ ಇವನು ಗುರುದ್ರೋಹಿಯು. ಆದ್ದರಿಂದ ಇವ ನನ್ನು ಕೊಂದು ಕತ್ತರಿಸಿ ಹಾಕುವೆನೆಂದು ಇತರ ಶಿಷ್ಯರು ಕೋಲಾಹಲ ಮಾಡುತ್ತಿರುವದನ್ನು ಗುರುಗಳು ನೋಡಿ ಅವರ ಆಡಂಬರವನ್ನು ನಿಲ್ಲಿಸಿ ಹುಸಿ ನಗೆನಗುತ್ತ ನಿನಗೆ ಮಂಚದಿಂದ ಇಳಿಯುವಂತೆ ಆಜ್ಞೆಮಾಡಿ ಅದೇ ಮಂಚದ ಮುಂದೆ ಒಂದು ಶೂಲವನ್ನು ನಡಿಸಿ ಎಲೈ ಗುರುಭಕ್ತಿ ಸಂಪನ್ನರಾದ ಶಿಷ್ಯರು ಗಳೇ, ಇವನು ಗುರುದ್ರೋಹಿಯು. ಈಗ ನೀವು ಈ ಶೂಲವನ್ನು ಹತ್ತಿ ನಿಮ್ಮ ಗುರುಭಕ್ತಿಯನ್ನು ತೋರ್ಪಡಿಸಿರಿ ನೋಡೋಣವೆನ್ನಲು ಆ ಶಿಷ್ಯರು ಇದೇನು? ಹೀಗೇಕೆ ಆಜ್ಞೆ ಮಾಡುತ್ತಿರುವಿರಿ ? ಮೊದಲು ಮಂಚವನ್ನು ಹತ್ತುವಂತೆ ಹೇಳಿ ಈಗ ಶೂಲವನ್ನೇರಲು ಹೇಳುವಿರಿ. ಇದಕ್ಕೆ ನಾವು ಶಕ್ತರಲ್ಲ "ಕಡಲೆ ಯನ್ನು ತಿಂದಕುದುರೆಯು ಕಡಿವಾಣವನ್ನು ಒಲ್ಲದೇ ?" ಮೊದಲು ಮಂಚ ವನ್ನು ಹತ್ತಿದ ಭಕ್ತನು ಈಗ ಶೂಲವನ್ನೂ ಹತ್ತುವನು. ಗುರುವಾಕ್ಯ ಪರಿಪಾ ಲನೆಗಾಗಿ ದೇಹವನ್ನೇ ಕೊಡುವ ಆತನು ಶೂಲವನ್ನು ಹತ್ತಲಾರನೇ ಎಂದು ತಿರಸ್ಕರಿಸಿ ನುಡಿಯಲು ಆಗ ಗುರುವು ಕರುಣಾದೃಷ್ಟಿಯಿಂದ ನಿನ್ನನ್ನು ನೋಡಿ ಹತ್ತಿರಕ್ಕೆ ಕರೆದು ಕುಳ್ಳಿರಿಸಿಕೊಂಡು ತಾಂಬೂಲಪ್ರಸಾದವನ್ನು ಕೊಟ್ಟು ಮೈಮೇಲೆ ಕೈಯಾಡಿಸುತ್ತಿರಲು ನೀನು ಆ ಪ್ರಸಾದವನ್ನು ಸ್ವೀಕರಿಸಿ ಉಳಿದಿ

ದ್ದನ್ನು ಮೈಗೆಲ್ಲ ಲೇಪನ ಮಾಡಿಕೊಂಡು ಆನಂದದಿಂದ ನಿಂತಿರಲು ಗುರುವು ಕಣ್ಸನ್ನೆಯಿಂದ ಶೂಲವನ್ನೇ ತೋರಿಸಲು ನೀನು ಗುರುಪಾದಗಳಿಗೆ ನಮಸ್ಕರಿಸಿ ಶೂಲಕ್ಕೆ ಪ್ರದಕ್ಷಣೆ ಹಾಕಿ ಹತ್ತಲು ಅದರ ತುದಿಯು ನೆತ್ತಿಯಲ್ಲಿ ಏರಿತು. ಆಗ ನಿನ್ನ ಮುಖದಿಂದ "ಗುರುಭ್ಯೋನಮಃ" ಎಂಬ ವಚನವು ಮುಗುಳು ನಗೆಯೊಂದಿಗೆ ಹೊರಡುತ್ತಿತ್ತು. ಆ ಕಾಲದಲ್ಲಿ ಗುರುವು ನಿನ್ನನ್ನು ಕರುಣಾದೃಷ್ಟಿಯಿಂದ ನೋಡಿ ಗುರುಭಕ್ತಿಯೆಂಬ ರಾಜ್ಯಕ್ಕೆ ದೊರೆಯನ್ನಾಗಿ ಮಾಡಿದನು. ಆಗ ಇತರ ಶಿಷ್ಯರು ನಾಚಿಕೆಯಿಂದ ತಲೆತಗ್ಗಿಸಿ ನಿಂತಿರಲು ಎಲೈ ಶಿಷ್ಯರೇ, ನೀವು ಭಕ್ತರೆಂದು ಸುಮ್ಮನೆ ಅಹಂಕಾರ ಪಡುತ್ತಿರುವಿರಿ. ಈತನ ಗುರುಭಕ್ತಿಯನ್ನು ನೋಡಿ ನೀವು ವ್ಯರ್ಥವಾಗಿ ಅಸೂಯೆ ಪಡುತ್ತಿರುವಿರಿ. ನನ್ನ ಆಜ್ಞೆಯೇ ಪ್ರಾಣವಾಗಿರುವ ಈತನಿಗೆ ಇದು ಶೂಲ, ಇದು ಮಂಚ ಎಂಬ ಭೇದಬುದ್ಧಿ ಇಲ್ಲ. ಗುರುವಚನವನ್ನು ಮೀರಬಾರದೆಂಬ ನಾಣ್ನುಡಿಯು ಭೂಲೋಕದಲ್ಲಿ ಈತನಿಂದಲೇ ಪ್ರಸಾರವಾಗಿದೆ. ನೀವು ಯಾರ ಕೃಪೆಗೆ ದೂರವಾಗಿರುವಿರೋ ಆ ಕೃಪೆಗೆ ಇವನು ಪಾತ್ರನಾಗಿದ್ದಾನೆ. ಆ ಕೃಪೆಯೇ ನನ್ನ ಕಟಾಕ್ಷವು. ಎಂದು ಹೇಳುತ್ತ ನಿನ್ನ ಮುಂದೆ ಬಂದು ನಿಂತು ಎಲೈ ಭಕ್ತನೇ, ನಿನ್ನ ಗುರುಭಕ್ತಿಯು ಪ್ರಮಥರ ಭಕ್ತಿ ಮಾರ್ಗವನ್ನು ಮೀರಿಸಿರುವದರಿಂದ ಇನ್ನು ನೀನು ಇಳಿಯಬಹುದು ಎಂದು ಹೇಳಲು ನೀನು ಕೂಡಲೇ ಹಾರಿ ಮುಕ್ಕಳಿಸಿದ ಮೈಮುಳಿತವುಳ್ಳವನಾಗಿ ಎದುರಿಗಿದ್ದ ಹಲಗೆಯ ಮೇಲೆ ಕುಪ್ಪಳಿಸಿಬಂದು ನಿಲ್ಲಲು ಭಕ್ತರೆಲ್ಲರೂ ಉಘೇ, ಉಘೇ ಎಂಬ ಜಯಧ್ವನಿಯನ್ನು ಮಾಡುತ್ತಿರಲು ನೀನು ಗುರುಗಳ ಪಾದಗಳಿಗೆ ನಮಸ್ಕರಿಸಲು ಗುರುಗಳು ನಿನ್ನನ್ನು ಅಕ್ಕರೆಯಿಂದ ಮುದ್ದಾಡಿ ಬಿಗಿದಪ್ಪಿ ತೀರ್ಥ ಪ್ರಸಾದವನ್ನು ಕೊಟ್ಟು ನಿನ್ನನ್ನು ತೃಪ್ತಿ ಪಡಿಸಿದರು. ಆಗ ಶಿಷ್ಯರೆಲ್ಲರೂ ತೆರೆದ ಕಣ್ಣುಗಳಿಂದ ನಿನ್ನ ಮೈಯನ್ನು ಹುಡುಕಿ ಒಂದು ಗಾಯವನ್ನೂ ಕಾಣದೆ ನಿನ್ನ ಮಹಿಮೆಗೆ ಹೆದರಿ ನಾನಾವಿಧವಾಗಿ ಹೊಗಳುತ್ತಿದ್ದರು. ಈ ಪ್ರಕಾರ ಪ್ರಭಾವವನ್ನು ಪ್ರಕಟಪಡಿಸಿ ಈಗ ಅದಕ್ಕಿಂತಲೂ ಅತಿಶಯವಾದ ಮಹಾತ್ಮೆಯನ್ನು ತೋರ್ಪಡಿಸಿದೆ. ನಿನ್ನಂತಹ ಭಕ್ತಿಯುಳ್ಳ ಮಹಿಮಾಶಾಲಿಗಳು ಮೂರುಲೋಕಗಳಲ್ಲಿಯೂ ಇಲ್ಲ. ಎಂದು ಸರ್ವರೂ ಹೊಗಳುತ್ತಿದ್ದರು. ಆ ಕಾಲದಲ್ಲಿ ಬಸವೇಶ್ವರನು ಶಿವಗಣ ಸಮೂಹದೊಡನೆ ಬಂದು ಗುರುಭಕ್ತಾರ್ಯನ ಪಾದಗಳ

ಗಿರಗಿ ನಿನ್ನ ಸಮಾನರಾದ ಗುರುಭಕ್ತಿಸಂಪನ್ನರನ್ನು ಕಂಡು ನಾನು ಕೃತಾರ್ಥ ನಾದೆನು. ಈ ಲೋಕದಲ್ಲಿ ನಿನ್ನನ್ನು ಹೋಲುವ ಭಕ್ತರು ಮತ್ತಾರೂ ಇಲ್ಲ ವೆಂದು ಹೊಗಳುತ್ತ ಆತನಿಂದ ಅಪ್ಪಣೆಯನ್ನು ಪಡೆದು ತನ್ನ ಮನೆಗೆ ಬಂದು ಗುರು-ಲಿಂಗ-ಜಂಗಮಾರ್ಚನಾತತ್ಪರನಾಗಿದ್ದನು.

## .... ಗುರುಭಕ್ತಾಂಡಾರ್ಯರ ಕಥೆಯು ....

ಗುರುಭಕ್ತಿ ಮಹಿಮೆಯನ್ನು ಕೇಳಿ ಸಂತುಷ್ಟನಾದ ಚನ್ನಬಸವೇಶ್ವರನು ಬಸವೇಶ್ವರನನ್ನು ಕುರಿತು ಇಂತಹ ಗುರುಭಕ್ತಿಯುತರು ಪೂರ್ವಿಕರಲ್ಲಿ ಯಾರಾ ದರೂ ಇದ್ದರೇ ? ಎಂದು ಕೇಳಲು ಬಸವೇಶ್ವರನು ಮತ್ತೊಂದು ಕಥೆಯನ್ನು ಹೇಳಲಾರಂಭಿಸಿದನು. ಅದೆಂತೆನೆ— ಅಸದೃಶವಾದ ಭೋಗಭಾಗ್ಯಗಳಿಗೆ ತವರುಮನೆಯಾಗಿಯೂ, ಚಿನ್ನರತ್ನದುಪ್ಪರಿಗೆಗಳಿಂದ ಶೋಭಿತವಾಗಿಯೂ ಮುಗಿಲನ್ನು ಮುಟ್ಟುವಂತಹ ಕೋಟೆ-ಕೊತ್ತಲುಗಳಿಂದ ಕೂಡಿದುದಾಗಿಯೂ, ನಾನಾವಿಚಿತ್ರತರ ಮನೋಹರ ವಸ್ತುಗಳಿಂದ ಪ್ರಕಾಶಮಾನವಾಗಿಯೂ, ನದಿಸರೋವರಗಳಿಂದ ಆವೃತವಾಗಿಯೂ, ಇಂದ್ರನಗರವನ್ನು ಹೀಯಾಳಿಸುವ ವೈಖರಿಯುಕ್ತವಾದುದಾಗಿಯೂ, ನಯವಿನಯ ಗುಣಗಾಂಭೀರ್ಯವಿದ್ಯಾ, ಔದಾರ್ಯಸಂಪನ್ನರಾದ ನಾಗರಿಕ ಶಿರೋಮಣಿಗಳಿಗೆ ವಾಸಸ್ಥಾನವಾಗಿಯೂ, ಸದಾಕಾಲಾನುಸಾರ ದೊರೆಕೊಂಡ ಮಳೆಬೆಳೆಗಳಿಂದ ಐಶ್ವರ್ಯ ಸಮೃದ್ಧವಾ ಗಿಯೂ ಇರುವ ಬೆಜವಾಡ ಎಂಬ ಪುರುವು ಕೈಲಾಸ ನಗರಿಯಂತೆ ಹೊಳೆ ಯುತ್ತಿರುವದು. ಆ ಪಟ್ಟಣವನ್ನು ಗುರುಪಾದ ನಿರತನೂ, ಗುರುಕಾರ್ಯ ನಿರ್ವಾಹಕಾಗ್ರಗಣ್ಯನೂ, ಗುರುನಾಮಧ್ಯಾನ ತತ್ಪರನೂ, ಗುರುಧ್ಯಾನ ಪರಾಯಣ ಪ್ರಸಾದ ಜೀವಿತನೂ ಆದ ಗುರುಭಕ್ತನೆಂಬ ಅರಸನು ಸಕಲ ಸಾಮ್ರಾಜ್ಯಯುಕ್ತನಾಗಿ ಆಳುತ್ತಿದ್ದನು. ಹೀಗಿರಲು ವಸಂತ ಮಾಸವು ಅವನ ರಾಜ್ಯವನ್ನು ಪ್ರವೇಶಿಸಲು ತಂಗಾಳಿಯು ಅಲೆದಾಡುತ್ತಿತ್ತು. ಗಿಳಿ ಗಳು ಸಂತೋಷದಿಂದ ನಲಿದಾಡುತ್ತಿದ್ದವು. ಭ್ರಮರಗಳ ಹಿಂಡುಗಳು ಮಧುರವಾಗಿ ಹಾಡುತ್ತಿದ್ದವು. ಮಾವಿನ ಮರಗಳು ಹೊಸರತ್ನ ತೋರಣ ಕಟ್ಟಿದಂತೆ ಕೆಂಪಾದ ಚಿಗುರೆಲೆಗಳಿಂದ ಕಂಗೊಳಿಸಿದವು. ಕೋಗಿಲೆಗಳು ಮಧುರ ಸ್ವರದಿಂದ ಗಾನಮಾಡಿದವು. ಮದನರಾಜನು ಮದದಿಂದ ಉಬ್ಬಿ

ಹೋದನು. ವಸಂತಋತು ಎಂಬ ರವಿಯು ಉದಯ ಹೊಂದುತ್ತಿರಲು ಶಿಶಿರನೆಂಬ ಚಂದ್ರನು ಅಸ್ತಂಗತನಾದನು. ಇಂತಪ್ಪ ವಸಂತ ಕಾಲದಲ್ಲಿ ರಾಜನು ಒಂದು ದಿವಸ ವನವಿಹಾರಕ್ಕಾಗಿ ಹೊರಟು ದಿವ್ಯಾಲಂಕಾರ ಭೂಷಿತನಾಗಿ ಪತ್ನಿ, ಪುತ್ರ, ಮಂತ್ರಿ ಮಾರ್ಬಲ ಸಹಿತನಾಗಿ ವನವನ್ನು ಹೊಕ್ಕು ಕೇಳಿಯನ್ನು ನೆರವೇರಿಸಿಕೊಂಡು ಗಜಾರೂಢನಾಗಿ ಪಟ್ಟಣಕ್ಕೆ ತಿರುಗಿ ಬರುತ್ತಿರುವಾಗ ಮುಂದುಗಡೆ ಸುಂದರಾಂಗಿಯರಾದ ವೇಶ್ಯೆಯರು ನೆರೆದಿದ್ದರು. ಅವರಲ್ಲೊಬ್ಬಳು ಬಿಂಬಾಧರಿಯಾಗಿಯೂ, ಚಂದ್ರಮುಖಿಯಾಗಿಯೂ, ಸರಸಿಜನೇತ್ರೆಯಾಗಿಯೂ, ಗುರುಕುಚದ್ವಯೆಯಾಗಿ ಹರಿಮಧ್ಯೆಯಾಗಿಯೂ, ರಂಭಾಸ್ತಂಭೋರುಯುಗ್ಮೆಯಾಗಿಯೂ, ಸುಂದರೀಮಣಿಯಾಗಿಯೂ, ಹೊಳೆಯುತ್ತ ಏಕಾವಳಿಯನ್ನು ಧರಿಸಿ ಕುಂಕುಮ, ಕೇಸರಿ, ಲೇಪನಮಾಡಿಕೊಂಡು ರತ್ನಾಭರಣಗಳನ್ನು ಧರಿಸಿ ಚೀನಾಂಬರಧಾರಿಯಾಗಿ ತನ್ನ ಸೌಂದರ್ಯ ಲಾವಣ್ಯಗಳಿಂದ ರತಿಯನ್ನು ಸಹ ತಿರಸ್ಕರಿಸುತ್ತ ರಾಜಮಾರ್ಗದಲ್ಲಿ ನಿಂತು ಕಡೆಗಣ್ಣಿನ ನೋಟದಿಂದ ನೋಡುತ್ತಿರಲು ರಾಜನು ಅವಳ ರೂಪ, ರೇಖಾ, ಲಾವಣ್ಯಗಳನ್ನು ನೋಡಿ ಭ್ರಾಂತನಾಗಿ ಬೆದರಿ ಬೆಂಡಾಗಿ ಈ ನಾರೀರತ್ನವು ಮನ್ಮಥನ ರಾಜಲಕ್ಷ್ಮಿಯೋ, ಮಾರನ ಮಂತ್ರಾಸ್ತ್ರವೋ, ಇಲ್ಲವೆ ಅರವಿಂದ ಶರನು ಪೂಜಿಸುವ ಇಷ್ಟದೇವತೆಯೋ ಎಂದು ಪುನಃ ಪುನಃ ಅವಳನ್ನೇ ನೋಡುತ್ತಿದ್ದನು. ಆಗ ಆ ವೇಶ್ಯೆಯ ಕಟಾಕ್ಷವು ರಾಜನ ಮೇಲೆ ಬಿದ್ದ ಕೂಡಲೇ ಮನ್ಮಥನ ಬಾಣದೇಟುಗಳಿಂದ ರಾಜನ ಎದೆಯು ಬಿರಿದು ಹೋಯಿತು. ವಿರಹಾಗ್ನಿಯು ಸರ್ವಾಂಗಗಳಲ್ಲಿ ವ್ಯಾಪಿಸಿತು. ಮೋಹದಿಂದ ಮೈಮರೆಯಲು ಕೈಯಲ್ಲಿದ್ದ ಅಂಕುಶವು ಜಾರಿಬಿದ್ದಿತು ವಿವೇಕವಂತನಾದ ರಾಜನು ಸೋತು ಹೋಗಿದ್ದ ಇಂದ್ರಿಯಗಳನ್ನು ಗೆದ್ದು ಸ್ವಾಧೀನ ಬುದ್ಧಿಯುಳ್ಳವನಾಗಿ ಈ ಅರವಿಂದ ನಯನೆಯ ಕಡೆಗಣ್ಣಿನ ನೋಟವು ನನ್ನ ಧೈರ್ಯವನ್ನು ಓಡಿಸಿತು. ಕಾಮಬಾಣವು ನನ್ನ ಹೃದಯವನ್ನು ಸೀಳಿಬಿಟ್ಟಿತು. ಆದರೆ ಆಕೆಯು ಶಿವಭಕ್ತಳಾಗಿರುವಂತೆ ತೋರುವದರಿಂದ ಅವಳೊಡನೆ ಸುಖಭೋಗವನ್ನು ಅನುಭವಿಸುವದರಿಂದ ಉಂಟಾಗುವ ಸೌಖ್ಯವನ್ನು ಶಿವಾರ್ಪಣೆ ಮಾಡುವದರಿಂದ ನನಗೆ ಯಾವ ದೋಷವೂ ಬರಲಾರದೆಂದು ತಿಳಿದು ಅರಮನೆಯನ್ನು ಸೇರಿದ ನಂತರ ತನ್ನ ಆಪ್ತ ದೂತನನ್ನು

ಕರೆದು ಆ ವೇಶ್ಯೆಗೆ ತಕ್ಕ ಧನ, ಕನಕ, ವಸ್ತ್ರ ಆಭರಣಗಳನ್ನು ತರಿಸಿ ಗೌಪ್ಯವಾಗಿ ತೆಗೆದುಕೊಂಡು ಹೋಗಿ ಕೊಟ್ಟುಬರಲು ಹೇಳಿ ಕಳಿಸಿದನು. ಅದರಂತೆ ಆ ದೂತನು ಅವುಗಳನ್ನು ತೆಗೆದುಕೊಂಡು ಬಂದು ಆ ವೇಶ್ಯೆಗೆ ಕೊಡ ಹೋಗಲು ಅವಳು ಅವುಗಳನ್ನು ತಿರಸ್ಕರಿಸಲು ಆ ದೂತನು ಅರಸನಿಗೆ ಅಲ್ಲಿ ನಡೆದ ಸಂಗತಿಯನ್ನು ಬಿನ್ನವಿಸಲು, ಮೋಹಾತುರನಾದ ರಾಜನು ಆಕೆಯ ಮನೆಗೆ ತಾನೇ ಬಂದು ಅತ್ಯಂತ ದೈನ್ಯವಾಗಿ ಪ್ರಿಯವಚನಗಳಿಂದ— ಎಲೈ ಕಾಂತಾಮಣಿಯೇ, ನಿನಗಿರುವ ಅತಿಶಯವಾದ ಸೌಂದರ್ಯದಿಂದ ನಾನು ಮೋಹಗೊಂಡು ನಿನಗೆ ಕಾಣಿಕೆಯಾಗಿ ನನ್ನ ಮನಸ್ಸನ್ನು ಕಳಿಸಿದರೆ ನೀನು ತಿರಸ್ಕರಿಸಬೇಕೇ ? ಇದೇನು ನನ್ನ ಮನಸ್ಸಿನ ಭಾವವನ್ನು ತಿಳಿಯಬೇಕೆಂಬ ಭಾವವೋ ? ಅಥವಾ ಛಲವೋ ? ದುರಹಂಕಾರವೋ ? ಇಲ್ಲವೆ ನನ್ನಲ್ಲಿ ಅನುರಾಗವೇ ಇಲ್ಲವೋ ? ನನಗೆ ಯಾವುದೂ ತಿಳಿಯದು. ಇದೊಂದು ನಾಚಿಕೆ ಎಂದು ಹೇಳಿದರೆ ತಾನಾಗಿ ಬಂದ ವಿಟನನ್ನು ಸತ್ಕರಿಸುವದಕ್ಕೆ ವೇಶ್ಯೆಯರು ಲಜ್ಜೆಪಡಬಾರದೆಂಬುದು ವೇಶ್ಯಾಧರ್ಮವಾಗಿದೆ. ಆದ್ದರಿಂದ ಧನ ಸಾಲದೆಂದು ಹೇಳಿದರೆ ನಿನ್ನಾಸೆಯನ್ನು ಪೂರ್ಣಗೊಳಿಸುವೆನು. ಅಲ್ಲದೆ ಮೂಢನೆಂದು ತಿಳಿದಿದ್ದರೆ ನಾನು ಬುದ್ಧಿವಂತನಾಗಿರುವೆನು. ದೊರೆಯಲ್ಲವೆಂಬ ಅನುಮಾನವಿದ್ದರೆ ನಾನು ರಾಜಪುತ್ರನು. ಮತಾಂತರದವನೆಂದು ತಿಳಿದಿದ್ದರೆ ನಾನು ಶಿವಭಕ್ತನು. ಅಲ್ಪ ಮನುಷ್ಯನೆಂದು ಭಾವಿಸಿದ್ದರೆ ನಾನು ಬಹುಸಾಹಸವುಳ್ಳವನು. ಬಂಧುಗಳಿಲ್ಲದವನೆಂದು ಬೆದರಿದ್ದರೆ ನನಗೆ ಶಿವಭಕ್ತರೆಲ್ಲರೂ ಬಂಧುಗಳಾಗಿರುವರು. ಕಪಟವುಳ್ಳವನೆಂದು ನೆನಸಿದ್ದರೆ ನಾನು ಸದ್ಗುಣಶಾಲಿಯು. ಪ್ರಾಯಸ್ಥನಲ್ಲವೆಂಬ ಅನುಮಾನವಿದ್ದರೆ ಪ್ರತ್ಯಕ್ಷವಾಗಿ ನೋಡು. ಮನ್ಮಥ ಶಾಸ್ತ್ರಜ್ಞನಲ್ಲವೆಂಬ ಅಧೈರ್ಯವಿದ್ದರೆ ನನ್ನಲ್ಲಿ ರತಿಸುಖವನ್ನು ಹೊಂದಿನೋಡು. ಎಂದು ನುಡಿಯುತ್ತ ಪ್ರೇಮವು ಉಕ್ಕುತ್ತಿರಲು ಹತ್ತಿರಕ್ಕೆ ಬಂದು ಮೋಹದಿಂದ ಮುಂಗುರಳನ್ನು ತಿದ್ದುತ್ತ ಪುಳಕಾಂಕುರ ಮೊಗೆಯುವಂತೆ ಬಿಗಿಯಾಗಿ ಆಲಂಗಿಸಿ, ಅಧರ ರಸವನ್ನು ಚುಂಬಿಸಿ ಲಜ್ಜೆಗವಕಾಶವಿಲ್ಲದಂತೆ ಕಾಮುಕಲೆಗಳನ್ನು ತೋರಿಸಿ ನಿನ್ನೊಡನೆ ರತಿಸುಖವನ್ನು ಪಡೆಯಬೇಕೆಂದು ಬಯಸಿರುವೆನು. ಪ್ರೇಮವನ್ನು ನೋಟವೂ, ಕಾಮವನ್ನು ನಗೆಯೂ, ವಿಲಾಸವನ್ನು ಸರಸವಾಕ್ಯವೂ, ರೋಮಾಂಚನವನ್ನು ಆಲಿಂಗ

ನನ್ನೂ, ಕಾಮರಸವನ್ನು ಚುಂಬನವೂ, ಹುಟ್ಟಿಸದಿದ್ದ ಪುರುಷನಿಗೆ ಸಂಭೋಗವೆಂಬ ಬ ಳ ಲಿ ಕೆ ಯೇ ಬೇಡ. ಸಂತೋಷದಿಂದ ಉಬ್ಬಿ ರೋಮಾಂಚನವು ಅಳಿಯದಂತೆಯೂ, ರತಿಸುಖದಿಂದ ಬೆವರಿದ ಸ್ವೇ ದಂತೆಯೂ, ಮುಚ್ಚಿದ ಕಣ್ಣುಗಳನ್ನು ತೆರೆಯದಂತೆಯೂ, ಚೆಂದುಟಿ ಮಂದವಾಗದಂತೆಯೂ, ಸುವಾಸನೆಯಿಂದ ಕೂಡಿದ ಉಸುರಿನ ಓಟ ಕಡಿಮೆಯಾಗದಂತೆಯೂ, ರತಿಸುಖದಲ್ಲಿ ಮನ್ಮಥ ಸುಖವನ್ನು ನಿನಗುಂ ಮಾಡದಿದ್ದರೆ ನಾನು ವಿಟನೆನಿಸುವೆನೇ ? ಶುಕ್ಲಪಕ್ಷದಲ್ಲಿ ಪಾಡ್ಯದಿಂದ ಹುಣ್ಣಿ ವೆಯವರೆಗೆ ಅನುಕ್ರಮವಾಗಿ ಸ್ತ್ರೀಯಳ ಬಲಭಾಗದ ಹೆಬ್ಬೆರಳು, ಕಾ ಹದಡು, ಮೊಣಕಾಲು, ನಡು, ಹೊಕ್ಕಳು, ಎದೆ, ಮೊಲೆ, ಕಂಕುಳ, ತುಟಿ ಕಪಾಳ, ಕಣ್ಣು, ಹಣೆ, ಕುತ್ತಿಗೆ, ತಲೆ ಇವುಗಳನ್ನು ಒಂದೊಂದಾಗಿಯೂ ಕೃಷ್ಣಪಕ್ಷದಲ್ಲಿ ಪಾಡ್ಯದಿಂದ ಅಮವಾಸಿಯವರೆಗೆ ತಲೆಯಿಂದ ಹೆಬ್ಬೆರಳವರೆ ಕಲಾಸ್ಥಾನಗಳೆಂದು ತಿಳಿದು ಎಂಟು ಪ್ರಕಾರದ ಆಲಿಂಗನ, ಮೂ ರೀತಿಯ ಬಂಧನ. ಹನ್ನೆರಡು ವಿಧದ ಚುಂಬನಗಳನ್ನು ತಿಳಿದವನಾಗಿ ಅವು ಗಳನ್ನು ಯುಕ್ತಾನುಸಾರ ನಿನ್ನೊಡನೆ ಬಳಸುತ್ತ ಸುರತ ಸುಖವನ್ನು ನಿನಗೆ ತೋರಿಸಿ ಇವನು ಇಂದ್ರನ ಮಗನೋ ? ಕುಬೇರನ ಪುತ್ರನೋ ? ಮನ್ಮ ಥನೋ ? ಎಂದು ನೀನು ಸಂಶಯಪಡುವಂತೆ ಸುಖಸಾಗರದಲ್ಲಿ ನಿನ್ನನ್ನು ಮುಳುಗಿಸುವೆನು. ಆಲಿಂಗನ ಒಂದರಿಂದಲೇ ನಿನಗೆ ನಿರಿಗೆಗಳು ಜಾ ಹೋಗುವಂತೆಯೂ, ಕಣ್ಣುಗಳು ಮುಚ್ಚಿಕೊಳ್ಳುವಂತೆಯೂ, ಮದನ ಕಲಾ ರಸವು ತುಳುಕಿ ಸುರಿಯುವಂತೆಯೂ ಪರವಶತೆಯುಂಟಾಗುವಂತೆ ಮಾಡು ವೆನು. ನಿನ್ನ ಯೌವ್ವನವೇ ಸಫಲವಾಗುವದು. ಆದ್ದರಿಂದ ನನ್ನ ಸಂಗಡ ಕಾಮಕಲಾ ಸುಖವನ್ನು ಪಡೆದು ಈ ಮಾತಿನ ನಿಜವನ್ನು ಪರೀಕ್ಷಿಸು ಎಂದು ನುಡಿದ ರಾಜನನ್ನು ನೋಡಿ ವೇಶ್ಯೆಯು ಹೀಗೆಂದಳು:— ಎಲೈ ವಿಟಕುಲ ಶಿರೋಮಣಿಯಾದ ರಾಜನೇ, ಸಾಹಸದಿಂದ ಮಾತಾಡಿದ ಈ ಹೊಸ ಜಾಣ ತನದ ಮಾತುಗಳನ್ನು ಎಲ್ಲಿ ಕಲಿತುಕೊಂಡೆ ! ಆಹಾ ! ಶಹಬಾಸ್ ! ಬಹಳ ಕಷ್ಟಪಟ್ಟು ನಿನ್ನ ಮನೋಭಾವವನ್ನು ತಿಳಿಸಿದೆ, ಸಾಕು ! ಸಾಕು ! ಇನ್ನು ನಿನ್ನ ಬೊಗಳುವಿಕೆಯನ್ನು ನಿಲ್ಲಿಸಿ ಹೊರಟುಹೋಗು. ನಿನ್ನಲ್ಲಿ ನಯ, ನೀತಿ, ಸದ್ಭಕ್ತಿಯಿದ್ದರೆ ನನ್ನ ಸಂಗಡ ರತಿಸುಖವನ್ನು ಬಯಸುವದು ಯೋಗ್ಯ

ವಲ್ಲ. ರಸಿಕತನವು ನಿನ್ನಲ್ಲಿ ಇಲ್ಲ. ಹಾಗಿದ್ದರೆ ನನ್ನ ಪ್ರೇಮವನ್ನು ತಿಳಿಯದೆ ರತಿಶಾಸ್ತ್ರವನ್ನು ಬಡಬಡಿಸುತ್ತಿದ್ದಿಲ್ಲ. ನೀನು ಶಿವಭಕ್ತಿ ಸಂಪನ್ನನಿದ್ದರೆ ಇಷ್ಟು ಕಾಮವಿಕಾರಿಯಾಗುತ್ತಿದ್ದಿಲ್ಲ. ಗುರುಸೇವೆಗೆ ಶರೀರವನ್ನು ಕೊಡತಕ್ಕ ನಿನಗೆ ಇಷ್ಟೊಂದು ದೇಹವ್ಯಾಮೋಹವೇ ? ಇಂಥ ಠಕ್ಕತನದ ಮಾತುಗಳನ್ನು ನನ್ನ ಸಂಗಡ ಆಡಬೇಡ. ಜ್ಞಾನವಂತನಾಗಿದ್ದರೆ ಕಾಮ ಬಂಧನದಲ್ಲಿ ಸಿಕ್ಕು ಪೇಚಾಡುವದಕ್ಕಿಂತ ಪ್ರೀತಿಯಿಂದ ಗುರುಸೇವೆಮಾಡಿ ಸುಖವಾಗಿರು. ಈಗ ನೀನು ಇಲ್ಲಿ ನಿಲ್ಲದೆ ಕೂಡಲೇ ಹೊರಡು ಎಂದು ತಿರಸ್ಕರಿಸಿ ನುಡಿಯಲು ರಾಜನು ಆ ವೇಶ್ಯೆಯ ಕಠಿಣ ಮಾತು ಕೇಳಿ ಅವಳನು ಕುರಿತು— ನಿನ್ನ ಕಠಿಣ ಮಾತುಗಳಿಗೆ ಕಾರಣವೇನು ? ಗುಣಶಾಲಿಯೂ, ಭಾಗ್ಯವಂತನೂ, ರಾಜತನಯನೂ ಆದ ನನ್ನನ್ನು ತಿರಸ್ಕರಿಸುವದನ್ನು ಬೇರೆ ವೇಶ್ಯೆಯರು ಕಂಡರೆ ಹಾಸ್ಯಮಾಡುವದಿಲ್ಲವೇ ? ಇಂತಹ ವಿಟಶ್ರೇಷ್ಠ ಪುರುಷನಾದ ನನ್ನೊಡನೆ ನೀನು ರತಿಸುಖವನ್ನು ಹೊಂದಿದ ಬಳಿಕ ಇತರ ಪುರುಷರ ಸಂಗಡ ಬೆರೆಯುವದಿಲ್ಲವೆಂದು ಶಪಥವನ್ನಾದರೂ ಮಾಡು. ಇಲ್ಲವೆ ಉಡುತಡಿಯ ಅಕ್ಕಮಹಾದೇವಿಯಂತೆ ವೈರಾಗ್ಯ ಸುಖವನ್ನಾದರೂ ಅನುಭವಿಸು. ಅಥವಾ ತಿಲಕಾಂಬೆಯಂತೆ ಪರಶಿವನನ್ನು ಧ್ಯಾನಿಸಿ ವರವನ್ನು ಪಡೆದು ಗಂಡಸಾಗು. ಇಲ್ಲವಾದರೆ ಚೋಳವ್ವೆಯಂತೆ ಪರಮೇಶ್ವರನನ್ನೇ ಪತಿಯಾಗಿ ವರಿಸು. ಹೀಗೆ ಮಾಡದೆ ಹೋದರೆ ನಿನ್ನನ್ನು ನಾನೆಂದಿಗೂ ಬಿಡುವದಿಲ್ಲ. ಬಯಸಿ ಮೋಹಿಸಿದ ಸೂಳೆಯಿಂದ ತಿರಸ್ಕರಿಸಲ್ಪಟ್ಟು ಹಿಂದುರುಗಿ ಬಂದೆನೆಂಬ ಅಪಹಾಸ್ಯಕ್ಕೆ ಗುರಿಯಾಗುತ್ತೇನೆ. ಎಂದು ಹೇಳಲು ಆ ವಾರಾಂಗನೆಯು ಕೋಪದಿಂದ ಎಲೈ— ವಿಟಾಗ್ರಗಣ್ಯನೇ, ಬಲಾತ್ಕಾರವಾಗಿ ಸೂಳೆಗೆ ಪ್ರೀತಿಯನ್ನು ಹುಟ್ಟಿಸಬೇಕೆಂಬ ಜಾಣನೇ, ಹೂಗಳನ್ನು ಹೊಸೆದು ಹಿಸುಕಿ ಪರಿಮಳವನ್ನು ತೆಗೆದು ಭೋಗಿಸುವೆನೆಂಬ ಕೋವಿದನೇ, ಕಾಮಾತುರವನ್ನು ಕಾಣದಿರುವ ಹೆಂಗಸರನ್ನು ಮೋಸದಿಂದ ಕಾಮಬಾಧೆಗೀಡುಮಾಡಬೇಕೆಂಬ ಜಾಣತನವನ್ನು ನೀನು ಎಲ್ಲಿ ತಿಳಿದುಕೊಂಡಿರುವೆ ? ನಾನು ಸೂಳೆಯಾದರೂ ನಿನ್ನ ಹಂಗು ನನಗೇನು ? ಗುರುಮೂರ್ತಿಯು ಕರುಣೆಯಿಂದ ದಯಪಾಲಿಸುವ ದಿನದ ಕಾಯಕದಿಂದ ಜೀವನ ಮಾಡುವೆನು. ಇಂಥದುರಲ್ಲಿ ನೀನು ಅನ್ಯಾಯವಾಗಿ ವಶಮಾಡಿಕೊಳ್ಳಬೇಕೆಂದು ಪ್ರಯತ್ನಿಸುವೆಯಲ್ಲ ? ಇದನ್ನು

ವಿವೇಕವಂತರು ಒಪ್ಪುತ್ತಾರೆಯೇ! ಈ ಕೆಟ್ಟ ವ್ಯಾಮೋಹವು ನಿನ್ನ ಯೋಗ್ಯತೆಗೆ ತಕ್ಕದ್ದಲ್ಲ. ಕಮಲವನ್ನು ಆಕಾಶದಲ್ಲಿಯೂ, ಎಣ್ಣೆಯನ್ನು ಮಳಲಿನಲ್ಲಿಯೂ ಪ್ರಯಾಸದಿಂದ ಹುಡುಕಿದರೆ ದೊರಕುವದೇ? ಅದರಂತೆ ಒಲ್ಲದೆ ಇರುವ ನಾರಿಯರನ್ನು ಕೂಡಿದರೆ ಸುಖವುಂಟೇ? ಅನುರಾಗವಿಲ್ಲದ ಹೆಂಗಸ್ಸನ್ನು ಕೂಡಿ ಸುಖವನ್ನು ಪಡೆಯಬೇಕೆಂಬ ಮನುಷ್ಯನು ಹುಚ್ಚನೆನಿಸುವನು. ಮನಸೋತು ಕಾಮಕ್ರೀಡೆಗೆ ಪೀಡಿಸುವ ಪುರುಷರನ್ನು ಸ್ತ್ರೀಯರು ಹುಲ್ಲಿಗಿಂತಲೂ ಹಗುರಾಗಿ ನೋಡುವರು. ನಿನ್ನಲ್ಲಿ ನನಗೆ ಅನುರಾಗವಿಲ್ಲದ್ದರಿಂದ ನೀನು ಬಲಾತ್ಕರಿಸಿದರೆ ಅಪಕೀರ್ತಿಗೀಡಾಗುವೆ. ಹಾಗು ಸತ್ಪುರುಷರ ನಿಂದೆಗೆ ಪಾತ್ರನಾಗುವೆ. ಆದ್ದರಿಂದ ಈ ಕೆಟ್ಟ ವ್ಯಾಮೋಹಕ್ಕಾಗಿ ಲೋಕಾಪವಾದವನ್ನು ಹೊಂದದೆ ದೊರೆಯೂ, ನೀತಿವಂತನೂ, ಮಾನವಂತನೂ, ಗುರುಭಕ್ತನೂ ಆಗಿರುವದನ್ನು ಯೋಚಿಸಿ ಅದನ್ನು ಉಳಿಸಿಕೊಳ್ಳುವದಕ್ಕಾಗಿ ದುಷ್ಕೀರ್ತಿಯನ್ನು ಪಡೆಯದೆ ನೀತಿವಂತನೆನಿಸಿ ಬಾಳು. ನನ್ನಲ್ಲಿ ಬಲವಂತವಾಗಿ ರತಿಸುಖವನ್ನು ಬಯಸುವ ನೀನು ನನ್ನ ಗಂಡನೇ? ಬಯಸಿ ಬಾಳಿದ ಮಿಂಡನೋ? ಕೇಳಿದಷ್ಟು ಹಣ, ಬಯಸಿ ಬೇಡಿದ ಕೋರಿಕೆಗಳನ್ನು ಕೊಟ್ಟು ಆಳಿಕೊಂಡಿರುವವನೋ? ಎಂದು ನಾನಾವಿಧವಾಗಿ ಹೀಯಾಳಿಸಿ ನುಡಿದರೂ ಆ ರಾಜನು ತನ್ನ ಮೋಹವನ್ನು ಕಡಿಮೆ ಮಾಡದಿರುವವನ್ನು ಕಂಡು ಇವನಿಗೆ ಜಿಗುಪ್ಸೆಯನ್ನು ಮಾಡಬೇಕೆಂದು ಯೋಚಿಸಿ ಎಲೈ— ರಾಜನೇ, ಶಿವಭಕ್ತಿ ಸಂಪನ್ನನಾದ ನಿನಗೆ ಈ ಮೋಹ ಯೋಗ್ಯವಲ್ಲ. ಈ ಸೂಳೆಯರು ದುರ್ಗಣಿಗಳು, ದುರಾಶಾವಂತರು, ವಂಚಕಿಯರು, ಚಂಚಲೆಯರು, ಕಪಟ ಮನದವರು. ಅಸತ್ಯವಂತರು, ಆಪ್ತದ್ರೋಹಿಗಳು, ಅಧರ್ಮನಿರತರು, ಪಾಪಿಗಳು, ಕಪಟತಂತ್ರವಿದರು, ಕ್ರೂರೆಯರು, ಸಮಯ ಬಂದಾಗ ಕುತ್ತಿಗೆ ಕೊಯ್ಯುವವರು, ಮಾನಹೀನೆಯರು, ವಿಶ್ವಾಸಶೂನ್ಯರು, ಉಪಾಯದಿಂದ ಮೋಹಗೊಳಿಸಿ ಕಡೆಗೆ ಪ್ರಾಣವನ್ನೇ ಸೂರೆಗೊಳ್ಳುವ ರಕ್ಕಸಿಯರು, ಮೋಸ, ಗರ್ವ, ಡಂಭ, ಬಜಾರಿತನ, ಹಟಚದುರು, ಟಗರುಬುಗುರು, ಬಲಾತ್ಕಾರ, ಚಾಕಚಾಕ್ಯ, ಪಂಥ, ಹುಸಿ, ಸೊಕ್ಕು, ಸೊಬಗು, ಮುಳಿಸು, ಗಾಡಿ, ಗಮಕ ಮೊದಲಾದವುಗಳು ವೇಶ್ಯೆಯರಿಗೆ ಜೀವನ ಧರ್ಮಗಳು, ನರಕಕ್ಕೆ ಮೂಲ ಕಾರಣರು. ಮೂಳಿಗಳೆಂಬ ಗಳಗಳಿಗೆ ನರಗಳೆಂಬ ಹಗ್ಗದಿಂದ ಹಂಜರವನ್ನು

ಬಿಗಿದು ಅದಕ್ಕೆ ಮಾಂಸವೆಂಬ ಮಣ್ಣನ್ನು ಮೆತ್ತಿ ಮೇಲೆ ಚರ್ಮವೆಂಬ ಹೊದಿಕೆಯನ್ನು ಹೊದಿಸಿ ಅದರಲ್ಲಿ ಮಲಮೂತ್ರ ಪುರೀಷಾದಿಗಳನ್ನು ತುಂಬಿಕೊಂಡಿರುವ ಸ್ತ್ರೀ ಎಂಬ ವಸ್ತುವು ಪಾಪಗಳಿಗೆ ಆಗರವು. ಆ ಸ್ತ್ರೀಯ ತಲೆಯು ಶ್ಲೇಷ್ಮದಮನೆ, ಮುಖವು ಪಾಪದ ಭೂಮಿ. ಬಾಯಿಯು ಸರ್ಪದ ಹುತ್ತವು. ತುಟಿಯು ರಕ್ತಮಾಂಸಗಳು ತುಂಬಿದ ಕಳಿತ ಹಣ್ಣುಗಳು, ಕಣ್ಣುಗಳು ಪಾಪವೆಂಬ ಬಳ್ಳಿಯಲ್ಲಿಯ ಹಣ್ಣುಗಳು. ಹಾಗು ಜಾರುತುಂಬಿ ಮುಸುರೆಗಟ್ಟಿರುವ ಹುಣ್ಣುಗಳು, ಕಡೆಗಣ್ಣ ನೋಟವು ಪಾಪ ಸಮುದ್ರದಲ್ಲಿಯ ತೆರೆಗಳು. ಮೂಗು ಸಿಂಬುಳದ ಕೊಳವೆಯು. ಕುತ್ತಿಗೆಯು ದುರುಕ್ತಿ ಎಂಬ ರಾಕ್ಷಸಿಯ ಪಟ್ಟಣ. ತೋಳು ಯಮರಾಜನ ಕತ್ತಿ, ಕೈಬೆರಳು ಆಸೆಯೆಂಬ ಮರದ ಎಲೆಗಳು. ಹಾಗು ವಿಟಪುರುಷರೆಂಬ ಮೀನುಗಳಿಗೆ ಗಾಳವು. ಮೊಲೆಗಳು ಕೊಬ್ಬಿದ ಮಾಂಸದ ಗಂಟು, ಹೊಟ್ಟೆಯು ಮಲಮೂತ್ರ ತುಂಬಿದ ಗುಡಾಣ, ಹೊಕ್ಕಳು ದುರ್ಗಂಧದ ಗುಂಡಿ, ಕುಂಡಿಗಳು ಮೂತ್ರಜಲದ ಮಳಲುಗಡ್ಡೆ, ಹಾಗು ಯೋನಿಯು ರಕ್ತದಗುಳಿ, ಹೊಲಸಿನ ಮನೆ, ಹುಳಗಳ ಹುತ್ತ, ಅಮೇಧ್ಯದ ಗುಂಡಿ, ಉಚ್ಚೆಯ ಬಾವಿ, ಈ ಪ್ರಕಾರ ಕಡುಹೇಸಿಕೆಯ ಶರೀರವುಳ್ಳ ಸೂಳೆಯರ ದೇಹದಲ್ಲಿ ಸ್ವಲ್ಪಾದರೂ ಹುರುಳು ಉಂಟೇ ? ಈ ತೆರದ ಸೂಳೆಯರನ್ನು ನೋಡಿ ಕ್ಷಣಕಾಲ ಸುಖಕ್ಕಾಗಿ ಬಯಸಿ ತನ್ನ ತನು-ಮನ-ಧನಗಳನ್ನು ಅವರಿಗೆ ಸೂರೆಮಾಡಿ ಸಂಕಟಪಡುವ ಮನುಷ್ಯನು ಹುಚ್ಚನಲ್ಲವೇ ! ಇವರ ಮೋಹಕ್ಕೆ ಪಾತ್ರನಾಗಿ ಇವರನ್ನು ಅಗಲದೆ ಇರುವವನು ಮಾನಹಾನಿ, ದಾರಿದ್ರ್ಯ, ನಾಚಿಕೆಗೇಡಿ, ಮನೋವ್ಯಥೆ, ಸದ್ಗತಿ ಶೂನ್ಯತ್ವ, ಧನಹಾನಿ, ಲೋಕನಿಂದೆ ಎಂಬ ಏಳು ಫಲಗಳನ್ನುಂಡು ನರಕವಾಸಿಯಾಗಿ ನಿಪಾತವನ್ನು ಹೊಂದುವನು. ಚಂಚಲವಾದ ಮಿಂಚು, ನೀರ ಮೇಲೆ ಬರೆದ ಅಕ್ಷರ, ಕಾಮನಬಿಲ್ಲು, ಮೋಡದ ನೆರಳು, ಆಣೆಕಲ್ಲು, ಸಂಜೆಯ ಕೆಂಪು ವರ್ಣ ಇವು ಒಂದು ವೇಳೆ ಸ್ಥಿರವಾಗಿರಬಹುದು. ಆದರೆ ಸೂಳೆಯರ ಅನುರಾಗವು ಎಂದಿಗೂ ಸ್ಥಿರವಾಗಿರಲಾರದು. ಆದ್ದರಿಂದ ಇವರಲ್ಲಿ ಸಂಭೋಗ ಸುಖವನ್ನು ಹೊಂದುವದು ವಿವೇಕ ಶೂನ್ಯರಿಗೆ ಸೊಗಸಾಗುವದೇ ಹೊರತು ವಿವೇಕಶಾಲಿಗಳಿಗೆ ಶೋಭಿಸದು. ಅದರಲ್ಲಿಯೂ ವಿವೇಕವಂತರಾದ ಶಿವಶರಣರ ಮನಸ್ಸು ಎಂಬ ರಾಜಹಂಸಗಳಿಗೆ ಸೂಳೆಯರ ಕಡೆಗಣ್ಣನೋಟವು

ಕಾಲ ಮೇಘದಂತೆ ಇರುವದು. ಕಾಮನ ವೈರಿಯ ಭಕ್ತರಿಗೆ ಮನ್ಮಥ ಕ್ರೀಡೆಯು ಸುಖಕೊಡುವದೇ ? ವಿಭೂತಿಯನ್ನು ಭಕ್ತಿಯಿಂದ ಧರಿಸತಕ್ಕ ವರು ಕಸ್ತೂರಿಯ ಲೇಪನವನ್ನೂ, ಮಂಗಲಕರ ರುದ್ರಾಕ್ಷಿಗಳನ್ನು ಧರಿಸುವ ವನು ವಸ್ತ್ರಮಾಲ್ಯಾದಿ ಆಭರಣಗಳನ್ನೂ, ಶಿವಮಂತ್ರ ಧ್ಯಾನ ತತ್ಪರನು ಕಾಮ ಕಲೆಯ ಚಿಂತೆಯನ್ನೂ, ಶಿವಪೂಜೆಯಲ್ಲಿ ಆಸಕ್ತಿಯುಳ್ಳವನು ರತಿಕ್ರೀಡೆಯಲ್ಲಿ ಸಂತೋಷವನ್ನೂ ಹೊಂದಬಹುದೇ? ಎಲೈ ರಾಜಶ್ರೇಷ್ಠನೇ, ಬಹಳ ಮಾತು ಗಳಿಂದ ಫಲವೇನು ? ನೀನು ನೀತಿ ಸಂಪನ್ನನೂ, ಗುರುಲಿಂಗ, ಜಂಗಮ ಭಕ್ತಿ ಪೂರಿತನೂ, ಸ್ಥಿರಮನಸ್ಸಿನವನೂ ಇದ್ದು ಮಲಿನರಾದ ವೇಶ್ಯೆಯರಲ್ಲಿ ಕ್ಷಣಕಾಲ ಸುಖವನ್ನು ಬಯಸಿ ಶಿವಭಕ್ತಿಯೆಂಬ ಹಾಲಿನ ಕೊಡದಲ್ಲಿ ಉಪ್ಪಿನ ಹರಳನ್ನು ಹಾಕಿ ಸುಖಹೀನನಾಗಿ ಕೆಟ್ಟುಹೋಗಬೇಡ ಎಂದು ಬಾರಿಬಾರಿಗೂ ಹೇಳುತ್ತೇನೆ ಎಂದು ನುಡಿದ ವೇಶ್ಯೆಯ ಹಿತವಚನಗಳನ್ನು ಆ ರಾಜನು ತಿರ ಸ್ಕರಿಸಿ ಮೋಹಪರವಶನಾಗಿರಲು ಆವಳು ಇವನ ಮನ್ಮಥ ವಿಕಾರವನ್ನು ತೊಲಗಿಸಬೇಕೆಂದು ಯೋಚಿಸಿ, ಇಂತಹ ಮೂರ್ಖರನ್ನು ಸೌಮ್ಯವಾದ ಕಥಾ ಲಾಪಗಳಿಂದ ವಶಮಾಡಿಕೊಳ್ಳಬಹುದೆಂದು ವಿಚಾರಿಸಿ, ಆ ಪ್ರಕಾರ ಮಾಡಿ ನೋಡಬೇಕೆಂದು ಚಿಂತಿಸಿ, ಎಲೈ ರಾಜವಿಟನೇ, ನಾನು ಇಷ್ಟು ಹಿತವಚನ ಗಳನ್ನು ಹೇಳಿದರೂ ನೀನು ಕೇಳಲಿಲ್ಲ. ಆದರೆ ಪೂರ್ವದಲ್ಲಿ ಆಪ್ತ ಜನರ ಹಿತೋಕ್ತಿಗಳನ್ನು ಕೇಳಿ ಅದರಂತೆ ನಡೆದು ಸುಖಹೊಂದಿದವರು ಎಷ್ಟೋ ಜನರಿದ್ದಾರೆ ಅವರನ್ನಾದರೂ ನೆನೆದು ಅವರಂತೆ ನಡೆದುಕೋ ಈಗ ಶ್ವೇತನ ಕಥೆಯನ್ನು ಹೇಳುತ್ತೇನೆ ಕೇಳು.

## — ಶ್ವೇತನ ಕಥೆಯು —

ಪರಲೋಕ ಸುಖಕ್ಕೆ ಪರಮಪದವೆನಿಸಿ ಹೊಳೆಯುವ ಸ್ವರ್ಗಲೋಕ ದಲ್ಲಿ ರೂಪ ರೇಖಾ ಲಾವಣ್ಯ ವಿಲಾಸ ವಿಭ್ರಮಾದಿಗಳಿಂದ ಶೋಭಿತಳಾದ ಅಪ್ಸರಾ ಸ್ತ್ರೀಯರಲ್ಲಿ ಶ್ರೇಷ್ಠಳಾದ ರಂಭೆಯೆಂಬ ಸ್ತ್ರೀಯು ಶೋಭಿಸುತ್ತಿರು ವಳು. ಇಂತಹ ಸ್ತ್ರೀರತ್ನದಲ್ಲಿ ಸಂಭೋಗ ಸುಖವನ್ನು ಪಡೆಯಲು ಪೂರ್ವಾ ರ್ಜಿತ ಪುಣ್ಯ ವಿಶೇಷದಿಂದ ಸ್ವರ್ಗಲೋಕಕ್ಕೆ ಹೋಗಿ ರಂಭೆಯನ್ನು ನೋಡಿ ಮೋಹಿತನಾಗಿ ರತಿಕ್ರೀಡೆಯ ನೆವದಿಂದ ಆವಳನ್ನು ಬಹಳವಾಗಿ ಪೀಡಿಸುತ್ತ

ಬಲಾತ್ಕಾರ ಪಡಿಸುತ್ತಿರುವ ಶ್ವೇತನೆಂಬವನ ಭಾವವನ್ನು ತಿಳಿದು ಆ ರಂಭೆಯು ನಗುತ್ತಿರುವದನ್ನು ಸಂದೇಹಯುಕ್ತನಾದ ಆ ಶ್ವೇತನು ಕಂಡು— ಎಲೈ, ಚಂದ್ರಮುಖಿಯಾದ ರಂಭೆಯೇ, ನನ್ನನ್ನು ನೋಡಿ ನೀನು ನಗುವ ದಕ್ಕೆ ಕಾರಣವೇನೆಂದು ಕೇಳಲು ಆಕೆಯು ದಯಾಭರಿತಳಾಗಿ ಶ್ವೇತನನ್ನು ಕುರಿತು ಇಂತೆಂದಳು ಎಲೈ— ವಿಟನೇ, ಪಾಪಕ್ಕೆ ಆಕಾರವಾದ ನಿನ್ನ ದುರ್ನ ಡತೆಗಳನ್ನು ವಿವರಿಸಲು ನನ್ನಿಂದ ಸಾಧ್ಯವಾಗದು. ಅಷ್ಟೇ ಏಕೆ ಸಾವಿರ ಮುಖದ ಆದಿಶೇಷನಿಗೂ ಆಗಲಾರದು. ನೀನು ಯಾವಾಗಲೂ ದುಷ್ಟರ ಸಹವಾಸದಲ್ಲಿದ್ದು ದುಷ್ಕಾರ್ಯ ಪ್ರವರ್ತಕನಾಗಿ ಹಗಲು ರಾತ್ರಿಗಳಲ್ಲಿ ಸಹ ವೇಶ್ಯೆಯರನ್ನು ಅಗಲದೆ ಶಿವದರ್ಶನವನ್ನಾಗಲಿ, ಗುರುಧ್ಯಾನವನ್ನಾಗ್ಗಲಿ, ಶಿವಶರಣರ ಪಾದವಂದನೆಯನ್ನಾಗಲಿ ಮಾಡಿದವನಲ್ಲ. ಇದೂ ಅಲ್ಲದೆ ನೀನು ಹುಟ್ಟಿದಾಗಿನಿಂದ ವಿಭೂತಿ, ರುದ್ರಾಕ್ಷಿ ಧರಿಸಿದವನಲ್ಲ. ಮತ್ತು ಸತ್ಪಾತ್ರರಾದ ಜಂಗಮರಿಗೆ ಒಂದು ಕಾಸು ಸಹ ದಾನಮಾಡಿದವನಲ್ಲ. ಈ ಪ್ರಕಾರ ನೀನು ಸದ್ಧರ್ಮ, ಸದಾಚಾರ, ಸದ್ಗುಣವಿಹೀನನಾಗಿ ವರ್ತಿಸುತ್ತ ಒಂದಾನೊಂದು ದಿವಸ ಸೂಳೆಗಾಗಿ ಹೂವನ್ನು ತೆಗೆದುಕೊಂಡು ಹೋಗುತ್ತಿ ರಲು ಮಾರ್ಗದಲ್ಲಿ ಅಶುದ್ಧವಾದ ಸ್ಥಳದಲ್ಲಿ ಒಂದು ಹೂವು ಜಾರಿಬೀಳುವ ದನ್ನು ಕಂಡು ಶಿವಾರ್ಪಿತವಾಗಲೆಂದು ನುಡಿಯಲು ಸಹಸ್ರ ಜನ್ಮದಲ್ಲಿ ಸಂಪಾ ದಿಸಿದ ಯಾವದೋ ಆ ಪುಣ್ಯ ವಿಶೇಷದಿಂದ ಶಿವಸ್ಮರಣೆಮಾಡಿದ ಫಲದಿಂದ ಒಂದು ದಿನದ ಮಟ್ಟಿಗೆ ನಿನಗೆ ಇಂದ್ರಪದವಿಯು ದೊರೆತಿರುವದು ಆದ್ದುದ ರಿಂದ ಈ ದಿವಸ ಬೆಳಗಾಗುವವರೆಗೆ ನೀನು ನನ್ನಲ್ಲಿ ಸಂಭೋಗ ಸುಖವನ್ನು ಅನುಭವಿಸುವೆ. ಅನಂತರ ಯಮದೂತರು ಬಂದು ನಿನ್ನನ್ನು ಎಳೆದು ಕೊಂಡು ಹೋಗಿ ಭಯಂಕರವಾದ ಘೋರ ನರಕದಲ್ಲಿ ಕೆಡಹಿ ಹಿಂಸಿಸುವರು. ಆದರೂ ನೀನು ಅದನ್ನು ತಿಳಿಯದೆ ಕಾಮಾತುರನಾಗಿ ನನ್ನ ಮೇಲೆ ಬೀಳು ತ್ತಿರುವದನ್ನು ನೋಡಿ ನಾನು ನಕ್ಕೆನು. ಎಂದು ನುಡಿಯುವ ರಂಭೆಯ ಮಾತುಗಳನ್ನು ಕೇಳಿ ಶ್ವೇತನು ಎಲೈ— ರಂಭೆಯೇ, ನಾನು ಭೂಲೋಕದ ಲ್ಲಿರುವ ಸಮಸ್ತ ಗಣಿಕೆಯರಿಗೂ ಪ್ರಿಯನಾಗಿ ಇವನೇನು ಭೂಲೋಕದ ಮನ್ಮಥನೋ ? ಕಾಮಕಲಾ ನಿಪುಣನೋ ಎಂದು ವೇಶ್ಯೆಯರೂ, ವಿಟರೂ ಆಶ್ಚರ್ಯಗೊಳ್ಳುವಂತೆ ಬಾಳಿದೆನು. ಆದರೆ ಈಗ ಅಪ್ಸರೆಯರಲ್ಲಿ ಅಗ್ರಗಣ್ಯ

ಳಾದ ನಿನ್ನೊಡನೆ ಭೋಗಿಸಿ ನನ್ನ ಕಾಮಕಲಾ ಸಾಮರ್ಥ್ಯವನ್ನು ತೋರಿಸಿ ನಿನ್ನ ಮೆಚ್ಚುಗೆಯನ್ನೂ, ಲೋಕದಲ್ಲಿ ಕೀರ್ತಿಯನ್ನೂ ಪಡೆಯದಿದ್ದರೆ ನಾನು ವಿಟಕುಲ ಶಿರೋಮಣಿಯೇ ! ಆದ್ದರಿಂದ ನಾಳೆ ಯಮನಿಂದ ದೊರೆಯುವ ನರಕವನ್ನು ನಾನೆಂದಿಗೂ ಲಕ್ಷ್ಯಮಾಡುವದಿಲ್ಲ. ಆದ್ದರಿಂದ ನೀನು ನಾಚಿಯನ್ನು ತೊರೆದು ನನ್ನನ್ನು ಕೂಡು. ನನಗೆ ವಿರಹಾಗ್ನಿ, ನರಕಾಗ್ನಿಗಳೆರಡೂ ಸಮೀಪ ಗತವಾಗಿ ಬಾಧಿಸುತ್ತಿರುವವು. ಈಗ ವಿರಹಾಗ್ನಿಯನ್ನು ನಿನ್ನ ಅಂಗಸಂಗ ಸುಖದಿಂದ ನಿವಾರಿಸಿ ನಾಳೆ ಬರುವ ನರಕಾಗ್ನಿಯನ್ನು ಪರಿಹರಿಸುವ ಮಾರ್ಗವನ್ನು ನೋಡಿಕೊಳ್ಳೋಣ. ಒಂದು ವೇಳೆ ನಿನ್ನ ಮಾತಿನಂತೆ ನರಕಾಗ್ನಿಗೆ ಹೆದರಿ ಸುಮ್ಮನಿದ್ದರೂ ಈ ಕಾಮಾಗ್ನಿಯು ಈಗಲೇ ನನ್ನನ್ನು ಸುಟ್ಟು ಬಿಡುವದು. ಆದ್ದರಿಂದ ರತಿಸುಖವನ್ನು ಕೊಡಲು ಸಿದ್ಧಳಾಗೆಂದು ಶ್ವೇತನು ಆತುರಪಡಲು ಆಗ ರಂಭೆಯು ಎಲೈ— ತವಶಿಯೇ, ಈಗ ಎರಡು ಜಾವಗಳು ಕಳೆದು ಹೋದವು. ಇನ್ನೆರಡು ಜಾವಗಳು ಮಾತ್ರ ನನ್ನೊಡನೆ ನೀನು ಬೆರೆತು ಸುಖವನ್ನು ಹೊಂದಿ ಬೆಳಗಾದ ಕೂಡಲೆ ನರಕಯಾತನೆಯನ್ನು ಹೊಂದಿಯೇ ತೀರಬೇಕು. ನನ್ನೊಡನೆ ಸುಖಹೊಂದಿದ ನೀನು ನರಕಭಾಗಿಯಾಗುವದನ್ನು ನೋಡಿ ನಾನೆಂತು ಸಹಿಸಲಿ. ಅಲ್ಪಸುಖವಾದ ಬಾಯಿರುಚಿಯನ್ನು ಬಯಸಿ ರೋಗಿಯು ಅಪಥ್ಯಮಾಡಿಕೊಂಡು ದೀರ್ಘರೋಗ ಅನುಭವಿಸುವಂತೆ ಕ್ಷಣಕಾಲ ನನ್ನ ಸುಖವನ್ನು ಬಯಸಿ ಶಾಶ್ವತವಾದ ನರಕವನ್ನು ಅನುಭವಿಸಬಹುದೇ ಹೇಳು. ನೀನು ಶಿವನಿಗೆ ಒಂದು ಪುಷ್ಪವನ್ನು ಸಮರ್ಪಣೆ ಮಾಡಿದ್ದರಿಂದ ಒಂದು ದಿನದ ಮಟ್ಟಿಗೆ ನನ್ನಲ್ಲಿ ರತಿಸುಖ ಪಡೆಯುವ ಸೊಬಗನ್ನು ಕೊಟ್ಟನು. ಹೀಗಿರುವಲ್ಲಿ ನಿನ್ನ ಮನಸ್ಸನ್ನು ಆತನಲ್ಲಿಯೇ ನೆಲೆಗೊಳಿಸಿದ್ದರೆ ನನ್ನಂತಹ ದಿವ್ಯ ಸುಂದರಿಯರನ್ನು ನಿನ್ನ ಸೇವೆಗಾಗಿ ಎಷ್ಟು ಜನರನ್ನು ಕೊಡುತ್ತಿರಲಿಕ್ಕಿಲ್ಲ ! ನೀನೇ ಯೋಚಿಸು. ಕಾಲಕಾಲನೂ, ಮನ್ಮಥ ವೈರಿಯೂ ಆದ ಪರಶಿವನಲ್ಲದೆ ಈ ಯಮಬಾಧೆಯನ್ನು ತಪ್ಪಿಸಲು ಮತ್ತಾರಿಂದಲೂ ಸಾಧ್ಯವಿಲ್ಲ. ಕತ್ತಲೆಯು ಸೂರ್ಯನಿಂದಲ್ಲದೆ ಅನ್ಯರಿಂದ ನಾಶವಾಗುವದಿಲ್ಲ. ಆದ್ದರಿಂದ ನೀನು ನನ್ನ ಮಾತನ್ನು ಲಾಲಿಸಿ ಭಕ್ತವರದನಾದ ಪಾರ್ವತೀಪತಿಯ ಪಾದಗಳಲ್ಲಿ ನಿರತವಾದ ಭಕ್ತಿಯಿಂದ ಆತನನ್ನು ಪೂಜೆಮಾಡಿದರೆ ನಿನಗೆ ಶಾಶ್ವತವಾದ ಸುಖವು ಪ್ರಾಪ್ತವಾಗುವದೆಂದು

ಹಿತವಚನಗಳಿಂದ ಆವನನ್ನು ಒಡಂಬಡಿಸಿ ಜಾಗ್ರತೆಯಾಗಿ ಸ್ನಾನಮಾಡಿಸಿ ವಿಭೂತಿ, ರುದ್ರಾಕ್ಷಿಗಳನ್ನು ಧರಿಸುವಂತೆಮಾಡಿ ಶಿವಾಲಯವನ್ನು ತೋರಿಸಿ ಪ್ರವೇಶ ಮಾಡಿಸಿದಳು. ಆಗ ಶ್ವೇತನು ರಂಭೆಯು ಮಾಡಿದ ಸದುಪದೇಶ ವನ್ನು ನೆನೆದು, ಮನೋವಿಕಾರವನ್ನು ತೊರೆದು, ದೃಢವಾದ ಶಿವಭಕ್ತಿಯಿಂದ ಆ ಶಿವಲಿಂಗವನ್ನು ನೋಡಿ, ದೇವಗಂಗೆಯಿಂದ ಅಭಿಷೇಕಮಾಡಿ, ಕಲ್ಪವೃಕ್ಷದ ಕುಸುಮಗಳಿಂದ ಅರ್ಚಿಸಿ, ಗಂಧಾಕ್ಷತೆಗಳಿಂದ ಅಲಂಕರಿಸಿ, ಧೂಪ, ದೀಪ, ಕರ್ಪೂರವೀಳೆ, ನೈವೇದ್ಯಾದಿಗಳನ್ನು ಸಮರ್ಪಿಸಿ, ಛತ್ರಚಾಮರಗಳನ್ನು ಹಿಡಿದು, ಶಿವಪೂಜೆಯನ್ನು ಸಾಂಗೋಪಾಂಗವಾಗಿ ನೆರವೇರಿಸಿ, ಭಕ್ತಿಯಿಂದ ಶಿವನಾಮವನ್ನು ಜಪಿಸುತ್ತ, ಸಂತೋಷದಿಂದ ಹಿಗ್ಗಿ ನರ್ತನಮಾಡುತ್ತ, ಪ್ರದ ಕ್ಷಿಣೆ, ನಮಸ್ಕಾರವಂ ಗೈಯುತ್ತಿರುವಷ್ಟರಲ್ಲಿಯೇ ಶ್ವೇತನ ಹೃದಯಾಂಧಕಾ ರವು ತೊಲಗಿದಂತೆ ಕತ್ತಲೆಯು ಮಾಯವಾಗಲು ಆತನ ಮುಖಕಮಲದಂತೆ ತಾವರೆಗಳೂ ಅರಳಿದವು. ಪೂರ್ವದಲ್ಲಿ ಒಂದು ಸಾರೆ ಶಿವಪೂಜಾ ನಿರತನಾ ಗಿದ್ದ ಮಾರ್ಕಂಡೇಯನನ್ನು ಎಳೆದುಕೊಂಡು ಹೋಗುವದಕ್ಕಾಗಿ ಯಮ ಧರ್ಮನು ಬರಲು ಶಿವನ ಕ್ರೂರ ದೃಷ್ಟಿಗೊಳಗಾಗಿ ಶಿಕ್ಷೆಯನ್ನು ಹೊಂದಿದನು. ಅದರಂತೆ ಈಗಲೂ ಇವನನ್ನು ಎಳೆದುಕೊಂಡು ಹೋಗುವದಕ್ಕೆ ಬರುವ ಯಮನನ್ನು ಶಿವನು ಕೊಲ್ಲದಿರನೆಂದು ತಿಳಿದು ತನ್ನ ಪುತ್ರನಾದ ಯಮನಿಗೆ ಮೊದಲೇ ಬುದ್ಧಿವಾದವನ್ನು ಹೇಳಿ ಎಚ್ಚರಿಸುವಂತೆ ಸೂರ್ಯನು ಉದಯ ಹೊಂದಿದನು. ಆಗಲೇ ಯಮನು ಪಾಪಿಯಾದ ಆ ಶ್ವೇತನನ್ನು ಎಳೆದು ಕೊಂಡು ಬರಲು ತನ್ನ ದೂತರನ್ನು ಕಳಿಸಲು ಅವರು ತ್ವರೆಯಿಂದ ಬಂದು ರಂಭೆಯ ಮನೆಯನ್ನು ಹೊಕ್ಕು ಆಕೆಯ ದೂತೆಯಿಂದ ಅವನು ಶಿವದೇವ ಸ್ಥಾನದಲ್ಲಿರುವದನ್ನು ತಿಳಿದು ಅಲ್ಲಿಗೆ ಬಂದು ದೂರದಲ್ಲಿ ನಿಂತು ಈಶ್ವರನ ಮುಂದುಗಡೆಯಲ್ಲಿ ಭಸ್ಮ, ರುದ್ರಾಕ್ಷಿಗಳಿಂದ ಅಲಂಕೃತನಾಗಿ ಪೂರ್ಣಭಕ್ತಿ ಯಿಂದ ಶಿವಧ್ಯಾನದಲ್ಲಿದ್ದ ಆ ಶ್ವೇತನನ್ನು ಕಂಡು ಸಿಂಹವನ್ನು ಕಂಡ ಮರಿ ಆನೆ ಗಳಂತೆ ಬೆದರಿ ಮುಂದಕ್ಕೆ ಹೆಜ್ಜೆ ಇಡಲಾರದೆ ಹಿಂತಿರುಗಿ ಓಡಿ ಬಂದು ತಮ್ಮ ಸ್ವಾಮಿಯಾದ ಯಮದೇವನಿಗೆ ಆ ಸಂಗತಿಯನ್ನು ಬಿನ್ನವಿಸಿದರು. ಆಗ ಯಮರಾಜನು ಕೋಪಾಟೋಪದಿಂದ ಗರ್ಜಿಸುತ್ತ ಪ್ರಲಯಕಾಲದ ಮೇಘ ಗಳಂತೆ ಘುಡಘುಡಿಸಿ ದಂಡವನ್ನು ಬಡಿದು ಎಲಾ, ಆ ಪಾಪಾತ್ಮನಾದ ಶ್ವೇತನು

ರಂಭೆಯ ಮಾತುಕೇಳಿ ಶಿವಪೂಜಾವಿಧಿಯಿಂದ ನನ್ನನ್ನು ಗೆಲ್ಲಬೇಕೆಂದು ಯೋಚಿಸಿರುವನೋ ಶಹಭಾಸ್ ! ಆಗಲಿ. ಇವನಿಗೆ ನನ್ನ ದಂಡದ ರುಚಿಯನ್ನು ತೋರಿಸಿ ಅವನ ಶೌರ‍್ಯವನ್ನು ಪರೀಕ್ಷಿಸುತ್ತೇನೆ. ಒಂದು ವೇಳೆ ಈಶ್ವರನು ಅಡ್ಡವಾಗಿ ಬಂದು ತಡೆದರೂ ಅವನನ್ನು ಕೊಲ್ಲದೆ ಬಿಡುವೆನೇ ? ಎಂದು ಕೋಪದಿಂದ ಯೋಚಿಸುತ್ತ ನೀಲಪರ್ವತದಂತೆ ಹೊಳೆಯುತ್ತಿದ್ದ ತನ್ನ ವಾಹನವಾದ ಕೋಣವನ್ನು ಹತ್ತಿಕೊಂಡು ಹುಬ್ಬುಗಳನ್ನು ಗಂಟುಹಾಕಿ, ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತ, ಮೀಸೆಯನ್ನು ಹುರಿಮಾಡುತ್ತ, ಸಿಡಿಲಿನಂತೆ ಆರ್ಭಟಿಸುತ್ತ ಕ್ರೂರರಾದ ಭಟರನ್ನು ಕೂಡಿಕೊಂಡು ಶ್ವೇತನು ಮಾಡುವ ದೇವಾಲಯವನ್ನು ಹೊಕ್ಕು ನೋಡುತ್ತಿರುವಷ್ಟರಲ್ಲಿಯೇ ಭಕ್ತವತ್ಸಲನೂ, ದಯಾನಿಧಿಯೂ, ಸರ್ವವ್ಯಾಪಿಯೂ ಆದ ಪರಶಿವನು ಯಮನನ್ನು ಧಿಕ್ಕರಿಸಿ ಎದೆಯನ್ನು ಸೀಳಲು ಯಮನು ಮೂರ್ಛಿತನಾಗಿ ಬಿದ್ದನು. ಆಗ ಸಮಸ್ತ ದೇವತೆಗಳೂ, ಪ್ರಮಥ ಗಣಂಗಳೂ ಜಯಘೋಷವನ್ನು ಮಾಡಿದರು. ಕೂಡಲೆ ಶ್ವೇತನು ಭಕ್ತಿಯಿಂದ ಬಾಗಿದ ಶಿರಸ್ಸುಳ್ಳವನಾಗಿ ಆ ಮಹಾದೇವನ ಪಾದಗಳಿಗೆ ನಮಸ್ಕರಿಸಲು ಪರಶಿವನು ಅವನನ್ನು ಬಿಗಿದಪ್ಪಿ ಆಲಂಗಿಸಿಕೊಂಡು ಪ್ರಮಥಗಣರ ಮತ್ತು ದೇವತೆಗಳ ಪ್ರಾರ್ಥನೆಯಂತೆ ಯಮನಿಗೆ ಪ್ರಾಣದಾನವನ್ನು ಮಾಡಿ ತನ್ನ ಹತ್ತಿರ ಕುಳ್ಳಿರಿಸಿಕೊಂಡು ಇನ್ನು ಮೇಲೆ ನನ್ನ ಚಿಹ್ನೆಗಳಾದ ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿರುವ ಶಿವಶರಣರ ಮನೆಯನ್ನು ನೀನು ಕನಸಿನಲ್ಲಿ ಮರೆತಾದರೂ ಪ್ರವೇಶಿಸಬೇಡ ಎಚ್ಚರಿಕೆಯಿಂದಿರು. ಈ ಮಾತನ್ನು ನಿನ್ನ ಸೇವಕರಿಗೂ ತಿಳಿಸಿಹೇಳು. ಎಂದು ಅಪ್ಪಣೆಮಾಡಿ ಕಳುಹಿ ಕೊಟ್ಟನು. ಮತ್ತು ಶ್ವೇತನಿಗೆ ಗಣಸಮೂಹದಲ್ಲಿ ಪಟ್ಟವನ್ನುಕಟ್ಟಿ ತಾನು ಸಮಸ್ತ ಶಿವಗಣಂಗಳಿಂದ ಪರಿವೃತನಾಗಿ ಕೈಲಾಸವನ್ನು ಸೇರಿದನು. ಆದಕಾರಣ ಎಲೈ— ವಿಟನೇ, ಶ್ವೇತನು ರಂಭೆಯ ಮಾತನ್ನು ಕೇಳಿ ಶಿವಭಕ್ತಿಯನ್ನು ಸಂಪಾದಿಸಿ, ಸುಖವನ್ನು ಹೊಂದಿದಂತೆ ನೀನು ಸಹ ನನ್ನ ಹಿತ ನುಡಿಗಳನ್ನು ಕೇಳಿದರೆ ಸುಖವಾಗುವದು. ಅಲ್ಲದೆ ಮತ್ತೊಂದು ಕಥೆಯನ್ನು ಹೇಳುವೆನು ಕೇಳು ಎಂದು ಆ ಪ್ರೌಢಮತಿಯು ಗುರುಭಕ್ತನಿಗೆ ಹೇಳಲು ಆರಂಭಿಸಿದಳು.

## — ಮಲ್ಹಣನ ಕಥೆಯು —

ಸಕಲ ಸೌಭಾಗ್ಯಗಳಿಗೆ ಸಾರಭೂತವಾಗಿ, ವಿದ್ವಾಂಸರ ಮನೋರಂಜನಯಾಗಿ, ಶೋಭಿಸುತ್ತಿರುವ ಭಾರತೀಪೀಠ ಎಂಬ ಒಂದು ನಗರದಲ್ಲಿ ರಸಿಕ ಜನರಿಗೆ ಮನೋರಂಜಕನೂ, ರಸವತ್ತಾದ ಕವಿತೆಗಳನ್ನು ರಚಿಸತಕ್ಕವನೂ, ರಸಿಕ ಜನಕ್ಕೆ ಅಗ್ರಗಣ್ಯನೂ ಆದ ಮಲ್ಹಣನೆಂಬ ವಿಟನು ಇದ್ದನು. ಅವನು ನವತಾರುಣ್ಯ. ಲಾವಣ್ಯ, ವಿಲಾಸ. ವಿಭ್ರಮಗಳಿಂದ ಒಪ್ಪುತ್ತಿರುವ ತನ್ನ ಪ್ರೀತಿ ಪಾತ್ರಳಾದ ಮಲ್ಹಣಿ ಎಂಬ ವೇಶ್ಯಾಮಣಿಯನ್ನು ಕೂಡಿಕೊಂಡು ಅನ್ಯೋನ್ಯರಾಗಿ ಸುರತ ಸುಖವನ್ನು ಅನುಭವಿಸುತ್ತ ಸುಖದಿಂದ ಇದ್ದರು. ಆ ಮಲ್ಹಣಿಗೆ ಆಕಾಶಕ್ಕೂ, ಭೂಮಿಗೂ ಒಂದೇ ಸೂತ್ರವನ್ನು ಕಟ್ಟುವ ಸಾಮರ್ಥ್ಯವೂ, ಕಲ್ಲಿನಲ್ಲಿ ನಾರನ್ನು ತೆಗೆಯುವ ಜಾಣ್ಮೆಯೂ, ಕಲಗೊಜ್ಜಿನಲ್ಲಿ ಬೆಣ್ಣೆಯನ್ನು ಬರಮಾಡುವ ತಿಳುವಳಿಕೆಯೂ, ಗಾಳಿಯನ್ನು ಗಂಟು ಕಟ್ಟುವ ಮಾಯವೂ, ತನ್ನ ನೆರಳನ್ನು ತಾನೇ ದಾಟಿಕೊಂಡು ನಡೆಯುವ ಬಿಂಕವೂ, ಮಂಜಿನ ಹನಿಯ ನೀರನ್ನು ಮರಳಿನ ಹರವಿಯಲ್ಲಿ ತುಂಬುವ ಶಕ್ತಿಯೂ, ಆಣೆಕಲ್ಲುಗಳ ಸರವನ್ನಾಗಿ ಮಾಡಿ ಕೊರಳಲ್ಲಿ ಹಾಕಿಕೊಳ್ಳುವ ಚಾಕಚಕ್ಯವೂ ಉಳ್ಳವಳಾದ ಒಬ್ಬ ತಾಯಿಯು ಇದ್ದಳು. ಮಲ್ಹಣನು ತನ್ನ ಪ್ರೇಯಸಿಗೆ ಕೊಡುವ ಹಣವು ಸ್ವಲ್ಪ ದಿವಸಗಳಲ್ಲಿಯೇ ಖರ್ಚಾಗಿ ಮುಗಿದು ಹೋದುದನ್ನು ತಿಳಿದು ದುರಾಶೆಯನ್ನು ಹೊಂದಿ ಕೋಪದಿಂದ ಕುದಿಯುತ್ತಿರುವ ಆ ಮುದಿಸೂಳೆಯಾದ ಮಲ್ಹಣಿಯ ತಾಯಿಯು ಒಂದು ದಿವಸ ಹುಬ್ಬು ಗಂಟಿಕ್ಕಿ, ತುಟಿಗಳನ್ನು ಕುಣಿಸುತ್ತ, ಮುಖವನ್ನು ವಿಕಾರಮಾಡಿ ಗಡಬಡನೆ ಕೂಗಿಕೊಳ್ಳುತ್ತ ಎಲೈ— ವಿಟಕುಲೋತ್ತಮನೇ, ಭಲಾ! ನಿನ್ನಂತಹ ಕವಿತಾರ್ಥ ಪಂಡಿತರೂ, ಮೆಚ್ಚಿದವರಿಗೆ ಮನ್ನಿಸಿಕೊಡುವವರೂ ಆದ ಸಮರ್ಥರು ಈ ಲೋಕದಲ್ಲಿ ಯಾರಿದ್ದಾರೆ. ಈ ಊರಲ್ಲಿ ಕೇಳಿದಷ್ಟು ಹಣವನ್ನು ಕೊಟ್ಟು, ಹೇಳಿದಂತೆ ಕೇಳಿಕೊಂಡಿರುವ ವಿಟರು ಅನೇಕರು ಇದ್ದಾಗ್ಯೂ, ಬಾಲಭಾವದಿಂದ ನನ್ನ ಮಗಳು ನಿನ್ನನ್ನು ಮೆಚ್ಚಿ ಕೂಡಿದುದು ತಪ್ಪಾಯಿತೇ? ಮೆಚ್ಚಿದವಳಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಒಲಿಸಿಕೊಳ್ಳದೆ ಬೂಟಾಟಿಕೆಯಿಂದ ಮರಳು ಮಾಡುವದೇ? ನೀನು ದೊಡ್ಡಸ್ತಿಕೆಯವನಾದರೇನು? ನಿನ್ನ ಘನತೆಯು ನಮ್ಮ ಮನೆಯ ಉಗ್ರಾಣದ ಅಕ್ಕಿ

ಯಾಗುವವೇ ? ರಸವತ್ತಾದ ಕವಿತೆಗಳಿಂದ ನನ್ನ ಮಗಳನ್ನು ಆನಂದಪಡಿಸು ವದೇ ? ಜೇನುತುಪ್ಪದಂತೆ ತೊಟ್ಟಿಕ್ಕುವ ನಿನ್ನ ಬೆಡಗಿನ ಮಾತುಗಳು ನನ್ನ ಮಗಳಿಗೆ ಹಣದ ಕೈಚೀಲವಾದೀತೇ ? ನಿನ್ನಲ್ಲಿರುವ ಶಿವಭಕ್ತಿಯು ನಮಗೆ ಸದ್ಗತಿಯನ್ನು ಕೊಡುವದು ಸರಿಸರಿ ! ಹೀಗಾದರೆ ನಮ್ಮ ಬಾಳು ಬಲು ಚನ್ನಾಯಿತು. ಸಾಕುಸಾಕು ಇಲ್ಲಿಂದ ಏಳು. ಇನ್ನು ಇಲ್ಲಿ ನಿಲ್ಲಬೇಡ. ನನ್ನ ಮಗಳಿಗೆ ಹಣ ಕೊಟ್ಟು ಕೊಟ್ಟು ದಣಿದು ಹೋಗಿರುವೆ ! ಬರಿ ಪ್ರೀತಿ, ಮೋಹದ ಹಬ್ಬವನ್ನು ಮಾಡಬೇಕೆಂದರೆ ಮನೆಯಲ್ಲಿ ಅಕ್ಕಿಗಾಗಿ ಬಿಕ್ಕಿ, ಬಿಕ್ಕಿ ಬಾಯ್ಬಿಡಬೇಕಾಗಿದೆ. ನಿನ್ನೆಯ ದಿನ ನಡೆದ ವೀರಭದ್ರದೇವರ ಜಾತ್ರೆಗೆ ಎಲ್ಲ ಸೂಳೆಯರು ಹೋಗುತ್ತಿರುವುದನ್ನು ನೋಡಿ ನನ್ನ ಮಗಳು ತನ್ನ ಆಭ ರಣವನ್ನು ಒತ್ತೆ ಇಟ್ಟು ತಂದ ಹಣದಿಂದ ಹಬ್ಬವನ್ನು ಮಾಡಿದಳು. ಈ ರೀತಿ ಯಾಗಿ ಎಷ್ಟೋ ಒಡವೆಗಳು ಅಡುವಿಗಾಗಿಯೇ ಹೋಗಿರುವವು. ಮಹಾ ಭಾಗ್ಯಶಾಲಿಯಾದ ನೀನು ನಮ್ಮ ಮನೆಗೆ ಕಾಲಿಟ್ಟ ಕೂಡಲೇ ನಮ್ಮಲ್ಲಿದ್ದ ಚಿನ್ನರನ್ನದ ಆಭರಣಗಳೆಲ್ಲ ನಾಶವಾಗಿ ನಾವು ಈ ಗತಿಗೆ ಬಂದಿರುವೆವು. ಸರಿಕರಾದ ಸೂಳೆಯರು ರತ್ನಾಭರಣಗಳನ್ನೂ, ಪಟ್ಟೆಪೀತಾಂಬರಗಳನ್ನೂ ಉಟ್ಟು ತೊಟ್ಟು ದೇವರ ಗುಡಿಗೆ ಹೋಗುವಾಗ ನನ್ನ ಮಗಳು ಬಿಚ್ಚೋ ಲೆಯ ಸೂಳೆಯಾಗಿ ಹೋಗುವದಕ್ಕಾದೀತೇ ? ಅಯ್ಯೋ ! ನಿರ್ಗತಿಕರಾಗಿ ರುವೆವು. ಒಂದು ವೇಳೆ ನನ್ನ ಮಗಳು ಬೈದು ದೂರಿಕೊಂಡರೆ ಆಗಲೇ ಇಲ್ಲದ ಮೋಹ, ಇಂದ್ರಜಾಲ, ಮಹೇಂದ್ರಜಾಲದ ಆಟವನ್ನು ಹೂಡಿ ಬೆಲ್ಲ ದಂತೆ ಸವಿಮಾತನಾಡಿ ತಬ್ಬಿ ಮುದ್ದಾಡಿ ಮೋಹಗೊಳಿಸಿ ಮದ್ದು, ಮಂತ್ರ, ಯಂತ್ರ, ತಂತ್ರಗಳಿಂದ ಅವಳು ಮತ್ತೊಬ್ಬರ ಮೋಹಕ್ಕೆ ಸಿಕ್ಕದಂತೆ ಹುಚ್ಚು ಹಿಡಿಸಿ ಸ್ವಾಧೀನಪಡಿಸಿಕೊಳ್ಳುವೆ. ಒಳ್ಳೆಯ ಸಂಪಾದಿಸುವ ಕಾಲದಲ್ಲಿಯೇ ನನ್ನ ಮಗಳ ತಲೆಗೆ ಮದ್ದು ಇಕ್ಕಿ ಈ ಗತಿಗೆ ತಂದಿರುವೆಯಲ್ಲಾ ! ಆಹಾ ! ನಿನ್ನ ಮದ್ದು, ಮಾಯ, ಮಂತ್ರ, ತಂತ್ರಗಳನ್ನು ಅಡಗಿಸಿ ಸರಿಯ ವಿಟರು ನೋಡಿ ಹಾಸ್ಯಮಾಡಿ ನಗುನಂತೆ ನಿನ್ನನ್ನು ನನ್ನ ಮಗಳ ಮಂಚದ ಕಾಲಿಗೆ ಕಟ್ಟಿಸದೆ ಬಿಡುವೆನೇ ? ನಾನು ಸಾಮಾನ್ಯಳೇ ? ನನ್ನ ಸೂಳೆಗಾರಿ ಕೆಯ ಸೊಗಸನ್ನು ಈ ಊರವರು ಕೊಂಡಾಡುವದನ್ನು ನೀನು ಕೇಳಿಲ್ಲವೇ ? ನೀನು ಮಾನವಂತನಾಗಿ ಬದುಕಬೇಕಾಗಿದ್ದರೆ ಕೂಡಲೇ ನನ್ನ ಮಗಳನ್ನೂ

ಮನೆಯನ್ನೂ ಬಿಟ್ಟು ಹೊರಟುಹೋಗು. ಎಂದು ಗದರಿಕೆಯಿಂದ ಗರ್ಜಿಸುತ್ತ ಆ ಮಲ್ಲಣನನ್ನು ಹೊರಹೊರಡಿಸಿದಳು. ಅವನ ವಿರಹದಿಂದ ತಪಿಸುತ್ತಿರುವ ಮಗಳನ್ನು ಸಮಾಧಾನಪಡಿಸಿ ಅಧಿಕವಾಗಿ ಹಣಕೊಡುವ ಒಬ್ಬ ಅರಸು ಮಗನನ್ನು ಕರೆದುಕೊಂಡು ಬಂದು ಮಗಳಿಗೆ ಜೊತೆಮಾಡಿದಳು. ಇತ್ತ ಮಲ್ಲಣನು ತನ್ನ ಪ್ರಾಣಪ್ರೇಯಸಿಯ ವಿರಹದಿಂದ ಕಾಂತಿಗುಂದಿ ಹೃದಯವು ಭೇದಿಸಿ ಹೋಗಲು ನಿಟ್ಟುಸಿರುಬಿಡುತ್ತ, ಬೀದಿ ಬೀದಿಗಳಲ್ಲಿ ಅಲೆದು, ಬೆಳದಿಂಗಳಲ್ಲಿ ನಿಂತು, ತಂಗಾಳಿಯನ್ನು ಕುಡಿದು, ಕೋಗಿಲೆಯ ಧ್ವನಿಯನ್ನು ಕೇಳಿ, ಮನ್ಮಥಾಂಕಿತನಾಗಿ ತಾಪವನ್ನು ಹೊಂದುತ್ತ ನೋಡಿದ ಪದಾರ್ಥಗಳಲ್ಲೆಲ್ಲ ತನ್ನ ಪ್ರೀತಿಪಾತ್ರಳಾದ ಮಲ್ಲಣಿಯ ರೂಪ, ರೇಖಾ ಲಾವಣ್ಯ, ತಾರುಣ್ಯಗಳನ್ನು ಆರೋಪಿಸುತ್ತ ವಿರಹಾಗ್ನಿಯಿಂದ ತಪ್ತನಾಗಿ ಬೆಂದು ಬೆಂಡಾದ ದೇಹವುಳ್ಳವನಾಗಿ ನಾಚಿಕೆಗೆಟ್ಟು, ಧೈರ್ಯಕುಂದಿ, ಕಾಮಾತುರನಾಗಿ ಅಳುತ್ತ ಮಲ್ಲಣಿಯ ಮಾತುಗಳನ್ನಾದರೂ ಕೇಳಿ ಮನಸ್ಸಿಗೆ ಸಮಾಧಾನವನ್ನುಂಟುಮಾಡಿಕೊಳ್ಳದಿದ್ದರೆ ಪ್ರಾಣವೇ ಉಳಿಯುವದಿಲ್ಲವೆಂದು ತಿಳಿದು ಮಧ್ಯರಾತ್ರಿಯಲ್ಲಿ ಆಕೆಯ ಮನೆಗೆ ಬಂದು ಅವಳ ಧ್ವನಿಯನ್ನೇ ಹಾರೈಸುತ್ತ ನಿಂತಿರಲು ತಾಯಿಯಿಂದ ಪೀಡಿತಳಾದ ಮಲ್ಲಣಿಯು ಆ ರಾಜಪುತ್ರನ ಮೇಲೆ ಮನಸ್ಸಿಲ್ಲದೆ ವಿಷಯ ಸುರತದಿಂದ ಕೂಡಿದ್ದು ಶಯ್ಯಾಗಾರದ ಬಾಗಿಲನ್ನು ತೆರೆದು ಬಾಯಿ ಮುಕ್ಕಳಿಸಿ ನೀರನ್ನು ಉಗುಳಿದಳು. ಆ ನೀರು ಮಲ್ಲಣನ ಮೇಲೆ ಬೀಳಲು ಸಂತೋಷದಿಂದ ಪುಲಕಿತ ಹೃದಯನಾಗಿ ಓ ಮಲ್ಲಣಿ, ಎಂದು ಕೂಗಿಕೊಂಡನು. ಅವಳು ಆ ಧ್ವನಿಯನ್ನು ಕೇಳಿ ಇದು ತನ್ನ ಪ್ರಾಣವಲ್ಲಭನ ಧ್ವನಿ ಎಂದು ತಿಳಿದು ಬೆದರಿ ಬೆಂಡಾಗಿ ಓಡಿ ಬಂದು ನೀನಾರು ಮಲ್ಲಣನೇ ? ಎಂದು ಕೇಳಿದಳು. ಆಗ ಆಕಾಶದಲ್ಲಿ ಹೊಳೆದ ಮಿಂಚಿನಿಂದಲೂ, ತನ್ನ ಕಡೆಗಣ್ಣನೋಟದ ಬೆಳಕಿನಿಂದಲೂ ಅವನು ಮಲ್ಲಣನೇ ಎಂದು ಗುರುತಿಸಿ ಉಕ್ಕಿಬಂದ ಆನಂದವನ್ನು ಮರೆಮಾಡಿ ನೀನು ನನ್ನನ್ನು ಬಿಟ್ಟುಹೋಗಿರುವೆ ಎಂದ ಬಳಿಕ ಪ್ರಾಣ ಇರುವವರೆಗೂ ಇಲ್ಲಿಗೆ ಬರಬಾರದು. ಈ ಕಾಳರಾತ್ರಿಯಲ್ಲಿ ಒಬ್ಬಂಟಿಗನಾಗಿ ಬರುವದು ಯೋಗ್ಯವೇ ? ನಿನ್ನನ್ನು ನೋಡದೆ ಉಗುಳಿದ ನನ್ನ ಅಪರಾಧವನ್ನು ಕ್ಷಮಿಸು. ಎಂದು ಅನ್ನುತ್ತ ಅವನ ಕೈಹಿಡಿದು ಆಲಂಗಿಸಿಕೊಂಡು ಮನೆಯ

ಹಿಂಭಾಗದಲ್ಲಿರುವ ಏಕಾಂತ ಸ್ಥಳಕ್ಕೆ ಅವನನ್ನು ಕರೆದುಕೊಂಡು ಹೋಗಿ ಮಂಚದ ಮೇಲಿರುವ ಅಂಚೆ ತುಪ್ಪಳದ ಹಾಸಿಗೆಯಲ್ಲಿ ಕೂಡ್ರಿಸಿ ತಾನೂ ಕುಳಿತುಕೊಂಡು ಹುಸಿನಗೆಯಿಂದ ರತಿಸುಖಕ್ಕೆ ಸಿದ್ಧನಾಗು ಎಂದು ಸೆಳೆದಳು. ಆಗ ವಿವೇಕಶಾಲಿಯಾದ ಮಲ್ಹಣನು ಎಲೈ— ಸುಂದರೀ, ವೇಶ್ಯಾಂಗನೆಯಾದ ನಿನಗೆ ಬೆಲೆಯನ್ನು ಕೊಟ್ಟು ನಿನ್ನೊಡನೆ ರಮಿಸುತ್ತಿರುವ ರಾಜಕುಮಾರನು ಅಲ್ಲಿ ಇರುವಾಗ ನಾನು ನಿನ್ನೊಡನೆ ಸುರತ ಸುಖವನ್ನು ಬಯಸುವದು ಯೋಗ್ಯವಲ್ಲ. ನಿನ್ನನ್ನು ನೋಡದಿದ್ದರೆ ನನ್ನ ಪ್ರಾಣ ಉಳಿಯಲಾರದೆಂದು ತಿಳಿದು ಸುಮ್ಮನೆ ನೋಡುವದಕ್ಕಾಗಿ ಬಂದಿರುವೆನೇ ಹೊರತು ಬೇರೆಯಿಲ್ಲ. ಎಂದು ಹೇಳಲು ಆಗ ಅವಳು ತನ್ನ ಕಾಮಾತಿರೇಕವನ್ನು ಅಡಗಿಸಿಕೊಂಡು ನಿಟ್ಟುಸುರುಬಿಡುತ್ತ ತಮ್ಮಗಳ ನಿಜವಾದ ರತಿಸುಖಕ್ಕೆ ಕಂಟಕಿಯಾಗಿರುವ ಆ ಮುದುಕೆಯನ್ನು ಧ್ಯದು ಮಲ್ಹಣನನ್ನು ಕುರಿತು ಪ್ರಾಣಕಾಂತಾ, ನಿನ್ನ ಸಂಗದಿಂದ ಉಂಟಾದ ರತಿಸುಖಾನುಭವವನ್ನು ಅನುಭವಿಸಿದ ನನಗೆ ಅನ್ಯರ ಸುರತ ಸುಖವು ರುಚಿಸಲಾರದು. ಸಿಹಿಮಾವಿನ ಹಣ್ಣಿನ ತನಿರಸವನ್ನು ಕುಡಿದ ಗಿಳಿಯು ಅನ್ಯಫಲಕ್ಕೆಳಸುವದೇ ? ನಿಮ್ಮ ಪ್ರೀತಿಯು ಅನ್ಯೋನ್ಯವಾದುದು. ನಮ್ಮಗಳಿಗೆ ಕಂಟಕಿಯಾದ ಈ ಮುದಿಸೂಳೆಯ ತೊಡಕನ್ನು ಪರಿಹರಿಸಿ ನಾವು ಸುಖವಾಗಿ ಬಾಳಬೇಕಾದರೆ ಶಿವಕೃಪೆಯನ್ನು ಪಡೆಯಬೇಕು. ಕನ್ನಡಿಯ ಮೇಲೆ ಉದ್ದು ಉರುಳುವಷ್ಟು ವೇಳೆಯಾದರೂ ನೀನು ನಿಶ್ಚಲಮನಸ್ಸಿನಿಂದ ಶಿವನನ್ನು ರಸವತ್ತಾದ ಕವಿತೆಗಳಿಂದ ಹೊಗಳಿ ಆತನನ್ನು ಮೆಚ್ಚಿಸಿಕೊಂಡರೆ ನಿನಗೆ ಭಕ್ತಿ, ಮುಕ್ತಿಗಳನ್ನು ಕೊಟ್ಟು ಕಾಪಾಡುವನು. ಎಂದು ಹೇಳಿದ ಮಲ್ಹಣಿಯ ಮಾತನ್ನು ಕೇಳಿ ಆತನು ಮರುದಿವಸ ನಸುಕಿನಲ್ಲಿಯೇ ಅವಳ ಸಂಗಡ ಕೂಡಿ ಆ ಊರ ವಿಜಯೇಶ್ವರ ದೇವಸ್ಥಾನವನ್ನು ಹೊಕ್ಕು ತಾನು ಲಿಂಗದ ಮುಂಭಾಗದಲ್ಲಿ ನಿಂತು ಮಲ್ಹಣಿಯನ್ನು ಲಿಂಗದ ಹಿಂಬದಿಗೆ ನಿಲ್ಲಿಸಿ ಅತ್ಯಂತ ಪ್ರೀತಿಯಿಂದ ಅನುರಾಗಯುಕ್ತನಾಗಿ ಅವಳ ರೂಪ, ಲಾವಣ್ಯಗಳಲ್ಲಿ ನೆಲೆಸಿದ ಮನಸ್ಸುಳ್ಳವನಾಗಿ ಅವಳ ಜಡೆಗಳನ್ನು ವರ್ಣಿಸುವದಕ್ಕೆ ಮೊದಲು ಮಾಡಲು ಅದನ್ನು ಕಂಡವಳಾದ ಮಲ್ಹಣಿಯು ಮೆಲ್ಲಮೆಲ್ಲನೆ ತಾನು ಹಿಂಜರಿದು ಕಾಣಿಸಿಕೊಳ್ಳದೆ ಹೋಗಲು ಅತ್ಯಂತ ಅನುರಾಗದಿಂದ ಆ ಕಾಂತೆಯಲ್ಲಿಟ್ಟ ಮಲ್ಹಣನ ನೋಟವೂ, ಈಶ್ವರ

ನಲ್ಲಿಟ್ಟ ಮನವೂ ಕವಿತಾ ರೂಪವಾಗಿ "ಕಚಪ್ರಚಯ ಪುಷ್ಪ ಸುಗಂಧಿ ಗಂಧಾಯ ನಮಃಶಿವಾಯ" ಎಂಬುದಾಗಿ ರಸವತ್ತಾಗಿ ಹೊಗಳಲು ಈಶ್ವ ರನು ಮೆಚ್ಚಿ ಪ್ರತ್ಯಕ್ಷನಾಗಿ ಆ ಮಲ್ಲಣನನ್ನು, ಮಲ್ಲಣಿಯನ್ನು, ಅವಳ ಗೆಳೆಯನ್ನು, ಹಾಗೂ ಆ ಮುದುಕಿಯಾದ ತಾಯಿಯನ್ನು ಸಹ ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ ಕೈಲಾಸಕ್ಕೆ ಕಳಿಸುತ್ತಿರಲು ಹೂವಿನ ಮಳೆಯು ಸುರಿಯಿತು. ಆದಕಾರಣ ವಿವೇಕಶಾಲಿಯಾದ ಭಾಮಿನಿಯರ ಮಾತನ್ನು ಪುರುಷರು ತಿರಸ್ಕರಿಸಬಾರದೆಂದು ಪ್ರೌಢಮತಿಯು ಗುರುಭಕ್ತಾರ್ಯನಿಗೆ ಹೇಳಿದಳು. ಎಂದು ಮತ್ತೂ ಒಂದು ವಿಚಿತ್ರವಾದ ಕಥೆಯನ್ನು ಹೇಳುವ ದಕ್ಕೆ ಆರಂಭಿಸಿದಳೆಂದು ಬಸವೇಶ್ವರನು ಶಿವಗಣಂಗಳಿಗೆ ತಿಳುಹುತ್ತಿದ್ದನು.

## — ಪಾಲಗುರ್ಜರ ಕಥೆಯು —

ವೀರ ಜನರಿಗೆ ತವರುಮನೆಯಾಗಿಯೂ, ವಿದ್ಯಾವಂತರಿಗೆ ವಾಸಗೃಹ ವಾಗಿಯೂ, ಸಮಸ್ತ ಸೌಭಾಗ್ಯಗಳಿಗೆ ನೆಲೆಯಾಗಿಯೂ ಇರುವ ಪಾಲ್ಗು ರ್ಜರಪುರವೆಂಬುದು ಈ ಭೂಲೋಕದಲ್ಲಿ ಪ್ರಸಿದ್ಧವಾದ ಪಟ್ಟಣವಾಗಿರುವದು. ಆ ಮಹಾಪುರವನ್ನು ಗುರುಲಿಂಗ ಜಂಗಮ ಸೇವಾ ತತ್ಪರನೂ, ಅರ್ಪಣ, ಅನುಸಂಧಾನ ತಿಳಿದವನೂ, ಶಿವಜ್ಞಾನಾನುಭವಿಯೂ, ಶಿವಮತ ಪ್ರಚಾರ ಕನೂ, ಧರ್ಮಾತ್ಮನೂ ಆದ ಒಬ್ಬ ದೊರೆಯು ಅತಿಶಯವಾದ ಗುಣಗಳಿಗೆ ಅನುರೂಪನೆನಿಸಿ ಪತಿವ್ರತಾ ಧರ್ಮದಿಂದ ಉಂಟಾದ ಕೀರ್ತಿಯಿಂದ ಲೋಕ ತ್ರಯಗಳನ್ನು ಬೆಳಗುತ್ತಿರುವ ಸರ್ವಮಂಗಳೆಯಾದ ಒಬ್ಬ ಶಿವಭಕ್ತಳೊಡನೆ ಪಸೆನಿಂದು ಪ್ರಾಣಿಗ್ರಹಣಮಾಡಿ ಪತ್ನೀಸುಖವನ್ನು ಪಡೆಯುತ್ತಿದ್ದನು. ಧರ್ಮನಿರತನಾದ ಆ ರಾಜನು ಸಕಲ ಇಂದ್ರಿಯಗಳಿಂದ ಹುಟ್ಟಿದ ಸುಖಗ ಳನ್ನು ಶಿವಾರ್ಪಣೆಮಾಡಬೇಕೆಂಬ ಶೈವಾಗಮ ವಾಕ್ಯವನ್ನನುಸರಿಸಿ ತಾನು ಅನುಭವಿಸುತ್ತಿರುವ ಸಮಸ್ತ ಇಂದ್ರಿಯ ಜನ್ಯಸುಖವನ್ನು ಶಿವಾರ್ಪಣೆ ಮಾಡುತ್ತ ತಾನು ಯಾವ ಕೆಲಸವನ್ನು ಮಾಡುತ್ತಿದ್ದರೂ ತನ್ನ ಮನಸ್ಸನ್ನು ಶಿವನಲ್ಲಿಯೇ ನೆಲೆಗೊಳಿಸುತ್ತಿದ್ದುದರಿಂದ ಅವನ ಸಕಲ ವ್ಯವಹಾರವೆಲ್ಲ ಶಿವ ಸೇವಾರೂಪವಾಗಿದ್ದಿತು. ಇಂತಹ ರಾಜನ ಶಿವಭಕ್ತಿಗೆ ಮೆಚ್ಚಿದ ಪರಶಿವನು ಸದಾ ಅವನ ಲಿಂಗಾಂಗಳಲ್ಲಿ ವ್ಯಾಪಿಸಿಕೊಂಡು ನೆಲೆಯಾಗಿ ನಿಂತಿದ್ದನು.

ಹೀಗಿರುವಾಗ ರಾಜನು ಒಂದು ದಿವಸ ತನ್ನ ರನ್ನಮಾಡದ ಉಪ್ಪರಿಗೆಯ ಮೇಲೆ ಹಂಸತೂಲಿಕಾತಲ್ಪವನ್ನು ಹಾಸಿರುವ ಮಣಿಮಂಚದ:ಮೇಲೆ ಮಂಡಿಸಿ ತನ್ನ ಪ್ರೇಮ ಪತ್ನಿಯೊಡನೆ ಪಗಡೆಯಾಟವನ್ನಾಡುತ್ತಿರಲು ಇದ್ದಕ್ಕಿದ ಹಾಗೆ ಫಕ್ಕನೆ ನಕ್ಕನು. ರಾಣಿಯು ಅದನ್ನು ಕಂಡು ಸುತ್ತಲೂ ನೋಡಿ ಆಹಾ! ಇದೇನಾಶ್ಚರ್ಯವು. ಇಲ್ಲಿ ನಮ್ಮಿಬ್ಬರ ಹೊರತು ಮತ್ತಾರೂ ಇಲ್ಲದಿರುವಾಗ ನಿಷ್ಕಾರಣವಾಗಿ ರಾಜನು ನಗುವದಕ್ಕೆ ಕಾರಣವೇನು ? ಎಂದು ಯೋಚಿಸಿ ನಾಚಿಕೆಯಿಂದ ತಲೆಯನ್ನು ಬಗ್ಗಿಸಿ ಅನುಮಾನದಿಂದ ಆಡುವದನ್ನು ಬಿಟ್ಟು ಪಗಡೆ ಆಟದ ಹಲಿಗೆಯನ್ನು ಬದಿಗೆ ಸರಿಸಿ ಗಂಡನನ್ನು ಕುರಿತು ಹೇ ಪ್ರಾಣ ಕಾಂತಾ, ನಾವು ಪಗಡೆಯಾಟವಾಡುವಾಗ ಮಧ್ಯದಲ್ಲಿ ನಿಷ್ಕಾರಣವಾಗಿ ನಗಲು ಕಾರಣವೇನು? ನಿಜವನ್ನು ನುಡಿದು ನನ್ನ ಸಂಶಯವನ್ನು ಹೋಗಲಾಡಿಸು. ಈ ಪಗಡೆಯಾಟವು ಶಿವಭಕ್ತರಿಗೆ ಯೋಗ್ಯವಲ್ಲವೆಂದು ನಕ್ಕೆಯಾ! ಆಟದಲ್ಲಿ ನನ್ನ ಮಂಕುತನವನ್ನು ಕಂಡೆಯಾ ? ಅಲ್ಲದೆ ನನ್ನ ಉನ್ನತವಾದ ಕುಚಗಳ ಮೇಲಿನ ಮುಸುಕು ಜಾರಿದ್ದಕ್ಕಾಗಿ ಹಾಸ್ಯಮಾಡಿ ನಕ್ಕೆಯಾ! ನನ್ನ ಮಾತಿನಲ್ಲಿಯ ಪೆಚ್ಚುತನ ಕಂಡೆಯಾ? ಲೆತ್ತವು ಜಾರಿಬಿದ್ದುದಕ್ಕೋ? ಅಥವಾ ಗೆಲ್ಲುವನೆಂಬ ಸಂತೋಷದಿಂದಲೋ ? ಇವಳು ಒಂದಾಟದಲ್ಲಿ ಗೆಲ್ಲಲಾರಳೆಂದೋ ? ಮತ್ತು ರತಿಸಮಯದಲ್ಲಿ ನಾನಾಡಿದ ಪ್ರಣಯ ವಚನ ಸ್ಮರಣೆಗಾಗಿಯೋ ? ಅಲ್ಲವೆಂದರೆ ಕಾಮರಸವು ಉಕ್ಕಿ ಬಂದಿತೋ ? ಯಾವದನ್ನೂ ನನ್ನೊಡನೆ ಮರೆಮಾಜದೆ ನನ್ನಾಣೆಯಾಗಿಯೂ ಹೇಳಬೇಕೆಂದು ಒತ್ತಾಯಮಾಡುವ ಹೆಂಡತಿಯನ್ನು ನೋಡಿ ರಾಜನು ಪುನಃ ನಕ್ಕು ಹೇಳುವದಕ್ಕೆ ತೊಡಗಿದನು. ಅದೇನೆಂದರೆ—

:

## — ಓಹಿಲಾರ್ಯನ ಕಥೆಯು —

ಸೌರಾಷ್ಟ್ರ ದೇಶದಲ್ಲಿ ಓಹಿಲಾರ್ಯನೆಂಬ ಒಬ್ಬ ಸೋಮೇಶ್ವರನ ಭಕ್ತನು ಇದ್ದನು. ಇವನ ಮಹಿಮೆಗಳನ್ನು ವಿವರಿಸಲು ಮಹಾದೇವನಿಗೂ ಅಳವಲ್ಲ. ಆತನು ಕಾರಣಾಂತರದಿಂದ ಶಿವಭಕ್ತನಾಗಿ ಹುಟ್ಟಿ ಸಾತ್ವಿಕಭಾವಯುಕ್ತನಾಗಿ ತನ್ನ ಗುರುವಾದ ಸೋಮೇಶ್ವರನಿಗೆ ಪ್ರತಿದಿವಸ ಸಹಸ್ರ ಕುಂಭಾಭಿಷೇಕಮಾಡಿ ವಿಧವಿಧ ಪುಷ್ಪಗಳಿಂದಲೂ, ಕೋಮಲವಾದ ಬಿಲ್ವದಳಗ

ಳಿಂದಲೂ ಶಿವನನ್ನು ಅಲಂಕರಿಸಿ, ತನ್ನ ತೂಕದ ಗುಗ್ಗುಳವನ್ನು ಶಿವನ ಮುಂದೆ ಉರಿಸಿ, ದೀಪಾರಾಧನೆಯನ್ನು ಮಾಡಿ, ಭಕ್ಷ್ಯ-ಭೋಜ್ಯಾದಿಗಳಿಂದ ನೈವೇದ್ಯವನ್ನುಮಾಡಿ, ಪುಷ್ಪಾಂಜಲಿಯನ್ನು ಸಮರ್ಪಿಸಿ, ಮಹದಾನಂದ ಭರಿತನಾಗಿ ಶಿವ ನಾಮಗಳನ್ನು ಸ್ತೋತ್ರ ಮಾಡುತ್ತ, ಸಂತೋಷದಿಂದ ಕುಣಿದು, ಕುಪ್ಪಳಿಸುತ್ತ ಐಶ್ವರ್ಯಯುಕ್ತ ಪೂಜೆಯನ್ನು ಮಾಡುತ್ತಿರಲು ತನ್ನ ಧನವೆಲ್ಲ ಮುಗಿದು ಹೋಗಲು ಧೈರ್ಯಗೆಡದೆ ತೆಂಕಣದಿಕ್ಕಿನಲ್ಲಿಯ ಭೀಕರ ಕಾಡುಗಳಲ್ಲಿ ಹಗಲಿರುಳು ತಿರುಗಾಡಿ ಗುಗ್ಗುಳ ಮರಗಳನ್ನು ಹುಡುಕಿ ಗುಗ್ಗುಳವನ್ನು ಚೀಲದಲ್ಲಿ ತುಂಬಿಕೊಂಡು, ಪತ್ರಿ-ಪುಷ್ಪಗಳನ್ನು ಸಹ ಸಂಗ್ರಹಿಸಿಕೊಂಡು ಸಡಗರದಿಂದ ಬಂದು ಸೋಮೇಶ್ವರನ ಮಂದಿರವನ್ನು ಸೇರಿ ಪೂಜೆ ಮಾಡಬೇಕೆಂಬ ತವಕದಲ್ಲಿರಲು. ಆ ದೇಶದ ಗೌಳತಪಸ್ವಿಗಳು ಷೋಡಶೋಪಚಾರ ವಿಧಿಯಿಂದ ಅತ್ಯಂತ ಸಂಭ್ರಮದಿಂದ ಸೋಮೇಶ್ವರನನ್ನು ಪೂಜೆಮಾಡುತ್ತಿರಲು, ಕಾಲಾಕಾಲಗಳನ್ನು ನೋಡದೆ ತಾನು ಪೂಜೆಮಾಡಬೇಕೆಂಬ ಕುತೂಹಲದಿಂದ ಶಿವಾಲಯವನ್ನು ಪ್ರವೇಶಿಸಿ ಗುಗ್ಗುಳದ ಕಂಬಿಯನ್ನು ಲಿಂಗದ ಮುಂದಿಟ್ಟು, ಪತ್ರಿಯ ಬುಟ್ಟಿಯನ್ನು ಕೆಳಗಿರಿಸಿ ತಪಸ್ವಿಗಳು ಮಾಡಿದ್ದ ಪೂಜೆಯನ್ನು ಕೆಡಿಸಿ ತಾನು ಸಹಸ್ರ ಕುಂಭಗಳಿಂದ ಅಭಿಷೇಕ ಮಾಡಿ, ಪತ್ರ ಪುಷ್ಪಗಳಿಂದ ಅಲಂಕಾರಮಾಡಿ, ಗುಗ್ಗುಲವನ್ನು ಹೊತ್ತಿಸಿ, ದೀಪವನ್ನು ಬೆಳಗಿ, ಶಿವಶಿವ ಮಹಾದೇವಾ, ಮೃತ್ಯುಂಜಯಾ, ಎಂದು ಗಂಟೆಯನ್ನು ಬಾರಿಸುತ್ತ ಪುಷ್ಪಾಂಜಲಿ ಕೊಟ್ಟು, ನೈವೇದ್ಯ ತಾಂಬೂಲಗಳನ್ನು ಅರ್ಪಿಸಿ, ಉಘೇ, ಉಘೇ ಜಯಶಂಕರ ಮಹಾದೇವಾ ಎಂಬ ಜಯಧ್ವನಿಯೊಡನೆ ಆನಂದ ಪರವಶನಾಗಿ ನಿಂತಿರಲು ಆ ಗೌಳತಪಸ್ವಿಗಳು ಈತನನ್ನು ನೋಡಿ ಅಸೂಯೆಹೊಂದಿ ಸಕಲರೂ ಒಂದಾಗಿ ಕೂಡಿ ಈ ನೀಚನು ನಾವು ಮಾಡಿದ್ದ ಸೌಂದರ್ಯಯುಕ್ತ ಅಮೋಘ ಪೂಜೆಯನ್ನು ಕೆಡಿಸಿ ಗರ್ವದಿಂದ ಮೆರೆಯುತ್ತಿರುವನಲ್ಲಾ ! ವಿಷ್ಣು-ಬ್ರಹ್ಮಾದಿಗಳು ಮಾಡಿದ ಶಿವಪೂಜೆಯನ್ನು ಲಕ್ಷ್ಯಮಾಡದೆ ಹಿಮಾಲಯದ ಕೇದಾರನಾಥನನ್ನು ಪೂಜಿಸಿದ ಭೃಂಗೀಶನಿಗೆ ಇವನು ತಮ್ಮನೋ ? ಕಾಳಹಸ್ತಿಯಲ್ಲಿ ಜೇಡರ ಹುಳವು ತನ್ನ ನೂಲಿನಿಂದ ಗೋಪುರವನ್ನೂ, ಪ್ರಾಸಾದದ ಕೈಸಾಲೆಗಳನ್ನೂ, ಕಟ್ಟಿ ಶಿವಭಕ್ತಿಯನ್ನು ತೋರ್ಪಡಿಸಿ ಹೋಗಲು, ಆ ಪೂಜೆಯನ್ನು ಕೆಡಿಸಿ ತನ್ನ ಸೊಂಡಿಲಿನ ನೀರಿ

ನಿಂದ ಅಭಿಷೇಕಮಾಡಿ, ಕಮಲದಿಂದ ಪೂಜಿಸಿದ ಗಜರಾಜನ ಸ್ನೇಹಿತನೋ? ಅದೇ ಕಾಳಹಸ್ತೀಶ್ವರನಿಗೆ ಮಡಿಪೂಜೆ ಮಾಡಿದ್ದನ್ನು ಕೆಡಿಸಿ ತಾನು ಪೂಜೆ ಮಾಡಿದ ಕಣ್ಣಪ್ಪನಿಗೆ ಇವನು ಪರಮಮಿತ್ರನೋ? ಆಗಮೋಕ್ತ ಪ್ರತಿಷ್ಠಿತವಾದ ಗರ್ಭಗುಡಿಯನ್ನು ಹೊಕ್ಕು ಪೂಜಿಸುವ ಇವನು ನಂದೀಶನೋ? ಭೃಗುವೋ? ದಧೀಚಿಯೋ? ಅಥವಾ ಉಪಮನ್ಯುವೋ? ಶಿವನ ಸ್ಥಾನವನ್ನು ಹೊಗುವದಕ್ಕೆ ಅಸಾಧ್ಯವೆಂದು ತಿಳಿದು ನಾರಾಯಣನು ಬಾಗಿಲನ್ನು ಕಾಯುವನು. ಬ್ರಹ್ಮನು ಸಮಯವನ್ನು ನಿರೀಕ್ಷಿಸುವನು. ಇಂದ್ರನು ಮಹಾದ್ವಾರದಲ್ಲಿ ಕಾದಿರುವನು. ಇಂಥವರೇ ಹೀಗಿರುವಾಗ ಏಕಾಏಕಿಯಾಗಿ ಪ್ರವೇಶಿಸುವ ಇವನ ಅಹಂಕಾರವನ್ನು ನಿಲ್ಲಿಸುವದೇ ಯೋಗ್ಯವೆಂದು ಭಾವಿಸಿ, ಅವನು ಹೊರಗೆ ಬಂದೊಡನೆಯೇ ಕದವನ್ನು ಮುಚ್ಚಿ, ಬಲವಾದ ಬೀಗವನ್ನು ಹಾಕಿ, ಸೇವಕರನ್ನು ಕಾಯಲುಹಚ್ಚಿ ಆ ದುಷ್ಟ ಓಹಿಲನು ಬಂದರೆ ಬಿಡಬೇಡಿರೆಂದು ಹೇಳಿ ಇನ್ನು ಮೇಲೆ ಅವನು ಹೇಗೆ ಒಳಗೆ ಹೋಗುವನೋ ನೋಡೋಣ ಎಂದು ಹಾಸ್ಯಮಾಡಿ ನಗುತ್ತ ಹೊರಟು ಹೋದರು. ಇತ್ತ ಓಹಿಲಾರ್ಯನು ಎಂದಿನಂತೆ ಪತ್ರಿ-ಪುಷ್ಪಗಳನ್ನು ಸಂಪಾದಿಸಿಕೊಂಡು ದೇವಾಲಯಕ್ಕೆ ಬಂದುಸೇರಲು ಪರಶಿವನು ಬೇಗನೇ ಎದ್ದು ಬಾಗಿಲನ್ನು ತೆರೆದನು. ಅವನು ಪ್ರತಿದಿವಸದಂತೆ ಪೂಜೆಮಾಡಿ ಗುಗ್ಗುಳವನ್ನು ತರುವದಕ್ಕಾಗಿ ಅರಣ್ಯಕ್ಕೆ ಹೋದನು. ಇದೆಲ್ಲವನ್ನು ಪ್ರತ್ಯಕ್ಷ ನೋಡುತ್ತಿದ್ದ ಕಾವಲುಗಾರರು ತಮ್ಮ ಗೌಳತಪಸ್ವಿಗಳು ಬಂದ ಕೂಡಲೆ ನಡೆದ ಎಲ್ಲ ಸಂಗತಿಯನ್ನು ಬಿನ್ನವಿಸಲು ಅವರು ಆಶ್ಚರ್ಯಭರಿತರಾಗಿ "ಪೂರ್ವದಲ್ಲಿ ಪರಶಿವನು ಕಿನ್ನರ ಬ್ರಹ್ಮಯ್ಯನಿಗೆ ಸಾಕ್ಷಿಯನ್ನು ನುಡಿದನೆಂದೂ, ನಂಬಿಯಕ್ಕನಿಗೆ ಎರಡು ದಿನಗಳವರೆಗೂ ಬಾಗಿಲನ್ನು ತೆರೆದಿದ್ದನೆಂದೂ, ಮುದನೂರು ದಾಸಯ್ಯನಿಗೆ ರಾಮೇಶ್ವರನು ಕದವನ್ನು ತೆರೆದಿದ್ದನೆಂದೂ ಕಥೆಗಳನ್ನು ಕೇಳಿದ್ದೆವು. ಈತನು ಅವರಲ್ಲಿ ಒಬ್ಬನಾಗಿರಬಹುದೋ? ಇಲ್ಲವೆ ಶಿವನು ಈತನಿಗೆ ಕದವನ್ನು ತೆರೆದನೆಂಬುದು ಸುಳ್ಳು. ಅರಣ್ಯವಾಸಿಯಾದ ಇವನು ಕಪಟ ಉಪಾಯದಿಂದ ಬಾಗಿಲನ್ನು ತೆರೆದು ಒಳಹೊಕ್ಕು ಕಪಟಪೂಜೆಯನ್ನು ಮಾಡಿ ಹೋಗಿರಬಹುದು. ಈ ಊರಲ್ಲಿ ಇವನಿಗೆ ಭಿಕ್ಷೆ ದೊರೆಯದಿದ್ದರೆ ಇವನೆಲ್ಲಿರುವನು? ಎಂದು ಬಗೆದು ಊರಲ್ಲಿ ಯಾರೂ ಅವನಿಗೆ ಭಿಕ್ಷವನ್ನು ಕೊಡದಂತೆ ಕಟ್ಟು

ಮಾಡಿಸಿದರು. ಭಿಕ್ಷೆಗಾಗಿ ಬಂದ ಓಹಿಲನಿಗೆ ಭಿಕ್ಷೆ ಸಿಗದಿರುವದನ್ನು ನೋಡಿ ಹೆದರದೆ ನಮ್ಮ ಹಿರಿಯರು ಕಂದಮೂಲಾದಿಗಳನ್ನು ತಿಂದು, ಜಲವಾಯುಗಳನ್ನು ಸಹ ಆಹಾರ ಮಾಡಿಕೊಂಡು ತಪಸ್ಸನ್ನು ಆಚರಿಸಿ ಸುಖಿಗಳಾಗಲಿಲ್ಲವೇ ? ನಾನು ಇದಕ್ಕೇಕೆ ಆಯಾಸಪಡಬೇಕು. ಮುಕ್ತಿದಾಯಕ ಶಂಕರನನ್ನು ಹುಡುಕಿ ಅಲೆದಾಡುವ ನಾನು ಅನ್ನಕ್ಕಾಗಿ ಮನೆಮನೆಗೆ ತಿರುಗುವದನ್ನು ಕಂಡು ಅವನ ಭಕ್ತರು ನಗುವರಲ್ಲವೇ? ಹಾಗೂ ಅನ್ನದಿಂದ ಶರೀರವು ಕೊಬ್ಬುವದು. ಶರೀರದಿಂದ ಕಾಮವು ಹೆಚ್ಚಾಗುವದು. ಕಾಮದಿಂದ ಮನವು ವಿಕಾರಗೊಳ್ಳುವದು. ಮನೋವಿಕಾರದಿಂದ ಭಕ್ತಿಯು ದೂರಾಗುವದು. ಭಕ್ತಿಯು ದೂರವಾದ ಮೇಲೆ ಸದ್ಧರ್ಮಾಚರಣೆಯು ತಪ್ಪಿ ಮನುಷ್ಯನು ದುಃಖಮಯ ಸಂಸಾರದಲ್ಲಿ ಮುಳುಗಿ ಹೋಗುವನು. ಭಕ್ತನು ತನುಕರಣಾದಿಗಳ ಸುಖವನ್ನು ತಾನಾಗಿಯೇ ಬಿಡಬೇಕು. ಹೀಗಿರುವಾಗ ಆ ಸುಖ ತಾನಾಗಿಯೇ ತಪ್ಪಿಹೋದುದು ಶಿವಾನುಗ್ರಹವು. ವೈರಿಗಳು ನಾನು ತಿರಿದುಣ್ಣುವದನ್ನು ತಪ್ಪಿಸಿದ ಮಾತ್ರದಿಂದ ನನ್ನ ಭಕ್ತಿಗೆ ಕೊರತೆಯಾಗುವದೇ ? ಇವರ ಕೋಪವು ನನ್ನನ್ನು ಏನೂ ಮಾಡಲಾರದು. ಮನೆಮನೆಗೆ ತಿರುಗುವ ಆಯಾಸ ತಪ್ಪಿಸಿದರು. ಯಾವದನ್ನೂ ಬೇಕೆಂದು ಬೇಡದೆ ಶಿವಾನುಗ್ರಹದಿಂದ ದೊರೆತದ್ದನ್ನು ಈಶ್ವರಾರ್ಪಣ ಮಾಡಿ ಭುಂಜಿಸುವದೇ ಸರ್ವಸುಖವು. ಲಿಂಗವನ್ನು ಪೂಜಿಸುವ ಶಿವಭಕ್ತರು ವಿಷಯಾಭಿಲಾಷಿಗಳಾಗಿ ಹಾಳಾಗುತ್ತಾರೆಯೇ ? ಎಂದು ಚಿಂತಿಸಿ ಅಸದೃಶ ವೈರಾಗ್ಯವನ್ನು ಹೊಂದಿ, ಈ ಲೋಕದಲ್ಲಿ ಶಿವನಿರ್ಮಾಲ್ಯವನ್ನು ಸೇವಿಸಿದವನಿಗೆ ಸ್ಥಿರಭಕ್ತಿ, ಜಿತಮನಸ್ಸು, ಸಕಲ ಕಾರ್ಯಸಿದ್ಧಿ, ಮುಪ್ಪು, ಮರಣಗಳು ಇಲ್ಲದಂತಾಗಿ ಮುಕ್ತಿಯೂ ಸಹ ದೊರೆಯುವದು. ಆದ್ದರಿಂದ ಶಿವನಿರ್ಮಾಲ್ಯವನ್ನೇ ಪ್ರಸಾದವೆಂದು ಸೇವಿಸಿ ಸಂತುಷ್ಟನಾಗಿ ಶಿವಾರ್ಚನೆಯನ್ನು ಮಾಡುವೆನೆಂದು ನಿಶ್ಚಯಿಸಿ ರಾತ್ರಿ ಪೂಜೆಮಾಡಿ ಬೆಳಗಾದಕೂಡಲೇ ನಿರ್ಮಾಲ್ಯವನ್ನು ತೆಗೆದು ಭಕ್ತಿಯಿಂದ ಸೇವಿಸಿ ಸುಖವಾಗಿ ಇದ್ದನು. ಇದನ್ನು ನೋಡಿ ಆ ಗೌಳತಪಸ್ವಿಗಳು ಆಶ್ಚರ್ಯಗೊಂಡು ಎಲಾ ! ಈ ನೀಚನು ಭಿಕ್ಷಾನ್ನವನ್ನು ಲಕ್ಷ್ಯಮಾಡದೆ ನಿರ್ಮಾಲ್ಯವನ್ನೇ ತಿಂದು ಉಪಜೀವಿಸುವ ಹೊಸ ಉಪಾಯವನ್ನು ಹುಡುಕಿದನು. ಇದನ್ನೂ ಸಹ ಇವನಿಗೆ ದೊರಕದಂತೆ ಮಾಡಬೇ

ಕೆಂದು ಬಗೆದು ಬೇಗನೆ ಬಂದು ಆ ನಿರ್ಮಾಲ್ಯವನ್ನು ಸುಟ್ಟು ಬೂದಿಯ ನ್ನಾಗಿಮಾಡಿ ಹೋದರು. ಆಗ ವೈರಾಗ್ಯ ಸಂಪನ್ನನಾದ ಓಹಿಲಾರ್ಯನು ಬಂದು ಆ ಬೂದಿಯ ಗುಂಪೆಯನ್ನು ನೋಡಿ ಹರ್ಷದಿಂದ ಆಹಾ! ನನ್ನ ಭಾಗ್ಯವನ್ನು ಏನೆಂದು ಹೇಳಲಿ ಪರಮೇಶ್ವರನ ಕೃಪೆಯು ಸಂಪೂರ್ಣ ದೊರೆ ದ್ದುದರಿಂದಲೇ ಉತ್ತಮ ಭಸ್ಮವು ನನಗೆ ದೊರೆಯಿತು. ಮಂದಭಾಗ್ಯರಿಗೆ ಇದನ್ನು ಸೇವಿಸುವ ಪುಣ್ಯವುಂಟೇ? ನಾನು ಧನ್ಯನು. ಬೆಣ್ಣೆಯಬದಲು ತುಪ್ಪವು ದೊರೆಯಿತು. ಎಂದು ಆ ಬೂದಿಯನ್ನು ತೆಗೆದುಕೊಂಡು ಶರೀರ ಕ್ಕೆಲ್ಲ ಲೇಪಿಸಿಕೊಂಡು ತೃಪ್ತಿಯಾಗುವಷ್ಟು ತಿಂದು ಉಳಿದದ್ದನ್ನು ಹಾಸಿಗೆ ಮಾಡಿಕೊಂಡು ಸಂತೋಷಚಿತ್ತನಾಗಿ ಮಲಗಿಕೊಂಡನು. ಇದನ್ನು ನೋಡಿದ ಆ ತಪಸ್ವಿಗಳು ಇದೇನಾಶ್ಚರ್ಯವು? ಬೂದಿಯನ್ನುತಿಂದು ಬದುಕುವದುಂಟೇ? ಈತನು ಮಾಯದವನುದ್ದು, ಮಂತ್ರಗಳಿಂದ ಬದುಕಿರಬಹುದು. ಎಂದು ಕೆಲ ವರೂ ದೃಢಚಿತ್ತರಾದ ಭಕ್ತರಿಗೆ ಹಸಿವು ಬಾಯಾರಿಕೆಗಳು ಆಗಲಾರವೆಂದು ನಮ್ಮ ಹಿರಿಯರು ಹೇಳುತ್ತಿದ್ದರು. ಇವನು ಅಂತಹ ಭಕ್ತನಾಗಿರಬಹುದು. ಆದ್ದರಿಂದಲೇ ಭಸ್ಮವನ್ನು ತಿಂದು ಜೀವಿಸುತ್ತಿರುವನು ಎಂದು ಬೇರೆ ಕೆಲವರು ಹೇಳುತ್ತಿದ್ದರು. ಅಷ್ಟರಲ್ಲಿ ಓಹಿಲಾರ್ಯನು ಎಂದಿನಂತೆ ಶಿವಪೂಜೆಗಾಗಿ ಗುಗ್ಗುಲವನ್ನು, ಬಿಲ್ವದಳಗಳನ್ನು ಆರಿಸಿಕೊಂಡು ಬೇರೆ ಬೇರೆ ಚೀಲಗಳಲ್ಲಿ ತುಂಬಿಕೊಂಡು ಬರುತ್ತಿರುವ ಈ ಶಾಂತಪುರುಷನು ಪೂಜೆಗೆ ತಡವಾಯಿ ತೆಂದು ತಿಳಿದು ಬೇಗಬೇಗನೆ ಬರುತ್ತಿರುವಾಗ ದಾರಿಯಲ್ಲಿ ಒಂದು ಚೂಪಾದ ಮುಳ್ಳು ಅಂಗಾಲಿನಲ್ಲಿ ನಟ್ಟು ಮೇಲೆಹಾಯ್ದು ಕಾಣಿಸಿಕೊಂಡಿತು. ಕೂಡಲೇ ನರಗಳು ಉಬ್ಬಿಕೊಂಡು ಸೆಳೆತವು ಹೆಚ್ಚಿ ಮುಂದಕ್ಕೆ ಹೆಜ್ಜೆ ಇಡುವದೇ ಕಷ್ಟ ವಾಯಿತು. ಆಗ ಓಹಿಲನು ಅಂಗಾಲನ್ನು ಊರದೆ ತುದಿಬೆರಳುಗಳಿಂದ ನಡೆಯುತ್ತ ಸಾವಕಾಶವಾಗಿ ಕುಂಟುತ್ತ ಬರುತ್ತ ಇರಲು ಪೂರ್ವದಲ್ಲಿ ಪರ ಮೇಶ್ವರನು ಅರ್ಜುನನಿಗೆ ಇಂದ್ರಕೀಲ ಪರ್ವತದಲ್ಲಿ ಅಭೀಷ್ಟವನ್ನು ಕೊಡುವ ದಕ್ಕಾಗಿ ಬಂದಂತೆಯೂ, ಪುಲಿಗಿರಿ ನಗರಿಯಲ್ಲಿದ್ದ ಅತಿ ಮುಪ್ಪಿನವನಾದ ೯೦ ವರ್ಷದ ಹೊನ್ನಿದೇವನು ಪ್ರತಿದಿವಸ ತುಂಗಭದ್ರಾ ನದಿಯ ಜಲದಿಂದ ಅಭಿಷೇಕಮಾಡುವ ವ್ರತವನ್ನು ಹಿಡಿದು ಒಂದಾನೊಂದು ದಿವಸ ನೀರು ತುಂಬಿದ ಕೊಡವನ್ನು ಹೊತ್ತುಕೊಂಡು ಬರುವಾಗ ಎಡವಿ ಮುಗ್ಗರಿಸಿ

ಬಿದ್ದಾಗ್ಯೂ ಕೊಡವನ್ನು ಕೆಳಗೆ ಕೆಡವದೆ ಭಕ್ತಿಯಿಂದ ಸ್ವಾಮೀ! ಸೋಮೇಶ್ವರಾ, ನನ್ನ ಜೀವ ಇರುವವರೆಗೂ ನಿನ್ನ ಪಾದಸೇವೆಯನ್ನು ಬಿಡುವದಿಲ್ಲ ಎಂದು ಹೇಳುತ್ತ ತನ್ನ ಬೆನ್ನಮೂಳೆಯು ಮುರಿದು ಹೋದಾಗ್ಯೂ ಮೆಲ್ಲ ಮೆಲ್ಲನೆ ಬರುತ್ತಿರುವಾಗ ಪರಮೇಶ್ವರನು ಅನುಗ್ರಹಿಸಿ ಶಬರವೇಷದಿಂದ ಪ್ರತ್ಯಕ್ಷನಾದನು. ಈಗಲಾದರೂ ಅದರಂತೆಯೇ ತಲೆಗೆ ಚಿಗುರೆಲೆಯನ್ನೂ, ಮೈಗೆ ಚರ್ಮವನ್ನೂ, ಗುಂಜಾಭರಣಗಳನ್ನೂ, ಕಾಲಿಗೆ ಕೆರವನ್ನೂ, ಕೈಗಳಿಗೆ ಬಿಲ್ಲು ಬಾಣ ಬತ್ತಳಿಕೆಗಳನ್ನೂ ಅಳವಡಿಸಿಕೊಂಡು ಸಂಗಡ ನಾಯಿಗಳನ್ನು ಕೂಡಿಕೊಂಡು ಬೇಡನ ವೇಷವನ್ನು ಧರಿಸಿ ಓಹಿಲಾರ್ಯನ ಹಿಂದೆ ಬರುತ್ತ ಅವನನ್ನು ಕುರಿತು-- ಎಲೈ ಭಕ್ತಶಿರೋಮಣಿಯೇ, ಕಾಲಿನಲ್ಲಿ ಮೊಳೆಯು ನಟ್ಟು ಮೇಲೆ ಮೂಡಿದ್ದರೂ ಈ ಉರಿಬಿಸಿಲಲ್ಲಿ ಕಾಡುಹಾದಿಯಲ್ಲಿ ತುಂಬಾ ಹೊರೆಗಳನ್ನು ಹೊತ್ತುಕೊಂಡು ಹೋಗುತ್ತಿರುವೆಯಲ್ಲಾ! ಇಷ್ಟೊಂದು ಕಷ್ಟಪಡದಿದ್ದರೆ ಈಶ್ವರನು ಮೆಚ್ಚುವದಿಲ್ಲವೇ? ಈ ಲೋಕದಲ್ಲಿ ಜೀವಾತ್ಮನಿಗೆ ಕಷ್ಟಮಾಡಿಕೊಳ್ಳಬಾರದು. ಇದಕ್ಕಾಗಿ "ಜೀವಂಭದ್ರಾಣಿ ಪಶ್ಯಂತಿ" ಎಂದು ಶ್ರುತಿಯು ಮೊರೆಯಿಡುತ್ತಿರುವದರಿಂದ ಈ ಮರದ ನೆರಳಿನಲ್ಲಿ ನಿನ್ನ ಗಂಟುಮೂಟೆಗಳನ್ನು ಇಳಿಸಿ ಕಾಲಲ್ಲಿ ನಟ್ಟಿರುವ ಮೊಳೆಯನ್ನು ತೆಗೆದುಹಾಕಿ ಸ್ವಲ್ಪ ವಿಶ್ರಾಂತಿಹೊಂದು. ಹಟವನ್ನು ಬಿಡು. ಬಡದೇಹಿಯಾದ ನೀನು ಈ ಮೂಟೆಯನ್ನು ಹೊತ್ತುಕೊಂಡು ಬಿಸಿಲಲ್ಲಿ ನಡೆಯುವದಾದರೂ ಹೇಗೆ? ಎಂದು ಹೇಳುತ್ತ ಹತ್ತಿರಕ್ಕೆ ಬಂದು ಅಯ್ಯಾ, ಈ ಮುಳ್ಳನ್ನು ಕೀಳುವದಕ್ಕೆ ನಿನಗೆ ಭಯವುಂಟಾದರೆ ಕಾಲಿಗೆ ನೋವಾಗದ ಹಾಗೆ ಕಿತ್ತುಹಾಕುವೆನೆಂದು ಹೇಳಲು ಅದನ್ನು ಕೇಳಿ ಓಹಿಲನು ಓಹೋ ಕಾಡಬೇಡನೇ, ದೂರಹೋಗು ಹತ್ತಿರಬರಬೇಡ. ನಾವು ಕಾಡಬೇಡರನ್ನು ಮುಟ್ಟುವದಿಲ್ಲ. ನಿನ್ನಿಂದ ನನ್ನ ಕಾಲಲ್ಲಿಯ ಮುಳ್ಳನ್ನು ಕೀಳಿಸುವದು ಯೋಗ್ಯವಾದುದಲ್ಲ. ಪವಿತ್ರವಾದ ಈ ಮೂಟೆಗಳನ್ನು ಹೊತ್ತಿರುವಾಗ ನಿಮ್ಮ ಕೈಗಳಿಂದ ನನ್ನ ಕಾಲುಗಳನ್ನು ಮುಟ್ಟಿಸುವದೂ ಯೋಗ್ಯವಲ್ಲ. ಮತ್ತು ಮಧ್ಯಮಾರ್ಗದಲ್ಲಿ ಈ ಗಂಟುಗಳನ್ನು ಕೆಳಗಿಡುವದೂ ಸರಿಯಲ್ಲ. ಆದ್ದರಿಂದ ಹೇಗಾದರೂಮಾಡಿ ದೇವಸ್ಥಾನವನ್ನು ಸೇರಿ ಅಲ್ಲಿಯೇ ಇವುಗಳನ್ನು ಇಳುಹುವೆನೆಂದು ಹೇಳಿದನು. ಆಹಾ! ನೀನು ಬಹುಶಕ್ತಿವಂತನು.

ಕಾಲಿನಲ್ಲಿಯ ಮುಳ್ಳು ಮೇಲ್ಭಾಗದಲ್ಲಿ ಕಾಣಿಸುತ್ತಿದ್ದರೂ ಹೊರೆಯನ್ನಿಳುಹದೆ ಇನ್ನೂ ದೂರದಲ್ಲಿರುವ ದೇವಸ್ಥಾನವನ್ನು ಮುಟ್ಟುವದು ಹೇಗೆ? ನಿನ್ನ ಕಾಲಲ್ಲಿ ಬಗೆದುಕೊಂಡಿರುವ ಮುಳ್ಳನ್ನು ನೋಡಿದರೆ ನನ್ನ ಕಣ್ಣುಗಳಲ್ಲಿ ನಾಟಿಕೊಂಡು ಇರುವಂತೆ ಭಯವೂ, ನೋವೂ ಉಂಟಾಗುವವು. ಆದ್ದರಿಂದ ನಿನ್ನ ವ್ರತದಂತೆ ಹೊರೆಯನ್ನು ಹೊತ್ತುಕೊಂಡು ಈ ಮರಕ್ಕೆ ಒರಗಿಕೊಂಡು ಸ್ವಲ್ಪ ನಿಂತುಕೋ, ನಿನ್ನ ಕಾಲನ್ನು ನಾನು ಮುಟ್ಟದೆ ಚಿಮ್ಮುಟಿಗೆಯಿಂದ ಮುಳ್ಳನ್ನು ಕಿತ್ತು ತೆಗೆಯುವೆನೆಂದು ಹೇಳಿ ನಿಲ್ಲಿಸಿ ಅದರಂತೆ ಮುಳ್ಳನ್ನು ಕೀಳಲು ಗಾಯದಿಂದ ರಕ್ತವು ಬಾರದೆ ಈ ವರೆಗೆ ತಿಂದು ಮುಗಿಸಿದ್ದ ಭಸ್ಮವು ಚೀರ್ಕೊಳಿವೆಯಿಂದ ನೀರು ಹೊರಡುವಂತೆ ಹೊರಟಿತು. ಅದನ್ನು ಬೇಡನು ಕಂಡು ನಗುತ್ತ ಒಂದು ತೆಂಗಿನ ಚಿಗುರುಲೆಯನ್ನು ತಂದು ಗಾಯಕ್ಕೆ ಕಟ್ಟಿ ಹೆದರಬೇಡ. ಶಿವನು ನಿನ್ನನ್ನು ಕಾಪಾಡುವನೆಂದು ಹೇಳಿ ಮಾಯವಾದನು. ಇಷ್ಟೊಂದು ಉಪಚಾರಮಾಡಿದ ಬೇಡನು ಕ್ಷಣಕಾಲದಲ್ಲಿಯೇ ಮಾಯವಾಗಿದ್ದರಿಂದ ಓಹಿಲಾರ್ಯನು ಸೋಮನಾಥನೇ ನನ್ನ ಮೇಲಿನ ದಯೆಯಿಂದ ಬಂದು ಹೀಗೆ ಉಪಚರಿಸಿದನೆಂದು ಸಂತೋಷಯುಕ್ತನಾಗಿ ಬೇಗಬೇಗನೇ ಬರುತ್ತಿರಲು ಶಂಕರನು ಓಡಿಬಂದು ದೇವಸ್ಥಾನದ ಬಾಗಿಲನ್ನು ತೆರೆದನು. ಆಗ ಓಹಿಲನು ಅಭಿಷೇಕಮಾಡಿ ಬಿಲ್ವಾದಿ ಪತ್ರಿ ಪುಷ್ಪಗಳಿಂದ ಸಾಂಗವಾಗಿ ಪೂಜೆಯನ್ನು ನೆರವೇರಿಸಿ ಪ್ರದಕ್ಷಿಣ, ನಮುಸ್ಕಾರಗಳನ್ನು ಸಮರ್ಪಿಸಿ ಗುಗ್ಗುಲವನ್ನು ಹೊತ್ತಿಸುವದಕ್ಕಾಗಿ ಹೊರಗೆ ಬಂದನು. ಅಷ್ಟರಲ್ಲಿ ಆ ನೀಚ ತಪಸ್ವಿಗಳು ರಾಶಿಯಾಗಿ ಇಟ್ಟದ್ದ ಗುಗ್ಗುಲವನ್ನು ಕದ್ದುಕೊಂಡು ಹೋಗಿದ್ದರು. ಆಗ ಅಲ್ಲಿ ಗುಗ್ಗುಲವಿಲ್ಲದಿರುವದನ್ನು ನೋಡಿ ಓಹೋ ನನ್ನೊಡೆಯ ಸೋಮನಾಥನು ನನ್ನನ್ನು ಪರೀಕ್ಷಿಸುವದಕ್ಕಾಗಿ ಈ ಉಪಾಯ ಮಾಡಿರುವನೆಂದು ತಿಳಿದು ತನ್ನ ಶರೀರವನ್ನೇ ಗುಗ್ಗುಲವಾಗಿ ಉರಿಸಿ ಈಶ್ವರನನ್ನು ತೃಪ್ತಿಗೊಳಿಸುವೆನೆಂದು ಗೊತ್ತುಮಾಡಿ ಸ್ವಾಮಿಯೇ, ಈ ದಿವಸ ಗುಗ್ಗುಲಕ್ಕಾಗಿ ನನ್ನ ದೇಹವನ್ನೇ ವಿನಿಯೋಗಿಸುವೆನೆಂದು ಗಂಟೆಯನ್ನು ಬಾರಿಸುತ್ತ ಧೂಪಾರತಿಯಲ್ಲಿ ದಗದಗನೆ ಉರಿಯುತ್ತಿರುವ ಕೆಂಡವನ್ನು ನೋಡುತ್ತ ಪರಮಶಾಂತಭರಿತನಾಗಿ— ಹೇ, ಸೋಮೇಶ್ವರನೇ, ಪೂರ್ವದಲ್ಲಿ ಧೂಪದ ಬಾಚಯ್ಯನು ಪ್ರತಿದಿವಸ ಧೂಪವನ್ನು ಹಾಕುತ್ತಿದ್ದು

ಒಂದು ದಿವಸ ಧೂಪ ದೊರೆಯದಿದ್ದಾಗ ತನ್ನ ಶರೀರವನ್ನೇ ಧೂಪವನ್ನಾಗಿ ಕೆಂಡದಲ್ಲಿ ಉರಿಸಿ ಶಿವನನ್ನು ಮೆಚ್ಚಿಸಿದಂತೆ ನಾನೂ ನನ್ನ ಶರೀರವನ್ನು ಗುಗ್ಗುಲವನ್ನಾಗಿ ಉರಿಸುವೆನು. ಇದರಿಂದ ಸುವಾಸನೆಬಾರದೆ ದುರ್ಗಂಧ ಹುಟ್ಟಿದರೂ, ಕತ್ತರಿಸುವಾಗ ರಕ್ತವು ಅಡ್ಡಿಮಾಡಿದರೂ, ಮುಖವು ಬಾಡಿದರೂ, ಪ್ರಾಣವು ಹೆದರಿದರೂ, ಕಣ್ಣಿನಲ್ಲಿ ನೀರು ಸುರಿದರೂ, ನಿನ್ನಲ್ಲಿ ನೆಲೆಗೊಂಡ ನೋಟವು ಚಲಿಸಿಹೋದರೂ ನಾನು ನಿನ್ನ ಪಾದಸೇವಕನಲ್ಲವೆಂದು ಪ್ರತಿಜ್ಞೆಯನ್ನು ಮಾಡಿ, ಕುಳಿತುಕೊಂಡು ಪರಮೇಶ್ವರನನ್ನು ಧ್ಯಾನಿಸಿ ಸಂತೋಷದಿಂದ ದಗದಗ ಉರಿಯುತ್ತಿರುವ ಕೆಂಡವುಳ್ಳ ಧೂಪದ ಪಾತ್ರೆಯಲ್ಲಿ ಕುಳಿತುಕೊಂಡನು. ಆಗ ಧೂಪದ ಸುವಾಸನೆಯು ದೇವಾಲಯದಲ್ಲಿ ವ್ಯಾಪಿಸಿತು. ಓಹಿಲಾರ್ಯನ ದೇಹವು ಧಗಧಗನೆ ಉರಿಯುವದಕ್ಕೆ ಆರಂಭವಾಯಿತು. ಆಗ ಆ ಗೌಳತಪಸ್ವಿಗಳಿಗೆ ಈತನ ಮಹಿಮೆಯನ್ನು ತೋರ್ಪಡಿಸಬೇಕೆಂದು ಚಂದ್ರಶೇಖರನು ತನ್ನ ನಿಜವಾದ ರೂಪವನ್ನು ಧರಿಸಿ ಪ್ರತ್ಯಕ್ಷನಾಗಿ ಓಹಿಲಾರ್ಯನನ್ನು ಅಕ್ಕರೆಯಿಂದ ಬಿಗಿದಪ್ಪಿ ಮುದ್ದಾಡಿ ಅವನ ಭಕ್ತಿಭಾವಕ್ಕೆ ಮೆಚ್ಚಿ ಪ್ರಮಥಪತಿ ಪಟ್ಟದಲ್ಲಿ ಆತನನ್ನು ನಿಲ್ಲಿಸಿ ತನ್ನ ಸಾರೂಪ್ಯ ಮುಕ್ತಿಪದವಿಯನ್ನು ಕೊಟ್ಟು ಕೈಲಾಸಕ್ಕೆ ಕಳುಹಿಸುತ್ತಿರಲು ಆ ಗೌಳತಪಸ್ವಿಗಳು ಓಹಿಲನ ಮಹಿಮೆಯನ್ನು ನೆನೆದು ಸಂತುಷ್ಟರಾಗಿ ಭಕ್ತಿಯಿಂದ ನಮಸ್ಕರಿಸಿ ಅವನ ಕರುಣಾ ಕಟಾಕ್ಷಕ್ಕೆ ಪಾತ್ರರಾಗಿ ಸುಖದಿಂದ ಇದ್ದರು. ಈ ಪ್ರಕಾರ ಓಹಿಲಾರ್ಯನು ಕೈಲಾಸಕ್ಕೆ ಹೋಗುವಾಗ ಜಯಜಯಕಾರದೊಡನೆ ಗಂಟೆಯನ್ನು ಬಾರಿಸುತ್ತಿರುವದನ್ನು ನೋಡಿ ನಕ್ಕನು. ಯಾಕೆಂದರೆ ನಾನಾವಿಧ ತೊಂದರೆಗಳನ್ನು ಅನುಭವಿಸಿ ಶಿವನ ಕರುಣಾ ಕಟಾಕ್ಷವನ್ನು ಪಡೆದು ಅಲ್ಲಿರುವ ಜನರನ್ನು ಬಿಟ್ಟು ತಾನೊಬ್ಬನೇ ಕೈಲಾಸಕ್ಕೆ ಹೋಗುತ್ತಿರುವನಲ್ಲಾ ಎಂದು ನಕ್ಕನು ಎಂದು ತನ್ನ ಪತ್ನಿಗೆ ಹೇಳಲು, ಆಕೆಯು ಪತಿಯನ್ನು ಕುರಿತು ಯಾವ ಕಡೆಗೆ ಹೋಗುತ್ತಿದ್ದಾನೆ ನೋಡಬೇಕೆಂದು ಆಕಾಶವನ್ನೆಲ್ಲಾ ಹುಡುಕಿ ದೃಷ್ಟಿಸಿನೋಡಿದರೂ ಕಾಣುವದಿಲ್ಲವಲ್ಲಾ ಎಂದು ಕೇಳಲು ಗಂಟೆಯ ಶಬ್ದವು ಬರುವಕಡೆಗೆ ನೋಡೆಂದು ಹೇಳಲು ಗಂಡನ ಮಾತಿನಂತೆ ಆಕೆಯು ಅನುಸಂಧಾನದಿಂದ ದೃಷ್ಟಿಸಿನೋಡಲು ಸೂರ್ಯಕಾಂತಿಯ ಮಧ್ಯದಲ್ಲಿ ಹೊಳೆಯುತ್ತ ಆಕಾಶದಲ್ಲಿ ಹೋಗುತ್ತಿರುವವನನ್ನು ಕಂಡು ಆಶ್ಚರ್ಯಭರಿತ

ಳಾಗಿ ಪತಿಯನ್ನು ಕುರಿತು ಓಹಿಲಾರ್ಯನಂತೆ ಬೂದಿಯನ್ನು ತಿಂದು ತನ್ನ ದೇಹವನ್ನು ಧೂಪವನ್ನಾಗಿ ಉರಿಸಿ ಶಿವನನ್ನು ಮೆಚ್ಚಿಸಿ ಕೈಲಾಸವನ್ನು ಸೇರುವ ಸಾಮರ್ಥ್ಯವಂತರು ಮತ್ತಾರು ಇರುವರು ? ಹೇಳು ಎಂದು ಕೇಳಲು ರಾಜನು ನಸುನಕ್ಕು ಶಿವಭಕ್ತರಿಗೆ ಇದೊಂದು ದೊಡ್ಡದೋ ? ಬೆಂಕಿಯನ್ನು ಗೆಲ್ಲುವದು ಆಶ್ಚರ್ಯವೇ ? ದಕ್ಷನ ಯಾಗದಲ್ಲಿ ಒಬ್ಬ ಶಿವಶರಣನು ಅಗ್ನಿಯ ಹಸ್ತವನ್ನೂ, ನಾಲಿಗೆಯನ್ನೂ ಸೀಳಿಬಿಡಲಿಲ್ಲವೇ ? ಶಂಕರಾರ್ಯನು ಅಗ್ನಿಯನ್ನು ಹಣೆಯಲ್ಲಿಯೂ, ಕಲಿಗಣನಾಥನು ಬಡಬಾಗ್ನಿಯನ್ನು ತಿಲಕವಾಗಿಯೂ, ಧರಿಸಿಕೊಳ್ಳಲಿಲ್ಲವೇ? ವಾಗೀಶಯ್ಯನನ್ನು ಆತನ ವೈರಿಯು ಕಟ್ಟಿಹಾಕಿ ಅಗ್ನಿಯಲ್ಲಿ ಕೆಡವಲು ಅದು ಚಂದ್ರಸರೋವರವಾಗಲಿಲ್ಲವೇ ? ಆದ್ದರಿಂದ ಭಕ್ತಿಭಾವಕ್ಕೆ ಅಗ್ನಿಯು ಹೆದರುವದು. ಓಹಿಲಾರ್ಯನು ತನ್ನ ದೇಹವನ್ನು ಗುಗ್ಗುಲವನ್ನಾಗಿ ಮಾಡಿದುದು ಅಚ್ಚರಿಯೆಂದು ತಿಳಿದಿರುವೆಯಾ ? ನಮ್ಮ ಶರಣರ ಶಿವದಾಸಯ್ಯನು ಮಗನ ಕೈಯಿಂದ ಹುತ್ತದಲ್ಲಿರುವ ಹಾವನ್ನು ಹೊರಕ್ಕೆಳಸಿ ಪುಷ್ಪಹಾರದಂತೆ ಧರಿಸಲಿಲ್ಲವೇ ? ಚೇರಮಾಂಕನು ತನ್ನ ಸೈನ್ಯದ ಎಂಭತ್ತುಸಾವಿರ ಕುದುರೆಗಳಿಗೂ ರುದ್ರಾಕ್ಷಿಯ ಕೋಗೇರು (ಥಡಿ) ಗಳನ್ನು ಹಾಕಿಸಿ ಅವೆಲ್ಲವೂ ಸಮೇತ ಕೈಲಾಸವನ್ನು ಸೇರಲಿಲ್ಲವೇ? ಮಾನಕಂಜ ರಾಜನು ತಾನು ಪತ್ನಿ, ಪುತ್ರಿ, ಅಳಿಯ ಸಮೇತನಾಗಿ ಶಿವಸಾನಿಧ್ಯವನ್ನು ಹೊಂದಲಿಲ್ಲವೇ ? ಸುಂದರ ನಂಬಿಯು ತನ್ನ ಆಪ್ತೇಷ್ಟರನ್ನೂ, ಮಲಿಯ ರಾಜನು ತನ್ನ ಪರಿವಾರವನ್ನೂ, ತಿರುಜ್ಞಾನ ಸಂಬಂಧಿಯು ತನ್ನ ಊರವರನ್ನೂ, ಕರೆದುಕೊಂಡು ಕೈಲಾಸಕ್ಕೆ ಹೋಗಲಿಲ್ಲವೇ ? ಇಷ್ಟೊಂದು ಜನ ಮಹಿಮರು ಇಂತಹ ಅದ್ಭುತ ಕಾರ್ಯ ಮಾಡಿರುವಾಗ ಓಹಿಲಾರ್ಯನು ಮಾಡಿದ ಮಹತ್ವವು ಎಷ್ಟರದು ? ತಾನೊಬ್ಬನೇ ಹೋಗುವದಕ್ಕಾಗಿ ಗರ್ವದಿಂದ ಲೋಕವೆಲ್ಲ ತಿಳಿಯುವಂತೆ ಗಂಟೆಯನ್ನು ಬಾರಿಸುತ್ತ ಹೋಗಬೇಕೋ ? ಹಾಗಿಲ್ಲದಿದ್ದರೆ ಅವನ ಮಹತ್ವವನ್ನು ಯಾರೂ ಕಾಣರೋ? ಬಿಡುಬಿಡು ಅವನ ಮಹಿಮೆಯನ್ನು ನನಗೆ ಹೇಳಬೇಡ ಎಂದು ಗದರಿಸಿ ನುಡಿದನು. ಆಗ ಅವಳು ಹೇಗಾದರೂ ಅವನು ಶಿವಯೋಗಿಯು. ಜಿತೇಂದ್ರಿಯನು, ಶಿವಭಕ್ತಿ ವೈರಾಗ್ಯ ಸಂಪನ್ನನು. ಆದರೆ ನೀನು ಸಂಸಾರಿಯು, ಕಾಮಿಯು, ಜೂಜುಗಾರನು ಹೀಗಿದವಗೂ ಓಹಿಲಾರ್ಯನನ್ನು ಜರಿದು

ನುಡಿಯಬಹುದೇ ? ಎಂದು ತಿರಸ್ಕರಿಸಲು ರಾಜನು ನಸುನಕ್ಕು ಎಲೈ, ಸುಂದರಿಯೇ, ಇನ್ನೂ ನಿನಗೆ ಭಕ್ತಿಯ ಮರ್ಮವು ಚನ್ನಾಗಿ ತಿಳಿದಿಲ್ಲ. ಶಿವ ಭಕ್ತರ ಮಹಾತ್ಮೆಯನ್ನು ನೀನು ಕಾಣೆ. ಅವರ ಮಹಿಮೆ ಸಾಮಾನ್ಯವಾದುದಲ್ಲ. ಸ್ತ್ರೀಸಂಗದಿಂದ ಸುಖಹೊಂದಿದ ಮಾತ್ರಕ್ಕೆ ಭಕ್ತನು ಕಾಮಿಯೆನ್ನಿಸಿಕೊಳ್ಳಲಾರನು. ಹಾಗಾದರೆ ಸ್ತ್ರೀಲೋಲನಾದ ಸುಂದರ ನಂಬಿಗೆ ಶಿವನು ಹೇಗೆ ಒಲಿದನು ? ಕಾಮಿಯಾದ ಪುರುಷನನ್ನು ಕಾಮಾರಿಯು ಕರುಣಿಸುವನೇ ? ಸ್ತ್ರೀಲೋಲನಾದ ಸುಂದರ ನಂಬಿಯೊಡನೆ ಶಿವನು ಸಂತೋಷದಿಂದ ಕುಣಿದ ಹಾಗೆ ಅರಣ್ಯವಾಸಿಗಳಾಗಿ ಒಣಗಿದ ಎಲೆಗಳನ್ನು ತಿಂದು ತಪಸ್ಸನು ಆಚರಿಸುತ್ತಿದ್ದ ತಪಸ್ವಿಗಳೊಡನೆ ಕುಣಿದಾಡಿದನೇ? ಆದ್ದರಿಂದ ಪರಮೇಶ್ವರನ ಪ್ರೀತಿಗೆ ಸ್ತ್ರೀಸಂಗವಾಗಲಿ, ರಾಜ್ಯಭಾರವಾಗಲಿ ಪ್ರತಿಬಂಧಕಗಳೆಂದು ತಿಳಿಯಬೇಡ. ಶಿವಲಿಂಗ-ಜಂಗಮಾರ್ಚನೆಗಳನ್ನು ಮಾಡಿ ಶಿವನನ್ನೂ, ಶಿವ ಶರಣರನ್ನೂ, ತೃಪ್ತಿಪಡಿಸಬೇಕಾದರೆ ಧನ, ಧಾನ್ಯ, ಭೂಮಿ ಮುಂತಾದವುಗಳು ಇರಲೇಬೇಕಾಗಿಲ್ಲ. ಇದೂ ಅಲ್ಲದೆ ಕರಿಕಾಲಚೋಳ ಮೊದಲಾದ ಅನೇಕ ರಾಜರು ಶಿವನ ಕರುಣಾ ಕಟಾಕ್ಷಕ್ಕೆ ಪಾತ್ರರಾಗಿರುವರು. ಮೂರ್ಖ ನಾಥನು ಜೂಜಾಟದಿಂದ ಬಂದ ಸಂಪಾದನೆಯಿಂದ ಗುರು–ಲಿಂಗ–ಜಂಗಮಾರ್ಚನೆ ಮಾಡುತ್ತ ಭಕ್ತಿಯಿಂದ ಇರಲು ಈಶ್ವರನು ಅವನನ್ನು ಪರೀಕ್ಷಿಸಬೇಕೆಂದು ಒಂದು ದಿವಸ ಅವನ ಸಂಗಡ ಜೂಜಾಡಿ ತಂದಿದ್ದ ಹಣವನ್ನೆಲ್ಲ ಸೋತು ಮುಂದೆ ಪಂಥಮಾಡಲು ಹಣವಿಲ್ಲದೆ ಇರಲು ಆ ಮೂರ್ಖ ನಾಥನು ಕಾಲುಗಳನ್ನು ಕಟ್ಟಿ ಹೊರಗೆ ಬಿಡದೆ ಅಡ್ಡಿಮಾಡಲು ಆ ಕಪಟ ವೇಷಧಾರಿಯ ಕೊರಳಲ್ಲಿ ಲಿಂಗದ ಕರಡಿಗೆಯ ದಾರವನ್ನು ಕಂಡು ಆಹಾ ! ಇವನು ಶಿವ ಭಕ್ತನು ! ಇವನನ್ನು ಬಂಧಿಸಿ ನಾನು ಪಾಪಕ್ಕೆ ಗುರಿಯಾದೆನು ! ಅದರ ತಪ್ಪಿಗಾಗಿ ತನ್ನ ಬಟ್ಟೆಯನ್ನು ತೆಗೆದು ತಾನೇ ಉರುಲು ಹಾಕಿಕೊಂಡು ಈಶ್ವರನ ಕಟಾಕ್ಷಕ್ಕೆ ಪಾತ್ರನಾಗಲಿಲ್ಲವೇ ? ಆದ್ದರಿಂದ ಇಂದ್ರಿಯಜನ್ಯ ಸಮಸ್ತ ಸುಖಗಳನ್ನು ಶಿವಾರ್ಪಣೆಮಾಡಿ ಅನುಭವಿಸುವ ಪುಣ್ಯಾತ್ಮನು ಮುಕ್ತರೂಪನಾಗಿರುವನು. ತುಪ್ಪವು ಜಿಡ್ಡಾಗಿದ್ದರೂ ನೊಣದ ಕಾಲಿಗೆ ಹತ್ತಿಕೊಳ್ಳುವದೇ ? ಅದರಂತೆ ಶಿವಶರಣರು ಸಂಸಾರದಲ್ಲಿದ್ದರೂ ಅದು ಅವರನ್ನು ಸೋಂಕಲಾರದು. ಆದ್ದರಿಂದ ಸಂಸಾರದಿಂದ ಪ್ರತಿಬಂಧವಿಲ್ಲ. ಸೂರ್ಯ ಪ್ರಕಾಶವು

ಗೂಬೆಗೆ ಕತ್ತಲಾಗಿರುವಂತೆ ನೀಚರಿಗೆ ಶಿವಭಕ್ತಿಯು ದೊರೆಕೊಳ್ಳಲಾರದು. ಎಲೈ— ಹುಚ್ಚಳೇ, ನಿನಗೆ ಆ ಮಾರ್ಗ ತಿಳಿಯದು. ವ್ಯರ್ಥ ಮಾತುಗಳ ನ್ನಾಡದೆ ಸುಮ್ಮನಿರು ಎಂದು ಹೇಳಿದನು. ಅದಕ್ಕೆ ಆಕೆಯು ಸುಮ್ಮನಿರು ನಿನ್ನ ಮಾತಿನ ಬೆಡಗನ್ನು ನಾನು ಬಲ್ಲೆ. ಅವನಂತೆ ನೀನೂ ನಡೆದು ತೋರ ಸಿದರೆ ನಾನು ಮೆಚ್ಚುವೆ. ಕೈಲಾಸವೆಂಬುದು ಪಗಡೆಯಾಟವೇ ? ಇಲ್ಲವೆ ಉಪ್ಪರಿಗೆಯ ಮನೆಯೋ ? ಶಯ್ಯಾಗೃಹವೋ ? ಶರಣರ ಮನೆಯೋ ! ಆಹಾ ! ಓಹಿಲಾರ್ಯನು ಒಬ್ಬನೇ ಹೋಗುವನೆಂದು ಹಾಸ್ಯಮಾಡುವ ನೀನು ಪುರಜನರು ಸಹಿತವಾಗಿ ಯಾವಾಗ ಕೈಲಾಸಕ್ಕೆ ಹೋಗುವೆ ? ಅದನ್ನು ಹೇಳೆಂದು ಹಾಸ್ಯಮಾಡುತ್ತಿರುವ ಹೆಂಡತಿಯ ಮಾತನ್ನು ಕೇಳಿ ಓ ಪ್ರಾಣ ಕಾಂತೇ, ನೀನು ಹೇಳಿದ ಹಾಗೆ ನನಗೆ ಕೈಲಾಸವು ಶಿವಶರಣರ ಮನೆಯೇ ಹೌದು. ನನ್ನ ರಾಜ್ಯದ ಜನರೆಲ್ಲರನ್ನೂ ಕೂಡಿಕೊಂಡು ಕೈಲಾಸಕ್ಕೆ ಹೋಗುತ್ತೇನೆ ನೋಡು. ಹಾಗಲ್ಲದಿದ್ದರೆ ತಾನು ಶಿವಭಕ್ತನೇ ಅಲ್ಲವೆಂದು ಪ್ರತಿಜ್ಞೆಯನ್ನು ಮಾಡಿ ಯಾವ ದಿವಸ ಎಷ್ಟು ಹೊತ್ತಿಗೆ ಹೋಗುವಿರೆಂದು ಹಾಸ್ಯಮಾಡುವ ಹೆಂಡತಿಗೆ ಈ ದಿವಸ ಇಷ್ಟು ಹೊತ್ತಿಗೆ ಈ ಮಾರ್ಗವಾಗಿ ಹೋಗುತ್ತೇನೆಂದು ಹೇಳಿ ಚಾಕರನನ್ನು ಕರೆದು ಮಂತ್ರಿಯನ್ನು ಬರಮಾಡಿ ರಾಜ್ಯದ ಜನರೆಲ್ಲರೂ ಕೈಲಾಸಕ್ಕೆ ಹೊರಡುವದಕ್ಕೆ ಸಿದ್ಧರಾಗಿರುವಂತೆ ಡಂಗು ರವನ್ನು ಹೊಡೆಯಿಸಿ ನೀನೂ ಸಹ ಸಿದ್ಧನಾಗು ಎಂದು ಆಜ್ಞೆಮಾಡಿ ತಾನು ಮನೆಗೆ ಬಂದು ಸರ್ವಾಲಂಕಾರ ಭೂಷಿತನಾಗಿ ಹೆಂಡತಿಗೆ ಅಲಂಕರಿಸಿಕೊಳ್ಳು ವಂತೆ ಹೇಳಿ ದಿವ್ಯವಾದ ಕುದುರೆಯನ್ನು ಹತ್ತಿಕೊಂಡು ಕೈಲಾಸಕ್ಕೆ ಪರಿವಾರ ಸಮೇತನಾಗಿ ತನ್ನ ದೇಶದ ಜನರನ್ನು ಸಂಗಡಲೇ ಬರುವಂತೆ ಹೇಳಿ ಒಂದು ಊರಿಂದ ಮತ್ತೊಂದು ಊರಿಗೆ ಪ್ರಯಾಣ ಮಾಡುವಂತೆ ಕೈಲಾಸವನ್ನು ಸೇರಿ ಸಮಸ್ತ ಭಕ್ತರೂ, ಶಿವಗಣಂಗಳೂ ಉಘೇ, ಉಘೇ ಎಂದು ಶಬ್ದ ಮಾಡುತ್ತಿರಲು ಅವರಿಂದ ಛತ್ರ-ಚಾಮರಗಳನ್ನು ಹಾಕಿಸಿಕೊಳ್ಳುತ್ತ ಸುಖ ದಿಂದ ಇದ್ದನು. ಎಂದು ಪ್ರೌಢಮತಿಯು ಗುರುಭಕ್ತಾರ್ಯನಿಗೆ ಬೋಧಿಸಿದಳು ಎಂದು ಬಸವೇಶ್ವರನು ಚನ್ನಬಸವ ಮೊದಲಾದ ಶಿವಗಣಂಗಳಿಗೆ ನಿರೂಪಿ ಸುತ್ತ ಇದ್ದನು.

## — ಗುರುಭಕ್ತರಾಜನ ಕೈಲಾಸ ಪ್ರಾಪ್ತಿ —

ಆ ಮೇಲೆ ಬಸವೇಶ್ವರನು ಸಂತೋಷದಿಂದ ಕಥೆಯನ್ನು ಕೇಳುತ್ತಿರುವ ಶರಣ ಜನರನ್ನು ನೋಡಿ ಗುರುಭಕ್ತರಾಜನ ಮತ್ತೊಂದು ಕಥೆಯನ್ನು ವಿವರಿಸುತ್ತಿದ್ದನು. ಪ್ರೌಢಮತಿಯು ಈ ಪ್ರಕಾರ ರಾಜನನ್ನು ಕುರಿತು ಆಪ್ತರಾದ ಹೆಂಗಸರ ಮಾತುಗಳು ಪುರುಷರಿಗೆ ಮೊದಲು ಅಹಿತವಾಗಿ ತೋರಿದರೂ ಮುಂದೆ ಮುಕ್ತಿಸುಖವನ್ನು ಕೊಡುವವು ಎಂದು ಅನೇಕ ದೃಷ್ಟಾಂತಗಳಿಂದ ಬೋಧಿಸಿದ ಪ್ರೌಢಮಾತುಗಳಿಂದ ರಾಜನು ಮೊದಲಿಗಿಂತ ಹೆಚ್ಚಾಗಿ ಕಾಮಬಾಧೆ ಪೀಡಿತನಾಗಿ ಅದನ್ನು ಸಹಿಸಲಾರದೆ ಬಲಾತ್ಕಾರದಿಂದ ಆವಳನ್ನು ಹಿಡಿದುಕೊಳ್ಳುವದಕ್ಕೆ ಸನ್ನದ್ಧನಾದನು. ಅದನ್ನು ಕಂಡು ಆಕೆಯು ಬೆದರಿ ಬೆಂಡಾಗಿ ಭೀತಿಯಿಂದ ಹಿಂದಕ್ಕೆ ಸರಿದು ಈ ಕಾಮಾಂಧನಿಗೆ ಎಷ್ಟು ವಿಧವಾದ ಹಿತೋಕ್ತಿಗಳಿಂದ ಬೋಧಿಸಿದರೂ ವಿವೇಕವುಂಟಾಗಲಿಲ್ಲ. ನನ್ನನ್ನು ಬಹುವಾಗಿ ಪೀಡಿಸುತ್ತಿರುವನಲ್ಲಾ! ಎಂದು ತಿಳಿದು ಎಲೈ— ಮೂರ್ಖನಾದ ರಾಜನೇ, ಕೇಳು ನಾನು ಅನೇಕ ವಿಧವಾದ ಹಿತೋಕ್ತಿಗಳಿಂದ ನಿನ್ನನ್ನು ಸಮಾಧಾನಗೊಳಿಸಿದರೂ ನಿನಗೆ ವಿವೇಕವು ಬಾರದಿರುವದನ್ನು ನೋಡಿದರೆ ಮುಂದೆ ಯಾವ ವಿಧವಾದ ಅನರ್ಥವು ನಿನಗೆ ಬಂದೊದಗುವದೋ ಅದನ್ನು ಈಶ್ವರನೇ ಬಲ್ಲನು. ನಾನು ನಿನ್ನನ್ನು ಒಲ್ಲೆನೆಂದು ತಿರಸ್ಕರಿಸುವದಕ್ಕೆ ಮುಖ್ಯವಾದ ಕಾರಣವನ್ನು ಹೇಳುತ್ತೇನೆ ಕೇಳು. ನಿನ್ನ ಗುರುವು ನಿನ್ನಿನ ರಾತ್ರಿ ನನ್ನ ಮನೆಗೆ ಬಂದು ನನ್ನಲ್ಲಿ ಸುಖಿಸಿದನು. ನೀನಾದರೋ ಗುರುಭಕ್ತನು. ಆದ್ದರಿಂದ ನಿನ್ನ ಸಂಗಕ್ಕೆ ನಾನು ಮನಸ್ಸುಗೊಡದೆ ಹೀಗೆ ಬೋಧಿಸಿದೆನು. ಇನ್ನು ಮೇಲೆ ನನ್ನಿಂದ ತಪ್ಪಿಲ್ಲ ಎಂದು ಹೇಳಲು ಆ ಮಾತನ್ನು ಕೇಳಿದ ಕೂಡಲೇ ಬಾಣಾಘಾತದಿಂದ ನೊಂದವನಂತೆಯೂ, ಉರಿಯುವ ಕೆಂಡವನ್ನು ತುಳಿದವನಂತೆಯೂ, ಗಕ್ಕನೆ ಹಾರಿ ಚೀರುತ್ತ ಎರಡೂ ಕಿವಿಗಳನ್ನು ಮುಚ್ಚಿಕೊಂಡು ಹಾ! ಹಾ! ಗುರುವೇ ಕೆಟ್ಟೆನು! ಕೆಟ್ಟೆನು! ಎಂದು ಹೇಳುತ್ತ ಭೂಮಿಗೆ ಡೊಪ್ಪನೆ ಬಿದ್ದು ಹೊರಳಾಡಿ ಅಳುತ್ತ ಕಣ್ಣೀರನ್ನು ಸುರಿಸುತ್ತ ಇದ್ದನು. ಮಳೆಗಾಲವು ತನ್ನ ಮಳೆಯಿಂದ ಕಾಡು ಕಿಚ್ಚನ್ನು ಆರಿಸಿ ಸಿಡಿಲಿನ ಕಿಡಿಗಳನ್ನು ಹೆಚ್ಚಿಸುವಂತೆ ಪ್ರೌಢಮತಿಯ ವಾಕ್ಯವು ಗುರುಭಕ್ತರಾಜನ ವಿರಹಾಗ್ನಿಯನ್ನು ನಂದಿಸಿ ಶೋಕಾಗ್ನಿಯನ್ನು

ಪ್ರಜ್ವಲಿಸುವಂತೆ ಮಾಡಿತು. ಆಗ ಆತನು ಗಡಗಡನೆ ನಡುಗುತ್ತ ಮೇಲ ಕ್ಕೆದ್ದು ಗೋಳಿಡುತ್ತ ಆ ಸೂಳೆಯ ಹತ್ತಿರಕ್ಕೆ ಬಂದು ಅವಳ ಪಾದಗಳಿಗೆ ನಮಸ್ಕಾರಮಾಡಿ ಅಮ್ಮಾ, ಮೈಗೊಬ್ಬಿದವನಾಗಿ ನಿನ್ನನ್ನು ಸಂಗಕ್ಕೆ ಬಯ ಸಿಳಿದ ಪಾಪವನ್ನು ಹೇಗೆ ಹೋಗಲಾಡಿಸಲಿ? ನಿನ್ನ ಅಂಗಾಂಗಳನ್ನು ಮೋಹ ದಿಂದ ನೋಡಿ ನೋಡಿ ಕಾಮವಿಕಾರದಿಂದ ಶೃಂಗಾರ ಕೇಳೀ ವಚನಗಳನ್ನು ಬಗೆಬಗೆಯಾಗಿ ನಿನ್ನೊಡನೆ ನುಡಿದ ನನ್ನ ಪಾಪವನ್ನು ಪರಿಹಾರಮಾಡಿ ಕೊಳ್ಳುವದು ಹೇಗೆ ? ನಿನ್ನ ಮನಸ್ಸಿಗೆ ಸಂಕಟವನ್ನುಂಟುಮಾಡಿದ ನನ್ನ ಪಾತಕವು ಹೇಗೆ ನಾಶವಾಗುವದು ? ನಾನು ಕಾಮವೆಂಬ ಸರ್ಪದಿಂದ ಕಚ್ಚ ಲ್ಪಟ್ಟು ಅದರ ವಿಷವೆಂಬ ಬೆಂಕಿಯಿಂದ ಉರಿಯುತ್ತ ಮಾಯವೆಂಬ ರಕ್ಕಸಿಗೆ ತುತ್ತಾಗಿ ಹೋದೆನು. ಅಯ್ಯೋ ತಾಯೀ ! ಗುರುಪತ್ನಿಯೇ, ಪೂರ್ವ ಜನ್ಮ ದಲ್ಲಿ ನಾನು ಎಂತಹ ಪಾಪವನ್ನು ಮಾಡಿದ್ದೆನೋ ? ವೃಥಭಕ್ತಿಯಿಂದ ಶಿವ ನನ್ನು ಷೋಡಶೋಪಚಾರಗಳಿಂದ ಪೂಜಿಸುವದನ್ನು ಮರೆತಿದ್ದೆನೋ ? ಶಿವ ಪೂಜೆಮಾಡದೆ ಊಟ ಮಾಡಿದ್ದೆನೋ ? ಮನೆಗೆ ಬಂದ ಜಂಗಮರನ್ನು ಪೂಜಿ ಸದೆ ಹೋಗಿದ್ದೆನೋ ? ಶಿವಶರಣರನ್ನು ಕಂಡು ಭಕ್ತಿಯಿಂದ ನಮಸ್ಕರಿಸದೆ ಗರ್ವದಿಂದ ಇದ್ದೆನೋ ? ಪಂಕ್ತಿಭೇದವನ್ನು ಮಾಡಿದ್ದೆನೋ ? ಗುರುಲಿಂಗ ಜಂಗಮರ ಪೂಜೆಯನ್ನು ಅಸಡ್ಡೆಮಾಡಿ, ಶಿವಶಾಸ್ತ್ರವನ್ನು ಹೀಯಾಳಿಸಿ, ಶಿವ ಭಕ್ತರಿಗೆ ಅಪಜಯವನ್ನುಂಟುಮಾಡಿ, ಭವಿಗಳ ಮನೆಯ ಅನ್ನವನ್ನು ತಿಂದು ಇದ್ದೆನೋ ? ಶಿವನಲ್ಲಿಯೂ, ಶಿವಶರಣರಲ್ಲಿಯೂ, ಜಂಗಮರಲ್ಲಿಯೂ ಭೇದ ವನ್ನು ಕಲ್ಪನೆ ಮಾಡಿದ್ದೆನೋ ? ಪರಧನವನ್ನೂ, ಪರಸ್ತ್ರೀಯರನ್ನೂ, ಪರರ ಸೊತ್ತನ್ನೂ ಅಪಹರಿಸಿ, ದ್ರೋಹಿಯಾಗಿ, ಸಜ್ಜನರ ಮನಸ್ಸಿಗೆ ವ್ಯಥೆಯನ್ನುಂಟು ಮಾಡಿದ್ದೆನೋ, ಗುರುವನ್ನು ಕೂಡಿದವಳು, ಗುರುವು ರತಿಸುಖವನ್ನು ಅನು ಭವಿಸಿ ತೊರೆದಿರುವವಳು ಗುರುಪತ್ನಿಗೆ ಸಮಾನಳು. ಆದ್ದರಿಂದ ನಿನ್ನನ್ನು ಕಾಮಿಸಿದ ನನಗೆ ಪ್ರಾಯಶ್ಚಿತ್ತವೇನು ? ಹೇಳು ಎಂದು ಅವಳ ಕಾಲುಗಳನ್ನು ಹಿಡಿದು ನಮಸ್ಕರಿಸಿ ಅವುಗಳ ಮೇಲೆ ಬಿದ್ದು ಗೋಳಿಡುತ್ತ ತನ್ನ ಕಣ್ಣೀರಿ ನಿಂದ ಆಕೆಯ ಪಾದಗಳನ್ನು ತೊಳೆಯುತ್ತಿರಲು ತನ್ನ ದುಷ್ಕೃತ್ಯವನ್ನು ನೆನೆದು ಕಳವಳಿಸಿ ಮೂರ್ಛೆಯನ್ನು ಹೊಂದಿ ಮತ್ತೆ ಎಚ್ಚತ್ತು ನನ್ನ ಪಾಪವು ಹರಿ ಯುವದಕ್ಕೆ ಮಾರ್ಗವನ್ನು ಹೇಳಮ್ಮ ಎಂದು ಗೋಳಿಟ್ಟು ಅಯ್ಯೋ ! ನನ್ನ

ಗುರುಭಕ್ತಿಯೆಂಬ ಸಮುದ್ರವು ಬತ್ತಿಹೋಯಿತು. ಶಿವಧರ್ಮವು ಕೆಟ್ಟು ಹೋಯಿತು. ಸತ್ಕೀರ್ತಿಯು ಉಡುಗಿಹೋಯಿತು. ಸುಕೃತವೆಂಬ ನಿಧಿಯು ಹಾಳಾಯಿತು. ಚಂದ್ರನು ಗುರುಪತ್ನಿಯನ್ನು ಬಯಸಿ ಕ್ಷಯರೋಗ ಪೀಡಿತ ನಾದಂತೆ ನಾನು ಗುರುಭಾರ್ಯಾಸಕ್ತನಾಗಿ ಮುಕ್ತಿನಾಶನೆಂಬ ಕ್ಷಯರೋಗ ವನ್ನು ಹೊಂದಿದೆನು. ಎಂದು ಹಲವು ಬಗೆಯಿಂದ ಹಂಬಲಿಸಿ ತಲೆಯನ್ನು ನೆಲಕ್ಕೆ ಬಡಿದುಕೊಂಡು ಈ ಶರೀರವನ್ನು ತುಂಡು ತುಂಡಾಗುವಂತೆ ಕತ್ತರಿಸಿ ಭೂತಗಳಿಗೆ ಬಲಿಕೊಡಲೇ ? ಗುರುಪತ್ನಿಯನ್ನು ನೋಡಿದ ಕಣ್ಣುಗಳನ್ನು ಮೀಟಿ ಕಿತ್ತುಹಾಕಲೇ? ಅವಳನ್ನು ಆಲಂಗಿಸುವದಕ್ಕೆ ತವಕಿಸುತ್ತಿದ್ದ ತೋಳು ಗಳನ್ನು ಕಡಿದುಬಿಡಲೇ ? ಆಕೆಯ ಶರೀರದ ಸುವಾಸನೆಯನ್ನು ಆಘ್ರಾಣಿಸಿದ ಮೂಗನ್ನು ಮೂಳುಮಾಡಲೇ ? ಅವಳನ್ನು ಕಾಮಿಸಿ ಇಲ್ಲಿಗೆ ನಡೆದುಕೊಂಡು ಬಂದ ಕಾಲುಗಳನ್ನು ಕತ್ತರಿಸಿ ಉರಿಯೊಳಗೆ ಒಟ್ಟಲೇ ? ಅವಳ ಸಂಗಡ ಹಾಸ್ಯದ ಮಾತುಗಳನ್ನಾಡಿದ ನಾಲಿಗೆಯನ್ನು ಬೇರು ಸಹಿತ ಕಿತ್ತುಹಾಕಲೇ? ಅವಳನ್ನೇ ನೆನೆನೆನೆದು ಹಂಬಲಿಸುತ್ತಿದ್ದ ಹೃದಯವನ್ನು ಸುಟ್ಟು ಬೂದಿ ಮಾಡಿ ಗಾಳಿಯಲ್ಲಿ ತೂರಿಬಿಡಲೇ ? ಕರುಳನ್ನು ಕಿತ್ತು ಮಾಲೆಯನ್ನು ಮಾಡಿ ಶಿವಾಲಯದ ಸುತ್ತಲೂ ಹಾಕಲೇ ? ಇನ್ನಾವ ಕೆಲಸವನ್ನು ಮಾಡಲಿ? ಎಂದು ಊರಮುಂದಣ ದೇವಾಲಯದ ಬಳಿಗೆ ಬಂದು ಮರಗಳನ್ನೂ, ಹಕ್ಕಿ ಗಳನ್ನೂ ನೋಡಿ ಮಾವು, ನೇರಳೆ, ಹಲಸು, ಬಾಳೆ, ಕಿತ್ತಳೆ, ಸಂಪಿಗೆ, ಸುರ ಹೊನ್ನೆ, ಆಲ, ಬೇಲ ಮೊದಲಾದ ವೃಕ್ಷಗಳಿರಾ, ಗಿಳಿ, ಹಂಸ, ನವಿಲು, ಚಕೋರ, ಪಾರಿವಾಳ ಮೊದಲಾದ ಪಕ್ಷಿಗಳಿರಾ, ನಾನು ಮಾಡಿದ ಪಾಪ ವನ್ನು ಲಾಲಿಸಿ, ಗುರುಪತ್ನಿಯನ್ನು ಬಯಸಿ ಪಾಪಿಯಾದೆನು. ಗುರುಭಕ್ತಿಗೆ ದೂರನೂ, ಮುಕ್ತಿಗೆ ಬಾಹಿರನೂ ಆದೆನು. ಆದಕಾರಣ ನನ್ನ ಪಾಪವನ್ನು ಪರಿಹರಿಸಿಕೊಳ್ಳುವದಕ್ಕೆ ಉಪಾಯವನ್ನು ಹೇಳಿಕೊಟ್ಟು ಕಾಪಾಡಿರೆಂದು ನಾನಾವಿಧವಾಗಿ ಪ್ರಲಾಪಿಸಿ ಹಾಗೆಯೇ ಆ ವನದಲ್ಲಿರುವ ಚಕ್ರವಾಕವನ್ನು ಗುರುಪತ್ನಿಯ ಕುಚವೆಂತಲೂ, ಕಮಲಗಳನ್ನು ಆಕೆಯ ಕಣ್ಣೆಂತಲೂ, ಚಿಗುರೆಲೆಗಳನ್ನು ಹಸ್ತವೆಂತಲೂ, ಶ್ರೀಗಂಧವನ್ನು ಅವಳ ಶರೀರವೆಂತಲೂ, ತುಂಬಿಯ ಸಾಲನ್ನು ಮುಂಗುರುಳೆಂತಲೂ ಊಹಿಸಿ ಅವುಗಳನ್ನು ನೋಡದೆ ಪೂರ್ವಾಭಿಮುಖವಾಗಿ ಹೊರಟು ದಾರಿಯಲ್ಲಿ ಬರುತ್ತ ಮತ್ತೊಂದು ಶಿವಾಲ

ಯವನ್ನು ಕಂಡು ಕಲಶಗಳನ್ನೂ, ಪ್ರಾಕಾರದ ಗೋಡೆಗಳನ್ನೂ, ಬಾಗಿಲ ಮಾಡದಲ್ಲಿರುವ ಗೊಂಬೆಗಳನ್ನೂ, ಬಾಗಿಲಲ್ಲಿರುವ ಕಾಲಭೈರವ ವಿಗ್ರವನ್ನೂ, ದೇವಾಲಯದಲ್ಲಿರುವ ದೇವತಾ ಸಮೂಹವನ್ನು ಕುರಿತು ಎಲೈ— ದೇವತೆಗಳೇ, ನನ್ನ ಪಾಪವು ಪರಿಹಾರವಾಗುವ ದಕ್ಕೆ ಪ್ರಾಯಶ್ಚಿತ್ತವನ್ನು ಹೇಳಿರೆಂದು ಕೇಳಿ ಯಾರೂ ಹೇಳದಿರಲು ಮನ ಸ್ಸಿಗೆ ಸಮಾಧಾನವಾಗದೆ ಕಡೆಗೆ ತನ್ನ ದೇಹವನ್ನು ಕತ್ತರಿಸುವದರಿಂದಲ್ಲದೆ ನನ್ನ ಪಾಪ ಪರಿಹಾರವಾಗುವದಿಲ್ಲವೆಂದು ತಿಳಿದು ಕಣ್ಣುಗಳನ್ನು ಮೊದಲು ಮೀಟಿ ಕಿತ್ತು, ಆನಂತರ ಕುತ್ತಿಗೆಯನ್ನು ಕತ್ತರಿಸುವದಕ್ಕೆ ಉದ್ಯುಕ್ತನಾಗಲು ಅಷ್ಟರಲ್ಲಿ ಈ ವರ್ತಮಾನವನ್ನು ಆವನ ಅಣ್ಣ ಭಕ್ತೋತ್ತಮನು ಕೇಳಿ ಅಲ್ಲಿಗೆ ಬಂದು ಆತನನ್ನು ನೋಡಿ ಎಲೈ— ಗುರುಭಕ್ತಿ ಕ್ಷೀರಸಾಗರನಾದ ಗುರು ಭಕ್ತನೇ, ನಿನ್ನ ಗುರುಭಕ್ತಿಯೂ, ನಿಷ್ಠೆಯೂ, ಮನಸ್ಸಿನ ನೈರ್ಮಲ್ಯವೂ, ಶಿವಶರಣರ ಮನಸ್ಸಿಗೆ ಹರ್ಷವನ್ನುಂಟುಮಾಡಿದವು. ಆದ್ದರಿಂದ ನಿನ್ನಲ್ಲಿ ಯಾವ ದೋಷವೂ ಇಲ್ಲ. ನೀನೂ, ನಿನ್ನ ಚರಿತ್ರವೂ ಪಾವನವಾದುದು. ಇನ್ನು ಈ ಕ್ರೂರ ಕಾರ್ಯವನ್ನು ಮಾಡಬೇಡ ಎಂದು ಕೈಯಲ್ಲಿರುವ ಖಡ್ಗ ವನ್ನು ಕಸಿದುಕೊಂಡು ರಕ್ತವು ಸೋರುತ್ತಿರುವ ಕಣ್ಣುಗಳನ್ನು ಒರೆಸಿ ತನಗೆ ನಮಸ್ಕಾರ ಮಾಡುತ್ತಿರುವ ತಮ್ಮನನ್ನು ಅಣ್ಣನು ಆಲಂಗಿಸಿ ನೈದಡವಿ ಕರೆ ದುಕೊಂಡು ಬಂದು ಭಕ್ತಿಯಿಂದ ಗುರುಧ್ಯಾನವನ್ನು ಮಾಡಲು ಗುರುವಿನ ಕರುಣಾ ಕಟಾಕ್ಷದಿಂದ ಕೂಡಲೇ ಗುರುಭಕ್ತರಾಜನ ಕಣ್ಣುಗಳು ಹೊಸದಾಗಿ ಹುಟ್ಟಿದವು. ಆಗ ಅಲ್ಲಿದ್ದ ಭಕ್ತರೆಲ್ಲರೂ ಆಶ್ಚರ್ಯದಿಂದ ಹೊಗಳುತ್ತಿದ್ದರು. ಗುರುಭಕ್ತರಾಜನು ಅಣ್ಣನೊಡನೆ ಅರಮನೆಯನ್ನು ಸೇರಿ ಮೊದಲಿಗಿಂತಲೂ ಅಧಿಕವಾಗಿ ಗುರುಭಕ್ತಿಯಿಂದ ಪ್ರಕಾಶಮಾನನಾಗಿ ಮೆರೆಯುತ್ತಿದ್ದನೆಂದು ಬಸವೇಶ್ವರನು ಭಕ್ತರುಗಳಿಗೆಲ್ಲ ಹೇಳಿ ಆನಂದದಿಂದ ಇದ್ದನು.

## — ವೇಮನಾರ್ಯನ ಕಥೆಯು —

ಶಿವಭಕ್ತಾಗ್ರಗಣ್ಯನೂ, ಸತ್ಕರ್ಮ ಜ್ಞಾನ ಸಂಪನ್ನನೂ, ನಿಗ್ರಹ ಅನುಗ್ರಹ ಸಮರ್ಥನೂ, ಶಿವಪಂಚಾಕ್ಷರಿ ಮಂತ್ರ, ಜಪ ಸಿದ್ಧಿ ಸಂಪನ್ನನೂ, ವೇದವೇದಾಂತಾದಿ ಸಮಸ್ತ ವಿದ್ಯಾಪಾರಾಂಗತ ಧುರೀಣನೂ, ಸಕಲ

ದಿಗಂತ ಕೀರ್ತಿ ಸಂಪನ್ನನೂ ಆಗಿ ಮೆರೆಯುತ್ತಿರುವ ಬೇಲದೇವಿಯ ವೇಮನಾರಾಧ್ಯನೆಂಬ ಶಿವಭಕ್ತನು ಸಂಪತ್ತಿಗಾಕರವಾದ ಅದೇ ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಇಂತಹ ಶಿವಭಕ್ತನು ಒಂದು ದಿವಸ ಹೂದೋಟಕ್ಕೆ ಹೋಗಿ ತಾನು ಮಾಡುವ ಶಿವಪೂಜೆಗಾಗಿ ಮಲ್ಲಿಗೆ, ಜಾಜಿ, ಸಂಪಿಗೆ, ಹೊನೆ ಸುರಹೊನ್ನೆ, ಸುರಗಿ, ಸೇವಂತಿಗೆ ಮೊದಲಾದ ಪುಷ್ಪಗಳನ್ನು ಆರಿಸಿ ಕರಡಿಗೆಯಲ್ಲಿ ತುಂಬಿಕೊಂಡು ಹಿಂದಿರುಗಿ ಮನೆಗೆ ಬರುತ್ತಾ ಇರುವಾಗ ಪರಊರಿನ ರಾಜನೊಬ್ಬನು ಬೇರೆ ಊರಲ್ಲಿ ತನ್ನ ಮದುವೆಯನ್ನು ಮಾಡಿಕೊಂಡು ಸರ್ವಾಲಂಕಾರ ಭೂಷಿತಳೂ, ಸರ್ವಾಂಗ ಸುಂದರಿಯೂ, ಮನ್ಮಥನ ಮದ್ದಾನೆಯಂತೆ ಹೊಳೆಯುತ್ತಿರುವವಳೂ ಆದ ಪತ್ನೀಸಮೇತನಾಗಿ ಅಟ್ಟಹಾಸದಿಂದ ಅಲಂಕರಿಸಿದ ಆನೆಯ ಮೇಲೆ ಕುಳಿತುಕೊಂಡು ವಾದ್ಯ, ತಾಳ, ಮೇಳ, ನೃತ್ಯ, ಗೀತಾದಿಗಳಿಂದ ಹೊಗಳುತ್ತಿರುವ ವೀರಭಟರು ಸಮೇತನಾಗಿ ತನ್ನ ಊರಿಗೆ ಹೊರಟಿರಲು ಮಾರ್ಗ ಮಧ್ಯದಲ್ಲಿ ತೇಜೋನಿಧಿಯಾಗಿ ಬೆಳಗುತ್ತಿರುವ ವೇಮನಾರ್‍ಯನನ್ನು ಕಂಡು ಬೇಗನೇ ಆನೆಯಿಂದ ಇಳಿದು ಆತನ ಪಾದಗಳಿಗೆ ನಮಸ್ಕರಿಸಿದನು. ಆಗ ತ್ರಿಕಾಲಜ್ಞಾನಿಯಾದ ವೇಮನಾರ್‍ಯನು ಈ ರಾಜನು ಅಲ್ಪಾಯುವೆಂದು ತಿಳಿದು "ನಿನಗೆ ದೀರ್ಘಾಯುಷ್ಯ ಉಂಟಾಗಲಿ" ಎಂದು ಹರಸದೆ ಸುಮ್ಮನಿದ್ದನು. ಇದನ್ನು ನೋಡಿ ಆ ರಾಜನು ನಮಸ್ಕರಿಸಿದ ನನಗೆ ಈತನು ಆಶೀರ್ವಾದಮಾಡದೆ ಇರಲು ಕಾರಣವೇನು ? ಇನ್ನೊಂದು ಸಾರಿಯಾದರೂ ನಮಸ್ಕಾರಮಾಡಿ ಆಶೀರ್ವಾದ ಪಡೆಯಬೇಕೆಂದು ಪುನಃ "ಶರಣು" ಎಂದು ಅಡ್ಡಬಿದ್ದನು. ಆಗಲೂ ಆ ಶಿವಯೋಗಿಯು ಆಶೀರ್ವದಿಸದೆ ಸುಮ್ಮನಿದ್ದುದನ್ನು ಕಂಡು ನಮಸ್ಕರಿಸಿದರೆ ಆಶೀರ್ವಾದವನ್ನು ಮಾಡದಿರುವವರಿಗೆ ನನ್ನ ಗಂಡನು ಮಣಿದನಲ್ಲಾ ಎಂದು ಹೆಂಡತಿಯು ಎಲ್ಲಿ ಹಾಸ್ಯಮಾಡಿ ನಗುವಳೋ ಎಂದು ಯೋಚಿಸಿ ಕೋಪಗೊಂಡು ನಾಚಿಕೆಯಿಂದ ತಲೆತಗ್ಗಿಸಿ ಭಕ್ತಿಯು ಜಾರಿ ಮರೆಯಾಗಲು ಸ್ವಾಮೀ, ನಾನು ತಮ್ಮನ್ನು ಶಿವಾಚಾರ್‍ಯರು, ಗುರುಗಳು, ಮಹಾತ್ಮರು, ತೇಜೋನಿಧಿಗಳು ಭಕ್ತವತ್ಸಲರು, ಪೂಜ್ಯರು ಎಂದು ತಿಳಿದು ನಮಸ್ಕಾರ ಮಾಡಿದರೆ ಆಶೀರ್ವಾದಮಾಡದೆ ಸುಮ್ಮನಿರುವದು ಗೌರವವೋ? ನಿಮಗಿರುವ ಜಂಗಮ ವೇಷಕ್ಕೆ ಬಾಗಿದವರಿಗೆ ಹರಸದಿರುವ ಅಹಂಕಾರವು ನ್ಯಾಯವಾದುದೇ ?

ಬಣ್ಣಕ್ಕೆ ಬಾಯಿಬಿಟ್ಟು ನಿಮ್ಮ ವೇಷ-ಭೂಷಣಗಳನ್ನು ನೋಡಿ ಬೆರಗಾಗಿ ನಮಸ್ಕರಿಸಿದೆನು. ಇದನ್ನು ಮೊದಲೇ ನಾನು ತಿಳಿಯಲಿಲ್ಲ. ಬ್ರಹ್ಮಕುಲೋತ್ಪನ್ನರಾಗಿ, ಶಿವಾಚಾರ ಧರ್ಮವನ್ನು ಅನುಸರಿಸಿ, ಆಚಾರ್ಯ ಪದವಿಯನ್ನು ಪರಿಗ್ರಹಿಸಿ ಶಿವಭಕ್ತಿ ತತ್ಪರರಾಗಿ ವರ್ತಿಸುತ್ತ ಬಂದು ನಮಸ್ಕರಿಸಿದ ರಾಜನಿಗೆ ಆಶೀರ್ವಾದ ಮಾಡುವದಕ್ಕೆ ಅನುಮಾನವಾಯಿತೇ ? ಹೋಗಲಿ ಬಿಡಿರಿ. ನೀವು ಆಶೀರ್ವಾದ ಮಾಡದುದರಿಂದ ನನಗಾದ ಕೊರತೆಯೇನು ? ನೀವು ಆಶೀರ್ವದಿಸುವದರಿಂದ ನನ್ನ ಆಯುಷ್ಯವು ಹೆಚ್ಚುವದೇ ? ಇಲ್ಲವಾದರೆ ಆಯುಷ್ಯ ಕಡಿಮೆಯಾಗುವದೇ ? ಪೂರ್ವಕರ್ಮಾನುಸಾರವಾಗಿ ಹಣೆಯಲ್ಲಿ ಬರೆದ ಬರೆಹವನ್ನು ಮೀರಿಸಲಿಕ್ಕೆ ಬ್ರಹ್ಮನಿಗೂ ಸಾಧ್ಯವಿಲ್ಲದಿರುವಾಗ ಇತರ ಮನುಷ್ಯರ ಪಾಡೇನು ? ವಿವಾಹ ಕಾಲದಲ್ಲಿ ಹಸೆಯ ಮೇಲೆ ನಿಂತಿರುವಾಗ ತಾಯಿ-ತಂದೆಗಳು ಹರಸಿದ ಹರಕೆಗಿಂತಲೂ ಅನ್ಯರ ಹರಕೆಯನ್ನು ಬಯಸಬೇಕೇ ? ಹರಸಿದಮಾತ್ರದಿಂದ ಗೌರವಕ್ಕೆ ಹಾನಿ ಬರುವದೆಂದು ಸುಮ್ಮನಿರುವ ನಿಮ್ಮ ಮನೋಭಾವವನ್ನು ನಾನು ಬಲ್ಲೆ. ಹರಸತಕ್ಕ ಪುಣ್ಯಾತ್ಮರಾದ ಮಹಾತ್ಮರು ಈ ಲೋಕದಲ್ಲಿ ಇನ್ನಾರೂ ಇಲ್ಲವೇ ? ನಿಮ್ಮ ದೊಡ್ಡಸ್ತಿಕೆಯು ನಿಮ್ಮಲ್ಲಿಯೇ ಇರಲಿ ನನಗೇನೂ ಬೇಡ ಎಂದು ತಿರಸ್ಕರಿಸಿ ನುಡಿದನು. ಆಗ ವೇಮನಾರ್ಯನು ಅಯ್ಯಾ--- ರಾಜಪುತ್ರಾ, ನೀನು ಅಲ್ಪಾಯುವಾಗಿರುವೆ. ನಾಳೆ ಮಧ್ಯಾಹ್ನದೊಳಗಾಗಿ ಮರಣವು ಸಂಭವಿಸುವದೆಂಬ ಸ್ಥಿತಿಯನ್ನು ತಿಳಿದು ಆಶೀರ್ವಾದಮಾಡದೆ ಸುಮ್ಮನಿದ್ದೆವು. ಮಹಾತ್ಮರ ಆಶೀರ್ವಾದವು ಮೃತ್ಯುವನ್ನು ನಾಶಮಾಡುವ ಶಕ್ತಿಯುಳ್ಳದ್ದಾಗಿರಬೇಕು. ನಿನ್ನ ಪ್ರಾರಬ್ಧಕರ್ಮದಿಂದ ನಾಳೆ ಮಧ್ಯಾಹ್ನದೊಳಗಾಗಿ ಸತ್ತುಹೋಗುವೆ. ಎಂದು ನುಡಿಯಲು ಆ ಮಾತನ್ನು ಕೇಳಿದ ರಾಜನು ಗಕ್ಕನೆ ಬೆಚ್ಚಿಬಿದ್ದು ಕಾಂತಿಗೆಟ್ಟು ಅನಂತರ ಕೋಪದಿಂದ ಲೋಕದಲ್ಲಿ ಪರಮಾತ್ಮನೊಬ್ಬನು ಕಾಮನನ್ನು ಸುಟ್ಟು ತಾನು ಉಳಿದುಕೊಂಡನು. ಬ್ರಹ್ಮನ ತಲೆಯನ್ನು ಕತ್ತರಿಸಿ ಪುನಃ ಪ್ರಾಣವನ್ನಿತ್ತನು. ಜಲಂಧರ ಮೊದಲಾದ ರಕ್ಕಸರನ್ನು ಗೆದ್ದು ಪುನಃ ಸಲುಹಿದನು. ಅವನು ಕೋಪಿಸಿಕೊಂಡರೆ ನಾಶಮಾಡುವನು. ಒಲಿದರೆ ಕಾಯುವನು. ಅವನನ್ನು ಬಿಟ್ಟು ಉಳಿದ ಮನುಷ್ಯರು ಕೊಲ್ಲುವದಕ್ಕೂ, ಕಾಯುವದಕ್ಕೂ ಸಮರ್ಥರೇ? ಕಾವಿ ಲಾಂಛನವನ್ನು ಧರಿಸಿದಮಾತ್ರಕ್ಕೆ ಶಿವ

ಸ್ವರೂಪಿಗಳಾಗಿ ಹೋದಿರಾ ! ನೀವು ಹೇಳಿದಂತೆ ನಾಳೆ ಮಧ್ಯಾಹ್ನದೊಳಗಾಗಿ ನಾನು ಸತ್ತುಹೋದರೆ ನಿಮ್ಮ ವಾಕ್ಯವು ಸತ್ಯವಾದದ್ದು ಹೌದು. ಇಲ್ಲವಾದರೆ ನೋಡೋಣ ಎಂದು ಹೇಳುತ್ತ ತನ್ನ ಪತ್ನೀಸಮೇತನಾಗಿ ಆನೆಯನ್ನು ಹತ್ತಿ ಪರಿವಾರ ಸಮೇತ ಬಂದು ತನ್ನ ಅರಮನೆಯನ್ನು ಸೇರಿ ಸ್ನಾನ ಪೂಜಾದಿ ಕರ್ಮ ನೆರವೇರಿಸಿ ಶಿವಶರಣರ ಪಾದಸೇವೆಯನ್ನು ಮಾಡಿ ಸುಖ ಭೋಜನವಾದ ನಂತರ ಗಂಡ ಹೆಂಡಿರಿಬ್ಬರೂ ರತ್ನಖಚಿತವಾದ ಹಂಸ ತೂಲಿಕಾತಲ್ಪದಲ್ಲಿ ಮಲಗಿ ಸುಖವಾಗಿ ನಿದ್ರಿಸುತ್ತಾ ಇದ್ದರು. ಆಗ ಒಂದು ಕ್ರೂರ ಸರ್ಪವು ತೂಗುಮಂಚದ ಸರಪಳಿಯ ಮೂಲಕವಾಗಿ ಇಳಿದು ಬಂದು ನಾಲಿಗೆಯನ್ನು ಅಲ್ಲಾಡಿಸುತ್ತ ರಾಜನ ಕೈಯನ್ನು ಕಚ್ಚಿ ಭುಸ್ಸೆಂದು ಉಸುರನ್ನು ಚೆಲ್ಲಿ ಹೊಟ್ಟೆ ಮೇಲಾಗಿ ಉರುಳಿ ನಿಂತಿರಲು ರಾಜಪತ್ನಿಯು ಎಚ್ಚತ್ತು ದಿಗಿಲಿನಿಂದ ಭಯಪಟ್ಟು ಗಂಡನನ್ನು ಕೂಗುವದಕ್ಕೆ ಧ್ವನಿಬಾರದೆ ಹಾ ! ಹಾ !! ಹಾ !!! ಅಯ್ಯಯ್ಯೋ ಎಂದು ಗಟ್ಟಿಯಾಗಿ ಕೂಗಲು ಆ ಧ್ವನಿಯನ್ನು ಕೇಳಿ ರಾಜನು ಎದ್ದು ರಕ್ತಸುರಿಯುತ್ತಿರುವ ಕೈಯನ್ನೂ, ಪಕ್ಕದಲ್ಲಿದ್ದ ಹಾವನ್ನೂ ನೋಡಿ, ಎದೆಗುಂದಿ ಮೂರ್ಛಿತನಾಗಿ ಮಡಿದು ಬಿದ್ದನು. ಆ ಕೂಡಲೆ ರಾಣಿಯು ಆಜ್ಞೆಮಾಡಿ ಗಾರುಡಿಗರನ್ನೂ, ವಿಷವೈದ್ಯರನ್ನೂ, ಮಂತ್ರವಾದಿಗಳನ್ನೂ, ಯೋಗಿಗಳನ್ನೂ ಬರಮಾಡಿ ಅವರಿಗೆ ನಮಸ್ಕರಿಸಿ ನನ್ನ ಗಂಡನನ್ನು ಬದುಕಿಸಿದವರಿಗೆ ಕೇಳಿದ್ದನ್ನು ಕೊಡುತ್ತೇನೆಂದು ಹೇಳಲು ಆಗ ಬಂದಿದ್ದ ಮಂತ್ರಿಕರೆಲ್ಲ ನಾನಾವಿಧ ಮಂತ್ರ, ಔಷಧ, ಲೇಪನಾದಿಗಳನ್ನು ಮಾಡಿದರೂ ಏನೂ ಸಾಧ್ಯವಾಗಲಿಲ್ಲ. ಆಗ ಮತ್ತೊಬ್ಬ ಮಂತ್ರವಾದಿಯು ಬಂದು ತನ್ನ ಬುದ್ಧಿಯನ್ನೆಲ್ಲ ಖರ್ಚುಮಾಡಿ ಹಾವು ಕಚ್ಚಿದ್ದ ಸ್ಥಲ ಪರೀಕ್ಷಿಸಿ ಈ ಸರ್ಪ ಯಾವ ಕಡೆಯಿಂದ ಬಂದು ಕಚ್ಚಿತೋ ಶಿವಶಿವಾ ! ಈತನ ಆಯುಷ್ಯ ಇಂದಿಗೆ ಮುಗಿಯಿತು. ಎಂದು ಅನ್ನುತ್ತ ಸರ್ಪಗಳಲ್ಲಿ ವಿಮಳ, ವಾಸುಕಿ, ಕಂಬಳ, ಅಶ್ವತರ, ಉನ್ಮತ್ತ, ಪ್ರಚಂಡ, ಸುಮನ, ತಕ್ಷಕ, ಪುಷ್ಪದಂಷ್ಟ್ರ, ಪುರಾಣ, ಬಳಾಕ, ಕಳಾಳ ಮುಖ, ಐರಾವತ, ನೀಲ, ಪುಂಡ್ರಕ, ಹವಿರ್ವಕ್ತ್ರ, ಕರ್ಕೋಟಕ, ಕುಮುದ, ವಾಮನ, ಮುದ್ಗಲ, ಅರ್ಯಕ, ಕಳಿಂಗ ಶಂಖಪಾಲ, ಶೀಲ, ಕಾಲೀಯ, ಸಂವರ್ತಕ, ಕೌಲಿಕ, ಧೃತರಾಷ್ಟ್ರ, ಕಂಧರ, ಕೋಟ, ಧನಂಜಯ, ಜ್ವಾಲಿ, ಪತಂಗ, ವಿಭಾಕರ, ಕಾಲಿಕ, ಮಹೋದರ,

ಪಿಂಡ, ಅಜಿತಕ, ಪಾಜರಿ, ಪಾಂಡುರಕ, ಶಾಲಿ, ಅಶುಂಗ, ಚಿತ್ರಾಂಜನ್ನ ಕುಹರ, ಬಲಾಢ್ಯ, ಮಣಿಂಜಯ, ಮೊದಲಾದ ಸಹಸ್ರ ಭೇದಗಳುಂಟು, ಇವುಗಳಲ್ಲಿ ಒಂದೊಂದು ಜಾವಕ್ಕೆ ಬೇರೆ ಬೇರೆ ಅಧಿಪತಿಗಳಾದ ಸರ್ಪಗಳುಂಟು. ಅವು ತಮ್ಮ ಕಾಲದಲ್ಲಿ ಕಚ್ಚಿದರೆಮಾತ್ರ ಮಣಿ, ಮಂತ್ರ, ಔಷಧಗಳಿಂದ ಗುಣಪಡಿಸಬಹುದು. ಹಾಗೂ ಅಜಗರ, ದುರ್ಮುಖ, ಮಿಶ್ರಾರಿ, ರೇಣುಕ, ಜಿನಕ, ಸ್ವರ್ಗಕ, ದುರ್ಧರ, ಕುಳಿಕ, ದಂಡಪಾದಕ ಮೊದಲಾದ ಲಕ್ಷಾಂತರ ಭೇದವಿರುವ ಹಾವುಗಳುಂಟು. ಇವು ಕಚ್ಚಿದರೆ ಉಳಿಸಬಹುದು. ಹಾವಿನ ಜಾತಿ ಸರಿಯಾಗಿರುವ ಅಷ್ಟಕುಲ ಸರ್ಪಸಂಕುಲದಿಂದ ಜನಿಸಿದ ಸರ್ಪಗಳ ಹಲ್ಲುಗಳ ಜೊತೆಯನ್ನು ತಿಳಿದು ಗಾರುಡಮಂತ್ರ ಜಪಿಸುವದರಿಂದ ವಿಷ ಪರಿಹಾರವಾಗಿ ಆವೇಶತುಂಬಿ ಮಾತಾಡುವನು. ಕಚ್ಚುವಾಗ ಸರ್ಪದ ಒಂದು ಹಲ್ಲು ನಟ್ಟಿದ್ದರೆ ತಲೆಯ ಮೇಲೆ ಬೆಂಕಿಯ ಸೇಕವನ್ನೂ, ನೀರಿನಿಂದ ಸ್ನಾನವನ್ನೂ ಮಾಡಿಸಿ ವಿಷವನ್ನು ಇಳಿಸಬಹುದು. ಎರಡು ಹಲ್ಲು ಇಳಿದಿದ್ದರೆ ಕ್ರೂರ ಮಂತ್ರ ಪ್ರಯೋಗದಿಂದ ವಿಷ ಇಳಿಸಬಹುದು. ಮೂರು ಹಲ್ಲುಗಳು ನಟ್ಟಿದ್ದರೆ ದಿವ್ಯವಾದ ಔಷಧವನ್ನು ಪ್ರಯೋಗಮಾಡಿ ವಿಷವನ್ನು ಇಳಿಸಬಹುದು. ನಾಲ್ಕು ಹಲ್ಲು ಇಳಿದಿದ್ದರೆಮಾತ್ರ ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳಿಗೂ, ಮಣಿ, ಮಂತ್ರ, ತಂತ್ರಗಳಿಗೂ ಅಸಾಧ್ಯವೆಂದು ಹೇಳುತ್ತ ರಾಜನ ಹಸ್ತವನ್ನು ತಿರುಗಿಸಿ ನೋಡಿರಿ. ಈ ಸರ್ಪವು ಕರ್ಕೋಟಕ ಜಾತಿಯದು; ಕಚ್ಚಿದ ನಾಲ್ಕು ಹಲ್ಲುಗಳೂ ಇಳಿದಿರುವವು. ಇದರ ವಿಷವನ್ನು ವಿಷಕಂಠನೂ, ನಾಗಭೂಷಣನೂ, ಮೃತ್ಯುಂಜಯನೂ ಆದ ಈಶ್ವರನೇ ಪರಿಹರಿಸಲು ಸಾಧ್ಯ. ಉಳಿದವರಿಗೆ ಅಸಾಧ್ಯವೆಂದು ಹೇಳಿ ಹೊರಟು ಹೋದನು. ಇದನ್ನು ಕೇಳಿ ಅಂತಃಪುರದ ಯುವತಿಯರೂ, ಪರಿವಾರದ ಜನರೂ, ಮಂತ್ರಿಗಳೂ, ಸೇನಾನಾಯಕರೂ ಗೋಳಿಟ್ಟರು. ರಾಣಿಯು ಎದೆಯನ್ನು ಬಡಿದುಕೊಳ್ಳುತ್ತ ಹಂಬಲಿಸಿ ದೊರೆಯ ಹತ್ತಿರ ಬಂದು ಕಣ್ಣೀರು ಸುರಿಸುತ್ತ ಮಾತನಾಡೆಂದು ಗಲ್ಲವನ್ನು ಹಿಡಿದು ಮುದ್ದಿಸುತ್ತ ನಾನಾವಿಧವಾಗಿ ಪ್ರಲಾಪಿಸುತ್ತ ಅಳುತ್ತಿದ್ದಳು. ಆತನ ತಾಯಿ-ತಂದೆಗಳು ಸೊಸೆಯನ್ನು ಸಮಾಧಾನಮಾಡಿ ಆಹಾ! ನಿನ್ನೆಯ ದಿವಸ ದೊರೆತಿದ್ದ ಮಹಾತ್ಮರು. ಮಹಾ ತಪಸ್ವಿಗಳು. ಅವರು ಮುಂದೆ ಆಗುವ ಸಂಗತಿಯನ್ನು ಕುರಿತು ದೃಢವಾಗಿ ಹೇಳಿದರು.

ಅವರು ಭಕ್ತಿಸಂಪನ್ನರೂ, ಶರಣಜನ ವತ್ಸಲರೂ, ದಯಾಪರರೂ, ಸತ್ಯ ಸಂಧರೂ ಆಗಿರುವದರಿಂದ ಈ ಶವವನ್ನು ಅವರ ಬಳಿಗೆ ತೆಗೆದುಕೊಂಡು ಹೋಗಿ ಪ್ರಾರ್ಥಿಸಿದರೆ ಪ್ರಾಣದಾನವನ್ನು ಮಾಡದೆ ಇರಲಾರರು. ಆದ್ದರಿಂದ ಏಳಿರಿ ಹೋಗೋಣವೆಂದು ಸರ್ವರೂ ಪ್ರತ್ಯಕ್ಷ ಪರಮೇಶ್ವರನಂತಿರುವ ಆ ವೇಮನಾ ರ್ಯನ ಬಳಿಗೆ ಬಂದು ಗೋಳಿಟ್ಟು ಅಳುತ್ತ ಪಾದಗಳಿಗೆ ನಮಸ್ಕರಿಸಿ ಎದ್ದು ನಿಂತು, ಕೈಮುಗಿದು ಸ್ವಾಮೀ, ಗುರುವರ್ಯರೇ, ಭಕ್ತವತ್ಸಲರೇ, ಸಾಕ್ಷಾತ್ ಶಿವಸ್ವರೂಪರೇ, ನಮ್ಮ ಬಿನ್ನಹವನ್ನು ಕೇಳಬೇಕು. ನೀವು ಹೇಳಿದಂತೆ ಈ ರಾಜನು ನಿನ್ನಿನ ದಿವಸ ಸರ್ಪದಿಂದ ಕಡಿಯಲ್ಪಟ್ಟು ಮೃತನಾದನು. ಬ್ರಹ್ಮ ಬರೆಹವನ್ನು ತೊಡೆಯಲು ಸಮರ್ಥರಾದ ತಾವು ಈ ಬಗೆಯ ಮರಣ ವನ್ನು ತಪ್ಪಿಸಿ ಪ್ರಾಣದಾನಮಾಡಬೇಕು. ಭಕ್ತಪ್ರಾಣ, ಭಕ್ತಪರಾಧೀನರೆಂಬ ಬಿರುದನ್ನು ವಹಿಸಿರುವ ತಾವು ಗತಿಗೆಟ್ಟು, ಮತಿಗೆಟ್ಟು, ದಿಕ್ಕೆಟ್ಟು ಮಡಿದು ಹೋಗುವ ಜನರಿಗೆ ಪ್ರಾಣದಾನವನ್ನು ಮಾಡಿ ಉದ್ಧಾರಮಾಡಬೇಕು. ಈ ಭಕ್ತನು ಸಾಯುವದಕ್ಕೆ ಮುಂಚೆ ತಮ್ಮ ಪಾದಗಳಿಗೆ ನಮಸ್ಕರಿಸಿ ಪ್ರಾಣ ವನ್ನು ಕಳೆದುಕೊಂಡಿರುವನು. ತಮ್ಮ ಪಾದಗಳಿಗೆ ನಮಸ್ಕರಿಸಿದಾಗ್ಯೂ ಮೃತ್ಯುವಶನಾದನಲ್ಲಾ ! ಆದಕಾರಣ ಇದು ತಮ್ಮ ಕೀರ್ತಿಗೆ ಕಲಂಕವು. ಹಿಂದಕ್ಕೆ ಮುಸುಟೆಯ ಚೌಡಯ್ಯನೆಂಬವನು ತನ್ನ ಪಾದಗಳಿಗೆರಗಿದ ಯುವ ತಿಗೆ ದೀರ್ಘಾಯುಷ್ಯವುಂಟಾಗಲೆಂದು ಹರಸಿ ಪ್ರಾಣದಾನವನ್ನುಮಾಡಿ ಅವ ಳನ್ನು ಬದುಕಿಸಲಿಲ್ಲವೇ ? "ಶರಣಾಗತ ವಜ್ರಪಂಜರ" ಎಂಬ ಬಿರುದನ್ನು ವಹಿಸಿರುವ ನೀವು ಈ ಭಕ್ತನ ಸಾವನ್ನು ನೋಡಿ ಸುಮ್ಮನಿರಲಾರಿರಿ. ನೀವೇ ಗತಿ, ಮತಿ, ಹಿತ ಸಕಲ ಸರ್ವಸ್ವವೂ ನೀವೇ ಎಂದು ನಂಬಿದವರನ್ನು ಹೊರಗೆ ಮಾಡಬೇಡಿರಿ. ಎಂದು ನಾನಾವಿಧವಾಗಿ ವಿಜ್ಞಾಪನೆ ಮಾಡಿಕೊಳ್ಳುತ್ತಿರಲು ಆ ವೀರಶೈವ ವ್ರತಾಚಾರಿಯೂ, ಶಿವಸ್ವರೂಪಿಯೂ ಆದ ವೇಮನಾರ್ಯನು ಶಿವಶರಣರ ಮಹಿಮೆಗಳನ್ನು ಮನದಲ್ಲಿ ನೆನೆದು ಶರಣಾಗತರನ್ನು ರಕ್ಷಿಸದಿರು ವದು ವೀರಶೈವಮತಕ್ಕೆ ಅಪಯಶವನ್ನು ತರುವದು. ಹಾಗೂ ಶತ್ರುರಾಜನು ಮೇಲೇರಿ ಬರುವಾಗ ಹಿಂದೆ ಸರಿದು ಓಡಿಹೋಗುವವನು ಶೂರನೆನಿಸು ವನೋ ? ಪ್ರಾಣವನ್ನು ಬೇಡಿ ಮೊರೆಹೊಕ್ಕವರನ್ನು ಉಪೇಕ್ಷೆ ಮಾಡುವದು ಶೌರ್ಯವೇ? ಇದರಿಂದ ಶಿವಭಕ್ತಿಗೆ ಕುಂದುಂಟಾಗುವದು. ಎಂದು ಯೋಚಿಸಿ

ಆ ರಾಜನಿಗೆ ಪ್ರಾಣದಾನ ಮಾಡುವದೇ ಯೋಗ್ಯವೆಂದು ಗೊತ್ತುಮಾಡಿ ಬಳಿಕ ಗುರು-ಲಿಂಗ-ಜಂಗಮ ಭಕ್ತರಾದ ಶಿವಗಣಂಗಳನ್ನು ಬರಮಾಡಿ ಕೊಂಡು ಉತ್ತಮಾಸನಗಳಲ್ಲಿ ಕುಳ್ಳಿರಿಸಿ ಅವರ ಪಾದಗಳನ್ನು ತೊಳೆದು ಪೂಜಿಸಿ ಅವರ ಪಾದತೀರ್ಥವನ್ನು ರತ್ನಕಲಶದಲ್ಲಿ ತುಂಬಿಕೊಂಡು ಅದನ್ನು ಸಭಾ ಮಧ್ಯದಲ್ಲಿರಿಸಿ ಪೂಜಿಸಿ ಅವರಿಗೆ ಪಟ್ಟೆ ಪೀತಾಂಬರಗಳನ್ನು ಕೊಟ್ಟು ಗಂಧ, ಪುಷ್ಪಾಕ್ಷತೆಗಳಿಂದ ಪೂಜಿಸಿ ಸತ್ಕರಿಸಿ ಮೃಷ್ಟಾನ್ನಭೋಜನದಿಂದ ತೃಪ್ತಿ ಪಡಿಸಿ ಗಂಧಾನುಲೇಪನ, ಪುಷ್ಪಮಾಲಿಕೆಗಳನ್ನುಸಮರ್ಪಿಸಿ ಹಾಡಿ, ನೀರಾಜನ ಬೆಳಗಿ, ದಶವಿಧವಾದ ದಾನಗಳನ್ನು ಮಾಡಿ ಆ ಶವಕ್ಕೆ ಪ್ರಾಣದಾನಮಾಡುವ ವಿಷಯದಲ್ಲಿ ಶಿವಗಣಂಗಳ ಸಭೆಗೆ ನಮಸ್ಕಾರಮಾಡಿ ಅವರ ಆಜ್ಞೆಯನ್ನು ಪಡೆದು ಶವವನ್ನು ತರುವಂತೆ ಆಜ್ಞೆಮಾಡಲು ಆ ರಾಜನ ಭಟರು ಕೂಡಲೇ ಅಲ್ಲಿಗೆ ಬಂದು ನೋಡಲಾಗಿ ಮುಖವು ಬಾಡಿ, ಕಣ್ಣುಗುಡ್ಡೆಗಳು ಬೆರೆತು, ತಲೆಯು ಜೋಲುಬಿದ್ದು, ಮೀಸೆಗಳು ಕೆದರಿ ಹೋಗಿ, ಹಲ್ಲುಗಳು ಹಸುರಾಗಿ, ಜೊಲ್ಲು ಸುರಿದು, ಹುಬ್ಬುಗಳು ಬಿಗಿದು, ತುಟಿಯು ಬಿಚ್ಚಿ, ಕೈಕಾಲುಗಳು ಸೆಳೆದು ಸೊಡರಿಕೊಂಡು, ರಕ್ತವು ಆರಿಹೋಗಿ, ಕೆಟ್ಟ ವಾಸನೆಯು ದೇಹವನ್ನೆಲ್ಲ ವ್ಯಾಪಿಸಿ, ಮಾಸಿ, ಹೊಲಸಾಗಿ, ಹಳಸಿ ನಾರುತ್ತಿರುವ ರಾಜನ ಶವವನ್ನು ಕಟ್ಟಿ ತಂದು ಮುಂದಿಟ್ಟರು. ಆಗ ವೇಮನಾರ್ಯನು ಆ ಶವವನ್ನು ನಿರ್ಮಲೋದಕ ದಿಂದ ತೊಳೆಯಿಸಿ ಸ್ವಚ್ಛಮಾಡಿಸಿ ಜಂಗಮ ಪಾದತೀರ್ಥದಿಂದ ಪರಿಶುದ್ಧಗೊ ಳಿಸಿಭ ಕ್ತಜನರು ತಮ್ಮ ಹಸ್ತಗಳಿಂದ ಮುಟ್ಟಿಕೊಟ್ಟ ವಿಭೂತಿಯನ್ನು ಜಂಗ ಮರ ಪಾದಧೂಳಿಯಿಂದ ಮಿಶ್ರಮಾಡಿ ಅದನ್ನು ಅವರ ತೀರ್ಥಜಲದಿಂದ ಅಭಿ ಷೇಕಮಾಡಿಸಿ ಕಲಿಸಿ ಅದನ್ನು ಆ ರಾಜನ ಸರ್ವಾಂಗಗಳಿಗೆಲ್ಲ ಧರಿಸಿ ಹಣೆ, ಕುತ್ತಿಗೆ, ಶಿರಸ್ಸು, ಎದೆ, ಭುಜ ಈ ಸ್ಥಳಗಳಲ್ಲಿ ತ್ರಿಪುಂಡ್ರವನ್ನು ಧರಿಸಿ ಜಂಗ ಮರ ಪಾದಸೇವೆಗಾಗಿ ಪೂಜೆಮಾಡಿದ್ದ ಹೂಮಾಲೆಯನ್ನು ಅವನ ಕೊರಳಿಗೆ ಹಾಕಿಸಿ ಮಹಾಪ್ರಮಥರಾದಿಯಾಗಿ ರುದ್ರಗಣಂಗಳ ಪಾದವನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ ಶಿವಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ ಸರ್ವ ಶಿವಗ ಣಂಗಳೂ ಮಂತ್ರಿಸಿಕೊಟ್ಟ ವಿಭೂತಿಯನ್ನು ಆ ರಾಜನ ಬಾಯಿಯಲ್ಲಿಟ್ಟು ಶಿವಗಣಂಗಳ ಸಭೆಗೆ ದಂಡಪ್ರಣಾಮವನ್ನು ಮಾಡಿ ಆ ರಾಜನ ದೇಹವನ್ನು ನೋಡುತ್ತ ಓ—ಮಂಗಳಾಂಗ ಸುಂದರನಾದ ರಾಜನೇ, ಏಳು ಏಳು, ಎಂದು

ನುಡಿದನು. ಆ ಕೂಡಲೇ ಪ್ರಾಣವು ಸರ್ವಾಂಗದಲ್ಲಿಯೂ ವ್ಯಾಪಿಸಿ ಚೈತನ್ಯ ವನ್ನು ಕೊಡಲು ರಾಜನು ಮೆಲ್ಲನೆದ್ದು ವೇಮನಾರ್ಯನ ಪಾದಗಳನ್ನು ಕಂಡು ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ನಿಂತಿದ್ದನು. ಆಗ ರಾಜಪತ್ನಿಯೂ, ಪರಿ ವಾರದ ಜನರೂ, ತಾಯಿ-ತಂದೆಗಳೂ, ಸೇನಾಜನರೂ, ವೇಮನಾರ್ಯನ ಮಹಿಮೆಯನ್ನು ಕೊಂಡಾಡಿ ನಾನಾವಿಧವಾಗಿ ಹೊಗಳುತ್ತಿದ್ದರು. ಆಗ ವೇಮನಾರ್ಯನು, ಆ ರಾಜನಿಗೂ, ಅವನ ಬಂಧು-ಬಳಗದವರಿಗೂ, ಮಂತ್ರಿ, ಮೊದಲಾದವರಿಗೂ ಅವರವರ ಇಚ್ಛಾನುಸಾರವಾಗಿ ಶಿವದೀಕ್ಷಾ ವಿಧಾನವನ್ನು ಕೊಡಿಸಿದನು. ಆಗ ಅವರೆಲ್ಲರೂ ವೇಮನಾರ್ಯನನ್ನು ಹೊಗಳಿ ಶಿವಗಣಂಗಳಿಗೆ ನಮಸ್ಕರಿಸಿ ಸಂತೋಷದಿಂದ ನಲಿದಾಡುತ್ತಿದ್ದರು. ಆಗ ಶಿವಶರಣರೆಲ್ಲರೂ ವೇಮನಾರ್ಯನನ್ನು ಕುರಿತು, ಪ್ರಮಥಪಾದ, ಕ್ಷೀರಾಬ್ಧಿ ಪೂರ್ಣಚಂದ್ರ, ಮೃತ್ಯುನಾಶಕನಾದ ವೇಮನ ಪಂಡಿತನನ್ನು ಬಿಗಿ ದಪ್ಪಿ ಶಹಭಾಸ್ ! ಶಿವಕಾರ್ಯ ನಿರ್ವಾಹಕನೇ, ಭಲಾ ! ಶರಣಜನ ರಕ್ಷ ಕನೇ ಭಾಪು ! ಯಮಬಾಧೆಯನ್ನು ನಿವಾರಿಸಿ ಮೃತ್ಯುವನ್ನು ಜಯಿಸಿ ಶರ ಣೆಂದು ಬಂದವರಿಗೆ ಪ್ರಾಣವನ್ನು ಕೊಟ್ಟು ಕಾಪಾಡುವ ಶೌರ್ಯವೂ, ಧೈರ್ಯವೂ, ಚರನಿಷ್ಠೆಯೂ ಮತ್ತಾರಲ್ಲಿ ಇರುವದು ? ಎಂದು ಆತನನ್ನು ಹೊಗಳಿ ಕೊಂಡಾಡುತ್ತ ತಮ್ಮ ಕರುಣಾದೃಷ್ಟಿಯಿಂದ ನೋಡಿ ಪ್ರಸಾದವನ್ನು ಕೊಟ್ಟು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಬಸವೇಶ್ವರನು ಈ ವಾರ್ತೆ ಯನ್ನು ಜಂಗಮರ ಮುಖದಿಂದ ಕೇಳಿ ತಿಳಿದು ಅಲ್ಲಿಗೆ ಬಂದು ವೇಮನಾ ರ್ಯನ ಪಾದಪೂಜೆಯನ್ನು ಮಾಡಿ ಪ್ರಸಾದವನ್ನು ಪರಿಗ್ರಹಿಸಿ ಅವನ ಪಾದ ಧ್ಯಾನವನ್ನು ಭಕ್ತಿಯಿಂದ ಮಾಡುತ್ತ ಸುಖದಿಂದ ಇದ್ದನು.

## — ಚಿಕ್ಕ ಮಾದಣ್ಣನ ಪ್ರಾಣದಾನದ ಕಥೆಯು —

ಅದೇ ಕಲ್ಯಾಣ ಪಟ್ಟಣದಲ್ಲಿ ತನ್ನ ಯೋಗಬಲದಿಂದ ಏಳುನೂರು ವರ್ಷ ಜೀವಿಸಿ ಮಾನವರಿಗೆ ಇರುವ ಶತಾಯುಷ್ಯವೆಂಬ ವಚನವನ್ನು ಸುಳ್ಳು ಮಾಡಿ ಯಮನ ಗರ್ವವನ್ನು ನಾಶಮಾಡಿ, ಮೃತ್ಯುವನ್ನು ತುತ್ತುಮಾಡಿ ನುಂಗಿ ಗುರುಲಿಂಗ ಜಂಗಮಾರ್ಚನೆಯಲ್ಲಿ ತನ್ನ ಬಾಳಿಕೆಯ ದಿನಗಳನ್ನು ಕಳೆಯುತ್ತ ರಾಗಪ್ರಿಯನಾದ ಶಂಕರನನ್ನು ಹಗಲು ರಾತ್ರಿ ವೀಣಾಗಾನದಿಂದ

ಸಂತೋಷಪಡಿಸುತ್ತ ಆತನ ಪೂರ್ಣ ಕಟಾಕ್ಷಕ್ಕೆ ಪಾತ್ರನಾದ ಸಕಳೇಶ ಮಾದರಸನೆಂಬ ಪ್ರಾಣಲಿಂಗಿಯು ವಾಸಿಸುತ್ತಿದ್ದನು. ಆತನಲ್ಲಿ ಅತ್ಯಂತ ಭಕ್ತಿಭರಿತನಾಗಿ ಗುರುಸೇವೆಯನ್ನು ಮಾಡುತ್ತ ಶಿಷ್ಯರಲ್ಲಿ ಅಗ್ರಗಣ್ಯನೆನಿಸಿದ ಚಿಕ ಮಾದಣ್ಣನೆಂಬ ಭಕ್ತನು ಇದ್ದನು. ಅವನಿಗೆ ಮಹಾದೇವಿ ಎಂಬ ಪತ್ನಿಯೂ, ಬಾಲಲಿಂಗಿ ಎಂಬ ಪುತ್ರನೂ ಇದ್ದರು. ಅವರು ಸಕಳೇಶ ಮಾದರಸನ ಪ್ರಾಣಭಕ್ತರಾಗಿದ್ದುಕೊಂಡು ಪ್ರತಿದಿವಸ ಗುರುಲಿಂಗ ಜಂಗಮಾರ್ಚನಾ ತತ್ಪರನಾಗಿದ್ದುಕೊಂಡು ಭಕ್ತಿ, ವಿಶ್ವಾಸ, ಶ್ರದ್ಧೆ, ಸಂಗ, ಸಮಾಧಾನ ಎಂಬ ನವವಿಧ ಭಕ್ತಿಭಾವದಿಂದ ಅವರ ಪೂಜೆಯನ್ನು ಮಾಡಿ ಗುರುವಾದ ಸಕಳೇಶರ ಪಾದಪದ್ಮಗಳೇ ತನಗೆ ಸಕಲ ಸೌಭಾಗ್ಯವೆಂದು ಪೂಜಿಸುತ್ತಿದ್ದನು. ಹೀಗೆ ಈ ಭಕ್ತನು ಬಹುಕಾಲ ಜೀವಿಸಿ ಒಂದಾನೊಂದು ದಿವಸ ಕಾಲಮೃತ್ಯುಗೊಳಗಾಗಲು ಆತನ ಹೆಂಡತಿಯು ಇದನ್ನು ತಿಳಿದು ಆತನ ದೇಹವನ್ನು ಜಂಗಮ ಪಾದೋದಕದಿಂದ ತೊಳೆದು ನಿರ್ಮಲಗೊಳಿಸಿ ಶರೀರಕ್ಕೆಲ್ಲ ಭಸ್ಮವನ್ನು ಧರಿಸಿ ಕೊರಳಿಗೆ ರುದ್ರಾಕ್ಷಿಗಳನ್ನು ಹಾಕಿ ಹಣೆಗೆ ತ್ರಿಪುಂಡ್ರ ತೆಗೆದು ಅಲಂಕಾರಮಾಡಿ ಜಂಗಮರಿಂದ ಕೊಡಲ್ಪಟ್ಟಿದ್ದ ಹೊಸ ಬಟ್ಟೆಯನ್ನು ಹೊರಿಸಿ ಒಂದು ಕಂಬಕ್ಕೆ ಒರಗಿಸಿ ಕೂಡ್ರಿಸಿ ಅಕ್ಕಪಕ್ಕದವರಿಗೂ ಸಹ ಗುರುತು ಸಿಕ್ಕದಂತೆ ರಾತ್ರಿಯಲ್ಲಿ ಮನೆಯೊಳಗೇ ಸಮಾಧಿಮಾಡಬೇಕೆಂದು ಯೋಚಿಸಿ ಹಳ್ಳವನ್ನು ತೆಗೆಯುತ್ತಿರಲು ಆ ಶಬ್ದವನ್ನು ಕೇಳಿ ಮಗನು ಎಚ್ಚತ್ತು ಎದ್ದು ಕುಳಿತು ಆ ತಾಯಿಗೆ–ಅಮ್ಮಾ, ಇದೇನು? ನಿತ್ಯವೂ ಅಪ್ಪನು ಶಿವಪೂಜೆಗಾಗಿ ಕುಳಿತುಕೊಳ್ಳುತ್ತಿದ್ದ ಜಗುಲಿಯನ್ನು ಅಗಿಯುತ್ತಿರುವೆ ? ಇದೇನು ? ನಮ್ಮ ತಂದೆಯು ಜಂಗಮರ ಪಾದಸೇವೆಗೆ ಹೋಗದೆ ವೇಳೆಯಾಗಿದ್ದರೂ ಇಲ್ಲಿಯೇ ಕುಳಿತುಕೊಂಡಿರುವನಲ್ಲಾ ? ಮನೆಯಲ್ಲಿಯ ಮೀಸಲ ನೀರನ್ನು ಉಪಯೋಗಿಸದೆ ಹೊಸ ಬಾವಿ ತೋಡಿ ಶಿವಪೂಜೆಗೆ ನೀರು ತರಲು ಹೇಳಿರುವನೋ ? ನಿದಾನವಾಗಿ ಅಗೆಯುತ್ತಿರುವದನ್ನು ನೋಡಿ ಕೋಪಗೊಂಡು ಕುಳಿತಿರುವನೋ? ಆತನು ಕೋಪಗೊಳ್ಳಲು ಕಾರಣವೇನು ? ಅವನ ಆಜ್ಞೆಯನ್ನು ಮೀರಿ ನಡೆದೆಯಾ ? ಇಲ್ಲವೆ ಶೀಲವನ್ನು ಕೆಡಿಸಿದಿಯಾ ? ಮನೆಗೆ ಬಂದ ಶರಣರನ್ನು ತಡವಾಗಿ ತೃಪ್ತಿಗೊಳಿಸಿದೆಯಾ ? ಅಥವಾ ಜಗುಲಿಯನ್ನು ಬೇಗ ಸಾರಿಸಲಿಲ್ಲವೇ ? ಆಗ ಜೀವಿಗಳು ಸಿಕ್ಕು ಸತ್ತುಹೋದವೋ ? ಮಂಗಳಕರ ರಂಗವಲ್ಲಿ

ಯನ್ನು ಹಾಕಲು ತಡವಾಯಿತೇ ? ಹೂ-ಪತ್ರಿ ಸಿದ್ಧಮಾಡಲು ಸಾವಕಾಶ ವಾಯಿತೇ ? ಮರೆತು ಹಳೆಯ ಗಂಧವನ್ನು ಇಟ್ಟೆಯಾ ? ಅಗ್ರೋದಕದ ಕಲಶದಲ್ಲಿ ಮೀಸಲ ನೀರನ್ನು ಇಡಲು ಮರೆತೆಯಾ ? ಪೂಜಾ ಸಾಮಗ್ರಿಗಳನ್ನು ಬೆಳಗಿ ಶುಚಿಮಾಡಲಿಲ್ಲವೇ ? ಬಾಡಿದ ಹೂವನ್ನೂ, ಬೆರೆತ ಅಕ್ಷತೆಯನ್ನೂ, ಸಮರ್ಪಣೆಗೆ ಅಯೋಗ್ಯವಾದ ನೈವೇದ್ಯವನ್ನೂ, ಆರಿಹೋದ ಆರತಿಯನ್ನೂ, ಮಂಕುದೀಪಗಳನ್ನೂ, ನೀನು ಪೂಜೆಗೆ ತಂದಿಟ್ಟೆಯಾ ? ಶಿವನಿಗರ್ಪಿಸಿದ ವಸ್ತುಗಳನ್ನು ಮರೆತು ಅಮಂಗಳ ದ್ರವ್ಯಗಳೊಡನೆ ಬೆರೆಸಿದೆಯಾ ? ಇಲ್ಲವೆ ಶಿವಧ್ಯಾನಾಸಕ್ತನಾಗಿದ್ದಾಗ ಮಾತನಾಡಿಸಿ ಜಪವನ್ನು ಕೆಡಿಸಿದೆಯಾ ? ಇಲ್ಲವೆ ಇನ್ನಾವ ಅಪರಾಧವನ್ನು ಮಾಡಿದೆ ? ನಿಜವಾಗಿ ಹೇಳು. ನಮ್ಮ ತಂದೆಯು ಸದಾ ಸಂತೋಷ ಸೌಭಾಗ್ಯದಲ್ಲಿರುತ್ತಿದ್ದನೇ ಹೊರತು ದುಃಖವೆಂಬ ದಾರಿದ್ರ್ಯವನ್ನು ಕನಸಿನಲ್ಲಿಯೂ ಕಂಡವನಲ್ಲ. ನನ್ನನ್ನು ನೋಡಿದ ಕೂಡಲೇ ಆನಂದದಿಂದ ಮಾತನಾಡಿಸಿ ಮುದ್ದುಗೆಯ್ದು ಹೃದಯಕ್ಕೆ ಬಿಗಿದಪ್ಪಿ ಮಾತಾಡುತ್ತಿದ್ದನು. ಆದರೆ ಈಗ ಸುಮ್ಮನೆ ಏಕೆ ಇದ್ದಾನೆ ? ನಾವಿಬ್ಬರೂ ಆತನ ಪಾದಗಳಿಗೆರಗಿ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರೆ ಮನ್ನಿಸದಿರುವನೇ ? ಇನ್ನು ಅಗಿಯುವದನ್ನು ಬಿಡು. ನಮ್ಮ ತಂದೆಯು ಜಂಗಮರ ಮನೆಗೆ ಸೇವೆಗಾಗಿ ಹೋಗುವ ಹೊತ್ತೂ ಆಯಿತು. ಎಂದು ಬಲಾತ್ಕರಿಸಿ ಭುಜಗಳನ್ನು ಹಿಡಿದು ಹಿಂದಕ್ಕೆ ಎಳೆದುಕೊಳ್ಳುತ್ತಿರುವ ಮಗನನ್ನು ನೋಡಿ ನಸುನಕ್ಕು ಮಗೂ, ಬಾಲಲಿಂಗಿ, ನಿನಗೆ ಮುದ್ದಾಗಿ ಮಾತನಾಡಿಸಿ ಮೋಹಗೊಳಿಸುವದೊಂದೇ ಮಾತ್ರ ಗೊತ್ತು ಉಳಿದದ್ದು ತಿಳಿಯದು. ಈ ಸ್ಥಳದಲ್ಲಿ ಅಗೆದ ಬಾವಿಯ ನೀರನ್ನು ತಂದುಕೊಡದಿದ್ದರೆ ನಿಮ್ಮ ತಂದೆಯ ಕೋಪವು ಶಾಂತವಾಗದು ಅದಕ್ಕಾಗಿ ಅಗಿಯುತ್ತೇನೆ. ಇದರಲ್ಲಿ ನೀರು ಬಂದ ಮೇಲೆ ತಂದು ಕೊಟ್ಟು ಅವರನ್ನು ಸಮಾಧಾನಪಡಿಸಿ ಮಾತಾಡಿಸುತ್ತೇನೆ. ಹೆಚ್ಚಾಗಿ ಬಂದಿರುವ ಕೋಪವನ್ನು ಸಮಾಧಾನ ಮಾಡುವದು ಯಾರಿಂದಲೂ ಸಾಧ್ಯವಾಗದು. ಎಂದು ಬಲವಾಗಿ ತಬ್ಬಿಹಿಡಿದಿದ್ದ ಮಗನ ಕೈಗಳನ್ನು ಬಿಡಿಸಿಕೊಂಡು ಗಂಡನ ಮುಖವನ್ನು ಹುಸಿನಗೆಯಿಂದ ನೋಡುತ್ತ ಸಂತೋಷದಿಂದ ಸಮಾಧಿಯನ್ನು ಅಗೆಯುತ್ತಿದ್ದಳು. ಮಗನು ಸ್ವಲ್ಪಹೊತ್ತು ಯೋಚಿಸಿ ನಮ್ಮ ತಾಯಿಯಿಂದ ಪರಿಹರಿಸಲು ಅಸಾಧ್ಯವಾದ ಕೋಪವನ್ನು ನಾನು ಸಮಾ

ಧಾನಪಡಿಸಲಾರೆನೇ ? ಗುರುಗಳಾದ ಸಕಳೇಶ ಮಾದರಸರೇ ಈ ಕೆಲಸಕ್ಕೆ ಯೋಗ್ಯವೆಂದು ಬಗೆದು ಮೆಲ್ಲನೆ ಬಾಗಿಲನ್ನು ತೆಗೆದು ಕತ್ತಲೆಯಲ್ಲಿ ಒಬ್ಬನೆ ಹೊರಟು ಸಕಳೇಶ ಮಾದರಸನ ಮನೆಯನ್ನು ಸೇರಿ ಶಿವಧ್ಯಾನಾಸಕ್ತನಾಗಿ ಗಾನಾನಂದದಲ್ಲಿ ಮುಳುಗಿಹೋದ ಆ ಗುರುಗಳ ಪಾದಗಳಿಗೆರಗಿ ಕೈಮುಗಿದು ನಿಂತು ಗುರುವರಾ, ನಮ್ಮ ತಂದೆಯು ನಿಷ್ಕಾರಣವಾಗಿ ತಾಯಿಯ ಮೇಲೆ ಕೋಪಿಸಿಕೊಂಡು ಶರೀರಕ್ಕೆಲ್ಲ ಭಸ್ಮವನ್ನೂ, ಕೊರಳಗೆ ರುದ್ರಾಕ್ಷಿಗಳನ್ನೂ ಧರಿಸಿ ನೀವು ಕೊಟ್ಟಿರುವ ಹೊಸ ಹಚ್ಚಡವನ್ನು ಹೊದ್ದುಕೊಂಡು ನಡುವ ನೆಯ ಕಂಬಕ್ಕೆ ಒರಗಿಕೊಂಡು ಮುಸುಕುಹಾಕಿ ಮಾತಾಡದೆ ಸುಮ್ಮನೆ ಕುಳಿ ತಿರುವನು. ನಮ್ಮ ಅವ್ವನು ಶಿವಪೂಜೆಯ ಜಗುಲಿಯನ್ನು ಅಗೆದು ಬಾವಿ ತೋಡುತ್ತಿರುವಳು. ಆ ಬಾವಿಯ ನೀರನ್ನು ಸೇದಿ ತಂದು ಅಪ್ಪನ ಕೋಪ ವನ್ನು ಹೋಗಲಾಡಿಸುವೆನೆಂದು ಹೇಳುತ್ತ ನಮ್ಮ ತಂದೆಯ ಮುಖವನ್ನು ನೋಡಿ ನಗುತ್ತ ಅಗೆಯುತ್ತಿರುವಳು. ನಮ್ಮಯ್ಯನು ಮುನಿದರೆ ತಾಯಿಯ ಸಂಗಡ ಮುನಿಸನ್ನು ತೋರಬೇಕು. ನಿಷ್ಕಾರಣವಾಗಿ ನನ್ನಲ್ಲೂ ಸಿಟ್ಟು ಗೊಂಡಿರುವನಲ್ಲಾ ! ಆಹಾ ನಮ್ಮ ತಂದೆಯು ನನ್ನನ್ನು ನೋಡಿದ ಕೂಡಲೆ ಸಂತೋಷದಿಂದ ಅಣ್ಣಾ, ಎನ್ನಬಾಲಲಿಂಗನೇ ಬಾರಪ್ಪಾ ನನ್ನ ಮುದ್ದು ಕಂದಾ, ಬಾ ಸ್ವಾಮೀ, ಎಂದು ಕೂಗುತ್ತ ಕೈಗಳನ್ನು ಮುಂದಕ್ಕೆ ಉದ್ದವಾಗಿ ನೀಡಿ ಹತ್ತಿರಕ್ಕೆ ಬಂದ ನನ್ನನ್ನು ಬರಸೆಳೆದು ಬಿಗಿದಪ್ಪಿ ಆಲಂಗಿಸಿಕೊಂಡು ತೊಡೆಯ ಮೇಲೆ ಕೂಡ್ರಿಸಿಕೊಂಡು ಹಣೆಯಲ್ಲಿ ಜೋಲುತ್ತಿರುವ ಮುಂಗು ರುಳನ್ನು ಸವರಿ ಜುಟ್ಟಿನಲ್ಲಿ ಹೂವನ್ನು ಮುಡಿಸಿ, ಹಣೆಗೆ ವಿಭೂತಿಯನ್ನು ಇಟ್ಟು, ಮುಖದಲ್ಲಿ ಮುಖವನ್ನಿಟ್ಟು, ಮೈಮಾರುಗಳಲ್ಲಿ ಚಕ್ಕಲ ಗುಲಿಯ ನ್ನಿಕ್ಕಿ ನಗಿಸಿ, ಮುದ್ದು ಮಾತನಾಡಿಸುತ್ತ ನನ್ನ ಬಾಲಲೀಲೆಗಳನ್ನು ಕಣ್ ಸನ್ನೆಯಿಂದ ಅಮ್ಮನಿಗೆ ತೋರಿಸುತ್ತ ಆನಂದಪಡುತ್ತ ಆಗಾಗ ಶಂಭೋ, ಶಂಕರ, ಮೃತ್ಯುಂಜಯ, ಮದನಾರಿ, ಮೋಹನಾಂಗ ಎಂಬ ಶಿವನಾಮ ಗಳನ್ನು ಹೇಳಿಕೊಳ್ಳುತ್ತ ನನ್ನನ್ನು ಎದೆಗೊರಗಿಸಿ ಮಗುವೇ ನಾನೊಂದು ಮಾತು ಕೇಳುತ್ತೇನೆ ಹೇಳುವೆಯಾ ? ನೀನು ಬಸವೇಶ್ವರನ ಶಿಷ್ಯನೋ ? ಕಿನ್ನರಿ ಬ್ರಹ್ಮಯ್ಯನ ಪುತ್ರನೋ? ಮುಸುಟೆ ಚೌಡಯ್ಯನ ಪ್ರಿಯಬಂಟನೋ? ಹಲಾಯುಧಯ್ಯನ ಆಳೋ ? ತೆಲುಂಗ ಬೊಮ್ಮಯ್ಯನ ಸೇವಕನೋ ? ದಾಸಿ

ಮಯ್ಯನ ಪರಿಚಾರಕನೋ ? ಮಹಾದೇವಿಯ ಮುದ್ದು ಮಗನೋ ? ಚನ್ನ ಬಸವನ ಭಕ್ತನೋ ಎಂದು ಕೇಳುತ್ತ ತಬ್ಬಿ ತಾಳವನ್ನು ಹಾಕಿ ಕುಣಿಸುತ್ತ ನಾನು ಹಸಿವೆಯೆಂದು ಅಳುತ್ತಿದ್ದರೆ ನಗುತ್ತ ಬಂದು ತಾನೇ ಹಾಲು ಸಕ್ಕರೆ ಕೂಡಿಸಿ ಕುಡಿಸುತ್ತ ನನ್ನ ಸಂಗಡ ನಿಮ್ಮ ಮನೆಗೆ ಬರುತ್ತಿದ್ದನು. ಇಂತಹ ನಮ್ಮ ತಂದೆಯು ಈ ದಿವಸ ನನ್ನನ್ನು ನೋಡಿದರೂ ಮಾತಾಡದೆ ಹತ್ತಿರ ಕುಳಿತು ಕೂಗಿದರೂ ಕಣ್ಣನ್ನು ತೆರೆದು ನೋಡದೆ ಇರುವ ಕೋಪವು ಎಂಥ ದೆಂದು ನಾನು ಹೇಳಲಿ ! ಇದರ ಕಾರಣ ತಾವೇ ತಿಳಿಯಬಹುದು. ಮತ್ತು ನನ್ನಿಂದ ಯಾವ ತಪ್ಪೂ ಆಗಿಲ್ಲ. ಶಿವಶರಣರನ್ನು ಕಂಡರೆ ನಮಸ್ಕರಿಸದೆ, ಶಿವನಿಗೆ ಸಮರ್ಪಿಸದೆ ಯಾವ ಪದಾರ್ಥವನ್ನೂ ತಿನ್ನದೆ, ಶಿವಪೂಜೆಮಾಡುವ ತಾಯಿ-ತಂದೆಗಳನ್ನು ಮಾತನಾಡಿ ಅಡ್ಡಿಪಡಿಸದೆ, ನೋಡಿದ್ದನ್ನೆಲ್ಲ ಬೇಕೆಂದು ಹಟಮಾಡದೆ, ಶಿವಮಂತ್ರವನ್ನು ಮರೆಯದೆ, ಶಿವಧ್ಯಾನ ಮಾಡದೇ, ತಾಯಿ ತಂದೆಗಳ ಮಾತು ಮೀರದೆ ಇರುವ ನನ್ನ ನಡತೆಯನ್ನು ಕಾಣಲಾರನೇ ? ಅಪರಾಧಕ್ಕೆ ಅವಕಾಶವಿಲ್ಲದ ನನ್ನಲ್ಲಿ ಕಾರಣವಿಲ್ಲದೆ ಕೋಪಿಸಿಕೊಂಡಿರುವ ನಲ್ಲಾ ! ಈ ಕೋಪವನ್ನು ಶಾಂತಮಾಡುವದಕ್ಕೆ ತಾವು ಶಕ್ತರು. ನನ್ನ ಮೇಲೆ ದಯವಿಟ್ಟು ತಾವು ನಮ್ಮ ಮನೆಗೆ ಬಂದು ಆತನ ಕೋಪವನ್ನು ಶಾಂತ ಮಾಡಿ ನಮ್ಮನ್ನು ಉದ್ಧರಿಸಬೇಕೆಂದು ಪುನಃ ಪುನಃ ನಮಸ್ಕರಿಸಿ ಜೋಲುತ್ತಿ ರುವ ಲಿಂಗದ ಕರಡಿಗೆಯನ್ನು ಮೇಲು ಹೆಗಲಿಗೆ ಸೇರಿಸುತ್ತ ಎದ್ದು ನಿಂತು ಕೈಮುಗಿದನು. ಇದನ್ನು ಅಕ್ಕರತೆಯಿಂದ ನೋಡುತ್ತಿದ್ದ ಸಕಳೇಶನು ಹುಸಿ ನಗೆಯಿಂದ ತೊಡೆಯ ಮೇಲಿದ್ದ ವೀಣೆಯನ್ನು ನೆಲಕ್ಕೊರಗಿಸಿ, ಮಗುವಿನ ಮುದ್ದು ಮಾತಿನ ಜಾಣ್ಮೆಗೆ ಬೆರಗಾಗಿ, ಅವನನ್ನು ಕರುಣಾದೃಷ್ಟಿಯಿಂದ ನೋಡಿ ಆಹಾ ! ಈ ಲೋಕದಲ್ಲಿ ಅತ್ಯಂತ ಶೀಲದಿಂದ ಶಿವನನ್ನು ಪೂಜಿಸುವ ದುಂಟು. ಆದರೆ ಅದಕ್ಕಾಗಿ ಮನೆಯಲ್ಲಿಯೇ ಬಾವಿಯನ್ನು ತೋಡುತ್ತಾ ರೆಯೇ ? ಸಂಸಾರದಲ್ಲಿ ಗಂಡ-ಹೆಂಡರಿಗೆ ಕಲಹ ಬರಲು ಗಂಡನು ಗದರಿಸಿದರೆ ಹೆಂಡತಿಯು ಸುಮ್ಮನಾಗುವಳು. ಅಥವಾ ಗಂಡ ಹೆಂಡತಿಯರಿಬ್ಬರೂ ಸುಮ್ಮ ನಾಗುವದು ವಾಡಿಕೆಯು. ಆದರೆ ಮುಖವನ್ನು ಮುಸುಕಿನಿಂದ ಮುಚ್ಚಿ ಕೊಂಡು ಮಾತಾಡದೆ ಕಂಬಕ್ಕೊರಗಿ ಕುಳಿತುಕೊಳ್ಳುವದು ಆಶ್ಚರ್ಯ ವಲ್ಲವೇ ? ಇದೆಲ್ಲವೂ ಕಪಟವಲ್ಲದೆ ನಿಜವಾಗಲಾರದು. ಮತ್ತು ಲೋಕದಲ್ಲಿ

ಮುದ್ದುಮಾತುಗಳನ್ನಾಡಿ ಮೋಹಪಡಿಸುವ ಮಕ್ಕಳು ಅನೇಕರುಂಟು. ಆದರೆ ಈ ಮಗುವಿನಂತೆ ವಿವೇಕದಿಂದ ವರ್ತಿಸಿ ಮುದ್ದುಮಾತನ್ನಾಡುವ ಮಕ್ಕಳನ್ನು ನಾನೆಂದೂ ನೋಡಲಿಲ್ಲ. ಅಲ್ಲದೆ ಕೇಳಿಯೂ ಇಲ್ಲ. ಎಂದು ಹೇಳುತ್ತ ಅಕ್ಕರೆಯಿಂದ ಮೈದಡವಿ ತಲೆಯನ್ನು ಸವರಿ ಮಗೂ, ಮನೆಗೆ ಹೋಗೋಣ ನಡೆ ಎಂದು ಕರೆದುಕೊಂಡು ಬರುತ್ತಿರುವಾಗ ದಾರಿಯಲ್ಲಿ ಎಲೈ— ಪರಮೇಶ್ವರನೇ, ಭಕ್ತರ ಅಪೇಕ್ಷೆಗಳನ್ನು ಕೊಡುವ ನೀನು ಯಾವಾಗಲೂ ನನ್ನ ಹೃದಯದಲ್ಲಿದ್ದುಕೊಂಡು ನಾನು ಬಯಸಿದ ಕೋರಿಕೆಗಳನ್ನು ಕೊಟ್ಟು ಕಾಪಾಡುತ್ತಿರುವೆ. ಎಂದು ಒಂದು ಪದ್ಯವನ್ನು ಹಾಡುತ್ತ ಮಾದಣ್ಣನ ಮನೆಯನ್ನು ಹೊಕ್ಕು ಅವನ ಹೆಂಡತಿಯನ್ನು ನೋಡಿ ತಂಗೀ, ನಿನ್ನ ಗಂಡನು ಕೋಪ ಮಾಡಿಕೊಳ್ಳುವದಕ್ಕೂ, ನಿನ್ನ ಮುದ್ದು ಮಗನು ಮಧ್ಯರಾತ್ರಿಯಲ್ಲಿ ಭಯದಿಂದ ನಮ್ಮ ಮನೆಗೆ ಓಡಿ ಬರುವದಕ್ಕೂ ಕಾರಣವೇನೆಂದು ಕೇಳಲಾಗಿ ಆಕೆಯು ಆ ಧ್ವನಿಯನ್ನು ಕೇಳಿದ ಕೂಡಲೆ ಬೇಗನೆದ್ದು ಗುರುಗಳ ಪಾದಗಳಿಗೆರಗಿ ನಿಂತಳು. ಗುರುಗಳು ನಡುಮನೆಗೆ ಹೋಗಿ ಕಂಬದ ಮರೆಯಲ್ಲಿ ಒರಗಿಕೊಂಡು ಕುಳಿತಿರುವ ಚಿಕ್ಕ ಮಾದಣ್ಣನನ್ನು ನೋಡಿ ಕರುಣಾ ಕಟಾಕ್ಷವೆಂಬ ಅಮೃತ ಧಾರೆಯನ್ನು ಸುರಿಸಿ, ಚಿಕ್ಕ ಮಾದಣ್ಣಾ, ಇದೇನು ? ಹೀಗೇ ಸುಮ್ಮನೆ ಕುಳಿತುಕೊಂಡಿರುವೆ? ಶಿವಪೂಜೆಗೆಹೊತ್ತಾಯಿತು. ಬಾ! ಗುಣವಿಲ್ಲದ ಮುಕ್ತಿಯನ್ನು ಹೊಂದಿ ಏನುಸುಖವನ್ನು ಅನುಭವಿಸುವೆ ? ಗುಣಪೂರಿತವಾದ ಭಕ್ತಿಸುಖವನ್ನು ಅನುಭವಿಸು ಬಾ! ನೀನು ಕೋಪಿಸಿಕೊಂಡಿರುವೆಯೆಂದು ನಿನ್ನ ಮಗನು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದಾನೆ ಎಂದು ನುಡಿಯುತ್ತಿರುವಷ್ಟರಲ್ಲಿಯೇ ಪ್ರಾಣವು ಸರ್ವಾಂಗಗಳಲ್ಲಿ ವ್ಯಾಪಿಸಿತು. ದಾರಿಯನ್ನು ನಡೆದು ಆಯಾಸದಿಂದ ಒಳಲಿ ವೃಕ್ಷಮೂಲವನ್ನು ಆಶ್ರಯಿಸಿ ಮೈಮರೆದು ನಿದ್ರೆಮಾಡುತ್ತಿದ್ದವನು ಎಚ್ಚತ್ತು ಏಳುವಂತೆ ಆಕಳಿಸಿ, ಮೈಮುರಿದು, ಕಣ್ಣುಗಳನ್ನು ತೆರೆದು ನೋಡಿ ಮುಂಭಾಗದಲ್ಲಿ ನಿಂತಿರುವ ಗುರುಮೂರ್ತಿಯನ್ನು ಕಂಡು ಬೇಗನೆ ಎದ್ದು ಆತನ ಪಾದಗಳಿಗೆ ನಮಸ್ಕಾರಮಾಡಿ, ಆತನ ಪಾದಗಳನ್ನು ತನ್ನ ಸರ್ವಾಂಗಗಳಿಗೂ ಒತ್ತಿ ಗುರುವೇ, ನಿನ್ನಿಂದ ನಾನು ಧನ್ಯನಾದೆನು. ನನ್ನ ಪಿತೃಗಳಿಗೂ ನಾನು ಕೃತಾರ್ಥನಾದೆನೆಂದು ಹೇಳುತ್ತ ಪುನಃ ಅಡ್ಡಬಿದ್ದು ನಿಂತುಕೊಂಡಿರಲು ಇದನ್ನು ನೋಡಿ ಅವನ ಪತ್ನಿಯೂ,

ಮಗನೂ ಗುರುವಿನ ಮಹಿಮೆಯನ್ನು ಹೊಗಳುತ್ತಿದ್ದರು. ಈ ವರ್ತಮಾನವು ಪುರಜನರಿಗೆ ತಿಳಿಯಲು ಅವರೆಲ್ಲರೂ ಗುಂಪು ಗುಂಪಾಗಿ ಅಲ್ಲಿಗೆ ಬಂದು ಸಕಳೇಶ ಮಾದರಸನ ಪಾದಗಳಿಗೆ ಮಣಿದು ಸ್ವಾಮೀ, ತಮ್ಮ ಆಕಾರವನ್ನು ನೆನೆದವರೂ, ರೂಪವನ್ನು ದರ್ಶನ ಮಾಡಿದವರೂ, ದೇಹದ ನೆಳಲಿನಲ್ಲಿರುವ ವರೂ, ತಮ್ಮ ಕಟಾಕ್ಷಕ್ಕೆ ಪಾತ್ರರಾದವರೂ ಪಾಪವನ್ನು ಅಳಿದು ಕೃತಾರ್ಥ ರಾಗಿ ಮಾಯಾಪಾಶದಿಂದ ಬಿಡುಗಡೆ ಹೊಂದಿ ಮೋಕ್ಷ ಸಾಮ್ರಾಜ್ಯವನ್ನು ಅನುಭವಿಸುವರು. ನಿಮ್ಮಲ್ಲಿ ಸೇವೆಮಾಡಿಕೊಂಡಿರುವ ಮೂಕರು ವೇದ ಪಾಠಕರಾಗುವರು. ಕುರುಡರು ಕಮಲಾಕ್ಷರಾಗುವರು. ಕಿವುಡರು ಶ್ರೋತ್ರ ಪಾವವನ್ನು ಹೊಂದುವರು. ಕುಂಟರು ವಜ್ರಜಂಘೆಗಳುಳ್ಳ ಕಾಲು ಹೊಂದು ವರು. ರೋಗಿಯು ನಿರೋಗಿಯಾಗುವನು. ಮುದುಕನು ಯುವಕನಾಗು ವನು. ವಿಷವು ಅಮೃತವಾಗುವದು. ಒಣಮರವು ಚಿಗುರುವುದು. ಬೆಂಕಿಯು ತಂಪಾಗುವದು. ಶವವು ತಿರುಗಾಡುವದು. ಇಂತಹ ನಿಮ್ಮ ಮಹಿಮೆಯನ್ನು ಹೊಗಳುವವರಾರು? ಮಗುವಿನ ಮಾತೆಂದು ಅಲಕ್ಷ್ಯಮಾಡದೆ ಮಧ್ಯರಾತ್ರಿ ಯಲ್ಲಿ ಬಂದು ನಿದ್ರೆಮಾಡುವವನನ್ನು ಎಬ್ಬಿಸುವಂತೆ ಸತ್ತವನನ್ನು ಎಬ್ಬಿಸಿದಿ ರಲ್ಲಾ ! ಇದೆಂತಹ ಮಹಿಮೆಯು ! ಎಂದು ಹೊಗಳುತ್ತ ಮಗುವಾದ ಬಾಲ ಲಿಂಗನನ್ನು ನೋಡಿ ಅಯ್ಯಾ, ಈ ಲೋಕದಲ್ಲಿ ಮೃತನಾದ ಮಗನನ್ನು ಬದು ಕಿಸಿಕೊಂಡು ಬಾಳಿದ ಪುಣ್ಯಾತ್ಮರು ಸಿರಿಯಾಳಸೆಟ್ಟಿ ಮೊದಲಾದವರೆಂದು ಪ್ರಸಿದ್ಧರಾಗಿದ್ದರು. ಈಗ ನೀನು ಸತ್ತ ತಂದೆಯನ್ನು ಬದುಕಿಸಿಕೊಂಡು ಬಾಳುತ್ತಿರುವೆ. ಎಂದು ಹೊಗಳಿದರು. ಈ ಸಂಗತಿಯನ್ನು ಬಸವೇಶ್ವರನು ಜಂಗಮರ ಮುಖದಿಂದ ಕೇಳಿ ಅಲ್ಲಿಗೆ ಬಂದು ಸಕಳೇಶ ಮಾದರಸನ ಪಾದ ಗಳಿಗೆ ಮಣಿದೆರಗಿ ಆತನ ಕರುಣಾ ಕಟಾಕ್ಷಕ್ಕೆ ಪಾತ್ರನಾಗಿ ಸುಖದಿಂದ ತನ್ನ ಮನೆಯನ್ನು ಸೇರಿ ಗುರು-ಲಿಂಗ-ಜಂಗಮಾರ್ಚನಾ ತತ್ಪರನಾಗಿದ್ದನು.

## — ಕದಿರೆ ರೇಮಾರ್ಯನ ಕಥೆಯು —

ಗುರು-ಲಿಂಗ-ಜಂಗಮರ ಸದ್ಭಕ್ತನಾಗಿ ಅವರ ಸೇವೆಯನ್ನು ತಪ್ಪದೆ ಮಾಡುತ್ತಿರುವ ಕದಿರೆ ರೇಮಯ್ಯನೆಂಬ ಶಿವಶರಣನು ಅದೇ ಕಲ್ಯಾಣ ಪಟ್ಟ ಣದಲ್ಲಿ ಇದ್ದನು. ಆತನು ಪರಊರಲ್ಲಿ ಇದ್ದ ತನ್ನ ಗುರುವಿನ ಪಾದಸೇವೆ

ಯನ್ನು ಮಾಡಿ ಆಶೀರ್ವಾದವನ್ನು ಪಡೆದುಬರಬೇಕೆಂಬ ಆಶೆಯಿಂದ ಹೊರಟು ಬರುತ್ತಿರಲು ಮಧ್ಯಮಾರ್ಗದಲ್ಲಿ ಶಿವಪೂಜೆಗೆ ವೇಳೆಯಾಗಿರುವ ದನ್ನು ತಿಳಿದು ಕಾಲಕ್ಕೆ ಸರಿಯಾಗಿ ಶಿವಪೂಜೆಯನ್ನು ಮಾಡದಿರುವ ಶಿವ ಭಕ್ತನು ಮಹಾಪಾಪಿಯಾಗುವನು. ಎಂದು ನೆನೆದು ತಾನು ಮಾಡುತ್ತಿರುವ ತ್ರಿಕಾಲ ಶಿವಪೂಜಾ ನಿಯಮವನ್ನು ಕಾಪಾಡಿಕೊಳ್ಳಬೇಕೆಂದು ಯೋಚಿಸಿ ಹತ್ತಿರದಲ್ಲಿ ಕಾಣುತ್ತಿರುವ ಒಂದು ಊರನ್ನು ಕಂಡು ಆ ಊರಲ್ಲಿ ಶಿವಪೂಜೆ ಯನ್ನು ನೆರವೇರಿಸಿಕೊಂಡು ಹೋಗಬೇಕೆಂದು ಗೊತ್ತುಮಾಡಿ ಅಲ್ಲಿಗೆ ಹೋಗಿ ಶಿವಭಕ್ತಿ ಸಂಪನ್ನನೂ, ಗುರುಭಕ್ತನೂ ಆದ ಒಬ್ಬ ಸೋಮನಾಥನೆಂಬ ಶಿವ ಭಕ್ತನ ಮನೆಯನ್ನು ವಿಚಾರಿಸಿಕೊಂಡು ಅವನ ಮನೆಗೆ ಹೋಗಲು ಆತನು ಅತ್ಯಂತ ಭಕ್ತಿಯಿಂದ ಆ ಜಂಗಮನನ್ನು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ ಕುಶಲ ಪ್ರಶ್ನೆಯನ್ನು ಮಾಡಿ ಸ್ವಲ್ಪಕಾಲ ಶಿವಾನುಭವಗೋಷ್ಠಿಯಲ್ಲಿ ಕುಳಿತು ಪತ್ನೀ, ಪುತ್ರಸಮೇತ ಆತನ ಪಾದಗಳನ್ನು ತೊಳೆದು ಪುಷ್ಪಗಳಿಂದ ಪೂಜಿಸಿ ಹೊಗಳಿ ನಮಸ್ಕಾರವನ್ನು ಮಾಡಿ ಅನಂತರ ಉತ್ತಮವಾದ ಜಲದಿಂದ ಜಳಕಮಾಡಿಸಿ ಲಿಂಗಪೂಜೆಗೆ ಅಣಿಯಾಗಬೇಕಾದ ಸಮಸ್ತ ಉಪಕರಣ ಗಳನ್ನು ಕೊಟ್ಟು ಶಿವಪೂಜೆಯನ್ನು ಮಾಡಿಸಿ ಬಳಿಕ ಷಡ್ರಸೋಪೇತ ಮೃಷ್ಟಾನ್ನವನ್ನು ಉಣಬಡಿಸಿ ಊಟವಾದ ನಂತರ ಕರ್ಪೂರ ವೀಳ್ಯೆ ಯನ್ನು ಕೊಟ್ಟು ಸತ್ಕರಿಸಿ ಉಳಿದ ಪ್ರಸಾದವನ್ನು ತಾನೂ, ಹೆಂಡತಿ ಯಾದ ಅಲ್ಲಣದೇವಿಯೂ, ಮಗನಾದ ಮಲ್ಲಿನಾಥನೂ ಸೇವಿಸಿ ಕುಳಿತುಕೊಂಡು ಆ ಜಂಗಮಾರ್ಯನಾದ ರೇವಾರ್ಯನು ಹೇಳಿದ ಶಿವ ಕಥೆಯನ್ನು ಕೇಳುತ್ತ ಆನಂದದಿಂದ ಇದ್ದನು. ಆಗ ಆ ಮಲ್ಲಿನಾಥ ಬಾಲ ಕನು ಗುರುಗಳನ್ನು ಆಗಾಗ ದೃಷ್ಟಿಸಿ ನೋಡುತ್ತ, ಭಕ್ತಿಯಿಂದ ಅವರ ಪಾದ ಗಳನ್ನು ಒತ್ತುತ್ತ ಕೊಂಚವೂ ಅಗಲದೆ ಶಿವಕಥೆಯನ್ನು ಧೃಢ ಮನಸ್ಸಿನಿಂದ ಕೇಳುತ್ತ ಇರಲು ಆ ಬಾಲಕನ ಬುದ್ಧಿ ಸಾಮರ್ಥ್ಯವನ್ನೂ, ಸದ್ಗುಣತೆಯ ಭಾವವನ್ನೂ ಕದಿರೆರೇವಾರ್ಯನು ತಿಳಿದು ಸಂತೋಷಪಟ್ಟು ಆ ಮಗುವನ್ನು ಬಿಗಿದಪ್ಪಿ, ಮೈಸವರಿ, ಈ ಬಾಲಕನು ನಮ್ಮನ್ನು ಎಂದೂ ನೋಡದಿದ್ದರೂ ಒಗ್ಗಿದ ಮಕ್ಕಳಂತೆ ನಮ್ಮೊಡನೆ ಸರಸವಾಡಿ ಆನಂದಗೊಳಿಸುವನೆಂದು ಹೇಳಿ ಹೊಗಳುತ್ತ ಅವರ ಮನೆಯಲ್ಲಿ ಮೂರು ನಾಲ್ಕು ದಿವಸ ಇದ್ದು ಅನಂತರ

ತಿರುಗಿ ಬರುತ್ತೇನೆಂದು ಅವರನ್ನು ಸಮಾಧಾನಗೊಳಿಸಿ ತನ್ನ ಗುರುದರ್ಶನ ಪಡೆಯಲು ಹೊರಟವನಾಗಿ ಆ ಊರನ್ನು ಸೇರಿ ಗುರುಗಳನ್ನು ಕಂಡು ದೂರದಲ್ಲಿಯೇ ನಮಸ್ಕರಿಸಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಷೋಡಶೋಪಚಾರ ಪೂಜೆಯನ್ನು ಮಾಡಿ ಆತನ ಕರುಣಾಕಟಾಕ್ಷಕ್ಕೆ ಪಾತ್ರನಾಗಿ ಆ ಗುರುಮಠದಲ್ಲಿಯೇ ಇರುತ್ತಿದ್ದನು. ಇತ್ತ ಆ ಸೋಮನಾಥನೆಂಬ ಭಕ್ತನ ಮನೆಗೆ ಒಂದು ದಿವಸ ನಾಲ್ಕಾರು ಜನ-ಜಂಗಮರು ಬರಲು ಅವನ ಹೆಂಡತಿಯಾದ ಅಲ್ಲಣದೇವಿಯು ಅವರ ಸತ್ಕಾರಕ್ಕಾಗಿ ಅಡಿಗೆ ಮಾಡಲು ಉರುವಲ ಕಟ್ಟಿಗೆ ತರಲು ಹಿತ್ತಲಕ್ಕೆ ಹೋಗಿ ಸೌದೆಯನ್ನು ಮುರಿದು ಆಯ್ದುಕೊಳ್ಳುತ್ತಿದ್ದಳು. ಆಕೆಯ ಸಂಗಡ ಮಗನಾದ ಮಲ್ಲಿನಾಥನೂ ಹೋಗಿದ್ದನು. ಅವನು ಅಲ್ಲಿದ್ದ ಒಂದು ಶ್ರೀಗಂಧದ ಮರದ ಕಟ್ಟಿಗೆಯ ತುಂಡನ್ನು ಹಿಡಿದೆತ್ತಿದನು. ಅದರ ಕೆಳಗೆ ಮಲಗಿದ್ದ ಒಂದು ಕ್ರೂರ ಸರ್ಪವು ಕೂಡಲೇ ಆ ಮಗುವನ್ನು ಕಚ್ಚಿ ಹೊರಳಿ ವಿಷವನ್ನು ಕಾರಲು ಆ ಬಾಲಕನು ವಿಷವೇರಿ ಸತ್ತುಹೋದನು. ಆಗ ಶಿವಭಕ್ತೆಯಾದ ಅಲ್ಲಣದೇವಿಯು ಸತ್ತು ಹೋದ ಮಗನನ್ನು ಕಂಡು ಹಾ ! ಮುದ್ದು ಕಂದನೇ ! ಎಂದು ಅತ್ತಳೇ ? ವೈದ್ಯರು ಬರಲಿಲ್ಲವೆಂದು ಹಲುಬಿದಳೇ ? ನೆರೆಹೊರೆಯುವರನ್ನು ಕುರಿತು ಅಂಗಲಾಚಿದಳೇ ? ಇದ್ದ ಒಬ್ಬ ಮಗನನ್ನು ನೀಗಿಕೊಂಡು ಈ ಹಾಳು ಸಂಸಾರ ಸುಖವನ್ನು ಏನು ಹೇಳಲಿ ಎಂದು ತಿರಸ್ಕರಿಸಿದಳೇ ? ಅಯ್ಯೋ ಮಗನೇ, ನನ್ನನ್ನು ಬಿಟ್ಟು ಹೇಗೆ ಹೋದೆ ಎಂದು ಪ್ರಲಾಪಿಸಿದಳೇ ? ವಯಸ್ಕಳಾದ ನನ್ನನ್ನು ತೊರೆದು ಈ ಬಾಲಕನನ್ನು ವಿಧಿಯು ಕೊಂಡೊಯ್ದಿತಲ್ಲಾ ಎಂದು ವಿಷಾದಿಸಿದಳೇ ? ಅಯ್ಯಾ, ಶರಣಜನ ವತ್ಸಲರಾದ ಜಂಗಮವರ್ಯರೇ ನಿಮ್ಮ ಪಾದ ಸೇವಕನಾದ ನನ್ನ ಮಗನು ಹಾವು ಕಚ್ಚಿ ಮೃತನಾದನಲ್ಲಾ ! ನೀವಾದರೂ ಪ್ರಾಣದಾನವನ್ನು ಮಾಡಬಾರದೇ ಎಂದು ಬಾಯ್ಬಿಟ್ಟು ಬಳಲಿದಳೇ ? ಹರಕೆಯನ್ನು ಮಾಡಿ ದೇವರಿಗೆ ಪ್ರಾರ್ಥಿಸಿಕೊಂಡಳೇ ? ಕಡೆಗೆ ಮನೋವಿಕಾರವನ್ನಾದರೂ ಹೊಂದಿದಳೇ ? ಯಾವದೂ ಇಲ್ಲ. ಗಂಡ-ಹೆಂಡರಿಬ್ಬರೂ ಸಂತೋಷದಿಂದ ಆ ಮಗುವಿನ ಶರೀರವನ್ನು ಜಂಗಮರ ಪಾದತೀರ್ಥದಿಂದ ತೊಳೆದು ಅವರ ಪಾದಮಾಲಿಕೆಯನ್ನು ಮುಡಿಸಿ, ಮಂತ್ರಪೂತವಾದ ಭಸ್ಮವನ್ನು ಸರ್ವಾಂಗಕ್ಕೂ ಉದ್ಧೂಳಿಸಿ ಹಣೆಯಲ್ಲಿ ತ್ರಿಪುಂಡ್ರವನ್ನು

ಧರಿಸಿ, ರುದ್ರಾಕ್ಷಿಮಾಲೆಯನ್ನು ಕೊರಳಿಗೆ ಹಾಕಿ, ಶಿವಪೂಜೆಯ ಜಗಲಿಯನ್ನು ಅಗಿದು ಅಲ್ಲಿ ಸಮಾಧಿಮಾಡಿ ಸಂತೋಷದಿಂದ ಇದ್ದರು. ರೇವಣಾರ್ಯನು ಏಳು ದಿವಸಗಳ ವರೆಗೆ ತನ್ನ ಗುರುಗಳ ಬಳಿಯಲ್ಲಿದ್ದು ಆತನ ಸೇವೆಯನ್ನು ಮಾಡುತ್ತ ಭಕ್ತಿಭರಿತನಾಗಿ ಆತನನ್ನು ಮೆಚ್ಚಿಸಿ ಆತನ ದಯೆಯನ್ನು ಸಂಪಾದಿಸಿ ಅಪ್ಪಣೆ ಪಡೆದು ಹಿಂದಿರುಗಿ ತನ್ನ ಊರಿಗೆ ಹೋಗಲು ಹೊರಟು ಮಧ್ಯ ಮಾರ್ಗದಲ್ಲಿ ದೊರಕಿದ್ದ ಸೋಮನಾಥನ ಮನೆಯನ್ನು ಜ್ಞಾಪಿಸಿಕೊಂಡು ಅಲ್ಲಿಗೆ ಹೋದನು. ಆಗ ಸತಿಪತಿಗಳಿಬ್ಬರೂ ಗುರುವನ್ನು ಪರಮಾನಂದ ಭರಿತರಾಗಿ ಪೂಜಿಸಿ ಶಿವಾರ್ಪಣವನ್ನು ಮಾಡಿಸಿ ಸಂತುಷ್ಟಮನಸ್ಕರಾಗಿ ಆತನ ಪ್ರಸಾದವನ್ನು ಸವಿಯುತ್ತಿದ್ದರು. ಆಗ ರೇವಣಾರ್ಯನು ಗಂಡ-ಹೆಂಡರಿಬ್ಬರೇ ಇರುವದನ್ನು ನೋಡಿ ಇದೇನು ನಿಮ್ಮ ಮಗನು ಎಲ್ಲಿ ಹೋಗಿದ್ದಾನೆ? ಗೆಳೆಯರ ಸಂಗಡ ಆಡುತ್ತಿರುವನೇ? ಶಿವಪೂಜೆಗೆ ಹೂತರಲು ಹೋಗಿರುವನೇ? ಶಿವನ ಉತ್ಸವ ನೋಡಲು ಗುಡಿಗೆ ಹೋಗಿದ್ದಾನೆಯೇ? ಶಿವಕಥೆ ಕೇಳಲು ನೆರೆಮನೆಗೆ ಹೋಗಿರುವನೇ? ಮೊದಲು ನಾನು ಇಲ್ಲಿಗೆ ಬಂದಾಗ್ಗೆ ನಿಮಗಿಂತಲೂ ಆವನು ಭಕ್ತಿಭರಿತನಾಗಿ ನನ್ನ ಸೇವೆಯನ್ನು ಮಾಡುತ್ತಿದ್ದನು. ಯಾವಾಗಲೂ ನನ್ನ ಬಳಿಯಲ್ಲಿಯೇ ಇರುತ್ತಿದ್ದನು. ಈಗ ಅವನು ಇಲ್ಲದ್ದರಿಂದ ಈ ಮನೆಯ ಹಾಳು ಬಡಿದು ಬೀಳು ಮನಸ್ಸನ್ನುಂಟು ಮಾಡಿದೆ. ಆದ್ದರಿಂದ ನಿಮ್ಮ ಮಗನನ್ನು ಕರೆಯಿರಿ. ಎಂದು ಕೇಳಿದ ಕೂಡಲೇ ಅಲ್ಲಣದೇವಿಯು ಆತನ ಪಾದಗಳಿಗೆರಗಿ ಆಯ್ಯಾ ಗುರುವರ್ಯಾ, ಸತ್ತ ಮಗನನ್ನು ಕರೆಯುವದಕ್ಕೆ ನಾನು ಸಿರಿಯಾಳನ ಹೆಂಡತಿಯಾದ ಚಂಗಳೆಯೋ? ಕರೆಯದೆ ಸುಮ್ಮನೆ ತಿರಸ್ಕರಿಸಿ ಮಾತಾಡಿದ ನಿಂಬೆಕ್ಕನೋ? ಚನ್ನಾಗಿ ಯೋಚಿಸಿದರೆ ಅವರ ಪಾದ ಸೇವಕಳಾದ ನನಗೆ ಅಂತಹ ಸಾಮರ್ಥ್ಯವಿರುವದೇ? ನನ್ನ ಶಕ್ತಿಯನ್ನು ತಿಳಿಯದೆ ತಾವು ಅಪ್ಪಣೆ ಕೊಡಿಸಬಹುದೇ? ಈಗ ಗುರುವಾಕ್ಯವನ್ನು ಮೀರಿದಂತಾಗುವದಿಲ್ಲವೇ? ತಮಗೆ ತಿಳಿಯದಿರುವ ಸಂಗತಿ ಯಾವದಿದೆ? ಮಗನು ನಿಮ್ಮ ಪಾದಕ್ಕೆ ಸಂದು ಹೋಗಿರುವಾಗ ಅವನನ್ನು ಮತ್ತೆ ಎಲ್ಲಿಂದ ಕರೆತರಲಿ. ಸಕಲವನ್ನು ತಿಳಿದ ತಾವು ಹೀಗೆ ಆಜ್ಞೆಮಾಡುವದು ಆಶ್ಚರ್ಯವಲ್ಲವೇ? ಎಂದು ನುಡಿದು ಸುಮ್ಮನಾದಳು. ಆಗ ರೇವಣಾರ್ಯನು ಆಕೆಯ ಭಕ್ತಿಭಾವವನ್ನು ನೋಡಿ ಮೆಚ್ಚಿಕೊಂಡು ಸಂತುಷ್ಟನಾಗಿ

ಮಗನ ಸಮಾಧಿಯನ್ನು ಅಗೆಯಿಸಿ ಮೇಲೆ ಹೊದಿಸಿದ್ದ ಬಿಲ್ವಪತ್ರೆ, ಹೂಗಳನ್ನು ತೆಗೆದುಹಾಕಿಸಿ ಆ ಮಲ್ಲಿನಾಥನನ್ನು ತನ್ನ ಪರಿಪೂರ್ಣಕಟಾಕ್ಷದಿಂದ ನೋಡಿ ಕರುಣಾಮೃತವನ್ನು ಬೀರಿ ಓ ಮಲ್ಲಿನಾಥಾ, ಗುರುಭಕ್ತಿ ಸಂಪನ್ನಾ, ಏಳು. ಎಚ್ಚೇಳು ಎಂದು ಕೂಗಿದನು. ಕೂಡಲೆ ಆ ಬಾಲಕನು ಮೈಮರೆದವನು ಎಚ್ಚರಗೊಳ್ಳುವಂತೆ ಎದ್ದು ಆತನ ಪಾದಗಳಿಗೆ ನಮಸ್ಕರಿಸಿ ನಿಂತುಕೊಂಡನು. ತಾಯಿಯು ಬದುಕಿದ ಮಗನನ್ನು ಉಕ್ಕಿಬಂದ ಆನಂದದಿಂದ ಕಣ್ತುಂಬ ನೋಡಿ ತಬ್ಬಿ ಅಬ್ಬರದಿಂದ ಆಲಂಗಿಸಿ ಗಂಡಹೆಂಡರಿಬ್ಬರೂ ಆ ಮಗುವನ್ನು ಗುರುವರನ ಪಾದಗಳಿಗೆರಗಿಸಿ ತಾವೂ ನಮಿಸಿ ಆತನ ಗುರುಪ್ರಸಾದಭಾವದಿಂದ ಸರ್ವರೂ ತೃಪ್ತರಾದರು.ಈ ಪ್ರಕಾರ ಕದಿರೆ ರೇಮಾಯ್ಯನು ಸತ್ತು ಏಳುದಿವಸಗಳ ಮೇಲೆ ಭಕ್ತನ ಪ್ರಾಣವನ್ನು ಉಳುಹಿದನೆಂಬ ವರ್ತಮಾನವನ್ನು ಬಸವೇಶ್ವರನು ಕೇಳಿ ಸಮಸ್ತ ಶಿವಶರಣರ ಸಂಗಡ ಆತನಲ್ಲಿಗೆ ಬಂದು :ನಮಸ್ಕರಿಸಿ. ಪೂಜಿಸಿ ಭಕ್ತಿ ಭಾವದಿಂದ ಹೊಗಳಿ ಆತನ ಕರುಣಾಕಟಾಕ್ಷಕ್ಕೆ ಪಾತ್ರನಾಗಿ ಸುಖದಿಂದ ಇದ್ದನು.

## .... ಏಕಾಂತ ರಾಮಾರ್ಯನ ಕಥೆಯು ....

ಹೋಲಿಕೆಯಿಲ್ಲದ ಭಕ್ತಿಗೆ ಕ್ಷೀರ ಸಮುದ್ರವಾಗಿಯೂ, ಕೇಳುವಾದಗಳನ್ನು ನಾಶಮಾಡುವವನಾಗಿಯೂ, ಶಿವಶರಣರ ಕಲ್ಪತರುವಾಗಿಯೂ, ಶರಣಜನವತ್ಸಲನಾಗಿಯೂ, ಶಿವಕಥೆ, ಶಿವಮಂತ್ರ, ಶಿವೋತ್ಸವ, ಶಿವಾಚಾರ ಧರ್ಮಗಳಲ್ಲಿ ಧುರೀಣನಾಗಿಯೂ, ಶಮದಮಾದಿ ಷಡ್ಗುಣಸಂಪನ್ನನೂ, ಶಿವಭಕ್ತಿ, ಶಿವಜ್ಞಾನ, ಮಂಡನಮಂಡಿತನೂ, ಪ್ರತಿನಿತ್ಯ ಶಿವಾರ್ಚನೆಯನ್ನು ಮಾಡಿದನಂತರ ಕೈಲಾಸವನ್ನು ಹೊಕ್ಕು ಅಲ್ಲಿರುವ ಪ್ರಮಥಗಣಂಗಳಿಗೆ ನಮಸ್ಕರಿಸಿ ಶಿವಜ್ಞಾನವನ್ನು ಸವಿದು, ಶಿವಾನುಭವವನ್ನು ಏಕಾಂತದಲ್ಲಿ ಸ್ಮರಿಸಿ ಭೂಲೋಕಕ್ಕೆ ಬರುತ್ತಿದ್ದ ಕೆಲಸದಿಂದ ಏಕಾಂತರಾಮಯ್ಯನೆಂದು ಪ್ರಸಿದ್ಧಿಪಡೆದ ರಾಮಾರ್ಯನೆಂಬ ಭಕ್ತನು ಅದೇ ಕಲ್ಯಾಣಪಟ್ಟಣದಲ್ಲಿ ವಾಸಿಸುತ್ತಿದ್ದನು ಆತನು ಬಸವೇಶ್ವರನ ಕೀರ್ತಿಯನ್ನು ಕೇಳಿ ಆತನ ದರ್ಶನಪಡೆಯಬೇಕೆಂಬ ಕುತೂಹಲದಿಂದ ಅವನ ಬಳಿಗೆ ಬಂದು ಗುಪ್ತವೇಷದಿಂದ ಅಲ್ಲಿಯೇ ವಾಸಮಾಡಿಕೊಂಡಿದ್ದನು. ಒಂದು ದಿವಸ ಒಬ್ಬ ಜೈನನು ಕೆರದ ಕಾಲಿನಿಂದ ಬಂದು

ಶಿವಾಲಯುವನ್ನು ಹೊಕ್ಕನು. ಅದನ್ನು ನೋಡಿ ರಾಮಯ್ಯನು ಕೋಪದಿಂದ ಕಿಡಿಗಳನ್ನು ಸುರಿಸುತ್ತ ಎಲೈ ಪಾಪಿಯಾದ ಮೂರ್ಖನೇ, ಶಿವದೇವಾಲಯ ವನ್ನು ಕೆರದ ಕಾಲಿನಿಂದ ಪ್ರವೇಶಿಸಬಹುದೇ ? ಇದರಿಂದ ನೀನು ಸಂಪಾದಿಸಿ ಕೊಂಡ ಪಾಪಕ್ಕೆ ಮಿತಿಯಿಲ್ಲ. ಆದರೂ ಚಿಂತೆಯಿಲ್ಲ ಈಗಲಾದರೂ ಕೆರ ವನ್ನು ಹೊರಗೆ ಬಿಟ್ಟುಬಂದು ಶಿವನಿಗೆ ನಮಸ್ಕಾರಮಾಡಿ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡು ನಿನ್ನ ಪ್ರಾಣವನ್ನು ಉಳಿಸಿಕೋ ಇಲ್ಲವಾದರೆ ನನ್ನ ಖಡ್ಗದ ಪೆಟ್ಟನಿಂದ ನೀನು ಉಳಿಯುವಂತಿಲ್ಲ ಎಂದು ಹೇಳಿದನು. ಆದಕ್ಕೆ ಅವನು ಎಲೈ ಶಿವಭಕ್ತನೇ, ನಿನಗೆ ಇಷ್ಟೊಂದು ಗರ್ವವನ್ನು ಕೊಟ್ಟ ವರು ಯಾರು ? ಶಿವಲಿಂಗವು ನಿನ್ನ ತಲೆಯಲ್ಲಿ ಒಡಮೂಡಿರುವದೇ ? ಈ ಶಿವಾಲಯಗಳಿಗೆ ನೀನೇ ಅಧಿಕಾರಿಯೋ ? ಈ ಬಿಂಕದ ಮಾತುಗಳನ್ನು ನಿಮ್ಮವರಾದ ಶಿವಭಕ್ತರ ಮುಂದೆ ಕೊಚ್ಚಿಕೊಂಡರೆ ನಡೆಯುವದು. ಒಂದು ವೇಳೆ ನಿನ್ನ ದೇವರೂ, ದೇವಾಲಯವೂ ನಿಜವಾಗಿದ್ದರೆ ನಿನ್ನ ತಲೆಯನ್ನು ಕತ್ತರಿಸಿಕೊಂಡು ಏಳು ದಿವಸಗಳ ನಂತರ ರುಂಡ, ಮುಂಡಗಳನ್ನು ಸೇರಿಸಿ ಪ್ರಾಣವನ್ನು ಬರಮಾಡಿದರೆ ನಿನ್ನ ದೇವರನ್ನು ಒಪ್ಪಿಕೊಳ್ಳಬಹುದು. ಇಲ್ಲ ವಾದರೆ ಈ ನಿನ್ನ ಕಳ್ಳದೇವರನ್ನು ಹೇಗೆ ಒಪ್ಪಬೇಕು ? ಎಂದೆನ್ನಲು ರಾಮ ಯ್ಯನು ಇವನ ಕತ್ತನ್ನು ಕತ್ತರಿಸುವದಕ್ಕಿಂತ ಇವನು ಹೇಳಿದಂತೆಯೇ ಮಾಡಿ ತೋರಿಸಿ ಶಿವಭಕ್ತಿಯ ಮಹಾತ್ಮೆಯನ್ನು ಪ್ರಚುರಗೊಳಿಸಬೇಕೆಂದು ಬಗೆದು ಎಲೈ— ಜಿನಭಕ್ತನೇ ತಲೆಯನ್ನು ಕತ್ತರಿಸಿ ರುಂಡ ಮುಂಡಗಳನ್ನು ಸೇರಿಸಿ ಪುನಃ ಪ್ರಾಣವನ್ನು ಹೊಂದುವದು ಶಿವಭಕ್ತರಿಗೆ ಅಸಾಧ್ಯವಾದ ಕೆಲಸವೇ ? ಪೂರ್ವದಲ್ಲಿ ಜಂಬೂರಿನ ಮಹಾಕಾಳನೆಂಬ ಶಿವಭಕ್ತನು ತನ್ನ ಕುತ್ತಿಗೆ ಯನ್ನು ಕೊಯ್ದು ಶಿವನಿಗೆ ಸಮರ್ಪಿಸಿ ಪುನಃ ಅವನಿಂದ ಪ್ರಾಣವನ್ನು ಪಡೆದು ಲೋಕವನ್ನೆಲ್ಲ ಅಚ್ಚರಿಗೊಳಿಸಲಿಲ್ಲವೇ ? ಇದನ್ನು ಕೇಳಿ ಗೋವಿಂದ ಭಟ್ಟಾ ರಕನೆಂಬ ಶಿವಭಕ್ತನು ಮಹಾಕಾಳನು ಹಳೆಯ ತಲೆಯನ್ನು ಪಡೆದು ಅವಿನೇ ಕಿಯಾದನು. ಎಂದು ತಿಳಿದು ಅಲ್ಲಿಗೆ ಬಂದು ಶಿವನನ್ನು ಪೂಜಿಸಿ ತನ್ನ ತಲೆ ಯನ್ನು ಕತ್ತರಿಸಿ ಶಿವನಿಗೆ ಅರ್ಪಿಸಿ ನಾಲ್ಕು ದಿವಸಗಳ ನಂತರ ಬೇರೊಂದು ಹೊಸತಲೆ ಹೊಂದಲಿಲ್ಲವೇ ? ಮೊರಟದ ಬಂಕಯ್ಯನೆಂಬ ಶಿವಭಕ್ತನು ಈ ವರ್ತಮಾನವನ್ನು ಕೇಳಿ ಭಕ್ತನು ತಲೆಯನ್ನು ಕತ್ತರಿಸಿಕೊಂಡರೆ ಮೂರು

ದಿನಗಳವರೆಗೆ ತಲೆಯನ್ನೇ ಕೊಡದಿರಲು ಶಿವನು ಸಪ್ರಾಣನಾಗಿರಲಿಲ್ಲವೇ ? ಎಂದು ಕೋಪದಿಂದ ಹೀಯಾಳಿಸುತ್ತ ಅಲ್ಲಿಗೆ ಬಂದು ಈಶ್ವರನನ್ನು ಪೂಜೆ ಮಾಡಿ ಶಿವಶರಣರ ಪಾದಕಮಲಗಳನ್ನು ನೆನೆಯುತ್ತ ರೋಷದಿಂದ ತನ್ನ ಕೊರಳನ್ನು ಕತ್ತರಿಸಿಕೊಂಡನು. ಆತನ ವೀರಭಕ್ತಿಯನ್ನು ನೋಡಿ ಪರಮೇಶ್ವರನು ಕೂಡಲೇ ಮತ್ತೊಂದು ಹೊಸತಲೆಯನ್ನು ಕೊಟ್ಟನು. ಇವನು ಅದನ್ನು ತರಿದುಹಾಕಲು ಮತ್ತೊಂದು ಮೂಡಿತು. ಹೀಗೆಯೇ ಹೊಸದಾಗಿ ಬಂದ ತಲೆಗಳನ್ನೆಲ್ಲ ಕಡಿಕಡಿದು ಶಿವನಿಗೆ ಸಮರ್ಪಿಸಲು ನಗುವ, ನಲಿವ, ಹಾಡುವ, ಕೇಕೆಹಾಕುವ, ಶಿವಸ್ಮರಣೆಮಾಡುವ ಇನ್ನೂ ಆಶ್ಚರ್ಯಕರವಾದ ನಾನಾ ತಲೆಗಳು ಈಶ್ವರನಿಗೆ ಆಭರಣವಾಗಿ ಗುಡಿಯ ತುಂಬ ರಾಶಿಯಾಗಿ ಬಿದ್ದವು. ಆಗ ಭಕ್ತವತ್ಸಲನಾದ ಜಗದೀಶನು ಅವನ ಸಾಹಸಕ್ಕೆ ಮೆಚ್ಚಿ ಹೇ, ಛಲದಂಕನಾದ ಬಂಕಯ್ಯ, ನಿನ್ನ ಭಕ್ತಿಗೆ ನಾನು ಮೆಚ್ಚಿಕೊಂಡೆನು. ನಿನ್ನ ತಲೆಗಳು ನನಗೆ ಬಹುಭಾರವಾಗಿವೆ. ಇನ್ನು ಕತ್ತರಿಸಿಹಾಕುವ ಕುತ್ತಿಗೆಗಳನ್ನು ಮತ್ತೆ ಸೇರಿಕೊಳ್ಳುವಂತೆ ಮಾಡು. ಇಲ್ಲವಾದರೆ ನಾನು ಹೊರಲಾರೆನು ಎಂದು ಹೇಳುತ್ತ ಅವನ ಕೈಗಳನ್ನು ಹಿಡಿದುಕೊಂಡು ನೀನೇ ಗೆದ್ದವನು ನಿನ್ನ ಮುಂದೆ ನಾನೆಂದಿಗೂ ಅಲ್ಲ. ಸುಮ್ಮನಿರೆಂದು ಸಮಾಧಾನ ಮಾಡಿ ಭಕ್ತರನ್ನೆಲ್ಲಾ ತೃಪ್ತಿಗೊಳಿಸಿದನು. ಲೋಕದ ಜನರೆಲ್ಲರೂ ಈ ಬಂಕಯ್ಯನ ಪ್ರಭಾವವನ್ನು ಹೊಗಳಿದರು. ಇಂತಹ ಮಹಾತ್ಮರು ಅನೇಕ ಜನರಿದ್ದಾರೆ. ಅವರ ಚಾರಿತ್ರ್ಯವನ್ನು ಕೇಳು. ಈಗ ಅವರಲ್ಲಿ ಪ್ರಮುಖರಾದ ಕೆಲವರ ಚರಿತ್ರೆಯನ್ನು ಹೇಳುತ್ತೇನೆ ಕೇಳು.

## — ತಿರುವಾಕರೀಶ್ವರನ ಕಥೆಯು —

ತಿರುವಾವೂರು ಎಂಬ ಹಳ್ಳಿಯಲ್ಲಿ ತಿರುವಾಕರೀಶ್ವರ (ವಾಗೀಶ) ಎಂಬ ಹೆಸರಿನ ಒಬ್ಬ ಜೈನನಿದ್ದನು. ಅವನಿಗೆ ಅಸಾಧ್ಯವಾದ ಹೊಟ್ಟೆಶೂಲೆ ಇತ್ತು. ಯಾವ ಮಂತ್ರ, ತಂತ್ರ, ಔಷಧಗಳಿಂದಲೂ ಗುಣವಾಗದ ಈ ಹೊಟ್ಟೆನೋವಿನ ಬಾಧೆಯಿಂದ ಗೋಳಾಡಿ, ಹೊರಳಾಡಿ, ಹಿಸುಕುತ್ತ ನರಳಿ ಸಂಕಟಪಡುತ್ತಿದ್ದನು. ಒಂದು ದಿವಸ ಅವನ ತಂಗಿಯು ಬಂದು ಅಣ್ಣನ ಸಂಕಟವನ್ನು ನೋಡುವದಾಗದೆ ಅಣ್ಣಾ, ಈ ಹಾಳು ರೋಗವು ನಿನ್ನನ್ನು ಕೊಲ್ಲದೆ ಬಿಡುವ

ದಿಲ್ಲ. ಮದ್ದು, ಮಂತ್ರಗಳಿಂದಲೂ ಇದು ಪರಿಹಾರವಾಗುವದಿಲ್ಲ. ಆದ್ದರಿಂದ ಭವರೋಗ ವೈದ್ಯನಾದ ಪರಶಿವನನ್ನು ಪ್ರಾರ್ಥಿಸಿ ಆವನ ಪ್ರಸಾದದಿಂದ ಈ ರೋಗವನ್ನು ಕಳೆದುಕೊಂಡು ಸುಖವಾಗಿರು. ಎಂದು ಹೇಳಲು ಆವನು ತಂಗಿಯೇ, ನೀನು ಏನಾದರೂ ಮಾಡು. ನನ್ನ ರೋಗ ಗುಣವಾದರೆ ಸಾಕು. ಎನ್ನಲು ಆಕೆಯು ಮನಸ್ಸಿನಲ್ಲಿ ಶಿವಶರಣರ ಪಾದಕಮಲಗಳನ್ನು ಧ್ಯಾನಿಸಿ, ಶಿವಮಂತ್ರದಿಂದ ವಿಭೂತಿಯನ್ನು ಮಂತ್ರಿಸಿ, ಹಣೆಗೆ ಹಚ್ಚಿ ಕೊರಳಿಗೆ ರುದ್ರಾಕ್ಷಿ ಕಟ್ಟಿ ಶಿವಮಂತ್ರವನ್ನು ಜಪಿಸುತ್ತ ಕರುಣಾ ದೃಷ್ಟಿಯಿಂದ ಆತನನ್ನು ಒಂದು ಗಳಿಗೆಯವರೆಗೆ ನೋಡಲು ಕೂಡಲೇ ಶೂಲೆಯು ಮಾಯವಾಯಿತು. ಆಗ ಆವನು ಮೇಲಕ್ಕೆದ್ದು ತಂಗೀ, ಬದುಕಿದೆನು ಎಂದು ಆಕೆಯ ಪಾದಗಳಿಗೆರಗಿ ಒಬ್ಬ ಗುರುಗಳ ಹತ್ತಿರ ಹೋಗಿ ಸ್ವಾಮೀ, ನಾನು ಭವರೋಗ ಭಯದಿಂದ ತಮ್ಮ ಪಾದಗಳನ್ನು ಹಿಡಿದಿರುವೆನು. ನನಗೆ ಶಿವಮಂತ್ರವನ್ನು ಉಪದೇಶಿಸಿ ಶಿವದೀಕ್ಷೆಯನ್ನು ಕೊಟ್ಟು ಅನುಗ್ರಹಿಸಬೇಕೆಂದು ಬೇಡಿಕೊಂಡನು. ಆಗ ಗುರುವು ಆತನನ್ನು ಪರೀಕ್ಷಿಸಿ ಕರುಣಾ ವೀಕ್ಷಣೆಯಿಂದ ಆತನನ್ನು ಪರಿಶುದ್ಧನನ್ನಾಗಿಮಾಡಿ ಪಂಚಕಲಶಗಳ ತೀರ್ಥವನ್ನೆರೆದು ವಿಭೂತಿಯನ್ನು ಧರಿಸಿ, ಬ್ರಹ್ಮಲಿಪಿಯನ್ನು ನಾಶಮಾಡಿ, ಶಿರಸ್ಸಿನಲ್ಲಿ ಹಸ್ತವನ್ನಿಟ್ಟು, ಪ್ರಾಣಕಳೆಯನ್ನು ಆಕರ್ಷಿಸಿ, ಶಿವಲಿಂಗದಲ್ಲಿ ಆದನ್ನು ಪ್ರತಿಷ್ಠಿಸಿ, ಆತನ ಕೈಗೆ ಆ ಲಿಂಗವನ್ನು ಕೊಟ್ಟು, ಶಿವಮಂತ್ರವನ್ನು ಕಿವಿಯಲ್ಲಿ ಉಪದೇಶ ಮಾಡಿ, ಶುದ್ಧಬುದ್ಧ ನಿತ್ಯಸ್ವರೂಪನನ್ನಾಗಿಮಾಡಿ, ಪ್ರಾಣಲಿಂಗ ನಿಷ್ಠೆಯನ್ನು ಆತನಿಗುಂಟುಮಾಡಿ ಶಿವೈಕ್ಯರಹಸ್ಯಗಳನ್ನು ತಿಳುಹಿ ಕಳುಹಿಸಿಕೊಟ್ಟನು. ಪರಮಾನಂದಭರಿತನಾದ ತಿರುವಾಕರೀಶ್ವರನು ತನು-ಮನ-ಧನಗಳನ್ನು ಗುರುಲಿಂಗ ಜಂಗಮರಿಗೆ ಅರ್ಪಿಸುತ್ತ ವಿಭೂತಿ, ರುದ್ರಾಕ್ಷಿ ಮೊದಲಾದ ಶಿವಚಿನ್ಹಗಳನ್ನು ಧರಿಸಿದವನಾಗಿ ಷಟ್‌ಸ್ಥಲನಿಷ್ಠಾಗರಿಷ್ಠನೂ, ಅಷ್ಟಾವರಣ ಪಂಚಾಚಾರ ನಿರತನೂ ಆಗಿ ಮೆರೆಯುತ್ತಿದ್ದನು. ಇದನ್ನು ನೋಡಿದ ಕೆಲವು ಜನ ದುಷ್ಟರು ಸಹಿಸಲಾರದೆ ಅಸೂಯೆಯಿಂದ ಇವನಿಗೆ ಕೇಡುಮಾಡಬೇಕೆಂದು ವಿಚಾರಿಸಿ ಒಂದು ಕಡೆಗೆ ಆವನನ್ನು ಕರೆದುಕೊಂಡು ಹೋಗಿ ಮದವೇರಿದ ಆನೆಯ ಬಳಿಯಲ್ಲಿ ಬಿಟ್ಟರು. ಆಗ ಆವನು ಗಜಾರಿಯಾದ ಶಂಕರನೇ ಶರಣೆಂದು ಈಶ್ವರನಿಗೆ ನಮಸ್ಕರಿಸಲು ಆನೆಯು ಸುಮ್ಮನೆ ಹೊರಟು ಹೋಯಿತು.

ವಿಷದ ಕೊಳದಲ್ಲಿ ಮುಳುಗಿಸಬೇಕೆಂದು ತಿಳಿದು ಅವನನ್ನು ಕೊಳದಲ್ಲಿ ಮುಳುಗಿಸಲು ವಿಷಕಂಠ, ಮೃತ್ಯುಂಜಯ, ಶತ್ರುನಾಶಕ ಎಂದು ಶಿವನಾಮಗಳನ್ನು ಹೊಗಳುತ್ತಿರಲು ಕೊಳದಲ್ಲಿ ಮುಳುಗಿದರೂ ವಿಷವನ್ನು ಜಯಿಸಿದನು. ಕಾಲಸರ್ಪಗಳಿಂದ ಕಚ್ಚಿಸಬೇಕೆಂದು ಆತನನ್ನು ಸರ್ಪಗಳ ಬಳಿಬಿಡಲು ಆತನು ನಾಗಾಭರಣನೇ, ಸರ್ಪಮಾಲಾಧರನೇ, ಸಲಹೆಂದು ಚೀರುತ್ತಾ ಹಾವುಗಳಿಗೆ ತನ್ನ ದೇಹವನ್ನೊಡ್ಡಲು ಇರುವೆಗಳಂತೆ ಆ ಸರ್ಪಗಳನ್ನು ಗೆದ್ದು ಬದುಕಿದನು ಮತ್ತು ಆ ದುಷ್ಟರು ಆ ತಿರುವಾಕರಿಯನ್ನು ಕಾಳ್ಗಿಚ್ಚಿನಿಂದ ಸುಟ್ಟು ಬಿಡಬೇಕೆಂದು ಯೋಚಿಸಿ ಉರಿಯುತ್ತಿರುವ ಕಾಡುಕಿಚ್ಚಿನಲ್ಲಿ ಎತ್ತಿ ಹಾಕಲು ಅವನು ಅಗ್ನಿಭೇದಕನಾದ ಶಿವನೇ ಶರಣೆಂದು ಹೇಳಿ ಬೆಂಕಿಯಲ್ಲಿ ಬಿದ್ದರೂ ತಲೆಗೂದಲು ನಲುಗದಂತೆ ಹೊರಗೆ ಬಂದನು. ಅದನ್ನು ಕಂಡು ಆ ದುಷ್ಟ ದ್ವೇಷಿಗಳು ಈತನು ಮಹಾಮಹಿಮನೆಂದು ತಿಳಿದು ಅವನ ಬಳಿಗೆ ಬಂದು ತಮ್ಮ ಅಪರಾಧವನ್ನು ಕ್ಷಮಿಸಿ ಕಾಪಾಡಬೇಕೆಂದು ಬೇಡಿಕೊಳ್ಳಲು ದಯಾಳುವಾದ ಆತನು ಅವರಿಗೆ ಶಿವಚಿಹ್ನೆಗಳನ್ನು ಕೊಟ್ಟು ಶಿವಭಕ್ತರನ್ನಾಗಿಮಾಡಿ ಕೀರ್ತಿಶಾಲಿಯಾದನು.

## — ಇರಿವತ್ತಾಂಡಾರಿಯ ಕಥೆಯು —

ಅದೇ ತಿರುವಾವೂರಲ್ಲಿ ಹುಟ್ಟಿ ಕುರುಡನಾದ ಇರಿವತ್ತಾಂಡನೆಂಬ ಶಿವಭಕ್ತನು ಆ ಊರಲ್ಲಿರುವ ಶಿವಲಿಂಗದ ಅಭಿಷೇಕಕ್ಕಾಗಿ ಗುಡಿಯಲ್ಲಿ ಒಂದು ಬಾವಿಯನ್ನು ತೆಗೆಯಿಸಬೇಕೆಂದು ನಿಶ್ಚಯಿಸಿ ಸ್ಥಲವನ್ನು ಗುರುತುಮಾಡಿ ಆ ಸ್ಥಲಕ್ಕೂ, ಹೊರಕ್ಕೂ, ಒಂದು ಹಗ್ಗವನ್ನು ಕಟ್ಟಿ ಬೊಂಬುಗಳನ್ನು ನಿಲ್ಲಿಸಿ ಬಾವಿಯನ್ನು ಅಗೆದು ಮಣ್ಣನ್ನು ಹೊತ್ತುಕೊಂಡು ಆ ಹಗ್ಗದ ಗುರುತಿನಿಂದ ಹೊರಗೆ ಬಂದು ಗೊತ್ತು ಮಾಡಿದ್ದ ಸ್ಥಳದಲ್ಲಿ ಮಣ್ಣನ್ನು ಹಾಕಿ ತನ್ನ ಕೆಲಸವನ್ನು ಮಾಡುತ್ತಿದ್ದನು. ಇದನ್ನು ನೋಡಿದವರಾದ ಕೆಲವು ಜನ ಮತದ್ವೇಷಿಗಳು ಆ ಬೊಂಬುಗಳನ್ನು ಕಿತ್ತುಹಾಕಿ ಹಗ್ಗವನ್ನು ಬಿಚ್ಚಿ ಹಾಸ್ಯಮಾಡಿ ನಗುತ್ತಿರಲು ಆತನು ತನ್ನ ದೃಢ ಭಕ್ತಿಯಿಂದ ಈಶ್ವರನನ್ನು ಪ್ರಾರ್ಥಿಸಿ ಕಣ್ಣುಗಳನ್ನು ಪಡೆದು ಆ ದ್ವೇಷಿಗಳನ್ನು ಕುರುಡರನ್ನಾಗಿ ಮಾಡಿ ತನ್ನ ಭಕ್ತಿಯನ್ನು ಪ್ರಕಾಶ ಪಡಿಸಿ ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡು ಧನ್ಯನಾದನು.

## .... ಪಿಳ್ಳೆ ನೈನಾರ ಕಥೆಯು ....

ಈಶ್ವರನ ಆಜ್ಞೆಯನ್ನು ಧರಿಸಿ ಷಣ್ಮುಖನು ದ್ರಾವಿಡದೇಶದಲ್ಲಿ ಕಾಳಿಯೆಂಬ ಊರಲ್ಲಿರುವ ಒಬ್ಬ ಶಿವದ್ವಿಜನೆಂಬವನ ಹೊಟ್ಟೆಯಲ್ಲಿ ಪಿಳ್ಳೆ ನೈನಾರ (ತಿರುಜ್ಞಾನ ಸಂಬಂಧಿ) ಎಂಬ ಹೆಸರಿನಿಂದ ಅವತರಿಸಿದನು. ಒಂದು ದಿವಸ ಆ ದ್ವಿಜನು ಮಧ್ಯಾಹ್ನದಲ್ಲಿ ತನ್ನ ಮಗನನ್ನು ಹೆಗಲಮೇಲೆ ಕೂಡ್ರಿಸಿಕೊಂಡು ಸ್ನಾನಕ್ಕಾಗಿ ಒಂದು ತೋಟಕ್ಕೆ ಹೋಗಿದ್ದನು. ಅಲ್ಲಿಯ ತಿಳಿಗೊಳದ ದಂಡೆಯ ಮೇಲೆ ಮಗುವನ್ನು ಕುಳ್ಳಿರಿಸಿ ತಾನು ಸ್ನಾನ ಮಾಡಲು ಒಳಗೆ ಇಳಿದನು. ಆ ಕಾಲದಲ್ಲಿ ಆಕಾಶಮಾರ್ಗದಲ್ಲಿ ವಿಮಾನಸಂಚಾರಿಯಾಗಿದ್ದ ಪಾರ್ವತಿಯು ಶಿವನನ್ನು ಕುರಿತು– ಈ ಮಗುವು ನಮ್ಮ ಷಣ್ಮುಖನಂತಿದೆಯಲ್ಲಾ ! ಎಂದು ಹೇಳಿದ ಕೂಡಲೇ ಸಂತೋಷದಿಂದ ಮೊಲೆಯಲ್ಲಿ ಹಾಲುಕ್ಕಿ ಬಂದವು. ಕೂಡಲೇ ಅವಳು ಭೂಮಿಗಿಳಿದು ಬಂದು ಮಗುವನ್ನು ತಬ್ಬಿ ಮುದ್ದಾಡಿ ತೊಡೆಯಮೇಲೆ ಕೂಡ್ರಿಸಿಕೊಂಡು ಮೊಲೆಯುಣಿಸಿ ಸಂತೋಷದಿಂದ ನಲಿದು ಶಿವದೀಕ್ಷೆಯನ್ನು ಕೊಟ್ಟು ತನ್ನ ರತ್ನಾಭರಣಗಳನ್ನು ಅವನಿಗೆ ತೊಡಿಸಿ ಒಂದು ಬಂಗಾರದ ಗಿಂಡಿಯಲ್ಲಿ ಮತ್ತಿಷ್ಟು ಹಾಲನ್ನು ಕರೆದು ಅವನ ಕೈಗೆ ಕೊಟ್ಟು ತಾನು ಈಶ್ವರನ ಬಳಿಗೆ ತೆರಳಿದಳು. ಇತ್ತ ಸ್ನಾನವನ್ನು ತೀರಿಸಿಕೊಂಡು ಶಿವದ್ವಿಜನು ಮೇಲೆ ಬಂದು ರತ್ನಾಭರಣಗಳಿಂದ ಹೊಳೆಯುತ್ತಿರುವ ಕೈಯಲ್ಲಿ ಸುವರ್ಣ ಪಾತ್ರೆಯಲ್ಲಿ ಹಾಲನ್ನು ಹಿಡಿದುಕೊಂಡಿರುವ ಮಗನನ್ನು ನೋಡಿ ಸಂತೋಷವು ಉಕ್ಕಿ ಬಂದರೂ ರೇಗುತ್ತ ನಿನಗೆ ಈ ಬಟ್ಟಲನ್ನೂ ರತ್ನಾಭರಣಗಳನ್ನೂ ಯಾರು ಕೊಟ್ಟರು ? ಅವರು ಎಲ್ಲಿ ಹೋದರು ? ಎಂದು ಕೇಳಿ ಸಣ್ಣ ಕಟ್ಟಿಗೆಯಿಂದ ಹೊಡೆದು ಗದರಿಸಲು, ಆ ಮಗುವು ಬೆದರಿ ಹೊಡೆದ ಸ್ಥಳವನ್ನು ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತ ಆಕಾಶಮಾರ್ಗದಲ್ಲಿ ಸಂಚರಿಸುತ್ತಿದ್ದ ಉಮಾಮಹೇಶ್ವರರು ನನ್ನನ್ನು ನೋಡಿ ಉಕ್ಕಿದ ಸಂತೋಷದಿಂದ ಬಂದು ಮಕ್ಕಳನ್ನು ಎತ್ತಿಕೊಳ್ಳುವಂತೆ ಎತ್ತಿಕೊಂಡು ಪಕ್ಕದಲ್ಲಿ ಕುಳ್ಳಿಸಿಕೊಂಡು ಉಕ್ಕಿಬರುವ ಹಾಲನ್ನು ಕುಡಿಸಿ ಸೊಕ್ಕಿದ ಸಂತೋಷದಿಂದ ರತ್ನಾಭರಣಗಳನ್ನು ತೊಡಿಸಿ ಹೊರಟು ಹೋದರು. ಅಗೋ ಅಲ್ಲಿ ಹೋಗುತ್ತಿದ್ದಾರೆ ನೋಡು ಎಂದು ತೋರಿಸಲಾಗಿ ಆತನು ಅವರನ್ನು ಕಂಡು ಸಂತೋಷದಿಂದ ನಮಸ್ಕರಿಸಿ ಅವರ ಕರುಣಾಕಟಾ

ಕ್ಷಕ್ಕೆ ಪಾತ್ರನಾಗಿರುವ ಈ ಮಗನು ಸಾಕ್ಷಾತ್ ಶಿವನಲ್ಲದೆ ನನ್ನ ಪುತ್ರನಲ್ಲ ವೆಂದು ಬಗೆದು ಅವನನ್ನು ಹೆಗಲಮೇಲೆ ಕೂಡ್ರಿಸಿಕೊಂಡು ತನ್ನ ಮನೆಯನ್ನು ಸೇರಿ ನಡೆದ ವೃತ್ತಾಂತವನ್ನು ಹೆಂಡತಿಗೆ ಹೇಳಿ ಸಂತೋಷದಿಂದಿದ್ದನು. ಈ ಕುಮಾರನು ಪಾರ್ವತಿಯ ಸ್ತನ್ಯಪಾನದ ಬಲದಿಂದ ವಾಕ್ಸಿದ್ಧಿ, ಕ್ರಿಯಾಸಿದ್ಧಿ ಮೊದಲಾದ ಅನೇಕ ಸಿದ್ಧಿಗಳನ್ನು ಪಡೆದುಕೊಂಡು ಆ ಊರಲ್ಲಿರುವ ಶಿವಾ ಲಯದಲ್ಲಿರುವ ಜಗಜ್ಜನನಿಪಾರ್ವತಿಯನ್ನು ನಾನಾವಿಧವಾಗಿ ಸ್ತೋತ್ರಮಾಡಿ ತೃಪ್ತಿ ಪಡಿಸಿದನು. ಆಗ ಆಕೆಯು ತನ್ನ ಕೊರಳಲ್ಲಿಯ ಪುಷ್ಪಹಾರವನ್ನು ಆತನ ಕೊರಳಿಗೆ ಹಾಕಿ ಪೀತಾಂಬರವನ್ನು ಹೊದಿಸಿ ಛತ್ರ, ಚಾಮರ, ವಾದ್ಯ ಗೀತ, ಮೇಳಾದಿಗಳನ್ನು ಕೊಟ್ಟು ತನ್ನ ಹಸ್ತಗಳಲ್ಲಿದ್ದ ಎರಡು ಚಿನ್ನದ ತಾಳ ಗಳನ್ನು ಕರುಣಿಸಿ ಶಿವನನ್ನೂ, ನನ್ನನ್ನೂ, ಪ್ರಮಥರನ್ನೂ, ಇನ್ನೂ ಇತರ ಶಿವಗಣಂಗಳನ್ನೂ ಹಾಡಿ, ನುಡಿಸುತ್ತ ತಾಳ ಲಯಾನುಸಾರವಾಗಿ ಹಾಡಿ ಕೊಂಡಿರು ಎಂದು ಹೇಳಿ ಅಂತರ್ಧಾನವಾದಳು. ಆತನು ಆ ನಂತರ ಶಿವನ ಬಳಿಗೆ ಬಂದು ಆತನನ್ನು ನಾನಾ ವಿಧವಾದ ಸ್ತೋತ್ರಗಳಿಂದ ಮೆಚ್ಚಿಸಿ ಮಾಯಾ, ಮಂತ್ರ, ತಂತ್ರ, ಶೈವಾಚಾರ, ಶಿವಭಕ್ತಿ ಮೊದಲಾದ ನಾನಾ ಸಿದ್ಧಿಗಳನ್ನು ಪಡೆದು ರತ್ನದ ಪಲ್ಲಕ್ಕಿಯಲ್ಲಿ ಕುಳಿತು ಛತ್ರಚಾಮರಗಳನ್ನು ಹಾಕಿಸಿಕೊಳ್ಳುತ್ತ ವಾದ್ಯ, ತಾಳ, ಮೇಳ, ನೃತ್ಯಗೀತಾದಿಗಳಿಂದ ಮುಂಭಾ ಗವು ಶಂಭುವಿನ ಸಾನಿಧ್ಯದಂತೆ ಒಪ್ಪುತ್ತಿರಲು ಆ ಪಂಡಿತವರ್ಯನು ಮಂಡನ ರೂಪವಾದ ಅನೇಕ ಅಲಂಕಾರ ಶ್ಲೋಕಗಳನ್ನು ಜಪಿಸಿ ಮಂತ್ರಗಳನ್ನು ಹೇಳು ತ್ತಿರಲು ವಂದಿಮಾಗಧರು ಸ್ತೋತ್ರಪಾಠವನ್ನು ಜಪಿಸುತ್ತಿರಲು, ಸರ್ವಸಮ್ಮತ ವಾದ ಸಕಲ ಮರ್ಯಾದೆಗಳಿಂದ ಕೂಡಿ ರಾಜಬೀದಿಯಲ್ಲಿ ಮೆರವಣಿಗೆಯಿಂದ ಬರುತ್ತಿದ್ದನು. ಇದನ್ನು ನೋಡಿ ಪರಮತದ ಜೈನ, ಬೌದ್ಧ, ಸವರ್ಣಾದಿ ಗಳೆಲ್ಲರೂ ನಡುಗಿ ಹೋದರು. ಆತನು ದಾರಿಯಲ್ಲಿದ್ದ ಅನೇಕ ಶಿವಕ್ಷೇತ್ರ ಗಳನ್ನು ಪ್ರವೇಶಿಸಿ ಶಿವದರ್ಶನವನ್ನು ಮಾಡಿಕೊಂಡು ಭಕ್ತರಿಗೆ ಶಿವದೀಕ್ಷಾ ವಿಧಿಯನ್ನು ದಯಪಾಲಿಸುತ್ತ ಪ್ರತಿಭಟಿಸಿಬಂದ ಪರಮತವಾದಿಗಳನ್ನು ಗೆದ್ದು ವಾದದಲ್ಲಿ ಅವರಿಗೆ ಶಿವದೀಕ್ಷೆಯನ್ನು ಕೊಡಿಸಿ ತಿರುಮರಕ್ಕಡ ಎಂಬ ಊರಲ್ಲಿ ಬಹು ದಿವಸಗಳಿಂದ ಕೀಲ್ಮೈಸಿಹೋಗಿದ್ದ ಬ್ರಹ್ಮದೇವಾಲಯದ ಕದವನ್ನು ಭಕ್ತಿ ಭಾವದಿಂದ ತೆಗೆಯಿಸಿ, ಹಾವು ಕಡಿದು ಸತ್ತು ಹೋಗಿದ್ದ ಶೂದ್ರನಿಗೆ ಪ್ರಾಣ

ದಾನವನ್ನು ಮಾಡಿ, ಮಧುರಾಪುರಿಯ ರಾಜಪತ್ನಿಯ ಇಷ್ಟಾನುಸಾರವಾಗಿ ಅಲ್ಲಿಗೆ ಬರಲು ಅಲ್ಲಿದ್ದ ಜನರೆಲ್ಲರೂ ಅಸೂಯೆಯಿಂದ ಪಾಂಡ್ಯರಾಜನ ಬಳಿಗೆ ಬಂದು ಎಲೈ ಕುಣಪಾಂಡ್ಯನೇ, ಜೈನಧರ್ಮಕ್ಕೆ ಕಲ್ಪವೃಕ್ಷಪ್ರಾಯನಾದ ನೀನು ರಾಜ್ಯಭಾರ ಮಾಡುತ್ತಿರುವಾಗ ಆ ಧರ್ಮಕ್ಕೆ ಹಗೆಯಾದ ಯಾವನೋ ಒಬ್ಬ ಬಾಲ ಶಿವಭಕ್ತನು ಈ ಊರಿಗೆ ಬಂದು ಹೊಗಳಿಸಿಕೊಳ್ಳುತ್ತಿರುವದನ್ನು ನಾವು ನೋಡಿ ಸುಮ್ಮನಿರುವದು ಹೇಗೆ ? ಇದು ನಿನಗೆ ಭೂಷಣವಲ್ಲ ಆದ್ದರಿಂದ ಆ ಶೈವ ಬಾಲಕನನ್ನು ಕೂಡಲೆ ಹೊರಗೆ ಕಳುಹಿಸು. ಎಂದು ಚಾಡಿ ಹೇಳಲು ಅಯ್ಯಾ, ಆ ಬಾಲಕನು ಸಾಮಾನ್ಯನಲ್ಲ. ರಾಜೇಂದ್ರಚೋಳನ ಗುರುವು. ಶಿವಭಕ್ತಿ ಸಂಪನ್ನನು. ಇರುವದರಿಂದ ನಾನು ಹೊರಡಿಸುವದು ಹೇಗೆ ? ನೀವೆಲ್ಲರೂ ಕೂಡಿ ಶಾಸ್ತ್ರ ವಾದದಲ್ಲಿ ಅವನನ್ನು ಸೋಲಿಸಿದರೆ ಅವಮಾನದಿಂದ ಆತನೇ ಹೊರಟು ಹೋಗುವನೆಂದು ಹೇಳಲು, ಅದರಂತೆ ಹತ್ತುಸಾವಿರ ಮಂದಿ ಜೈನರು ಸೇರಿ ನಾನಾವಾದಗಳಿಂದ ತಮ್ಮ ಯುಕ್ತಿ ಚಮತ್ಕಾರಗಳನ್ನು ತೋರಿಸಿದರೂ ಸಾಧ್ಯವಾಗದೆ ಖಿನ್ನರಾಗಿ ನಾಚಿಕೆಯಿಂದ ತಲೆಬಾಗಿಸಿ ನಡುಗಿ ಮತ್ತಾವುದಾದರೂ ಕಪಟೋಪಾಯದಿಂದ ಅವನನ್ನು ಕೊಲ್ಲಬೇಕೆಂದು ಬಗೆದು ಆ ರಾತ್ರಿಯಲ್ಲಿ ಆತನು ಮಲಗಿರುವ ಮನೆಗೆ ಬೆಂಕಿಯನ್ನು ಹಚ್ಚಿಸಿದರು. ಅಗ್ನಿಯು ಆ ಗುರುವರನ ಮನೆಯನ್ನು ಸುಡುವದಕ್ಕೆ ಹೆದರಿ ಮೂರ್ತಿವತ್ತಾಗಿ ಬಂದು ಆ ಕುಮಾರನ ಕಾಲ್ಗೆರಗಿ ನಿಂತುಕೊಂಡನು. ಆಗ ತಿರುಜ್ಞಾನ ಸಂಬಂಧಿಯು ಅಗ್ನಿಯನ್ನು ನೋಡಿ ಎಲೈ, ಅಗ್ನಿದೇವನೇ, ನೀನು ಹಿಂದೆ ದಕ್ಷಬ್ರಹ್ಮನ ಯಾಗದಲ್ಲಿ ಭಿಕ್ಷೆಯ ಆಸೆಯಿಂದ ನಾಲಿಗೆಯನ್ನು ಎರಡಾಗಿ ಸೀಳಿಸಿಕೊಂಡೆ. ಈಗ ಮೂಗನ್ನು ಕೊಯ್ಸಿಕೊಳ್ಳಲು ಬಂದೆಯೋ ? ಈಗ ನಿನ್ನನ್ನು ಕ್ಷಮಿಸಿರುವೆ. ಈ ಕ್ಷಣವೇ ಹೊರಟು ಹೋಗೆಂದು ಹೇಳಿ ಈ ಸ್ಥಳಕ್ಕೆ ನಿನ್ನನ್ನು ಬರಮಾಡಿದ ಜೈನರ ಶರೀರವನ್ನೇ ಹೊಂದು ಎಂಬುದಾಗಿ ಹೇಳಿ ಕಳಿಸಲು ಅಗ್ನಿಯು ಕೂಡಲೇ ಜ್ವರರೂಪದಿಂದ ಕುಣುಪಾಂಡ್ಯನ ದೇಹವನ್ನು ಹೊಕ್ಕನು. ಆಗ ದೊರೆಯು ಜ್ವರದ ತಾಪವನ್ನು ತಾಳಲಾರದೆ ನೆಲದ ಮೇಲೆ ಬಿದ್ದು ಹೊರಳುತ್ತ, ತುಟಿಯೊಣಗಿ, ಬಾಯಾರಿ, ಕುಂದಿಕೊರಗಿರಲು, ಪನ್ನೀರು ಮೊದಲಾದ ಶೈತ್ಯೋಪಚಾರಗಳು ಹೀರಿಹೋದವು. ಜ್ವರಬಾಧೆ

ಯನ್ನು ಗುರುಗಳಾದ ಜೈನ ಸನ್ಯಾಸಿಗಳು ಕೇಳಿ ನವಿಲುಗಳ ಚಾಮರವನ್ನು
ಕೈಯಲ್ಲಿ ಹಿಡಿದುಕೊಂಡು ಅರಮನೆಗೆ ಬಂದು ರಾಜನನ್ನು ನೋಡಿ ಜ್ವರ
ತಾಪವು ಇಂಥದೇ ಎಂದು ಕಂಡುಹಿಡಿಯದೆ ಜಿನಧ್ಯಾನದಲ್ಲಿ ಕಣ್ಣು ಮುಚ್ಚಿ
ಕೊಂಡಿರುವಂತೆ ಹೇಳಿ ನವಿಲುಗರಿಯಿಂದ ಬೀಸುತ್ತ, ಮಂತ್ರಿಸಿದ ಜಲವನ್ನು
ಬೊಗಸೆಯಿಂದ ತೆಗೆದು ಅವನ ದೇಹದ ಮೇಲೆ ಹಾಕಲು ಜಲವು ಬತ್ತಿ
ಹೋಯಿತು. ನಾನಾವಿಧ ಯುಕ್ತಿ, ಪ್ರಯುಕ್ತಿಗಳೆಲ್ಲ ವ್ಯರ್ಥವಾದವು.
ಇದನ್ನು ನೋಡಿ ರಾಜಪತ್ನಿಯಾದ ಮಾಂಗಾಯಕ್ಕನು ಗಂಡನ ಜ್ವರವನ್ನು
ನೀಗಿಬಿಡಲು ತಿರುಜ್ಞಾನ ಸಂಬಂಧಿಗಳೇ ಶಕ್ತರೆಂದು ತಿಳಿದು ಅವರನ್ನು ಬರ
ಮಾಡಿ ಅವರ ಪಾದಗಳಿಗೆ ನಮಸ್ಕರಿಸಿ ನನ್ನ ಗಂಡನು ಅನುಭವಿಸುತ್ತಿರುವ
ಈ ತಾಪಕ ಜ್ವರ ಹೋಗಲಾಡಿಸಿ ಕಾಪಾಡುವಂತಹ ಪುಣ್ಯಾತ್ಮರು ತಾವಲ್ಲದೆ
ಮತ್ತಾರು ಇರುವರು. ಬೇಗನೇ ಗುಣಪಡಿಸಬೇಕೆಂದು ಬೇಡಿಕೊಂಡಳು.
ಆಗ ಕೋಪಾವಿಷ್ಟರಾದ ಜೈನಗುರುಗಳು ಆಕೆಯನ್ನು ಕುರಿತು ಹೇ ದೇವಿಯೇ,
ಕಾಮವಿದೂರನಾದ ಜಿನದೇವನಿಗಿಂತಲೂ ಕಾಮಿನೀಲೋಲನಾದ ಶಿವನು
ಹೆಚ್ಚೇ ? ಮುಕ್ತಿದಾಯಕ ಜೈನಮತಕ್ಕೂ, ಪಾಷಂಡಿಗರಾದ ಶಿವಮತಕ್ಕೂ,
ಸಾಮ್ಯವುಂಟೇ ? ಮಹಾತ್ಮರಾದ ಜೈನ ಮುನಿಗಳಿಗಿಂತಲೂ, ಈ ಶಿವಬಾಲ
ಕನು ಅಧಿಕನೇ ? ಇವನಿಂದೇನಾಗುವದು ? ಏತಕ್ಕೆ ಹಂಬಲಿಸುವೆ ಸುಮ್ಮ
ನಿರು ಎಂದು ಗದರಿಸಿದರು. ಆಗ ತಿರುಜ್ಞಾನ ಸಂಬಂಧಿಯು—
ಕುಪಿತನಾಗಿ ಎಲೈ ಜೈನ ಮುನಿಗಳೇ, ಲೋಕಕಂಟಕನಾಗಿದ್ದ ಮನ್ಮ
ಥನನ್ನು ತನ್ನ ಲಲಾಟಾಗ್ನಿಯಿಂದ ಸುಟ್ಟು ಕಾಮಾರಿಯೆಂದು ಪ್ರಸಿದ್ಧ
ನಾಗಿರುವ ವೈರಾಗ್ಯ ಸಂಪನ್ನನಾದ ಶಿವನು ಕಾಮಿಯೇ ? ಹಾಗಾದರೆ
ಹೆಣ್ಣನ್ನು ಪರಿಗ್ರಹಿಸಿದವರೆಲ್ಲರೂ ಕಾಮಿಗಳೇ ? ಹೆಣ್ಣಿಲ್ಲದವರು
ಲೋಕಕ್ಕೆ ಈಶ್ವರರಾಗುವರೋ ? ಹಾಗಾದರೆ ಆಂಜನೇಯ, ಭೀಷ್ಮಾದಿಗಳು
ಏಕೆ ಲೋಕೇಶ್ವರರಾಗಲಿಲ್ಲ ? ಆಗಲಿ ಈಗ ನಿಮ್ಮ ರಾಜನ ಎಡಭಾಗದ
ದೇಹದ ತಾಪನ್ನು ನೀವು ಹೋಗಲಾಡಿಸಿರಿ. ಬಲಭಾಗದ್ದನ್ನು ನಾನು
ಹೋಗಲಾಡಿಸುವೆನೆಂದು ಹೇಳಿ ಶಿವಮಂತ್ರದಿಂದ ಪೂತವಾದ ಭಸ್ಮವನ್ನು
ಜಂಗಮರ ಪಾದೋದಕದಿಂದ ಮಿಶ್ರಮಾಡಿ ದೇಹಕ್ಕೆ ಲೇಪಿಸಿದ ಕೂಡಲೆ
ಆ ಭಾಗದ ಜ್ವರವು ನಾಶವಾಗಿ ಎಡಭಾಗದ ದೇಹದಲ್ಲಿ ಒಂದಕ್ಕೆರಡರಂತೆ

ತಾಸವು ಹೆಚ್ಚಿತು. ದೊರೆಯು ತಾಪವನ್ನು ತಾಳಲಾರದೆ ಸಂಕಟ ಪಡುತ್ತಿದ್ದನು. ಮುನಿಗಳು ಮಾಡಿದ ಮಂತ್ರ, ತಂತ್ರಗಳು, ನಿಷ್ಫಲವಾದವು. ಆಗ ದೊರೆಯು ಆ ಶಿವಬಾಲಕನನ್ನು ಕೊಂಡಾಡಿ ತಮ್ಮಿಂದ ನಾನು ಜ್ವರಮುಕ್ತನಾಗಿ ಸುಖಿಯಾಗಬೇಕೇ ಹೊರತು ಇಲ್ಲವಾದರೆ ಸಾಯುವದೇ ಸಿದ್ಧ. ಆದ್ದರಿಂದ ತಾವು ಪ್ರಾಣದಾನಮಾಡಿ ಕಾಪಾಡಬೇಕೆಂದು ಬೇಡಿಕೊಳ್ಳಲು ಕರುಣಾರಸಭರಿತನಾದ ತಿರುಜ್ಞಾನ ಸಂಬಂಧಿಯು ಶಿವಮಂತ್ರ, ಶಿವತೀರ್ಥ ಪರಿಶುದ್ಧವಾದ ವಿಭೂತಿಯನ್ನು ಆತನ ದೇಹಕ್ಕೆ ಲೇಪನಮಾಡಲು ರಾಜನು ಜ್ವರ ವಿಮುಕ್ತನಾಗಿ ಅಮೃತಪಾನ ಮಾಡಿದವನಂತೆ ನಿರೋಗಿಯಾಗಿ ತನ್ನ ಮೊದಲಿನ ಗೂನು ಬೆನ್ನನ್ನು ಸಹ ಹೋಗಲಾಡಿಸಿಕೊಂಡು ಕುಣಪಾಂಡ್ಯನೆಂಬ ಬಿರುದನ್ನು ಬಿಟ್ಟು ಸುಂದರ ಪಾಂಡ್ಯನೆಂಬ ಹೆಸರಿನಿಂದ ಪ್ರಖ್ಯಾತನಾಗಿ ಶಿವಭಕ್ತಿ, ಶಿವಾಚಾರ ತತ್ಪರನಾಗಿರಲು ಜಿನಮುನಿಗಳು, ರೋಗವು ವೈದ್ಯನಿಂದ ಗುಣವಾಗುವದೇ ಹೊರತು ಅನ್ಯರಿಂದಲ್ಲ. ರೋಗವನ್ನು ವಾಸಿ ಮಾಡಿದ ಮಾತ್ರದಿಂದ ನೀವು ಮಹಾತ್ಮರಾಗಲಿಲ್ಲ. ಇರಲಿ ಈಗ ಒಂದು ಕಾಗದದ ಮೇಲೆ ಜಿನಮಂತ್ರವನ್ನೂ, ಮತ್ತೊಂದರಲ್ಲಿ ಶಿವಮಂತ್ರವನ್ನೂ ಬರೆದು ಎರಡನ್ನೂ ಉರಿಯುವ ಬೆಂಕಿಯಲ್ಲಿ ಹಾಕೋಣ ಯಾವದು ಉರಿದು ಹೋಗುವದೋ ಆ ಮತವು ನಿಸ್ಸಾರವಾದುದು ಈ ಮಾತು ನಿಮಗೆ ಸರಿ ಎನ್ನಿಸಿದ್ದರೆ ಬನ್ನಿರಿ ಎನ್ನಲು ಬಂಗಾರದೊಡನೆ ಕಬ್ಬಿಣವನ್ನೂ, ಸಕ್ಕರೆಯೊಡನೆ ಉಪ್ಪನ್ನೂ, ತೂಕ ಮಾಡುವದು ಯುಕ್ತವೇ? ಶಿವಮಂತ್ರವು ಜಿನಮಂತ್ರಕ್ಕೆ ಸಮನಾದೀತೇ? ಎಂದು ತಿರುಜ್ಞಾನ ಸಂಬಂಧಿಯು ಹೇಳುತ್ತಿರಲು ಬರೆದು ಸಿದ್ಧವಾದ ಎರಡೂ ಕಾಗದಗಳನ್ನು ಬೆಂಕಿಯಲ್ಲಿ ಹಾಕಲು ಶಿವಮಂತ್ರದ ಪತ್ರವು ಶೈವರಿಗೆ ಮುಖ ವಿಕಾಸವನ್ನೂ, ಜಿನಮಂತ್ರವು ಉರಿದು ಹೋಗಿ ಅವರ ಮನೋರಥ ಭಂಗವನ್ನೂ ಉಂಟುಮಾಡಲು ದೊರೆಯು ಶಿವಭಕ್ತರು ಗೆದ್ದರು. ಇನ್ನಾದರೂ ನೀವು ಸುಮ್ಮನಾಗಿರಿ ಎಂದು ಹೇಳಿದರೂ ಆ ಜೈನರು ಕೇಳದೆ ಅಯ್ಯಾ, ಯಾವುದನ್ನಾದರೂ ಮೂರು ಸಾರೆ ಪರೀಕ್ಷಿಸಬೇಕು. ಈಗ ಎರಡು ಸಾರೆ ಆಗಿದೆ ಇನ್ನೊಂದು ಸಾರೆ ಶಿವಮಂತ್ರ-ಜಿನಮಂತ್ರಗಳನ್ನು ಬರೆದ ಕಾಗದಗಳನ್ನು ಹರಿಯುತ್ತಿರುವ ಹೊಳೆಯಲ್ಲಿ ಹಾಕಿದರೆ ಯಾವದು ಮೇಲು ಮುಖವಾಗಿ ತೇಲುವದೋ ಅವರೇ ಗೆದ್ದವರೆನ್ನಲು ತಿರುಜ್ಞಾನ

ಸಂಬಂಧಿಯು ಅಯ್ಯಾ, ಸತ್ಯವನ್ನು ಎಷ್ಟು ಸಾರಿ ಬೇಕಾದರೂ ಪರೀಕ್ಷಿಸ ಬಹುದು ಅದಕ್ಕೆ ನಾವು ಹಿಂದೆಗೆಯುವದಿಲ್ಲ. ಆದರೆ ಕಡೆಯ ಸಲ ಸೋತ ವರಿಗೆ ಶಿಕ್ಷೆಯಾಗಬೇಕೆಂದು ಕೇಳಲು ಜೈನರು ಸೋತರೆ ಶೂಲಾರೋಹಣ ಮಾಡುವದಾಗಿ ಸಮ್ಮತಿಸಿದರು. ಆಗ ರಾಜನು ಸಕಲ ಸಮೂಹ ಸಮೇತ ನಾಗಿ ಕಾವೇರಿ ನದಿ ತೀರವನ್ನು ಸೇರಿ ಆ ಪತ್ರಗಳನ್ನು ಪ್ರವಾಹದಲ್ಲಿ ಹಾಕಿಸಿ ದನು. ಆಗ ಶಿವಮಂತ್ರ ಪತ್ರವು ಪ್ರವಾಹಕ್ಕೆ ಎದುರಾಗಿಯೂ, ಜಿನಮಂತ್ರ ಪತ್ರವು ಪ್ರವಾಹಾನುಸಾರವಾಗಿಯೂ ತೇಲಿದವು. ಇದನ್ನು ನೋಡಿ ರಾಜನು ಭಟರಿಂದ ಜೈನರನ್ನು ಹಿಡಿತರಿಸಿ ಶಿವಮತವನ್ನು ಮನ್ನಿಸಲು ತಿಳಿಸಿದನು. ತಿರುಜ್ಞಾನ ಸಂಬಂಧಿಯು ಶರಣಾಗತರಾದ ಅನೇಕ ಜೈನರನ್ನು ಶಿವದೀಕ್ಷಾ ವಿಧಿಯಿಂದ ಮುಕ್ತರನ್ನಾಗಿ ಮಾಡಿದನು.

## — ನಿಡುಮಾರಯ್ಯನ ಕಥೆಯು —

ವೀರಶೈವಾಚಾರ ತತ್ಪರನಾಗಿ, ಶಿವಶರಣರಿಗೆ ಪ್ರಾಣವನ್ನು ಕೊಟ್ಟು ಕಾಪಾಡಲು ಇಷ್ಟವುಳ್ಳವನಾಗಿದ್ದು ತನ್ನ ರಾಜ್ಯದ ಪ್ರಜೆಗಳೆಲ್ಲರೂ ಜಿನಭಕ್ತ ರಾದ್ದರಿಂದ ಅವರು ಎಂದಿಗೆ ಶಿವಭಕ್ತರಾಗುವರೋ ಎಂದು ಹಗಲಿರುಳು ಚಿಂತಿಸುತ್ತಿರುವ ನಿಡುಮಾರಯ್ಯನೆಂಬ ರಾಜನಿದ್ದನು. ಒಂದು ದಿವಸ ಆತನ ಬಳಿಗೆ ಒಬ್ಬ ಜಂಗಮನು ಬಂದು ತಿರುಜ್ಞಾನ ಸಂಬಂಧಿಗಳು ಜೈನರನ್ನು ಗೆದ್ದು ಶಿವಸಿದ್ಧಾಂತವನ್ನು ಸ್ಥಾಪಿಸಿದ ವರ್ತಮಾನವನ್ನು ಆತನಿಗೆ ಹೇಳಲು ರಾಜನು ಅತ್ಯಂತ ಸಂತುಷ್ಟನಾಗಿ ಭಕ್ತಿಭಾವದಿಂದ ಆ ತಿರುಜ್ಞಾನ ಸಂಬಂಧಿ ಗಳನ್ನು ಸನ್ಮಾನಪೂರ್ವಕವಾಗಿ ಕರೆಯಿಸಿಕೊಂಡು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಷೋಡಶೋಪಚಾರಗಳಿಂದ ಪೂಜಿಸಿ ಉಚಿತ ರಾಜ ಮರ್ಯಾದೆಗಳಿಂದ ಅವರನ್ನು ಮೆಚ್ಚಿಸಿ ತನ್ನ ರಾಜ್ಯದಲ್ಲಿ ಶಿವಭಕ್ತರೇ ಇಲ್ಲ ದಿರುವ ಸಂಗತಿಯನ್ನು ವಿಜ್ಞಾಪಿಸಿಕೊಂಡು ಅನಂತರ ಒಂದು ದಿವಸ ಜೈನ ಜನಸಮೂಹವನ್ನು ಕೂಡಿಸಿ, ಎಲೈ ಪ್ರಜೆಗಳೇ, ಈ ಸಿಂಹಾಸನದಲ್ಲಿ ಕುಳಿತು ಹೊಳೆಯುತ್ತಿರುವ ತಪೋನಿಧಿಗಳಾದ ತಿರುಜ್ಞಾನ ಸಂಬಂಧಿಗಳು ಪಾಂಡ್ಯ ದೇಶದಲ್ಲಿ ಸರ್ವ ಜೈನರನ್ನು ವಾದದಲ್ಲಿ ಗೆದ್ದು ಶಿವನೇ ಸರ್ವ ಶ್ರೇಷ್ಠನು. ವೇದೋತ್ತಮನು ಎಂದು ಶಿವಸಿದ್ಧಾಂತವನ್ನು ದೃಢಪಡಿಸಿ ಶರಣಾಗತರನ್ನು

ಶಿವದೀಕ್ಷಾ ವಿಧಿಯಿಂದ ಸತ್ಕರಿಸಿದ್ದಾರೆ. ಈಗ ನೀವು ಸಹ ಪಶುಪತಿಯನ್ನು ಮರೆದು, ಸರ್ವೋತ್ತಮವಾದ ಸಕಲಇಷ್ಟ ಪ್ರದವಾದ ಭಸ್ಮಲೇಪನವನ್ನು ತೊರೆದು ಭ್ರಷ್ಟರಾಗಿದ್ದೀರಿ. ಈಗಲಾದರೂ ಇವರ ಸದ್ಬೋಧೆಯಿಂದ ನಿಮ್ಮ ಅಜ್ಞಾನವನ್ನು ತೊಲಗಿಸಿ ಭಕ್ತಿಯಿಂದ ಶಿವಾಚಾರವನ್ನು ಪರಿಗ್ರಹಿಸಿ ಮುಕ್ತರಾಗಿರಿ ಎಂದು ಬೋಧಿಸಿ ಅದಕ್ಕೆ ಒಪ್ಪಿದವರಿಗೆ ಶಿವದೀಕ್ಷಾವಿಧಿಯನ್ನು ಕೊಡಿಸಿ ಸಂತುಷ್ಟನಾಗಿದ್ದನು.

## — ನಮಿಸಂದಿಯ ಕಥೆಯು —

ಪ್ರತಿದಿವಸ ಪರಶಿವನಿಗೆ ಸಾವಿರಾರು ತುಪ್ಪದ ದೀಪಗಳನ್ನು ಹಚ್ಚಿ ಸೇವೆ ಮಾಡುವದರಲ್ಲಿ ನಿರತನಾಗಿದ್ದ ನಮಿಸಂದಿಯೆಂಬ ಭಕ್ತನು ದ್ರಾವಿಡ ದೇಶದಲ್ಲಿರುವ ತಿರುವದೂರಲ್ಲಿ ವಾಸವಾಗಿದ್ದನು. ಆತನು ವ್ರತವನ್ನು ನೆರವೇರಿಸುವದಕ್ಕಾಗಿ ತನ್ನ ಹಣವೆಲ್ಲ ಖರ್ಚಾಗಿ ಹೋಗಲು ಮನೆ ಮನೆಗೂ ತುಪ್ಪವನ್ನು ಭಿಕ್ಷೆಮಾಡಿ ತನ್ನ ವ್ರತವನ್ನೂ, ಶಿವನ ಕೈಂಕರ್ಯವನ್ನೂ ನೆರವೇರಿಸುತ್ತ ಇದ್ದನು. ಇದನ್ನು ನೋಡಿ ಆ ಊರ ಸವಣರು ಅಸೂಯೆಯಿಂದ ಕೊರಗುತ್ತ ಆ ಜೋಗಿಗೆ ಯಾರೂ ತುಪ್ಪವನ್ನು ಹಾಕಕೂಡದೆಂದು ಕಟ್ಟು ಮಾಡಿದರು. ಆಗ ಆತನು ಎಂದಿನಂತೆ ಭಿಕ್ಷೆ ಎತ್ತಲು ಹೋಗಿ ತುಪ್ಪವನ್ನು ದೊರಕಿಸಿಕೊಳ್ಳಲಾರದೆ ಚಿಂತಾಕ್ರಾಂತನಾಗಿ ನನ್ನ ವ್ರತವನ್ನು ಹೇಗೆ ನೆರವೇರಿಸಿಕೊಳ್ಳಬೇಕೆಂದು ಯೋಚಿಸುತ್ತ ಶಿವದೇವಾಲಯಕ್ಕೆ ಬಂದು ದೀಪವು ಆರಿ ಹೋಗುತ್ತಿರುವದನ್ನು ನೋಡಿ ಸಹಿಸಲಾರದೆ ಇದನ್ನು ಕಣ್ಣಿನಿಂದ ನೋಡುವದಕ್ಕಿಂತ ಪ್ರಾಣವನ್ನೇ ಬಿಡುವದು ಒಳಿತೆಂದು ತಿಳಿದು ತನ್ನ ಕೈಯಲ್ಲಿರುವ ಕತ್ತಿಯನ್ನು ಹಿರಿದು ಕೊರಳನ್ನು ಕೊಯ್ದುಕೊಳ್ಳುವದಕ್ಕೆ ಉದ್ಯುಕ್ತನಾಗಲು ಆಗ ಭಕ್ತವತ್ಸಲನಾದ ಪರಶಿವನು ಪ್ರತ್ಯಕ್ಷನಾಗಿ ಬಂದು ಅವನ ಕೈಯನ್ನು ಹಿಡಿದು ಹೇ ಭಕ್ತಶ್ರೇಷ್ಠನೇ, ನಿನ್ನ ಇಷ್ಟಾರ್ಥವನ್ನು ಕೇವಲ ಪ್ರೀತಿಯಿಂದ ನೆರವೇರಿಸುವೆನು. ಕೇಳಿಕೋ ಎನ್ನಲು ದೇವರ ದೀಪವನ್ನು ಉರಿಸುವದಕ್ಕೆ ಸಾಕಷ್ಟು ತುಪ್ಪವನ್ನು ಕರುಣಿಸಬೇಕೆಂದು ಕೇಳಲು ಈಶ್ವರನು ದಯಾಭರಿತನಾಗಿ ನಸುನಕ್ಕು ಅಯ್ಯಾ, ಈ ಮೊದಲು ಲಿಂಗದ ಮುಂದೆ ನೀರನ್ನು ತುಂಬಿ ದೀಪವನ್ನು ಉರಿಸಿದ ಸೋಮನ್ನನೆಯಂತೆ

ನೀನು ಸಹ ಕೊಳದಲ್ಲಿರುವ ಜಲವನ್ನು ತಂದು ನಿನ್ನ ಇಷ್ಟಾನುಸಾರವಾಗಿ ದೀಪವನ್ನು ರಚಿಸು. ನಿನಗೆ ದ್ರೋಹವನ್ನು ಮಾಡಿದ ಆ ಪಾಪಾತ್ಮರ ಮನೆಯ ದನಕರುಗಳು ನಿಷ್ಕಾರಣವಾಗಿ ಸತ್ತುಹೋಗುವವು ಎಂದು ಹೇಳಿ ಅಂತರ್ಧಾನನಾದನು. ಆಗ ನಮಿನಂದಿಯು ಸಂತೋಷದಿಂದ ಕೊಳದ ನೀರನ್ನು ತುಂಬಿ ದೀಪವನ್ನು ಉರಿಸುತ್ತ ಮಹಿಮಾನ್ವಿತನಾಗಿ ಸಂತೋಷದಿಂದಿರಲು ಇತ್ತ ಜಿನಭಕ್ತರ ಮನೆಯ ಪಶುಗಳೆಲ್ಲವೂ ನಿಂತಲ್ಲಿಯೇ ಬಿದ್ದು ಸತ್ತು ಹೋದವು. ಇದನ್ನು ನೋಡಿ ಕೆಲವರು ಇದೇನಾಶ್ಚರ್ಯವು ? ನಮ್ಮ ದನಗಳು ಸಾಯಲು ಕಾರಣವೇನು ? ನಾವು ಜಿನಧರ್ಮದಲ್ಲಿ ಯಾವ ಕೊರತೆಯೂ ಉಂಟಾಗದಂತೆ ನಡೆದುಕೊಳ್ಳುತ್ತಿದ್ದೇವೆ ಅನ್ನುತ್ತಿರಲು ಬೇರೆ ಕೆಲವರು ಶಿವಭಕ್ತನಾದ ಭಿಕ್ಷುಕನಿಗೆ ನಾವು ತುಪ್ಪದ ಭಿಕ್ಷೆಯನ್ನು ನೀಡದೆ ನಿಲ್ಲಿಸಿದೆವು. ಅವನು ಈಗ ಕೊಳದ ನೀರನ್ನು ಹಾಕಿ ದೀಪ ಉರಿಸುತ್ತಿರುವನು. ಆದ್ದರಿಂದ ಅವನು ಮಹಿಮಾ ಪುರುಷನಿರಲೇಬೇಕು. ಅಂತಹ ಮಹಾಮಹಿಮನಿಗೆ ನಾವು ತುಪ್ಪವನ್ನು ಕೊಡದ್ದರಿಂದಲೇ ತಮಗೆ ಇಂತಹ ಕೇಡು ಉಂಟಾಗಿರುವದೆಂದು ಹೇಳಲು ಸರ್ವರೂ ಸೇರಿ ತಮಗೆ ಇನ್ನೂ ಯಾವ ಕೇಡು ಬರುವದೋ ಎಂದು ಹೆದರಿ ಆತನನ್ನು ಮೊರೆಹೊಗಬೇಕೆಂದು ಬಗೆದು ಆತನಲ್ಲಿಗೆ ಬಂದು ಕೊಳದ ನೀರು ಹಾಕಿ ದೀಪ ಉರಿಸುತ್ತಿರುವದನ್ನು ನೋಡಿ ಅತ್ಯಂತ ವಿಸ್ಮಿತರಾಗಿ ಕೈಮುಗಿದು ಸ್ವಾಮೀ, ಗುರುವರ್ಯರೇ, ನಮ್ಮ ಅಪರಾಧವನ್ನು ಕ್ಷಮಿಸಿ ನಮ್ಮ ದನಕರುಗಳನ್ನು ಬದುಕಿಸಿ ನಮಗೆ ಅಭಯದಾನವನ್ನು ಮಾಡಿ ಕಾಪಾಡಬೇಕೆಂದು ಅತಿ ದೈನ್ಯವಾಗಿ ಬೇಡಿಕೊಳ್ಳಲು ಆತನು ಅವರೆಲ್ಲರನ್ನು ಕರುಣಾಕಟಾಕ್ಷದಿಂದ ನೋಡಿ ಶಿವನ ಮಹಿಮಾಮೃತವನ್ನು ಬೀರಿ ಪರಿಶುದ್ಧರನ್ನಾಗಿ ಮಾಡಿ ಶಿವದೀಕ್ಷೆಯನ್ನು ಕೊಡಿಸಿ ಶಿವಮಂತ್ರೋಪದೇಶವನ್ನು ಮಾಡಿ ಸತ್ತುಹೋಗಿದ್ದ ಪಶುಗಳನ್ನು ಬದುಕಿಸಿ ಕಾಪಾಡಿದನು.

## — ಸಾಂಖ್ಯತೊಂಡನ ಕಥೆ —

ಚೋಳದೇಶದಲ್ಲಿರುವ ಶಾಂತಮಂಡಲವೆಂಬ ಊರಲ್ಲಿ ವಾಸಮಾಡುತ್ತಿದ್ದ ಒಂದು ಜೈನ ಕುಟುಂಬದಲ್ಲಿ ಹುಟ್ಟಿ ಬಾಲ್ಯವನ್ನು ಕಳೆದ ನಂತರ ಯೌವ್ವನವು ತಲೆದೋರಲು ಪೂರ್ವಾರ್ಜಿತ ಪುಣ್ಯ ವಿಶೇಷದಿಂದ ವಿವೇಕ

ವುಂಟಾಗಿ ಶಿವಮತದಲ್ಲಿ ಭಕ್ತಿ ಯುಂಟಾಗಿ ಸಾಂಖ್ಯತೊಂಡನೆಂಬ ಹೆಸರಿನಿಂದ ಮೆರೆಯುತ್ತಿದ್ದ ಒಬ್ಬ ಬಾಲಕನಿದ್ದನು. ಆತನು ಒಂದು ದಿವಸ ತನ್ನ ಮನಸ್ಸಿನಲ್ಲಿ ಎಲೈ ಪರಮೇಶ್ವನೇ, ಇಲ್ಲಿ ಎಲ್ಲರೂ ಜೈನರೇ ಇದ್ದಾರೆ ಒಬ್ಬನೂ ಶಿವ ಭಕ್ತನಿಲ್ಲ. ಇವರುಗಳ ಮಧ್ಯದಲ್ಲಿ ನಾನೊಬ್ಬನೇ ಬಾಳುವದು ಹೇಗೆ? ಎಂದು ಹಂಬಲಿಸುತ್ತ ಸುತ್ತುಮುತ್ತಲೂ ಎಲ್ಲಿಯಾದರೂ ಶಿವಾಲಯವಿರುವದೇ ಎಂದು ಹುಡುಕಿಕೊಂಡು ಬರುತ್ತಿರಲು ಆ ಊರ ಹೊರಭಾಗದಲ್ಲಿ ಒಂದು ಶಿವ ದೇವಸ್ಥಾನವನ್ನು ಕಂಡು ಅಲ್ಲಿ ಪ್ರವೇಶಿಸಿ ಹೇ ಪರಮೇಶ್ವರನೇ, ಈ ದಿನ ನಿನ್ನ ಪಾದಕಮಲಗಳನ್ನು ಕಂಡು ಧನ್ಯನಾದೆನು. ಈ ಪ್ರದೇಶದಲ್ಲಿ ಶಿವಮತವು ತಲೆಎತ್ತುವವರೆಗೂ ನಾನು ನಿನ್ನನ್ನು ತ್ರಿಕಾಲದಲ್ಲಿ ಪೂಜಿಸುತ್ತಿರುವನು. ಇಲ್ಲಿ ತಾವರೆ ಹೂಗಳು ದೊರಕದಿರುವದರಿಂದ ದಿನಕ್ಕೊಂದು ಹೊತ್ತಿನಲ್ಲಿ ಒಂದೊಂದು ತೂಕದ ಕಲ್ಲಿನಿಂದ ಹೊಡೆದು ನಿನ್ನನ್ನು ಪೂಜಿಸುವೆನು. ಈ ಪೂಜೆಗೆ ನೀನು ಒಪ್ಪಿಕೊಳ್ಳಬೇಕು. ಎಂದು ವಿಜ್ಞಾಪಿಸಿ ಅಂದಿನಿಂದ ಹಾಗೆಯೇ ಮಾಡುತ್ತಿದ್ದನು. ಹೀಗಿರಲು ಒಂದು ದಿವಸ ದೊಡ್ಡ ಮಳೆ ಸುರಿದು ಅಲ್ಲೋಲ ಕಲ್ಲೋಲವಾಗಿ ಸಮುದ್ರ ಉಕ್ಕಿದಂತೆ ಎಲ್ಲ ಕಡೆಗೂ ಜಲಮಯವಾಗಲು ಮತ್ತು ಊರ ಮುಂದಿನ ಹೊಳೆಯು ದಡವನ್ನು ಮೀರಿ ಹರಿಯುತ್ತಿರಲು ಇದನ್ನು ನೋಡಿ ಶಿವಪೂಜೆಗೆ ವಿಘ್ನವಾಗಿ ತನ್ನ ವ್ರತ ಭಂಗವಾಗುವದೆಂಬ ಭಯದಿಂದ ಮೂರು ದಿವಸ ಉಪವಾಸ ಇದ್ದು ನಾಲ್ಕನೆಯ ದಿವಸ ಪ್ರವಾಹವು ಕಡಿಮೆಯಾಗಲು ನದಿಯನ್ನು ದಾಟಿ ಬಂದು ಮೂರು ದಿವಸಗಳ ಒಂಬತ್ತು ಹೊತ್ತುಗಳ ಪೂಜೆ ಮಾಡಲು ಬಿಡಿಗಲ್ಲುಗಳನ್ನು ಹುಡುಕಿ ಅವು ದೊರೆಯದಿರಲು ಒಂಬತ್ತು ಸಣ್ಣ!ಕಲ್ಲುಗಳನ್ನೂ, ಒಂದು ದೊಡ್ಡ ಕಲ್ಲನ್ನೂ ತಂದು ಎಲೈ ಪರಮೇಶ್ವರನೇ, ಕಳೆದ ಮೂರುದಿವಸಗಳ ಪೂಜೆಯನ್ನು ಸಲ್ಲಿಸಿದ್ದೇನೆ ತೆಗೆದುಕೋ ಎಂದು ಹೇಳಿ ಆ ಕಲ್ಲನ್ನು ಲಿಂಗದ ಮೇಲೆ ಹಾಕಲು ಪರಶಿವನು ಪ್ರತ್ಯಕ್ಷನಾಗಿ ಆ ಕಲ್ಲನ್ನು ಓರೆನೂಕಿ ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ಬೇಕಾದ ವರವನ್ನು ಬೇಡು ಎನ್ನಲು .ಆತನು ಸಂತೋಷದಿಂದ ನಮಸ್ಕರಿಸಿ ಹೇ ಭಕ್ತವತ್ಸಲನೇ, ನೀನು ನಿತ್ಯನೆಂದು ಹೇಳುವದಕ್ಕೆ ನಿನಗಿರುವ ಮೃತ್ಯುಂಜಯತ್ವವೂ, ಸರ್ವ ದೇವ ಪೂಜ್ಯನೆಂದು ಹೊಗಳುವದಕ್ಕೆ ನಾರಾಯಣನು ಪೂಜಿಸಿದ ನೇತ್ರಕಮಲವೂ, ನೀನು ಆದ್ಯಂತ ರಹಿತನೆಂದು ಹೇಳಲು ಪರಿಬ್ರ

ಹ್ಮರು ಹಂದಿ, ಹಂಸಗಳಾದುದೂ, ಪ್ರಪಂಚದಲ್ಲಿ ನೀನೇ ಪುರುಷನೆಂಬು ದಕ್ಕೆ ವಿಷ್ಣುವು ನಿನಗೆ ಪತ್ನಿಯಾದುದೂ, ಲೋಕರಕ್ಷಕ ನೆಂಬುವಕ್ಕೆ ಕೊರಳಲ್ಲಿರುವ ವಿಷವೂ, ದಯಾಸಾಗರನೆಂಬುದಕ್ಕೆ ಈಗ ನೀನು ಪ್ರತ್ಯಕ್ಷ ನಾದುದೂ ಸಾಕ್ಷಿಯಾಗಿರುವಾಗ ನಾನು ಹೊಗಳುವದಕ್ಕಾಗುವದೇ ? ಉಳಿದ ಮಾತುಗಳಿಂದೇನು ? ಬಿಳಿಯ ತಾವರೆಯಿಂದ ನಾರಾಯಣನೂ, ಕೆಂಪು ಕಮಲದಿಂದ ಬ್ರಹ್ಮನೂ, ಮಂದಾರ ಪಾರಿಜಾತಗಳಿಂದ ಇಂದ್ರನೂ, ಅರ್ಕ ಪುಷ್ಪದಿಂದ ಸೂರ್ಯನೂ, ಕಪ್ಪು ಕಮಲದಿಂದ ಚಂದ್ರನೂ, ರತ್ನಗ ಳಿಂದ ಆದಿಶೇಷನೂ ಶಿರಸ್ಸುಗಳಿಂದ ರಾವಣನೂ, ಪೂಜೆಮಾಡಿ ಧನ್ಯ ರಾದರು. ನಾನು ಮಾತ್ರ ಕಲ್ಲುಗಳಿಂದ ಪೂಜಿಸಿದರೂ ಒಲಿದೆಯಲ್ಲಾ ! ಹೇ ಪರಮೇಶ್ವರನೇ, ನಿನ್ನ ಮಹಿಮೆಯನ್ನು ವಿಷ್ಣು, ಬ್ರಹ್ಮ, ಇಂದ್ರಾದಿ ಗಳು ಕಾಣದಿರುವಾಗ ನಾನೇನು ಬಲ್ಲೆನು ? ನಿನ್ನ ಭಕ್ತನಾದ ಪ್ರಮ ಥರೂ, ಶಿವಶರಣರೂ, ಬಸವೇಶ್ವರನೂ, ಬಲ್ಲರಲ್ಲದೆ ನಾನು ಕಲ್ಲು ಹಾಕು ವದನ್ನು ಬಿಟ್ಟು ಉಳಿದದ್ದನ್ನು ಕಾಣೆನು. ನನಗೆ ಮತ್ತಾವ ವರವೂ ಬೇಡ. ಈ ದೇಶವೆಲ್ಲವೂ ಶಿವಭಕ್ತರ ನೆಲೆಬೀಡಾಗಬೇಕೆಂದು ಬೇಡಲು ಶಿವನು ಹಾಗೆಯೇ ಆಗಲೆಂದು ಹೇಳಿ ಅಂತರ್ಧಾನನಾಗಲು ಆ ಶಿವಾಜ್ಞೆಯಿಂದ ಚೋಳಮಂಡಲ ದೇಶವೆಲ್ಲವೂ ಶಿವಭಕ್ತ ಮಯವಾಯಿತೆಂದು ಏಕಾಂತ ರಾಮಯ್ಯನು ಜೈನ ಜನರನ್ನು ಕುರಿತು ಹೇಳಿದನು.

## ಕೋಹೂರ ಬೊಮ್ಮಯ್ಯನ ಕಥೆಯು

ಕೋಹೂರೆಂಬ ಪಟ್ಟಣದಲ್ಲಿ ಶಿವಭಕ್ತಿ ಸದಾಚಾರ ಸಂಪನ್ನನಾದ ಬೊಮ್ಮಯ್ಯನೆಂಬ ಭಕ್ತವರೇಣ್ಯನು ಇದ್ದನು. ಈತನ ಭಕ್ತಿ ಭಾವವನ್ನು ಸವಣರು ತಿಳಿದು ಅಸೂಯೆಯಿಂದ ಅವನನ್ನು ಮಾನವಿಲ್ಲದವನನ್ನಾಗಿಮಾಡಿ ಓಡಿಸಿಬಿಡಬೇಕೆಂದು ಯೋಚಿಸಿ ರಾಜನ ಬಳಿಗೆ ಬಂದು ಆತನನ್ನು ವಾದದಲ್ಲಿ ಸೋಲಿಸುವದಕ್ಕೆ ಪ್ರಯತ್ನಿಸಿ ತಾವೇ ಸೋತು ಹೋಗಿ ಓಹೋ ! ಈ ಬಡ ಜಂಗಮನು ವಾದದಲ್ಲಿ ನಮ್ಮನ್ನು ಗೆದ್ದರೇನಾಯಿತು ? ಪ್ರತ್ಯಕ್ಷ ಪ್ರಮಾಣ ಗಳಿಂದ ತನ್ನ ಶಿವಸಿದ್ಧಾಂತವನ್ನು ಸ್ಥಿರ್ಧಾರಮಾಡಿ ತೋರಿಸಲೆಂದು ಹೇಳುತ್ತ ಎಲೈ— ಬೊಮ್ಮಯ್ಯಾ, ನಿನ್ನ ಮಹಿಮೆಯಿಂದ ಈ ಊರ ಮುಂದಿರುವ

ಆಲದ ಮರವನ್ನು ಸುಡು ನಾವು ಬದುಕಿಸುತ್ತೇವೆ. ಇಲ್ಲವಾದರೆ ನಾವು ಸುಟ್ಟರೆ ನೀನು ಬದುಕಿಸು ಈ ಪಂಥದಲ್ಲಿ ಯಾರು ಮಹಿಮೆಯನ್ನು ತೋರು ವರೋ ಅವರೇ ಗೆದ್ದವರು. ಎಂದು ಹೇಳಲು ಆ ಭಕ್ತನು ನಸುನಕ್ಕು ಆಹಾ! ಎಷ್ಟು ಚನ್ನಾಗಿ ಹೇಳಿದಿರಿ ? ಈ ಮರವು ಹಸಿದಾಗಿದ್ದು ಹಸಿದವರಿಗೆ ಹಣ್ಣಿ ನಿಂದಲೂ, ದಾರಿಗರಿಗೆ ನೆರಳಿನಿಂದಲೂ, ನಿರಾಲಂಬವಾದ ಪಕ್ಷಿಗಳಿಗೆ ಮನೆ ಮಾಡುವದಕ್ಕೆ ಆಸರೆಯಾಗಿಯೂ ಪರೋಪಕಾರ ಮಾಡುತ್ತಿರುವದನ್ನು ನೋಡಿಯೂ ಸಹ ಶಿವಭಕ್ತರು ಸುಡುತ್ತಾರೆಯೇ ? ನೀವೇ ಈ ಕೆಲಸ ಮಾಡಿ ದರೆ ಪುನಃ ಚಿಗುರೇರುವಂತೆ ಮಾಡುವೆನೆಂದು ಹೇಳಲು ಆ ಜೈನರು ಬೊಮ್ಮ ಯ್ಯನ ಪರೋಪಕಾರ ಬುದ್ಧಿಯನ್ನು ಹಾಸ್ಯಮಾಡುತ್ತ ತಮ್ಮ ತಪೋಬಲ ದಿಂದ ಆ ಮರವನ್ನು ಕೂಡಲೇ ಸುಡಲು ಆ ಭಕ್ತನು ಶಿವಮಂತ್ರದಿಂದ ವಿಭೂತಿ ಯನ್ನು ಮಂತ್ರಿಸಿ ಆ ವೃಕ್ಷಕ್ಕೆ ಲೇಪಿಸಲು ಮೊದಲಿಗಿಂತಲೂ ಇಮ್ಮಡಿಯಾಗಿ ಮರವು ಚಿಗುರೇರಲು ಅವರು ಅವಮಾನಿತರಾಗಿ ಹೋದರು. ನಂತರ ಬೊಮ್ಮ ಯ್ಯನು ಅನೇಕ ಶಿವದೇವಾಲಯಗಳನ್ನು ಕಟ್ಟಿಸಿ ಶರಣಾಗತರಾದ ಭಕ್ತರಿಗೆ ಶಿವದೀಕ್ಷಾ ವಿಧಿಯನ್ನು ಕೊಟ್ಟು ಕಾಪಾಡಿದನೆಂಬುದನ್ನು ನೀವು ಕೇಳಿಲ್ಲವೇ? ಇದೂ ಅಲ್ಲದೆ ಹೇಳುತ್ತೇನೆ ಕೇಳಿರಿ.

### — ದಾಸಿಮಯ್ಯ, ಸುಗ್ಗಲದೇವಿಯರ ಕಥೆಯು —

ಹೊಟ್ಟಲಕೆರೆ ಎಂಬ ಊರಲ್ಲಿ ಏಳುನೂರು ಜೈನಬಸದಿಗಳಿಗೂ, ಇಪ್ಪತ್ತು ಸಾವಿರ ಜೈನ ಸನ್ಯಾಸಿಗಳಿಗೂ ಗುರುವಾಗಿ ಮಂತ್ರ, ತಂತ್ರಗಳಿಂದ ಕಾಲಯಾಪನೆ ಮಾಡುತ್ತಿದ್ದ ಪುಷ್ಪಸೇನ ಎಂಬ ಪಂಡಿತನಿದ್ದನು. ಆತನ ಭಕ್ತನಾಗಿ ಜಯಸಿಂಹನೆಂಬ ರಾಜನು ರಾಜ್ಯವಾಳುತ್ತಿದ್ದನು. ಆ ರಾಜನ ಹೆಂಡತಿಯಾದ ಸುಗ್ಗಲದೇವಿಯು ಮಹಾಶಿವಭಕ್ತಳಾಗಿದ್ದು ಒಮ್ಮೆ ಅವಳು ತನ್ನ ಗುರುಗಳಾದ ದಾಸಿಮಯ್ಯನವರನ್ನು ಅರಮನೆಗೆ ವೈಭವಪೂರ್ಣವಾಗಿ ಕರೆಯಿಸಿಕೊಂಡು ಸಮಸ್ತ ರಾಜೋಪಚಾರಗಳಿಂದ ಪೂಜೆಯನ್ನು ಮಾಡಿ ಸಕಲ ಸಾಮಗ್ರಿಗಳನ್ನು ಕೊಟ್ಟು ಸತ್ಕರಿಸಿದಳು. ಗುರುವಾದ ದಾಸಿಮ ಯ್ಯನು ಸಕಲ ವಾದ್ಯ, ಗೀತ, ತಾಳ, ಮೇಳದೊಂದಿಗೆ ಲಿಂಗಾರ್ಚನೆಯನ್ನು ಅತಿ ವಿಜೃಂಭಣೆಯಿಂದ ಮಾಡುತ್ತ ಸುಖವಾಗಿದ್ದನು. ಇದನ್ನು ನೋಡಿ

ಜೈನ ಸನ್ಯಾಸಿಗಳು ಸಹಿಸಲಾರದೆ ರಾಜನ ಬಳಿಗೆ ಬಂದು ಆಯ್ಯಾ, ನಿನ್ನ ರಾಜ್ಯದಲ್ಲಿ ನಡೆಯುವ ಅನ್ಯಾಯವನ್ನು ಏನೆಂದು ಹೇಳೋಣ ? ತಮ್ಮ ಪತ್ನಿಯವರಾದ ರಾಣಿಯವರು ಯಾವನೋ ಒಬ್ಬ ಶಿವಜೋಗಿಯನ್ನು ಅರಮನೆಗೆ ಬರಮಾಡಿಕೊಂಡು ಅವನನ್ನು ಸತ್ಕರಿಸಿ ಸಮಸ್ತ ಜೈನ ಮಂಡಲಿಗೆ ಅವಮಾನಮಾಡಿ ಸ್ವಧರ್ಮವನ್ನು ತೊರೆದು ಶಿವಕಥೆಯನ್ನು ಕೇಳುತ್ತಿದ್ದಾಳೆ. ಈ ಅನ್ಯಾಯವನ್ನು ನೋಡಿ ನಾವು ಹೇಗೆ ಸುಮ್ಮನಿರಬೇಕು ? ನೀನು ಮೊದಲು ಆ ಶಿವಭಕ್ತನನ್ನು ಹೊರಗೆ ಹಾಕಿ ನಮ್ಮ ಜಿನಧರ್ಮವನ್ನು ಕಾಪಾಡಬೇಕು ಇಲ್ಲವಾದರೆ ಮಹಾ ಮಹಾಂತರು ಕೋಪಗೊಳ್ಳುವರು. ಇದರಿಂದ ನಿನಗೆ ಕೇಡು ತಪ್ಪದು ಎಂದು ಬೆದರಿಸಿ ದೂರಿಕೊಂಡರು. ಆಗ ರಾಜನು ಕೋಪಾವಿಷ್ಟನಾಗಿ ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಾ ಅಂತಃಪುರವನ್ನು ಪ್ರವೇಶಿಸಿ ತನ್ನ ಪ್ರಿಯಪತ್ನಿಯನ್ನು ಕುರಿತು ಎಲೈ— ರಮಣಿಯೇ, ನೀನು ಜಿನಭಕ್ತನಾದ ನನ್ನ ಪತ್ನಿಯಾಗಿದ್ದು ಹೀಗೆ ಅವಮಾನಾಸ್ಪದ ಕೆಲಸಮಾಡಬಹುದೇ ? ಪತಿಯೇ ಪರದೈವವೆಂಬುದನ್ನು ಮರೆತುಬಿಟ್ಟೆಯಾ ? ಗಂಡನಿಗೆ ಒಂದು ಮತ, ಹೆಂಡತಿಗೆ ಒಂದು ಮತ ಬೋಧಿಸತಕ್ಕ ಗುರುಗಳು ಈ ಲೋಕದಲ್ಲಿ ಯಾರಾದರೂ ಉಂಟೇ ? ಇನ್ನು ಇಂತಹ ಮೂಢಕೃತ್ಯ ಬಿಟ್ಟುಬಿಡು. ನಮಗೆ ಇದರಿಂದ ನಷ್ಟಸಂಭವಿಸುವದು. ಕಾರಣ ನೀನು ಬೇಗನೆ ಹೋಗಿ ಆ ಶಿವಸನ್ಯಾಸಿಯನ್ನು ಹೊರಹೊರಡಿಸು. ಈ ನನ್ನ ಮಾತುಗಳನ್ನು ಖಂಡಿತವಾಗಿ ನಡೆಯಿಸು ಎಂದು ನುಡಿಯಲು ಆಕೆಯು ರೋಷಾವೇಶದಿಂದ ಹೇ— ರಮಣನೇ, ಗಂಡ ಹೆಂಡಂದಿರಿಗೆ ಬೇರೆ ದೈವವಿರಬಾರದು ನಿಜ. ಆದರೆ ನಾನು ಶಿವನೇ ಸರ್ವೋತ್ತಮನೆಂದೂ, ಶಿವಮತವೇ ಯೋಗ್ಯವೆಂದೂ ತಿಳಿದಿದ್ದೇನೆ. ನನ್ನಲ್ಲಿ ನಿನಗೆ ಅನುರಾಗವಿರದಿದ್ದರೆ ಬೇರೆ ವಿವಾಹ ಮಾಡಿಕೊಳ್ಳಬಹುದು. ನಾನೇ ನಿನಗೆ ಹೆಂಡತಿಯಾಗಬೇಕಿದ್ದರೆ ಈಗ ಶಿವಮತವನ್ನು ಅನುಸರಿಸು. ಈ ಮತಗಳಲ್ಲಿ ಹೆಚ್ಚುಕಡಿಮೆ ಪ್ರತ್ಯಕ್ಷವಾಗಿ ತಿಳಿಯಬೇಕಾದರೆ ಜೈನಮಂಡಲಿಯವರನ್ನು ನೆರೆಯಿಸು. ನನ್ನ ಗುರುಗಳೂ ಅಲ್ಲಿಗೆ ಬರಲಿ. ವಾದದಲ್ಲಿ ಜಯಶೀಲರಾದವರಿಗೆ ನಾವಿಬ್ಬರೂ ಶಿಷ್ಯರಾಗೋಣ ಎಂದು ನುಡಿದ ಹೆಂಡತಿಯ ಜಾಣ್ಮೆಯನ್ನು ಒಪ್ಪಿಕೊಂಡು ರಾಜನು ತನ್ನ ಗುರುಗಳಾದ ಪುಷ್ಪಸೇನ

ಪಂಡಿತರನ್ನೂ ಯಾವತ್ತೂ ಜೈನ ಸನ್ಯಾಸಿಗಳನ್ನೂ, ಜೈನ ಮಂಡಲಿಯವರನ್ನೂ ಸಭೆಗೆ ಬರಮಾಡಿ ಸುಮ್ಮನೆ ಕುಳಿತಿರಲು ಸುಗ್ಗಲ ದೇವಿಯು ಸಕಲ ಮರ್ಯಾದೆಗಳಿಂದ ದಾಸಿಮಯ್ಯನವರನ್ನು ಸಭೆಗೆ ಕರೆಯಿಸಿಕೊಂಡು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ತಾನು ಸಖೀಜನರೊಡನೆ ಅವರ ಸೇವೆಮಾಡುತ್ತ ಕುಳಿತಿರಲು ಜೈನ ಸನ್ಯಾಸಿಗಳು ತಮ್ಮ ವಾಗ್ವೈಖರಿಯಿಂದ ಮಂತ್ರ, ತಂತ್ರ, ಮಹೇಂದ್ರ ಜಾಲಗಳಿಂದ ವಾದದಲ್ಲಿ ಸೋಲಿಸಲು ಪ್ರಯತ್ನಿಸಲು ದಾಸಿಮಯ್ಯನು ವೇದಾಗಮ ಪುರಾಣ ತರ್ಕವೈಶೇಷಿಕಾದಿಗಳಿಂದ, ಶಾಸ್ತ್ರವಾದದಿಂದ "ಶಿವಸರ್ವೋತ್ತಮತ್ವ"ವನ್ನು ಸ್ಥಾಪಿಸಿ ಲೋಕದ ಸೃಷ್ಟಿ, ಸ್ಥಿತಿ, ಲಯಗಳಿಗೆ ರುದ್ರನೇ ಕಾರಣನಲ್ಲದೆ ಮತ್ತಾರೂ ಇಲ್ಲವೆಂದೂ, "ಲಿಂಗಮಧ್ಯೇ ಜಗತ್ಸರ್ವಂ" ಎಂಬ ವಾಕ್ಯದಂತೆ ಈ ಜಗತ್ತು ಶಿವಲಿಂಗದ ಮಧ್ಯದಲ್ಲಿ ಅಡಗಿ ಹೋಗುವದೆಂದೂ "ಲಿಂಗಬಾಹ್ಯಾತ್ ಪರಂನಾಸ್ತಿ" ಎಂಬ ವಚನದಂತೆ ಪರಿಪೂರ್ಣನಾದವನು ಶಿವನಲ್ಲದೆ ಬೇರೆ ಯಾರೂ ಇಲ್ಲವೆಂದೂ ಪರಮೇಶ್ವರನ ಸರ್ವಕರ್ತೃತ್ವ, ಭೋಕ್ತೃತ್ವ, ಸರ್ವಾಂತರ್ಯಾಮಿತ್ವಗಳನ್ನು ಸಿದ್ಧಾಂತಮಾಡಿ ಶಿವಾಧಿಕ್ಯವನ್ನು ಪ್ರಚಾರಗೊಳಿಸಿದನು. ಇದನ್ನು ನೋಡಿ ಜೈನ ಮಂಡಲಿಯವರು ಒಬ್ಬರಿಗೊಬ್ಬರು ಪಿಸುಗುಟ್ಟುತ್ತಿರಲು ಅವರಲ್ಲಿ ಒಬ್ಬನು ಈಶ್ವರನು ಸರ್ವಾಂತರ್ಯಾಮಿಯಾಗಿದ್ದರೆ ಶಿವಭಕ್ತರು ಶಿವಾಲಯಕ್ಕೆ ಹೋಗಿ ಏಕೆ ಪೂಜೆಮಾಡಬೇಕು ? ಅವನು ಎಲ್ಲ ಜನರಲ್ಲಿಯೂ, ಪ್ರಾಣಿಗಳಲ್ಲಿಯೂ ದೇಹವಾಗಿರುವನೇ ? ಜೀವನಾಗಿರುವನೇ ? ಮನಸ್ಸಾಗಿರುವನೇ ? ಎಂದು ಪ್ರಶ್ನೆಮಾಡಲು ದಾಸಿಮಯ್ಯನು— ರಾಜನು ರಾಜ್ಯವನ್ನೆಲ್ಲಾ ಆವರಿಸಿ ಕೊಂಡಿರುವನು ಎಂದರೆ ರಾಜನೇ ಸಕಲ ಭಾಗಗಳಲ್ಲಿ ವಾಸಮಾಡಿಕೊಂಡಿರುವನೆಂದು ಅರ್ಥ ಮಾಡುವಿರೋ ? ಅಲ್ಲ. ಇದು ಸಮಂಜಸವಲ್ಲ. ರಾಜರೂಪವಾದ ರಾಜಾಜ್ಞೆಯು ಈ ದೇಶವನ್ನೆಲ್ಲ ಆವರಿಸಿಕೊಂಡಿರುವಂತೆ ಶಿವರೂಪವಾದ ಶಿವಶಕ್ತಿಯು ಲೋಕದಲ್ಲೆಲ್ಲಾ ಹರಡಿಕೊಂಡಿರುವದು. ಇದೇ ಈಶ್ವರನ ಜಗದ್ವ್ಯಾಪಕತ್ವವು. ಶಿವನು ಜಗದ್ರೂಪನಾಗಿರುವನೆಂಬುದಕ್ಕೆ ಹೀಗೆ ಅರ್ಥ ಮಾಡಿರಿ. ಒಂದು ಪಾತ್ರೆಯಲ್ಲಿಯ ಜಲದಲ್ಲಿ ಪ್ರತಿಬಿಂಬಿಸಿದ ಸೂರ್ಯನು ಆ ನೀರಲ್ಲಿಯೇ ಇರುವನೆಂದರೆ ಹೇಗೆ ? ಹಾಗಲ್ಲ. ತೇಜೋರೂಪನಾದ ಸೂರ್ಯನು ಪಾತ್ರೆ, ಜಲ, ಪ್ರತಿಬಿಂಬಗಳಿಗೆ ಭಿನ್ನನಾಗಿ ಹೊಳೆ

ಯುವ ಸೂರ್ಯನಂತೆ ತೇಜೋರೂಪನಾದ ಶಿವನು ತನು, ಮನೋವೃತ್ತಿ ಗಳಲ್ಲಿ ಪ್ರತಿಫಲಿಸಿ ಅವುಗಳನ್ನು ಬೆಳಗುತ್ತಿದ್ದರೂ ತಾನು ಅವುಗಳನ್ನು ಹೊಂದದೆ ಸ್ವಯಂ ಜ್ಯೋತಿಃ ಸ್ವರೂಪನಾಗಿರುವನೆಂದು ಭಾವವು. "ಸರ್ವೋ ವೈರುದ್ರಃ" "ವಿಶ್ವಾಧಿಕಃ ಪಶೂನಾಂಪತಿಃ" ಎಂದು ವೇದವಚನವು ಇರುವದ ರಿಂದ ಜಗದ್ರೂಪತ್ವ, ಭಿನ್ನತ್ವಗಳು ಈಶ್ವರನಿಗೆ ಸಿದ್ಧವಾಗಿರುವವು. ಶಿವನು ಸರ್ವಾಂತರ್ಯಾಮಿಯಾಗಿದ್ದರೂ ಎಲ್ಲ ಕಡೆಗೆ ಒಂದೇ ಸಮನಾಗಿ ಪರಿಪೂರ್ಣ ನಾಗಿರುವನೆಂದು ಹೇಳಲು ಬರುವದಿಲ್ಲ. ಯಾಕಂದರೆ ಸ್ವಾತಿ ಮಳೆಯ ಹನಿ ಗಳು ದೇಶದಲ್ಲೆಲ್ಲ ಸುರಿಯುವವು. ಆದರೆ ಮುಕ್ತಾ ಪುಟಗಳಲ್ಲಿ ಉದುರಿದ ಜಲ ಬಿಂದುಗಳು ಮಾತ್ರ ಮುತ್ತಾಗುವವು. ಅಲ್ಲದೆ ಚಂದ್ರನ ಬೆಳದಿಂಗಳು ಎಲ್ಲ ಕಡೆಗೆ ವ್ಯಾಪಿಸಿದ್ದರೂ ಚಂದ್ರಕಾಂತ ಶಿಲೆಗಳು ಮಾತ್ರ ನೀರನ್ನು ಕರೆ ಯುವವು. ಅದರಂತೆ ಶಿವನು ಲಿಂಗಗಳಲ್ಲಿಯೂ, ಭಕ್ತರಲ್ಲಿಯೂ ವಿಶೇಷ ವಾಗಿ ವ್ಯಾಪಿಸಿರುವನು. ಚಂದ್ರಕಾಂತ ಶಿಲೆಯು ಚಂದ್ರನನ್ನು ನೋಡಿ ನೀರು ಸುರಿಸುವಂತೆ, ಶಿವಭಕ್ತರು ಶಿವನ ಮನೋವಿಕಾಸವೆಂಬ ಕಟಾಕ್ಷದಿಂದ ಆನಂದಿಸುವದರಿಂದ ಶಿವನು ಭಕ್ತರಲ್ಲಿ ಯಾವಾಗಲೂ ನೆಲೆಸಿರುವನು. ಶಿವ ನಿಗೂ, ಶಿವಭಕ್ತರಿಗೂ ಪರಸ್ಪರ ವಿಶ್ವಾಸವಿರುವಂತೆ ಉಳಿದ ಪಾಷಂಡರಿಗೆ ಇರುವದೇ ? ಮುತ್ತಿನ ಚಿಪ್ಪು ಸ್ವಾತಿ ಮಳೆಯನ್ನು ಮಾತ್ರ ಅಪೇಕ್ಷಿಸುವಂತೆ ಭಕ್ತನು ಶಿವಕಟಾಕ್ಷವನ್ನು ಮಾತ್ರ ಬಯಸುವನು. ಹಸುವಿಗೆ ಕರುವಿನ ಮೇಲೂ, ಕರುವಿಗೆ ಹಸುವಿನ ಮೇಲೂ, ವಿಶ್ವಾಸವಿರುವಂತೆ ಶಿವನಿಗೆ ಭಕ್ತರ ಮೇಲೂ, ಭಕ್ತರಿಗೆ ಶಿವನಮೇಲೂ ವಿಶ್ವಾಸವಿರುವದು. ಆಕಳುಗಳಿಗೆ ಕರು ಗಳ ಆನಂದಕ್ಕಾಗಿ ಹುಟ್ಟಿದ ಹಾಲನ್ನು ಜನರು ಕುಡಿದು ತೃಪ್ತಿ ಪಡುವಂತೆ ಶಿವಭಕ್ತರ ಆನಂದಕ್ಕಾಗಿ ಶಿವನು ತೋರುವ ಕರುಣೆಯಿಂದ ಲೋಕದಲ್ಲಿರುವ ನಾಸ್ತಿಕರಾದ ಸಮಸ್ತರೂ ಜೀವಿಸುತ್ತಿರುವರು. ಹಾಗು ಶಿವಜ್ಞಾನ ಎಂಬ ವಿವೇಕದ ಬೆಳಕನ್ನು ಹರಡುವ ಸೂರ್ಯನಾದ ಶಿವನು ಇರುತ್ತಿರಲು ಭಕ್ತಿ ಹೀನರಾದ ಇತರ ಪಾಷಂಡಿಗರು ಗೂಬೆಗಳು ಸೂರ್ಯನನ್ನು ನೋಡಲಾರ ದಂತೆ ಶಿವನನ್ನು ಕಾಣಲಾರರು. ಅಂಗವೆಂಬುದು ಪೂರ್ವಜನ್ಮಕೃತ ಪಾಪ ಪುಣ್ಯಗಳ ಶೇಷದಿಂದ ಹುಟ್ಟಿದ ದೇಹವಾಗಿದ್ದು ಆ ಅಂಗವೇ ಶಿವನಾಗಲಾರನು. ಮತ್ತು ಜೀವನು ಜನನ ಮರಣಬದ್ಧನು. ಅಸ್ವತಂತ್ರನು. ಪಶುವು. ಪಾಶ

ಬದ್ಧನು. ಸಗುಣನು. ಎನಿಸುವನು. ಶಿವನು ಜನನಮರಣ ರಹಿತನು. ಸ್ವತಂತ್ರನು. ಪಶುಪತಿಯು. ಪಾಶನಾಶಕನು. ನಿರ್ಗುಣನೆನಿಸಿರ್ಪನು. ಆದ್ದರಿಂದ ಅವನು ಜೀವನು ಆಗಲಾರನು. ಮತ್ತು ಆತ್ಮನೆಂದರೆ ಪಂಚೇಂದ್ರಿಯ, ಪಂಚಭೂತಗಳಿಂದ ಹುಟ್ಟಿದವನು. ತದ್ವ್ಯತಿರಿಕ್ತನಾಗಿರುವ ಶಿವನು ತಾನೇ ಹೇಗೆ ಆಗುವನು. ಅಲ್ಲದೆ "ಅಣೋರಣೀಯಾನ್ ಮಹತೋ ಮಹೀಯಾನ್" "ಆತ್ಮಾಸ್ಯ ಜಂತೋ ನಿಹತೋ ಗುಹಾಯಾಂ" ಎಂಬ ವೇದವಾಕ್ಯದಂತೆ ಸಕಲ ಪ್ರಪಂಚದಲ್ಲಿಯ ಸೂಕ್ಷ್ಮ ವಸ್ತುವಿನಲ್ಲಿಯೂ ಕೂಡ ಪರಮಾಣು ರೂಪದಿಂದ ಸೇರಿಕೊಂಡು ಶಬ್ದದಲ್ಲಿ ಅರ್ಥವೂ, ಕನ್ನಡಿಯಲ್ಲಿ ಬಿಂಬವೂ, ಸ್ಫಟಿಕದಲ್ಲಿ ದಾರವೂ, ಗಡಿಗೆಯಲ್ಲಿ ಆಕಾಶವೂ, ಕಟ್ಟಿಗೆಯಲ್ಲಿ ಅಗ್ನಿಯೂ, ಹಾಲಿನಲ್ಲಿ ತುಪ್ಪವೂ, ಕಲ್ಲಿನಲ್ಲಿ ಚಿನ್ನವೂ, ಕಣ್ಣಿನಲ್ಲಿ ಕಾಂತಿಯೂ, ಎಳ್ಳಿನಲ್ಲಿ ಎಣ್ಣೆಯೂ ಇರುವ ಹಾಗೆ ಸೂಜಿಯನ್ನು ಊರುವದಕ್ಕೂ ಸ್ಥಲವಿಲ್ಲದಂತೆ ವ್ಯಾಪಕನಾಗಿರುವದರಿಂದ ಶಿವನು ಜಗನ್ನಾಥ, ಜಗದ್ರಕ್ಷಕ, ಜಗದ್ವ್ಯಾಪಿ, ಜಗಜ್ಜನಕ, ಜಗದಧಿಕ, ಜಗತ್ ಶಿಕ್ಷಕ, ಜಗತ್ ಭಿನ್ನ ಎಂಬುದು ನಿಜವೆಂದು ದೃಢವಾಗಿ ತಿಳಿಯಿರಿ ಎಂದು ದಾಸಿಮಯ್ಯನು ನುಡಿದನು. ಆ ಮಾತನ್ನು ಕೇಳಿ ಜೈನರು ಅಯ್ಯಾ, ಜೀವಿಗಳೆಲ್ಲರೂ ಪಶುಗಳೆಂದೂ, ಶಿವನು ಅವರಿಗೆ ಪತಿಯಾಗಿ ಎಲ್ಲರಲ್ಲಿಯೂ ಇರುವನೆಂದೂ ಹೇಳಿದಿರಲ್ಲಾ? ಎಲ್ಲ ಪ್ರಾಣಿಗಳಲ್ಲಿ ಶಿವನು ಇರುವದಾದರೆ ಬೆಂಕಿಯಿಂದ ನೀವು ತಾಪವನ್ನು ಹೊಂದಿ ಸುಟ್ಟುಹೋಗಬೇಕು. ಮತ್ತು ಶಿವನ ಸಂಬಂಧದಿಂದ ಜೀವನು ಶಿವನ ನಿತ್ಯತ್ವ, ಕರ್ತೃತ್ವಗಳನ್ನಾಗಲಿ ಅಥವಾ ಅನಿತ್ಯತ್ವಾದಿಗಳನ್ನಾಗಲಿ ಪಡೆದಿರಬೇಕಲ್ಲವೇ? ಯಾವ ಕಾರಣದಿಂದ ಅದು ಇಲ್ಲ? ಎಂದು ಕೇಳಲು ಜೈನ ಶಿರೋಮಣಿಗಳಿರಾ, ಸಮುದ್ರದಲ್ಲಿ ರತ್ನವೂ, ಮರದಲ್ಲಿ ಬೆಂಕಿಯೂ ಇರುವದು ಸರಿಯಷ್ಟೇ? ಆದರೆ ಆ ರತ್ನ, ಅಗ್ನಿಯ ಗುಣಗಳು ಸಮುದ್ರಕ್ಕೂ, ಮರಗಳಿಗೂ ಬರುವದುಂಟೇ? ಇಲ್ಲ. ಈ ಉದಾಹರಣೆಯಂತೆ ಶಿವನು ಸರ್ವ ಪ್ರಾಣಿಗಳಲ್ಲಿ ವ್ಯಾಪಿಸಿರುವದರಿಂದಲೇ ಅವು ಚೈತನ್ಯವನ್ನು ಹೊಂದಿ ಚಲಿಸುವವು. ಅಲ್ಲದೆ ಜಡರೂಪವಾದ ಈ ಅಂಗಾಂಗಗಳಲ್ಲಿ ಶಿವನ ಗುಣದೋಷಗಳು ಕಾಣಬರುವದಿಲ್ಲ. ಎಳ್ಳಿನಲ್ಲಿ ಎಣ್ಣೆಯೂ, ಆಕಾಶದಲ್ಲಿ ಮೋಡವು ಇದ್ದರೂ ಎಣ್ಣೆಯಲ್ಲಿ ಎಳ್ಳನ್ನೂ, ಮೋಡದಲ್ಲಿ ಆಕಾಶವನ್ನೂ

ಯಾರೂ ಕಂಡಿರಲಾರರು. ಅಲ್ಲದೆ ಅವುಗಳ ಸಂಬಂಧವೂ ಕಾಣಬರುವದಿಲ್ಲ. ಆದ್ದರಿಂದ ಪಾಪಾತ್ಮರೂ, ದುರ್ಮತಿಗಳೂ ಆದವರಿಗೆ ಶಿವನು ಅಗೋಚರ ನಾಗಿರುವನು. ಚಿತ್ತನೈರ್ಮಲ್ಯವನ್ನು ಹೊಂದಿದ ಸದ್ಭಕ್ತರು ಮಾತ್ರ ನೆನಿಸಿದ ವೇಳೆಯಲ್ಲಿ ಅವರಿಗೆ ದರ್ಶನಕೊಟ್ಟು, ಅವರನ್ನು ರಕ್ಷಿಸುವನು. ಆದ್ದರಿಂದ ಶಿವನಿಗೆ ನಿಷ್ಕಲ, ನಿತ್ಯ, ನಿರಂಜನ, ಅನಘ, ಅಪ್ರಮೇಯ, ಆದ್ಯಂತರಹಿತ, ಅದ್ವಿತೀಯ, ಅನಂತ, ನಿಷ್ಕಳಂಕ, ನಿರ್ಲಿಪ್ತ, ಸರ್ವಜ್ಞ, ಸರ್ವತಂತ್ರ ಸ್ವತಂತ್ರ, ಜ್ಞಾನಾನಂದಮಯ ಎಂಬುದಾಗಿ ಅನೇಕ ನಿರ್ಗುಣ ನಾಮಗಳು ಇರುವವು. ಎಂದು ಹೇಳಲು ಆ ಜೈನರು ಓಹೋ! ಈ ಜಗತ್ತು ಎಲ್ಲವೂ ಶಿವಮಯ ವಾದ ಬಳಿಕ ನೀವು ಮಲಗುವದು, ನಡೆಯುವದು, ಮಲಮೂತ್ರಗಳನ್ನು ವಿಸರ್ಜನೆ ಮಾಡುವದು ಹೇಗೆ ? ಶಿವನ ಮೇಲೆಯೇ ಇವುಗಳನ್ನೆಲ್ಲ ಮಾಡು ವದೇ ? ಎಂದು ಕೇಳಲು ದಾಸಿಮಯ್ಯನು ಶಿವನು ದೇವರಲ್ಲ ಎಂದು ತಿರಸ್ಕರಿ ಸುವವರ ಮಸ್ತಕಗಳನ್ನು ಮೆಟ್ಟಿ ನಡೆಯುವೆವು. ಶಿವನು ಸುಳ್ಳೆಂದು ಹೇಳುವ ನೀಚರ ಬಾಯಿಯಲ್ಲಿ ಮಲಮೂತ್ರಗಳನ್ನು ಬಿಡುವೆವು. ಇವುಗಳಲ್ಲದೆ ಉಳಿದ ಕಡೆಯಲ್ಲೆಲ್ಲ ಶಿವನು ವ್ಯಾಪಿಸಿಕೊಂಡಿರುವನು. ಎಂದು ನುಡಿದ ವಾಕ್ಯವನ್ನು ಕೇಳಿ ಕ್ಷಣಕಾಲ ಯೋಚಿಸಿ ಮತ್ತೊಂದು ಕುಂಟಯುಕ್ತಿಯನ್ನು ಬಗೆದು ಹೀಗೆಂದರು— ವೇದವತ್ತಾಗಿ ಶಿವಸಿದ್ಧಾಂತವನ್ನು ನೀವು ಸ್ಥಾಪಿಸಿ ದ್ದನ್ನು ನಾವು ಒಪ್ಪಿಕೊಂಡೆವು. ಆದರೆ ಆ ವೇದವು ಪುನರುಕ್ತಿ, ಅನ್ಯೋನ್ಯ ವಿರೋಧ ಭಾವಗಳನ್ನು ಹೊಂದಿರುವದಲ್ಲ! ಅದನ್ನು ಹೇಗೆ ನಂಬಬೇಕು ? ಎಂದು ಕೇಳಿದರು. ಆಗ ದಾಸಿಮಯ್ಯನು ಎಲೈ ಶುಷ್ಕವಾದಿಗಳೇ, ವೇದ ದಿಂದ ಆಯುರ್ವೇದವು ಜನಿಸಿತು. ಆ ವೈದ್ಯಶಾಸ್ತ್ರ ಸಮ್ಮತ ಚಿಕಿತ್ಸೆಯಿಂದ ಸಕಲ ರೋಗಗಳು ನಿವಾರಣೆಯಾಗುವವು. ವೇದಾಂಗವಾದ ಜ್ಯೋತಿಷ್ಯ ಶಾಸ್ತ್ರದ ಅನುಭವದಿಂದ ಕಂಡು ಹಿಡಿಯಲ್ಪಟ್ಟ ಖಗೋಳಶಾಸ್ತ್ರದಂತೆ ಎಲ್ಲ ಗ್ರಹಗಳು ತಪ್ಪದೇ ಸಂಚರಿಸುತ್ತಿರುವವು. ಹೀಗೆ ವೇದಾಂಗಗಳು ಪ್ರತ್ಯಕ್ಷ ಪ್ರಮಾಣವಾಗಿರುವಾಗ ವೇದವಚನಗಳನ್ನು ಅಸತ್ಯವೆಂದು ನುಡಿಯಲು ಸಾಧ್ಯವಾಗುವದೇ ? ವೇದವಚನಕ್ಕೆ ಸರಿಯಾದ ಅರ್ಥವನ್ನು ತಿಳಿಯದೆ ಅಸತ್ಯವೆಂದು ಹೇಳುವದು ಅಜ್ಞಾನವೇ ಸರಿ. ಇಂತಹ ಮೌಢ್ಯದಲ್ಲಿ ಮುಳುಗಿರುವ ನೀವು ಇಲ್ಲದ ದೋಷಗಳನ್ನು ಕಲ್ಪಿಸಿ ಹೇಳುತ್ತಿದ್ದೀರಿ. ಇದು

ಸರಿಯಲ್ಲ. ಈ ಪ್ರಪಂಚಕ್ಕೆ ಶಿವನೇ ದೇವನು. ಶಿವನಲ್ಲದೆ ಮತ್ತೊಬ್ಬ ದೇವನೇ ಇಲ್ಲ. ಇದನ್ನು ನಾನು ಪ್ರತ್ಯಕ್ಷ ತೋರಿಸುತ್ತೇನೆ ಎಂದು ಗಂಭೀರ ವಾಗಿ ನುಡಿಯಲು ಆ ಸಭೆಯಲ್ಲಿದ್ದ ಮೂರ್ಖರಾದ ಕೆಲವು ಜೈನರು ಪಿಸು ಮಾತುಗಳನ್ನು ಆಡುತ್ತ ಈ ಶಿವಭಕ್ತನನ್ನು ಹೇಗಾದರೂ ಮಾಡಿ ಕಪಟ ಉಪಾಯದಿಂದ ಕೊಲ್ಲಬೇಕು ಇಲ್ಲವಾದರೆ ನಮಗೆ ಹಾನಿ ತಪ್ಪದು. ಎಂದು ತಿಳಿದು ವಂಚಕರಾದ ಆ ಪಾಪಿಗಳು ಒಂದು ಘಟಸರ್ಪವನ್ನು ಗಡಿಗೆಯಲ್ಲಿ ಹಾಕಿ ಅದರ ಬಾಯಿಕಟ್ಟಿ ತಂದು ಅಯ್ಯಾ ಶಿವಭಕ್ತ ಶಿಖಾಮಣಿಯೇ, ಶಿವನು ಸರ್ವಾಂತರ್ಯಾಮಿಯೆಂದು ಹೇಳಿದಿರಲ್ಲವೇ ? ಹಾಗಾದರೆ ಈ ಸಭಾ ಮಧ್ಯದಲ್ಲಿರುವ ಗಡಿಗೆಯಲ್ಲಿ ಶಿವನನ್ನು ಕರೆದು ತೋರಿಸಿರಿ ನೋಡೋಣ ಎಂದು ನುಡಿಯಲು ಎಲೈ ಮೂಢಾತ್ಮರೇ, ನಿಮಗೆ ನಿಸ್ಸಂಶಯವಾಗುವಂತೆ ಮಾಡಿ ತೋರಿಸುವೆನೆಂದು ಹೇಳುತ್ತ ಪರಶಿವನನ್ನು ಧ್ಯಾನಮಾಡುತ್ತ, ಶಿವ ಶರಣರ ಪಾದಪೂಜೆಯನ್ನು ಮನೋನಿಯಮದಿಂದ ಮಾಡಿ ತನ್ನ ಕರುಣಾ ಕಟಾಕ್ಷದಿಂದ ನೋಡುತ್ತ, ಆ ಗಡಿಗೆಯಲ್ಲಿ ಕಾಲಾಗ್ನಿಯಂತೆ ವಿಷಜ್ವಾಲೆ ಯನ್ನು ಕಾರುತ್ತಿರುವ ಸರ್ಪವನ್ನು ನೋಡಿ ತನ್ನ ಅಮೃತ ಹಸ್ತದಿಂದ ಸವ ರಲು ಅದು ಕೂಡಲೆ ತನ್ನ ಕ್ರೂರಭಾವವನ್ನು ತೊರೆದು ಸ್ಫಟಿಕ ಲಿಂಗವಾ ಯಿತು. ಆಗ ರಾಣಿಯು ದೊರೆಯನ್ನು ನೋಡಿ ಇನ್ನಾದರೂ ಈ ಗುರುಗಳ ಶಿಷ್ಯರಾಗಿರಿ ಎಂದು ಹೇಳಲು ರಾಜನು ದಾಸಿಮಯ್ಯನವರ ಪಾದಗಳಿಗೆ ನಮ ಸ್ಕರಿಸಿ ಅವರ ಕರುಣಾಕಟಾಕ್ಷಕ್ಕೆ ಪಾತ್ರನಾಗಿ ಗಂಡ ಹೆಂಡಿರಿಬ್ಬರೂ ಅವರ ಶುಭಾಶೀರ್ವಾದ ಪಡೆದು ಧನ್ಯರಾದರು. ಹಾಗು ಆ ಊರಲ್ಲೆಲ್ಲ ಸುವರ್ಣ ನಿರ್ಮಿತ ಅನೇಕ ಶಿವದೇವಾಲಯಗಳನ್ನು ಕಟ್ಟಿಸಿ ಅದರಲ್ಲಿ ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿಸಿದರು ಆಗ ಎಷ್ಟೋ ಜನ ಜೈನರು ಶಿವದೀಕ್ಷೆಯನ್ನು ಕೈಕೊಂಡು ಮುಕ್ತರಾದರು. ಈ ಪ್ರಕಾರ ಸುಗ್ಗಲಾದೇವಿಯು ತನ್ನ ಪತಿ ಯನ್ನು ಮಹದಾನಂದಗೊಳಿಸಿ. ಮಂತ್ರಿ, ಪುತ್ರ, ಮಿತ್ರ ಸೇನಾಸಹಿತ ತಮ್ಮ ಗುರುವನ್ನು ಪೂಜಿಸಿ ಸಕಲ ಮರ್ಯಾದೆಗಳಿಂದ ಅವರನ್ನು ಸ್ವಸ್ಥಾನಕ್ಕೆ ಕಳು ಹಿಸಿಕೊಡಲು ಅವರು ತಮ್ಮ ಊರನ್ನು ಸೇರಿದರೆಂದು ಏಕಾಂತ ರಾಮ ಯ್ಯನು ಜೈನರಿಗೆ ಬೋಧಿಸಿದನು.

## — ಮಾರುಡಿಗೆ ನಾಚಯ್ಯನ ಕಥೆಯು —

ಏಕಾಂತ ರಾಮಯ್ಯನು ಮತ್ತೊಂದು ಕಥೆಯನ್ನು ವಿವರಿಸಲು ಆರಂಭಿಸಿದನು. ಮಾರುಡಿಗೆ ಎಂಬ ಒಂದು ಊರಲ್ಲಿ ಅಸಂಖ್ಯಾತರಾದ ಜೈನರೂ, ನೂರಾರು ಜೈನ ಬಸದಿಗಳೂ ಇದ್ದವು. ಆ ಊರಲ್ಲಿ ಸಿಂಹಗಳ ಗುಂಪಿನಲ್ಲಿ ಶರಭನಿರುವಂತೆ ಚಂಚಲರಹಿತ ಮಾನಸನಾದ ನಾಚಯ್ಯನೆಂಬ ಒಬ್ಬ ಶಿವ ಭಕ್ತನಿದ್ದನು. ಮತ್ತು ಆ ಊರಲ್ಲಿ ಒಂದು ಶಿವದೇವಾಲಯವೂ ಇತ್ತು. ಅದನ್ನು ಕೂಡ ಕೆಲವು ಜನ ದುಷ್ಟ ಜೈನರು ಸಹಿಸಲಾರದೆ ಆ ಶಿವಾಲಯ ವನ್ನು ಕೆಡವಿಸಿ ಗೋಪುರವನ್ನು ಕಿತ್ತುಹಾಕಿ ಶಿವಲಿಂಗವನ್ನು ಹಾಳು ಮಾಡಿದರು. ಇದನ್ನು ನೋಡಿ ಆ ದೇವಾಲಯದ ಪೂಜಾರಿಯು ದುಃಖಿತನಾಗಿ ನಾಚಯ್ಯನ ಬಳಿಗೆ ಬಂದು ಜೈನರು ಮಾಡಿದ ಅಪಚಾರಗಳನ್ನು ಹೇಳಿ ಹಂಬಲಿಸಿ ಗೋಳಾಡಿದನು. ಆಗ ನಾಚಯ್ಯನು ಕಾಲರುದ್ರನಂತೆ ಕೋಪದ ಕಿಡಿಗಳನ್ನು ಉಗುಳುತ್ತ, ಆ ಶಿವದ್ರೋಹಿಗಳನ್ನು ಇಂದಿಗೆ ಹತ್ತು ದಿವಸಗಳೊಳಗಾಗಿ ನಾಶಮಾಡಿ ಎಂದಿನಂತೆ ಆ ಶಿವದೇವಾಲಯವನ್ನು ಕಟ್ಟುವವರೆಗೆ ತಾನು ಭೋಜನ ಮಾಡುವದಿಲ್ಲವೆಂದು ಪ್ರತಿಜ್ಞೆ ಮಾಡಿ ಪೂಜಾರಿಗೆ ಅಭಯ ವನ್ನಿತ್ತು ತನ್ನೂರಿನಿಂದ ಹೊರಟು ಹನ್ನೆರಡು ಸಾವಿರ ಶಿವಭಕ್ತರನ್ನು ಹುಡುಕಿ ಅವರನ್ನು ಕೂಡಿಕೊಂಡು ಶಿವಲಿಂಗಗಳನ್ನು ಬಂಡಿಗಳಲ್ಲಿ ಹೂಡಿಸಿ ಕೊಂಡು ತಾಳ, ಮೇಳ, ನೃತ್ಯ, ಗೀತ ವಾದ್ಯಗಳಿಂದ ಕೂಡಿ, ಶಂಖ, ಪಟಹ, ಭೇರಿ, ಕಹಳೆ, ಡಿಂಡಿಮ ಮೊದಲಾದವುಗಳ ಸಂಗಡ ಕೈಯೆತ್ತಿ ಎಲ್ಲರೂ ಉಘೇಯೆಂದು ಜಯಧ್ವನಿಯನ್ನು ಮಾಡುತ್ತ ಮಾರುಡಿಗೆ ಗ್ರಾಮ ವನ್ನು ಬಂದು ಸೇರಿದರು. ಮತ್ತು ಆ ದುಷ್ಟರ ಸೊಕ್ಕನ್ನು ಅಡಗಿಸಿ ಆ ಶಿವಾಲಯವನ್ನು ಕಟ್ಟಿ ಅಲ್ಲಿ ತಾವು ತಂದಿದ್ದ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿ ತ್ರಿಕಾಲದಲ್ಲಿಯೂ ಷೋಡಶೋಪಚಾರ ಪೂಜೆಯು ನೆರವೇರುವಂತೆ ಮಾಡಿದರು. ಮತ್ತು ನಾಚಯ್ಯನು ಎಲ್ಲ ಶರಣರನ್ನು ತನ್ನ ಮನೆಗೆ ಕರೆದು ಕೊಂಡು ಹೋಗಿ ಅವರನ್ನು ನಾನಾವಿಧವಾಗಿ ತೃಪ್ತಿಪಡಿಸಿ ಅವರ ಪಾದಪೂಜೆ ಯನ್ನು ಮಾಡಿ ಸಂತೋಷದಿಂದ ಪ್ರಸಾದವನ್ನು ಪರಿಗ್ರಹಿಸಿ ಧನ್ಯನಾದನು. ಈ ಪ್ರಕಾರ ನಾಚಯ್ಯನು ತನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿಕೊಂಡನು.

ಇದೂ ಅಲ್ಲದೆ ಮತ್ತೊಂದು ಕಥೆಯನ್ನು ಹೇಳುತ್ತೇನೆ ಕೇಳು ಎಂದು ಏಕಾಂತ ರಾಮಯ್ಯನು ನುಡಿಯಲಾರಂಭಿಸಿದನು.

## — ಪುಲಿಗೆರೆ ಸೋಮನಾಥನ ಕಥೆಯು —

ಪುಲಿಗೆರೆ ಎಂಬ ಪಟ್ಟಣದಲ್ಲಿ ಸೋಮನಾಥನೆಂಬ ಪರಮಶಿವಭಕ್ತನಿದ್ದನು. ಅವನ ಮನೆಯವರೆಲ್ಲರೂ ಜಿನಭಕ್ತರಾಗಿದ್ದು ಈತನು ಮಾತ್ರ ತನ್ನ ಮನೋಬಲದಿಂದ ಪರಶಿವನೇ ಶ್ರೇಷ್ಠ ದೈವವೆಂದು ಬಗೆದು ತ್ರಿಕಾಲದಲ್ಲಿ ಶಿವ ದೇವಾಲಯಕ್ಕೆ ಹೋಗಿ ಈಶ್ವರನ ಪಾದಗಳನ್ನು ಮುಟ್ಟಿ ನಮಸ್ಕರಿಸುವ ನಿಯಮವನ್ನಿಟ್ಟುಕೊಂಡಿದ್ದನು. ಇದನ್ನು ನೋಡಿ ಮೂರ್ಖರಾದ ಕೆಲವು ಜನ ಜೈನರು ಅಸೂಯೆಯಿಂದ ಇವನಿಗೆ ಅವಮಾನ ಮಾಡಬೇಕೆಂದು ಯೋಚಿಸಿರಲು ಒಮ್ಮೆ ಆತನಿಗೆ ಕಣ್ಣುಬೇನೆ ಬಂದು ತುಂಬಾ ತೊಂದರೆಯಾಗಿರಲು ತನ್ನ ವ್ರತವನ್ನು ಬಿಡಲಾರದೆ ಕಣ್ಣುಗಳು ಕಾಣುವಂತಿರದಿದ್ದರೂ ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಶಿವಾಲಯಕ್ಕೆ ಹೋಗಿ ತನ್ನ ಸೇವೆ ಮಾಡಿ ಸಂತೋಷದಿಂದ ಬರುತ್ತಿದ್ದನು. ಆಗ ಆ ದುಷ್ಟರು ಇವನಿಗೆ ಅವಮಾನಗೊಳಿಸಲು ಇದೇ ತಕ್ಕ ಸಮಯವೆಂದು ತಿಳಿದುಕೊಂಡು ಆತನನ್ನು ಕುರಿತು- ಅಯ್ಯಾ, ಶಿವಯೋಗಿಯೇ, ಇತ್ತ ಬಾ ನಿನ್ನನ್ನು ಶಿವದೇವಾಲಯಕ್ಕೆ ಕರೆದುಕೊಂಡು ಹೋಗುತ್ತೇವೆ ಎಂದು ಹೇಳಿ ಒಂದು ಬಸದಿಗೆ ಕರೆದುಕೊಂಡು ಹೋಗಿ ಜಿನಮೂರ್ತಿಯನ್ನು ಮುಟ್ಟಿ ಮೂರು ಸಾರೆ ನಮಸ್ಕಾರ ಮಾಡುವವರೆಗೂ ಸುಮ್ಮನಿದ್ದು ಅನಂತರ ಭಲೇ, ಶಹಬಾಸ್ ! ಎಲೈ ಶಿವಭಕ್ತನೇ, ನೀನು ಧನ್ಯನಾದೆ. ನಿನಗೆ ಜಿನಮುನಿಯು ಮೆಚ್ಚಿಕೊಂಡನು, ಎಂದು ಹೇಳುತ್ತ ಕೇಕೆ ಹಾಕಿ ನಗಲಾರಂಭಿಸಿದರು. ಆಗ ಆತನು ಅತ್ಯಂತ ಕೋಪಾವಿಷ್ಟನಾಗಿ ರೇಗುತ್ತ ಎಲೈ ಪರಮನೀಚರೇ, ನಾನು ಪರಶಿವನಿಗಲ್ಲದೆ ಮತ್ತೊಂದು ದೇವರಿಗೆ ಎಂದೂ ನಮಸ್ಕರಿಸಲಾರೆನು. ನನಗೆ ಏತಕ್ಕಾಗಿ ಹಾಸ್ಯ ಮಾಡುತ್ತೀರಿ. ನಿಮಗೆ ಇದನ್ನು ಪ್ರತ್ಯಕ್ಷ ತೋರಿಸುವೆನು ಎಂದು ಹೇಳುತ್ತ ಭಕ್ತಿಭಾವದಿಂದ ಶಿವನನ್ನು ನೆನೆದು ಕಣ್ಣಿನ ಮುಸುಕನ್ನು ತೆಗೆದು ಕೈಗಳಿಂದ ಕಣ್ಣುರೆಪ್ಪೆಯನ್ನು ಬಲವಾಗಿ ಹಿಗ್ಗಿಸಿ ಆ ಜಿನವಿಗ್ರಹವನ್ನು ಚನ್ನಾಗಿ ದೃಷ್ಟಿಸಿ ನೋಡಲಾಗಿ ಕೂಡಲೇ ಆ ವಿಗ್ರಹವು ಇಲ್ಲದಂತಾಗಿ ಅಲ್ಲಿ-

ಯೇ ಪರಶಿವನು ವೃಷಭವಾಹನನಾಗಿ ಪಾರ್ವತೀಸಮೇತನಾಗಿ ಕಂಗೊಳಿಸಿದನು. ಆಗ ಆ ದುಷ್ಟರ ಅಹಂಕಾರವು ಅಡಗಿಹೋಯಿತು. ಈಗಲೂ ಆ ಸ್ಥಳದಲ್ಲಿ ಅಂದರೆ ಪುಲಿಗೆರೆಯಲ್ಲಿ (ಈಗ ಲಕ್ಷ್ಮೇಶ್ವರದಲ್ಲಿ) ಸೋಮನಾಥ ದೇವಾಲಯವು ಪ್ರಸಿದ್ಧವಾಗಿ ಹೊಳೆಯುತ್ತಿದೆ.

## — ವೈಜವ್ವೆಯ ಕಥೆಯು —

ಪರವಳಿಗೆ ಎಂಬ ಗ್ರಾಮದಲ್ಲಿರುವ ನೇಮಿನಾಥನೆಂಬ ಒಬ್ಬ ಜೈನನಿಗೆ ಶಿವಭಕ್ತಿಸಂಪನ್ನಳಾದ ವೈಜವ್ವೆಯೆಂಬ ಒಬ್ಬ ಹೆಂಡತಿಯಿದ್ದಳು. ಆ ಊರಲ್ಲಿ ಅವಳೊಬ್ಬಳೇ ಶಿವಭಕ್ತೆಯಾದದ್ದರಿಂದ ಬಹು ಕೊರಗಿಕೊಂಡಿದ್ದಳು ಒಂದುದಿವಸ ಆ ನೇಮಿನಾಥ ಶೆಟ್ಟಿಯು ತನ್ನ ಗುರುಗಳನ್ನು ಕರೆದು ಸತ್ಕರಿಸಬೇಕೆಂದು ಗೊತ್ತುಮಾಡಿಕೊಂಡು ಪಾಕಾದಿಗಳನ್ನು ಸಿದ್ಧಗೊಳಿಸುವಂತೆ ಹೆಂಡತಿಗೆ ಹೇಳಿ ತಾನು ಗುರುಗಳನ್ನು ಕರೆದುಕೊಂಡು ಬರುವದಕ್ಕಾಗಿ ಅವರಲ್ಲಿಗೆ ಹೋದನು. ಇತ್ತ ವೈಜವ್ವೆಯು ಅತ್ಯಂತ ಭಕ್ತಿಯನ್ನು ವಹಿಸಿ ವಡೆ, ಚಕ್ಕುಲಿ, ಚೋಷ್ಯ, ಗಾರಿಗೆ, ಮಂಡಿಗೆ, ಫೇಣಿ ಮೊದಲಾದ ನಾನಾ ಭಕ್ಷ್ಯಗಳನ್ನೂ, ಇತರ ಷಡ್ರಸೋಪೇತವಾದ ಅಡಿಗೆಯನ್ನೂ ತಯಾರಿಸಿ ತನ್ನ ಮನಸ್ಸಿನಲ್ಲಿ ಆಹಾ! ಇಷ್ಟು ಪ್ರಯಾಸಪಟ್ಟು ಮಾಡಿದ ಈ ಉತ್ತಮ ಆಹಾರವನ್ನು ಯಾವನಾದರೂ ಒಬ್ಬ ಜಂಗಮನಿಗೆ ನೀಡಿ ಆತನನ್ನು ತೃಪ್ತಿ ಪಡಿಸಿದರೆ ನನ್ನ ಜನ್ಮ ಸ್ವಾರ್ಥಕವಾಗುವದು. ಹುಟ್ಟಿದಾಗಿನಿಂದ ಈ ವರೆಗೂ ಒಬ್ಬ ಜಂಗಮನಿಗಾದರೂ ಒಂದು ತುತ್ತು ಅನ್ನವನ್ನು ಹಾಕಿ ತೃಪ್ತಿಪಡಿಸಿಲ್ಲ. ಈಗ ಒಬ್ಬ ಜಂಗಮನು ಬಂದರೆ ಆತನಿಗೆ ಉಣಬಡಿಸಿ ತೃಪ್ತಿಪಡಿಸುವೆನೆಂದು ಮನಸ್ಸಿನಲ್ಲಿ ಅನ್ನುತ್ತ ಚಿಂತಿಸುತ್ತಿರಲು ಪರಶಿವನು ಜಂಗಮ ರೂಪವನ್ನು ಧರಿಸಿ ಅವಳ ಮನೆಗೆ ಬಂದನು. ಆಗ ವೈಜವ್ವೆಯು ಅತ್ಯಂತ ಭಕ್ತಿಪೂರ್ಣಳಾಗಿ ಆತನ ಪಾದಗಳನ್ನು ತೊಳೆದು ಪೂಜಿಸಿ ಶ್ರೇಷ್ಠವಾದ ಪೀಠದಲ್ಲಿ ಕುಳ್ಳಿರಿಸಿ ಮಾಡಿದ ಆಹಾರ ಪದಾರ್ಥಗಳೆಲ್ಲವನ್ನು ಉಣಬಡಿಸಿದಳು. ಜಂಗಮನೂ ಸಹ ತೃಪ್ತಿಪಟ್ಟನು. ಅಷ್ಟರಲ್ಲಿ ಜೈನ ಗುರುಗಳನ್ನು ನೇಮಿನಾಥನು ಕರೆದುಕೊಂಡು ಬರಲು ಆ ಗುರುಗಳು ಜಂಗಮನನ್ನು ನೋಡಿ ಕೋಪದಿಂದ ಕುದಿಯುತ್ತ ನೇಮಿಶೆಟ್ಟಿಗೆ ಶಾಪವನ್ನಿತ್ತು ಹೊರಟು ಹೋದರು. ಆಗ ನೇಮಿ

ಶೆಟ್ಟಿಯು ಸಿಟ್ಟಿಗೆದ್ದು ಛೀ ಹೊಲಸು ಮೂಳೀ ! ಎಂತಹ ಕೆಲಸಮಾಡಿದಿ. ಜೈನ ತಪಸ್ವಿಗಳಿಗೆಂದು ಮಾಡಿದ ಅಡಿಗೆಯನ್ನು ಜಂಗಮಯ್ಯನಿಗೆ ಇಕ್ಕಿ ನನ್ನ ವ್ರತವನ್ನು ನಾಶಮಾಡಿ ಮನೆ ಹಾಳಾಗುವಂತೆ ಶಾಪವನ್ನು ಬರಮಾಡಿದಿ ಯಲ್ಲ ! ನೀಚಳೇ, ಭ್ರಷ್ಟಳೇ, ನಿನ್ನನ್ನು ಹಾಗು ಆ ಜಂಗಮನನ್ನು ಕೊಲ್ಲದೆ ಬಿಡಲಾರೆನು ಎಂದು ಆರ್ಭಟಿಸುತ್ತಿರುವಾಗಲೇ ಆ ಜಂಗಮಮೂರ್ತಿಯು ಮಾಯವಾದನು. ಅದನ್ನು ನೋಡಿ ಎಲೈ-ಮಾಯಾವಿಯಾದ ದುಷ್ಟಳೇ, ಆ ಶಿವಭಕ್ತನನ್ನು ಎಲ್ಲಿ ಮರೆಮಾಚಿದೆ ? ಅವನ ರೂಪ, ಸೌಂದರ್ಯಗಳನ್ನು ನೋಡಿ ಅವನನ್ನೇ ಬೆನ್ನುಹತ್ತಿ ಹೋಗಬೇಕೆಂದು ಕಪಟೋಪಾಯದಿಂದ ಹೀಗೆ ಮಾಡಿದೆಯಾ ? ಆ ಉಂಡ ಗೊರವನನ್ನು ತೋರಿಸದಿದ್ದರೆ ನಿನ್ನನ್ನು ಸುಮ್ಮನೆ ಬಿಡಲಾರೆನು. ಎಂದು ಕೋಲನ್ನು ತೆಗೆದುಕೊಂಡು ಹೊಡೆಯ ಹತ್ತಿದನು. ವೈಜವ್ವೆಯು ಶಿವನನ್ನೇ ಧ್ಯಾನಮಾಡುತ್ತ ಶಿವಧ್ಯಾನವೆಂಬ ವಜ್ರಕವಚದಿಂದ ಆ ಏಟುಗಳನ್ನು ಲಕ್ಷ್ಯಕ್ಕೆ ತಾರದೆ ದೃಢಚಿತ್ತಳಾಗಿ ಸುಮ್ಮನಿದ್ದಳು. ಆಹಾ ! ಶಿವಭಕ್ತರಾದವರಿಗೆ ಕುಂದು ಕೊರತೆಗಳೂ, ನೋವು ನೆರಳಿಕೆಗಳೂ ತಲೆದೋರುವವೇ ? ಎಂದಿಗೂ ಇಲ್ಲ. ಆ ನೇಮಿ ನಾಥನು ತನ್ನ ಹೆಂಡತಿಗೆ ಹೊಡೆಯುತ್ತಿದ್ದ ಏಟುಗಳೆಲ್ಲವೂ ರೂಪಾಂತರ ದಿಂದ ಆ ಪರವಳಿ ಗ್ರಾಮದಲ್ಲಿಯ ಎಲ್ಲ ಜೈನ ಗಂಡಸರ, ಹೆಂಗಸರ, ಮಕ್ಕಳ ಮೈಮೇಲಿನ ಚರ್ಮವು ಸುಲಿದು ಹೋಗುವಂತೆ ಏಟುಗಳು ಬೀಳಲು ಆ ಏಟುಗಳನ್ನು ಸಹಿಸಲಾರದೆ ಎಲ್ಲರೂ ಚೀರುತ್ತ, ಕೂಗುತ್ತ ಹೊರಳಾ ಡುತ್ತ ಒಬ್ಬರನ್ನೊಬ್ಬರು ತಬ್ಬಿಕೊಂಡು ಮೈಮೇಲೆ ಎದ್ದ ಬಾಸುಂಡೆಗ ಳನ್ನು ಸವರಿ ಬಿಕ್ಕಳಿಸಿ ಅಳುತ್ತ ನಾವು ಬಾಳುವದು ಹೇಗೆ ? ಎಂದು. ಊರವರೆಲ್ಲ ಒಂದೇ ವಿಧವಾಗಿ ಏಟುಗಳನ್ನು ತಿಂದು, ನೊಂದು, ಕಂದಿ, ಸಂಕಟಪಡುತ್ತ ಜಿನ ದೇವಾಲಯವನ್ನು ಹೊಕ್ಕು ಅಯ್ಯೋ, ಜಿನ ಸ್ವಾಮಿಯೇ, ಇಂದು ನಮಗೆಲ್ಲರಿಗೆ ಸಾಯುವ ಗತಿಯನ್ನು ತಂದೊಡ್ಡಿದೆ ಯಲ್ಲಾ !. ನಾವು ಧರ್ಮವನ್ನು ಸ್ವಲ್ಪವೂ ತಪ್ಪದೆ ಆಚರಿಸುತ್ತ ಬಂದಿ ದ್ದರೂ ನಮಗೆ ಇಂತಹ ಗತಿಯು ಪ್ರಾಪ್ತವಾಯಿತಲ್ಲಾ ! ನಿನಗೆ ಕರುಣೆ ಯಿಲ್ಲವೇ ? ಎಂದು ನಾನಾ ವಿಧದಿಂದ ಹಲುಬಿ, ಗೋಳಿಡುತ್ತ, ಜಿನ ಮೂರ್ತಿಯನ್ನು ತಬ್ಬಿ ಆಲಂಗಿಸಿದರೂ ಆ ಪೆಟ್ಟುಗಳ ರಭಸವು ನಿಲ್ಲದಿರಲು

ಅವರೆಲ್ಲರೂ ಆ ಊರಲ್ಲಿದ್ದ ದೊಡ್ಡ ಕೆರೆಯಲ್ಲಿ ಬಿದ್ದು ಪ್ರಾಣವನ್ನು ನೀಗಿ ಕೊಳ್ಳಬೇಕೆಂದಿರಲು ಅಷ್ಟರಲ್ಲಿ ಜಾಣನಾದ ಒಬ್ಬ ಜೈನನು ವೈಜವ್ವೆಯು ಮನೆಗೆ ಬಂದು ನಿಂತುಕೊಂಡು ಅವಳನ್ನು ಗಂಡನು ಹೊಡೆಯುತ್ತಿರುವ ಏಟಿನಸಂಗಡ ತನಗೂ ಬಾಸಳೆಗಳು ಎದ್ದು ಉರಿಯ ಹತ್ತುವದನ್ನು ಕಂಡು ಇವಳನ್ನು ಈ ರೀತಿ ನೋಯಿಸಿದ್ದರಿಂದಲೇ ಊರೆಲ್ಲವೂ ಹೀಗಾಯಿತೆಂದು ತಿಳಿದು ಆ ನೇಮಿಶೆಟ್ಟಿಯನ್ನು ಕುರಿತು ಅಯ್ಯಾ, ಇನ್ನು ಹೊಡೆಯುವ ದನ್ನು ನಿಲ್ಲಿಸು. ನಿನ್ನಿಂದ ಊರೆಲ್ಲವೂ ಹಾಳಾಗಿಹೋಗುತ್ತಿದೆ. ಇವಳಿಗೆ ಹೊಡೆದ ಏಟುಗಳು ಒಂದಕ್ಕೆ ನೂರಾಗಿ ಈ ಊರ ಜೈನರಿಗೆಲ್ಲ ಏಟು ತಾಗಿ ತಾಳಲಾರದೆ ಅವರೆಲ್ಲರೂ ಈ ಊರ ಕೆರೆಯಲ್ಲಿ ಬಿದ್ದು ಸಾಯಲಿದ್ದಾರೆ. ನೀನು ಇಷ್ಟು ಹೊಡೆದರೂ ಇವಳಿಗೆ ಏನೂ ನೋವಾಗದೆ ಜೈನ ಜನ ಸಮೂಹವನ್ನು ನಾಶಮಾಡಿ ಬಿಟ್ಟಿದೆ. ಎಂದು ಹೇಳಲು :ಆ ನೇಮಿನಾಥನು ಅಯ್ಯೋ ! ಇನ್ನೇನುಮಾಡಲಿ. ಇವಳು ಮಾಯಾವಿಯೋ ! ರಾಕ್ಷಸಿಯೋ ನಾನು ಕಾಣೆನು. ಸುಮ್ಮನೆ ಇವಳನ್ನು ಹೊಡೆದು ನಮ್ಮ ಕುಲವನ್ನೇ ನಾಶಮಾಡಿಕೊಂಡೆನು. ಎಲೈ ಕಪಟ ರಾಕ್ಷಸಿಯೇ, ನೀನು ಮಾಯಾವಿ ಯಾದ ಮಾರಿಯೇ ಸರಿ. ನಮ್ಮ ಮನೆಯಲ್ಲಿದ್ದರೆ ಯಾವ ಅನರ್ಥವಾಗು ವದೋ ತಿಳಿಯದು. ಆದ್ದರಿಂದ ಈ ಕೂಡಲೇ ಹೊರಟುಹೋಗೆಂದು ನೂಕಿಬಿಟ್ಟನು. ಆಗ ವೈಜವ್ವೆಯು ಸಂತುಷ್ಟಳಾಗಿ ಪರಶಿವನೇ ಶರಣೆಂದು ನೆನೆಯುತ್ತ ದಾರಿಯಲ್ಲಿ ಬರುತ್ತಿರಲು ಭ್ರಾಂತಿಯಿಂದ ಒಂದು ಜೈನ ಬಸದಿ ಯನ್ನು ಶಿವದೇವಾಲಯವೆಂದು ತಿಳಿದು ಒಳಹೊಕ್ಕು ಪರಮಾನಂದದಿಂದ ಶಿವನಿಗೆ ನಮಸ್ಕಾರಮಾಡಿದಳು. ಆಗಲೇ ಭಕ್ತ ವತ್ಸಲನಾದ ಪರಶಿವನು ಸದ್ಯೋಜಾತನೆಂಬ ತನ್ನ ಬಿರುದನ್ನು ಕಾಪಾಡಿಕೊಂಡು ವೈಜವ್ವೆಯ ಕೀರ್ತಿ ಯನ್ನು ಬೆಳಗುವದಕ್ಕಾಗಿ ಆ ಜಿನ ವಿಗ್ರಹವೇ ಒಡೆದು ಲಿಂಗರೂಪವಾಗಿ ಅದರಿಂದ ಉದ್ಭವಿಸಿ ಪ್ರಸನ್ನನಾದನು. ಆಗ ವೈಜವ್ವೆಯು ಶಿವಭಕ್ತಿ ಹೀನ ನಾದ ಗಂಡನನ್ನು ಅಗಲಿ ಶಿವಭಕ್ತಿ ಸಂಪನ್ನರಾಗಿರುವ ಸ್ತ್ರೀಯರಿಗೆ ಸದ್ಗತಿ ಯುಂಟಾಗುವದೆಂಬುದನ್ನು ತೋರ್ಪಡಿಸುವಂತೆ ಶಿವನನ್ನು ಧ್ಯಾನಮಾಡಿ ಶನೈಃ ನಮಸ್ಕರಿಸಿದಳು. ಅನುಸೂಯೆ, ಅನಲಾಯಿ ಎಂಬ ಶಿವಭಕ್ತೆಯರು ಶಿವಭಕ್ತಿ ಮಹಿಮೆಯಿಂದ ಸದ್ಗತಿ ಪಡೆದದ್ದನ್ನೂ, ಶಿವಭಕ್ತಿ ಸಂಪನ್ನಳಾದ

ತಿಲಕವ್ವೆಯು ಶಿವಭಕ್ತನಲ್ಲದ ಗಂಡನನ್ನು ಬಿಟ್ಟದ್ದರಿಂದ ಅವಳನ್ನು ಕೊಲ್ಲಲು ಗಂಡನು ಬೆನ್ನಟ್ಟಬರಲು ಅವಳು ಶಿವಾಲಯವನ್ನು ಹೊಕ್ಕು ಪುರುಷಾಕೃತಿ ಯಾದಳೆಂಬುದನ್ನು ಕೇಳಿದ್ದೆವು. ಈಗ ವೈಜವ್ವೆಯು ಶಿವಭಕ್ತಿ ಹೀನನಾದ ಗಂಡನನ್ನು ತೊರೆದು ತನ್ನ ಶಿವಭಕ್ತಿಯನ್ನು ತೋರಿಸಿದುದ ನ್ನು ಕಣ್ಣಾರೆ ಕಂಡೆವೆಂದು ಶಿವಶರಣರು ಹೊಗಳುತ್ತಿರಲು ಆ ಊರಲ್ಲಿದ್ದ ಸಮಸ್ತ ಜೈನರು ಬಂದು ನಮಸ್ಕರಿಸುತ್ತಿದ್ದರು. ಈ ಪ್ರಕಾರ ಭಕ್ತಳಾದ ವೈಜವ್ವೆಗೆ ಪ್ರತ್ಯಕ್ಷನಾದ ಶಿವನು ವೈಜನಾಥ ಸ್ವಾಮಿ ಎಂಬ ಹೆಸರಿನಿಂದ ಈಗಲೂ ಪ್ರಸಿದ್ಧನಾಗಿರುವನೆಂದು ನುಡಿದು ಎಲೈ ಜೈನ ಪುರುಷನೇ, ಈ ರೀತಿಯಾಗಿ ಶಿವಭಕ್ತರ ಚರಿತ್ರೆಯು ಅನಂತವಾಗಿರುವದು. ಏನೋ ಪೂರ್ವದಲ್ಲಿ ನಡೆದದ್ದನ್ನು ಹೇಳಿ ಹಿಗ್ಗುವನೆಂದು ತಿಳಿಯಬೇಡ, ಈಗಲೂ ಸಹ ಅದಕ್ಕಿಂತಲೂ ಹೆಚ್ಚಾದಮಹಿಮೆಯನ್ನು ತೋರಿಸುವದಕ್ಕೆ ಬಂಕಿದೇವನ ಕಿಂಕರನಾದ ನನಗೆ ಲವಲೇಶವೂ ಆತಂಕವಿಲ್ಲ. ನನ್ನ ತಲೆಯನ್ನು ಕತ್ತರಿಸಿ ಏಳು ದಿವಸಗಳ ವರೆಗೆ ಇಟ್ಟು ಎಂದಿನಂತೆ ಬದುಕಿಬರುತ್ತೇನೆ ನೋಡು ಎಂದು ಪಂಥಮಾಡಿ ಏಕಾಂತರಾಮಯ್ಯನು ಗರ್ಜಿಸಲು ಆ ಜೈನ ಭಕ್ತನು ಈತನ ಮಹಿಮೆಯನ್ನು ಪರೀಕ್ಷಿಸಿ ನೋಡಬೇಕೆಂದು ದೊರೆಯಾದ ಬಿಜ್ಜಳನನ್ನೂ, ಪುರಜನರನ್ನೂ. ಜೈನ ಭಕ್ತರನ್ನೂ ಬರಮಾಡಲು ಬಸವೇಶ್ವರನು ಶಿವಗಣಂಗಳು ಸಮೇತನಾಗಿ ಅಲ್ಲಿಗೆ ಬಂದನು. ಆಗ ಅಲ್ಲಿ ಆ ಪಟ್ಟಣದ ಜನರೆಲ್ಲರೂ ನೆರೆದಿದ್ದರು. ಭಕ್ತ ಶಿಖಾಮಣಿ ಯಾದ ಏಕಾಂತ ರಾಮಯ್ಯನು ಶಿವನನ್ನು ಧ್ಯಾನಿಸಿ ಶಿವನ ಪ್ರಮಥಗಣಂಗಳಿಗೆ ನಮಸ್ಕರಿಸಿ ಶಿವಶರಣರಿಂದ ಅಪ್ಪಣೆಯನ್ನು ಪಡೆದು ತನ್ನ ಎಡಗೈಯಲ್ಲಿ ಮುಡಿಯ ಮಾಲೆಯನ್ನು ಹಿಡಿದು, ಬಲಗೈ ಕತ್ತಿಯು ತಿರುಗುವಂತೆಮಾಡಿ ಮೃತ್ಯುಂಜಯ ಮಂತ್ರವನ್ನು ನೆನೆದು ತನ್ನ ಕುತ್ತಿಗೆಯನ್ನು ಚಕ್ಕನೆ ಒಂದೇ ಪೆಟ್ಟಿಗೆ ಕೊಯ್ದುಹಾಕಲು ಮುಖದಲ್ಲಿ ತ್ರಿಪುಂಡ್ರ ಯುಕ್ತವಾದ ವೀರರಸವೂ, ಹುರಿ ಮೀಸೆಗಳೂ ಕುಣಿದಾಡುತ್ತಿರಲು ಹರ ಹರ, ಶಿವ ಶಿವ ಎಂಬ ನಾಮವನ್ನು ಉಚ್ಚರಿಸುವ ಶಿರಸ್ಸು ಎಡಗೈಯಲ್ಲಿಯೂ, ಭಕ್ತರಲ್ಲದ ಭವಿಗಳನ್ನು ನಾಶಮಾಡುವ ತ್ರಿಶೂಲದಂತೆ ಬಲಗೈಯಲ್ಲಿ ಖಡ್ಗವೂ ಹೊಳೆಯುತ್ತಿರಲು ಏಕಾಂತ ರಾಮಯ್ಯನು ವೀರಾವೇಶದಿಂದ ಕುಣಿ

ಯುತ್ತ ಸಮಸ್ತರು ಹೊಗಳಿ ನಮಸ್ಕರಿಸಿ ಪೂಜಿಸುತ್ತ ಹಿಂದೆಬರಲು, ಶಿವಶರಣರು ಉಘೇ, ಉಘೇ ಎಂಬ ಜಯಧ್ವನಿಯನ್ನು ಮಾಡುತ್ತಿರಲು ರಾಜನು ಆಶ್ಚರ್ಯಯುತನಾಗಿ ಹಿಂದೆ ಬರುತ್ತ ಶಿವಮತದ ಮಹಿಮೆಯನ್ನು ಹೇಳುವದೂ, ತಿಳಿಯುವದೂ ಅಸಾಧ್ಯವೆಂದು ಹೇಳುತ್ತ ಬರುತ್ತಿರಲು ಏಕಾಂತ ರಾಮಯ್ಯನು ಏಳು ದಿವಸಗಳವರೆಗೂ ಆ ಪಟ್ಟಣದ ರಾಜಬೀದಿಗಳಲ್ಲಿ ಮೆರವಣಿಗೆ ಬಂದು ಎಂಟನೆಯ ದಿವಸ ಎಂದಿನಂತೆ ದೇವಾಲಯದ ಮುಂಭಾಗಕ್ಕೆ ಬಂದು ಹರಹರ ಮಹಾದೇವ ಎಂದು ಹೇಳುತ್ತ ರುಂಡವನ್ನು ಮುಂಡಕ್ಕೆ ಸೇರಿಸಲು ಅವೆರಡೂ ಕೂಡಿಕೊಂಡು ಮೊದಲಿಗಿಂತಲೂ ತೇಜಸ್ವಿಯಾಗಿ ಹೊಳೆದನು. ಆಗ ಸಮಸ್ತರೂ ಆತನ ಪಾದಗಳಿಗೆ ನಮಸ್ಕರಿಸಲು ಜಗದೀಶ್ವರನಾದ ಪರಶಿವನೇ ಮುಖ್ಯ ದೈವವೆಂಬುದನ್ನು ಸಿದ್ಧಾಂತಮಾಡಿ ಶಿವಭಕ್ತಿಯ ಮಹಿಮೆಯನ್ನು ಪ್ರಕಾಶಪಡಿಸಿದ ಏಕಾಂತರಾಮಾರ್ಯನನ್ನು ಭಕ್ತಿಯಿಂದ ಪೂಜಿಸುತ್ತ ಆತನ ಪ್ರಸಾದದಿಂದ ಬಸವೇಶ್ವರನು ಸಂತುಷ್ಟನಾಗಿದ್ದನು.

## — ಸೊಡ್ಡಳಿ ಬಾಚರಸನ ಕಥೆಯು —

ಶಿವಭಕ್ತಿ ಸಂಪನ್ನನೂ, ವೀರಶೈವಾಚಾರ ತತ್ಪರನೂ, ಪರದೈವ, ಪರವಾದಿಭಯಂಕರನೂ, ದುಷ್ಟನಿಗ್ರಹ ಶಿಷ್ಟಪರಿಪಾಲಕನೂ, ವೇದ ವೇದಾಂತ ಪುರಾಣ ನ್ಯಾಯ ಮೀಮಾಂಸಾದಿಗಳ ಮಾರ್ಗದಿಂದ ಸಭಾಮಧ್ಯದಲ್ಲಿ ಶಿವಸಿದ್ಧಾಂತವನ್ನು ಪ್ರಚುರಗೊಳಿಸಿ ಇತರ ಮತಗಳನ್ನು ಖಂಡಿಸಿ ಯಶೋಮಯನಾದವನೂ, ಮಲತ್ರಯರಹಿತನೂ, ಶಿವೈಕ್ಯ ಜನಿತಮಾನಸನೂ, ಜಿತೇಂದ್ರಿಯನೂ ಆಗಿ ಮೆರೆಯುತ್ತಿದ್ದ ಸೊಡ್ಡಳಿ ಬಾಚರಸನೆಂಬ ಶಿವಶರಣನು ಅದೇ ಕಲ್ಯಾಣಪಟ್ಟಣದಲ್ಲಿ ಇರುತ್ತಿದ್ದನು. ಈತನ ಮಹಿಮೆಯನ್ನು ಶಿವಶರಣರು ನೋಡಿ ನೋಡಿ ನಂದೀಶ್ವರನ ಸರ್ವಜ್ಞತ್ವವನ್ನೂ, ಭೃಂಗಿಯ ಭಕ್ತಿಯನ್ನೂ, ವೀರಭದ್ರನ ಪರಾಕ್ರಮವನ್ನೂ, ವಾಮನ, ಭೃಗು, ದಧೀಚಿಗಳ ಶಾಪಾನುಗ್ರಹ ಶಕ್ತಿಯನ್ನೂ, ಗೌತಮಾದಿಗಳ ತಾರ್ಕಿಕ ಪಾಂಡಿತ್ಯವನ್ನೂ, ಜಗತ್ಕರ್ತನಾದ ಸದ್ಗುರುವು ಸಮೂಹಗೊಳಿಸಿ ಈ ಬಾಚರಸನನ್ನು ನಿರ್ಮಿಸಿದನೆಂದು ಹೊಗಳುತ್ತಿದ್ದರು. ಭಕ್ತಿ ಸಂಪನ್ನನಾದ ಈತನು ಪ್ರತಿ

ವರ್ಷ ಶಿವರಾತ್ರಿಯ ದಿವಸ ಸೌರಾಷ್ಟ್ರದೇಶದಲ್ಲಿರುವ ಶಿವದೇವಾಲಯವನ್ನು ಹೊಕ್ಕು ಸೋಮನಾಥನನ್ನು ಪೂಜಿಸಿ ತೀರ್ಥ ಪ್ರಸಾದವನ್ನು ಗ್ರಹಿಸಿ ರಾತ್ರಿಯೆಲ್ಲ ಜಾಗರಣೆಮಾಡಿ ಬರುವ ವ್ರತವನ್ನು ಕೈಕೊಂಡು ನೆರವೇರಿ ಸುತ್ತಿದ್ದನು. ಎಂದಿನಂತೆ ಶಿವರಾತ್ರಿಯು ಬರಲು ಬಾಚಯ್ಯನು ಸೌರಾ ಷ್ಟ್ರಕ್ಕೆ ಹೋಗಿ ಭಾಗೀರಥೀ ಪತಿಯಾದ ಸೋಮನಾಥನನ್ನು ಪೂಜಿಸಿ ಬರ ಬೇಕಾಗಿದೆ ಎಂದು ಬಿಜ್ಜಳ ಭೂಪಾಲನಲ್ಲಿ ಅರಿಕೆ ಮಾಡಿಕೊಂಡನು. ಅದನ್ನು ಕೇಳಿ ಆ ಅರಸನು ನಸುನಕ್ಕು ಆಹಾ! ಭಕ್ತಿಯನ್ನೂ, ಊಳಿಗವನ್ನೂ ಯುಕ್ತಿಯಿಂದ ಮಾಡಬೇಕೆಂದು ಬಯಸಿರುವೆಯೋ? ನಾಳೆಯದಿನ ನಮ್ಮ ಭಂಡಾರದಲ್ಲಿರುವ ಧಾನ್ಯವನ್ನು ಅಳತೆಮಾಡಬೇಕಾಗಿದೆ ನೀನು ಸೌರಾಷ್ಟ್ರಕ್ಕೆ ಹೋಗಿ ಬರುವದಕ್ಕೆ ಹೇಗೆ ಆಗುವದು? ಸೂಳೆತನ, ಬಾಣಂತಿತನಗಳೆ ರಡನ್ನೂ ಏಕಕಾಲದಲ್ಲಿ ಮಾಡುವದು ಹೇಗೆ? ಬಿಲ್ಲು ಬಾಣಗಳನ್ನು ಒಂದೇ ಕೈಯಿಂದ ಹೂಡುವದು ಸಾಧ್ಯವೇ? ಎರಡು ಕಣಗಳನ್ನು ಏಕಕಾಲದಲ್ಲಿ ಕಾದುಕೊಂಡಿದ್ದವನಂತೆ ನಿನ್ನ ಉಳಿಗವು ಹಾಸ್ಯಾಸ್ಪದವಾಗಿದೆ. ನಿನ್ನ ಶಿವಪೂಜೆ ನಮಗೆ ತಿಳಿಯದು. ಮಾಡಿದರೆ ಮಾಡು ಬಿಟ್ಟರೆ ಬಿಡು. ನಮ ಗೊಂದೂ ತಿಳಿಯದು. ನಮ್ಮ ಕೆಲಸಕ್ಕೆ ಬಂದರೆ ಸರಿ. ಶಿವನಲ್ಲಿ ಭಕ್ತಿ ತೋರಿಸಿ ಅವನ ಕರುಣೆಗೆ ನೀನು ಪಾತ್ರನಾಗಿದ್ದರೆ ಆ ಶಿವನು ಇಲ್ಲಿಗೇ ಏಕೆ ಬರಲಾರನು? ನೀನು ಭಕ್ತನೇ ಆಗಿದ್ದರೆ ಆ ಶಿವನನ್ನು ಇಲ್ಲಿಗೇ ಬರಮಾಡಿ ಪೂಜಿಸು. ಇಲ್ಲದಿದ್ದರೆ ನಿನ್ನ ಊಳಿಗವನ್ನು ಮುಗಿಸಿಕೊಂಡು ಸುಖವಾಗಿರು. ಎಂದು ಹಾಸ್ಯಮಾಡಿ ನುಡಿದನು. ಬಾಚರಸನು ಈ ರಾಜನು ನನ್ನನ್ನು ಯಾತ್ರೆಗೆ ಹೋಗಗೊಡುವದಿಲ್ಲ. ಪರಶಿವನು ತನ್ನ ಬಳಿಗೆ ನನ್ನನ್ನು ಕರೆಯಿಸಿಕೊಳ್ಳದೆ ಬಿಡುವದಿಲ್ಲ. ಹಾಗಲ್ಲದಿದ್ದರೆ ತಾನಾದರೂ ನನ್ನ ಬಳಿಗೆ ಬಂದು ದರ್ಶನವನ್ನು ಕೊಟ್ಟು ನನ್ನ ವ್ರತವನ್ನು ಸಾಂಗ ಗೊಳಿಸುವನೆಂದು ನಂಬಿ ಸುಮ್ಮನಿದ್ದನು. ಅದೇ ದಿವಸ ಶಿವನು ವೇಷಧಾರಿ ಯಾಗಿ ಬಲಗೈಯಲ್ಲಿ ನಂದಿಯ ಕೋಲನ್ನೂ, ಎಡಗೈಯಲ್ಲಿ ಒಂದು ಓಲೆ ಯನ್ನೂ ಹಿಡಿದುಕೊಂಡು ಓಡಿಬಂದ ಆಯಾಸದಿಂದ ದಣಿದು ಬಳಲಿದವನಂತೆ ಬೆವರಿನಿಂದ ತೋಯಿಸಿಕೊಂಡು ಬಾಚರಸನ ಮನೆಗೆ ಬಂದು ನಿಂತು ಎಲೈ- ಬಾಚರಸನೇ, ಪರಶಿವನು ಈ ದಿವಸ ರಾತ್ರಿಗೆ ನಿನ್ನ ಮನೆಗೆ ಬರುವನಂತೆ

ಅದನ್ನು ನಿನಗೆ ತಿಳಿಸುವದಕ್ಕಾಗಿ ನನ್ನ ಕೈಯಲ್ಲಿ ಈ ಓಲೆಯನ್ನು ಬರೆದು ಕೊಟ್ಟನು. ನೀನು ಸಿದ್ಧನಾಗಿ ಚೊಕ್ಕಸ, ಭಾಂಡಾರಗಳನ್ನು ನಿರ್ಮಲವಮಾಡಿ ಅಲಂಕರಿಸಿಕೊಂಡಿರುವುದು. ಎಂದು ಹೇಳಿ ಆ ಪತ್ರವನ್ನು ಆತನ ಕೈಗೆ ಕೊಟ್ಟನು. ಆತನು ಆ ಪತ್ರಿಕೆಯನ್ನು ತಲೆಯ ಮೇಲಿಟ್ಟುಕೊಂಡು ಕಣ್ಣಿಗೊತ್ತಿಕೊಂಡು ಸಂತೋಷದಿಂದ ಓದುತ್ತಿರುವ ವೇಳೆಯಲ್ಲಿ ಓಲೆಯನ್ನು ತಂದವನು ನಿಂತಲ್ಲಿಯೇ ಮಾಯವಾದನು.. ಇದನ್ನು ನೋಡಿ ಬಾಚರಸನು ಓಹೋ ! ಆಶ್ಚರ್ಯವು ! ಕರುಣಾನಿಧಿಯಾದ ಶಿವನು ತಾನು ಬರುವದನ್ನು ನನಗೆ ಮೊದಲೇ ಎಚ್ಚರಿಸುವದಕ್ಕಾಗಿ ಇಲ್ಲಿಗೆ ಬಂದಿದ್ದನೆಂದು ತಿಳಿದು ಪರಮ ಸಂತುಷ್ಟನಾಗಿ ಶಿವಶರಣರಿಗೆಲ್ಲ ಕಾಗದವನ್ನು ಓದಿ ಹೇಳಲು ಬಸವೇಶ್ವರನಿಗೂ ಈ ವಾರ್ತೆಯು ತಿಳಿಯಿತು. ಆತನು ಬಹು ಸಂತೋಷಭರಿತನಾಗಿ ಬಾಚರಸನ ಮನೆಗೆ ಬಂದು ಆತನ ಪಾದಗಳಿಗೆ ಮಣಿದು ಪಟ್ಟಣವನ್ನೆಲ್ಲ ಶೃಂಗಾರ ಮಾಡುವಂತೆ ಪುರಜನರಿಗೆ ಆಜ್ಞೆಮಾಡಲು ಆ ಪಟ್ಟಣದ ಜನರು ಗುಡಿ, ತಳಿರು, ತೋರಣಗಳಿಂದ ಪುರವನ್ನು ಅಲಂಕರಿಸಿದರು. ಭಕ್ತರು ತಮ್ಮ ತಮ್ಮ ಮನೆಗಳನ್ನು ಸಾರಣಿ ಕಾರಣಿಗಳಿಂದ ಅಂದವಾಗಿ ಸಿಂಗರಿಸಿ ಆನಂದದಿಂದ ಇದ್ದರು. ಉಳಿದ ಜನರು ಶಿವನಾಮವನ್ನು ಪಠಿಸುತ್ತಿರಲು ಗಗನ ಮಾರ್ಗದಿಂದ ಪುಷ್ಪವೃಷ್ಟಿಯು ಸುರಿಯಲು ದೇವದುಂದುಭಿಯು ಘೋರ್ಗರೆಯುತ್ತಲಿದ್ದಿತು. ಆಗ ಭಕ್ತರೆಲ್ಲರೂ ಜಯ ಧ್ವನಿಯನ್ನು ಮಾಡುತ್ತಿರಲು ಪರಶಿವನು ನಂದಿವಾಹನವನ್ನೇರಿ ಆಕಾಶ ಮಾರ್ಗದಿಂದ ಭೂಮಿಗಿಳಿದು ಬಂದು ಭತ್ತದ ಕಣಜದಲ್ಲಿ ಲಿಂಗರೂಪದಿಂದ ಉದ್ಭವಿಸಿದನು. ಈ ವಾರ್ತೆಯು ಲೋಕವನ್ನೆಲ್ಲ ವ್ಯಾಪಿಸಿತು. ಬಿಜ್ಜಳನು ತಾನು ಹೇಳಿದಂತೆ ಈ ಬಾಚರಸನು ಶಿವನನ್ನು ತನ್ನ ಮನೆಗೆ ಕರೆದುತಂದನಲ್ಲಾ ! ಈತನ ಮಹಿಮೆಯು ಅಸಾಧಾರಣವಾದುದು. ಎಂದು ಹೊಗಳಿ ತಲೆದೂಗಿದನು. ಹಿಂದಕ್ಕೆ ಸಿದ್ಧರಾಮದೇವನು ಸೊನ್ನಲಾಪುರಕ್ಕೆ ಮಲ್ಲಿಕಾರ್ಜುನನ್ನೂ, ಪುಲಿಗೆರೆ ಪಟ್ಟಣಕ್ಕೆ ಆದಯ್ಯನು ಸೋಮನಾಥನನ್ನೂ ಬರಮಾಡಿದ್ದರೆಂಬುದನ್ನು ಕೇಳಿದ್ದೆವು. ಈಗ ಬಾಚರಸನು ತನ್ನ ಮನೆಗೆ ಶಿವನನ್ನು ಎಲ್ಲರೂ ನೋಡುತ್ತಿರುವಂತೆ ಬರಮಾಡಿ ಕಣಜದಲ್ಲಿ ಕೂಡ್ರಿಸಿದನಲ್ಲಾ ! ಇಂತಹ ಮಹಿಮರು ಈ ಲೋಕದಲ್ಲಿ ಮತ್ತಾರು ಇರುವರು? ಎಂದು ಪುರಜನರು ಹೊಗಳಲಾರಂಭಿ

ಸಿದರು. ಆ ಭಕ್ತನು ಶಿವನು ನೆಲೆಗೊಂಡ ಸ್ಥಳದಲ್ಲಿ ರತ್ನಮಯವಾದ ಗುಡಿಯನ್ನು ನಿರ್ಮಿಸಿ ಶಿವರಾತ್ರಿಯ ದಿವಸ ಸಾಂಗೋಪಾಂಗವಾಗಿ ಶಿವನನ್ನು ಪೂಜಿಸಿ ತನ್ನ ವ್ರತವನ್ನು ನೆರವೇರಿಸಿ ಸುಖದಿಂದ ಇದ್ದನು. ಈ ಪ್ರಕಾರ ಬಾಚರಸನು ಶಿವಭಕ್ತಿ ಧುರೀಣನಾಗಿ ಪರಶಿವನನ್ನು ಸ್ವಾಧೀನಪಡಿಸಿಕೊಂಡು ಮಹಿಮಾನ್ವಿತನಾಗಿರುವದನ್ನು ನೋಡಿ ಸಹಿಸಲಾರದೆ ಬಿಜ್ಜಳನು ತನ್ನ ಅರಮನೆಯ ಮುಂದೆ ಒಂದು ಗುಡಿಯನ್ನು ಕಟ್ಟಿಸಿ ಅಲ್ಲಿ ಪ್ರತಾಪ ನಾರಾಯಣನ ಮೂರ್ತಿಯನ್ನು ಸ್ಥಾಪಿಸಬೇಕೆಂದು ಸಕಲ ಪರಿವಾರ ಸಮೇತ ಸಭೆ ಕೂಡಿಸಿರಲು, ಬಿಜ್ಜಳನು ಸುತ್ತಲೂ ನೋಡಿ ಈ ಸಭೆಗೆ ಸರ್ವರೂ ಬಂದಿದ್ದಾರೆ. ಆದರೆ ಬಾಚರಸನು ಬಾರದಿರಲು ಕಾರಣವೇನು ? ಶಿವಭಕ್ತನಾದ ತಾನು ಸರ್ವಶ್ರೇಷ್ಠನೆಂಬ ಹೆಮ್ಮೆಯಿಂದ ಮೆರೆಯುತ್ತ ನಮ್ಮ ಸಭೆಗೆ ಬಂದಿರುವದಿಲ್ಲವೋ ? ಎಂದು ಕುಪಿತನಾಗಿ ನುಡಿಯಲು ಬಳಿಯಲ್ಲಿ ಕುಳಿತಿದ್ದ ಬಸವೇಶ್ವರನು ರಾಜನನ್ನು ಕುರಿತು ಅಯ್ಯಾ, ಬಾಚರಸನ ಮೇಲೆ ನೀನು ಮಾಡುವ ಕೋಪವು ನಿಷ್ಕಾರಣವಾದುದು. ಇದು ದೊರೆಗಳಿಗೆ ಯೋಗ್ಯವಾದದ್ದಲ್ಲ. ಅವನು ನಿನ್ನ ಆಜ್ಞೆಯನ್ನು ಮೀರಿಲ್ಲ. ಶತ್ರುಸೈನ್ಯದ ಯುದ್ಧರಂಗದಲ್ಲಿ ಮಾತ್ರ ನಿನ್ನನ್ನು ತೊರೆದು ಹೋಗಿಲ್ಲ. ಆದ್ದರಿಂದ ಅವನು ನಿರಪರಾಧಿಯು. ಆದರೆ ಶಿವಭಕ್ತರು ಶಿವನಲ್ಲದ ಅನ್ಯದೇವತೆಗಳನ್ನು ತೃಣಕ್ಕಿಂತಲೂ ಲಘುವಾಗಿ ಕಾಣುವರು. ಭಕ್ತಾಗ್ರಗಣ್ಯನಾದ ಭೃಂಗಿಯು ಪಾರ್ವತಿಯನ್ನು ಅವಮಾನ ಮಾಡಿ ಶಿವನಿಗೆ ಮಾತ್ರ ನಮಸ್ಕರಿಸಿದನು. ಹೀಗಿರುವಾಗ ಶಿವಭಕ್ತನಾದ ಬಾಚರಸನು ನಿನ್ನ ವಿಷ್ಣುದೇವಾಲಯವನ್ನು ಹೇಗೆ ಪ್ರವೇಶಿಸುವನು ? ಘಂಟಾಕರ್ಣನೆಂಬ ಶಿವಭಕ್ತನು ಇತರ ದೇವತೆಗಳ ಹೆಸರು ತನಗೆ ಕೇಳಬಾರದೆಂದು ಎರಡೂ ಕಿವಿಗಳಿಗೆ ಗಂಟೆಗಳನ್ನು ಕಟ್ಟಿಕೊಂಡು ಸದಾ ಶಬ್ದಮಾಡುತ್ತಿದ್ದನೆಂಬುದನ್ನು ನೀನು ಕೇಳಿಲ್ಲವೇ ? ಆದರೂ ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುವೆನು ಕೇಳು. ಎಂದು ಬಸವೇಶ್ವರನು ಬಿಜ್ಜಳ ಭೂಪಾಲನಿಗೆ ಹೇಳತೊಡಗಿದನು.

## — ಅರ್ಯಮನ ಕಥೆಯು —

ತನ್ನ ಎದುರಿನಲ್ಲಿ ಶಿವನನ್ನು ಬಿಟ್ಟು ಅನ್ಯದೇವರ ಹೆಸರನ್ನು ಹೇಳುವ

ಜನರನ್ನು ಕತ್ತರಿಸಿ ಹಾಕುತ್ತೇನೆ ಎಂದು ಶಪಥಮಾಡಿ ಅದರಂತೆ ನಡೆದು ಕೊಳ್ಳುತ್ತಿದ್ದ ಶಿವಭಕ್ತಿ ದುರಂಧರನಾದ ಅರ್ಯಮನೆಂಬ ಶಿವಭಕ್ತನು ಮಹೇಂದ್ರ ಮಂಡಲವೆಂಬ ಊರಲ್ಲಿ ವಾಸಮಾಡುತ್ತಿದ್ದನು. ಹೀಗಿರಲು ಒಂದು ದಿವಸ ಒಬ್ಬ ಬ್ರಾಹ್ಮಣ ಭಿಕ್ಷುಕನು ಆ ಅರ್ಯಮನ ಮನೆಗೆ ಬಂದು ರುದ್ರಸೂಕ್ತವನ್ನು ಹೇಳಿ ಭಿಕ್ಷೆಯನ್ನು ಬೇಡಲು ಅರ್ಯಮನು ಅಕ್ಕಿಯ ಭಿಕ್ಷೆ ನೀಡಿದನು. ಆಗ ಸ್ವಲ್ಪ ಅಕ್ಕಿಯ ಕಾಳುಗಳು ಕೆಳಗೆ ಚೆಲ್ಲಲು ಅದನ್ನು ನೋಡಿ ಆ ಬ್ರಾಹ್ಮಣನು ಹರಿಹರಿ ಎಂದು ಆ ಕಾಳುಗಳನ್ನು ಆಯ್ದುಕೊಳ್ಳು ತ್ತಿರಲು ಅದನ್ನು ನೋಡಿದ ಅರ್ಯಮನು ಕೋಪಾವಿಷ್ಟನಾಗಿ ಕೆಂಪಾದ ಕಣ್ಣುಗಳುಳ್ಳವನಾಗಿ ತನ್ನ ಕೈಯಲ್ಲಿಯ ಕುಡುಗೋಲಿನಿಂದ ಆ ಹಾರುವ ನನ್ನು ಹೊಡೆದು ಕೊಂದನು. ಇದನ್ನು ಕೇಳಿದ ಉಳಿದ ಬ್ರಾಹ್ಮಣರು ಕೋಪ ದಿಂದ ಕುದಿಯುತ್ತ ಭಿಕ್ಷೆಯನ್ನು ಹಾಕಲು ತನಗೆ ಗತಿಇದ್ದರೆ ಹಾಕಬೇಕು. ಇಲ್ಲ ವಾದರೆ ಗತಿಯಿಲ್ಲವೆಂದು ಹೇಳಬೇಕು. ಅದೂ ಅಲ್ಲದೆ ರಾಜಭಯವೂ, ಲೋಕಾಪವಾದವೂ, ಬ್ರಹ್ಮಹತ್ಯ ದೋಷವೂ ಬರುವದೆಂಬ ದಿಗಿಲು ಸಹ ಇಲ್ಲದೆ ಈ ಬಡಜಂಗಮನು ಭಿಕ್ಷೆಗೆ ಬಂದ ಬ್ರಾಹ್ಮಣನನ್ನು ಕೊಲ್ಲಬಹುದೇ ? ಈ ಧೂರ್ತನು ಮಾಡಿದ ಕೆಲಸವನ್ನು ರಾಜನಲ್ಲಿ ದೂರಿಕೊಳ್ಳೋಣವೆಂದು ಹೋಗಿ ಹೇಳಿಕೊಳ್ಳಲು ಆತನು ಅತಿ ಭೀಕರ ಕೋಪದಿಂದ ಕಿಡಿಕಿಡಿಯಾಗಿ ಅರ್ಯಮನನ್ನು ಕರೆಯಿಸಿ ನಿರಪರಾಧಿಯಾದ ಹಾರುವನನ್ನು ಕೊಂದ ಕಾರಣ ವೇನು ? ಸತ್ಕುಲ ಪ್ರಸೂತನೂ, ವೇದನಿಷ್ಠಾಗರಿಷ್ಠನೂ, ವಿದ್ವಾಂಸನೂ, ಆದ ಆ ಬ್ರಾಹ್ಮಣನನ್ನು ಕೊಲ್ಲುವದು ಶಿವಭಕ್ತನಾದ ನಿನಗೆ ಯೋಗ್ಯವಾದ ಕೆಲ ಸವೇ ? ಎಲೈ ಚಾಂಡಾಲನೇ, ನೀನು ನಿಷ್ಕಾರಣವಾಗಿ ಆತನನ್ನು ಕೊಂದಿ ದ್ದರೆ ಸಪ್ತಸಮುದ್ರಗಳನ್ನು ಹೊಕ್ಕರೂ ನಿನ್ನನ್ನು ಕೊಲ್ಲಿಸದೆ ಬಿಡೆನು ಎಂದು ಗರ್ಜಿಸಲು ಅರ್ಯಮನು ಎಲೈ— ದೊರೆಯೇ, ಆತನು ಮಾಡಿದ ತಪ್ಪನ್ನು ಶಿವನೇ ಬಲ್ಲನು. ನಾನು ನಿನಗೆ ಹೇಳುವದಿಲ್ಲ. ಕಾರಣವಿಲ್ಲದೆ ನಾನು ಆತ ನನ್ನು ಕೊಂದಿಲ್ಲ. ಶಿವಭಕ್ತರನ್ನು ಕೊಲ್ಲುವದಕ್ಕೂ ಕಾಯುವದಕ್ಕೂ ಶಿವನೇ ಕರ್ತನಲ್ಲದೆ ಅನ್ಯರಿಂದ ಆಗದು. ಹೀಗಿರುವಾಗ ನನ್ನನ್ನು ಕೊಲ್ಲುವದಕ್ಕೆ ನೀನೆಷ್ಟರವನು ? ನಿನ್ನ ಗರ್ವದ ಮಾತುಗಳನ್ನು ತೊರೆದು ಸುಮ್ಮನಿರು. ಎನ್ನಲು ರಾಜನು ಕ್ರೋಧಾವೇಶದಿಂದ ಈ ದುರುಳನನ್ನು ಈ ಕ್ಷಣವೇ ಕಡಿದು

ಹಾಕಿರೆಂದು ತನ್ನ ಆಳುಗಳಿಗೆ ಅಪ್ಪಣೆ ಮಾಡಲು ಅವರು ಅವನನ್ನು ಅರಣ್ಯಕ್ಕೆ ಎಳೆದೊಯ್ಯುತ್ತಿರಲು ಮಾರ್ಗದಲ್ಲಿ ಒಂದು ಶಿವದೇವಾಲಯವನ್ನು ಕಂಡು ಆರ್ಯಮನು ಒಳಹೊಕ್ಕು ಶಿವನೇ, ನೀಲಕಂಠನೇ, ಭಕ್ತವತ್ಸಲನೇ ಎಂದು ಹೇಳುತ್ತ ಈ ನೀಚರ ಮಧ್ಯದಲ್ಲಿ ನನ್ನನ್ನು ಶಿಕ್ಷಿಸಿ ಮರಣಕ್ಕೆ ಗುರಿಮಾಡು ವದು ನ್ಯಾಯವೇ ? ಜಾಗ್ರತೆಯಾಗಿ ನನ್ನನ್ನು ಉದ್ಧರಿಸಬೇಕೆಂದು ಬೇಡಿ ಕೊಳ್ಳುತ್ತಿರಲು ಒಮ್ಮೆಲೇ ಮೇಘ ಗರ್ಜನೆಯಾದಂತಾಗಿ ಲಿಂಗವು ಎರಡು ಭಾಗವಾಗಿ ಒಡೆದು ಆರ್ಯಮನೇ ನುಗ್ಗು ಬೇಗನೆ ನುಗ್ಗಿ ಬಾ ಎಂದು ಕೂಗಿ ದಂತಾಗಲು ಅವನು ಲಿಂಗಮಧ್ಯದಲ್ಲಿ ಹಾರಿಬಿದ್ದನು. ರಾಜಭಟರು ಅವ ನನ್ನು ಕಾಣದೆ ಹುಡುಕಿ ನೋಡುತ್ತ ಶಿವದೇವಾಲಯದ ಲಿಂಗಮಧ್ಯದಲ್ಲಿ ಅಡಕವಾಗಿರುವ ಭಕ್ತನನ್ನು ಕಂಡು ಹಿಡಿಯಲು ಓಡಿಹೋಗಲು ಸೆರಗು ಮಾತ್ರ ಅವರ ಕೈಗೆ ಸಿಕ್ಕಿತು. ಲಿಂಗವು ಮೊದಲಿನಂತೆ ಕೂಡಿಕೊಳ್ಳಲು ಆ ವಸ್ತ್ರವು ಮಾತ್ರ ಹೊರಗೆ ನೇತಾಡಹತ್ತಿತು. ಅದನ್ನು ಆ ಊರ ಜನರೆ ಲ್ಲರೂ ನೋಡಿ ಆಶ್ಚರ್ಯಭರಿತರಾದರು ಇದೂ ಅಲ್ಲದೆ.

## — ವೀರ ಶಂಕರದಾಸನ ಕಥೆಯು —

ಅನ್ಯಮತದವರನ್ನೂ, ಪರದೈವವನ್ನೂ ಸ್ಪರ್ಶನ, ದರ್ಶನಾದಿಗಳನ್ನೂ ಸ್ವಪ್ನದಲ್ಲಿಯೂ ಮಾಡುವದಿಲ್ಲವೆಂದು ಕಟ್ಟಳೆಮಾಡಿಕೊಂಡಿದ್ದ ವೀರ ಶಂಕರ ದಾಸನೆಂಬ ಭಕ್ತನು ಭವಿಗಳೊಡನೆ ಮಾತನ್ನು ಸಹ ಆಡದೆ ಸುಮ್ಮನಿರುತ್ತಿ ದ್ದನು. ಆತನು ತ್ರಿಕಾಲದಲ್ಲಿ ಶಿವಪೂಜಾ ವ್ರತನಿಷ್ಠನಾಗಿ ಶಿವಭಕ್ತಿಯಿಂದ ಮೆರೆಯುತ್ತಿದ್ದನು. ಆತನು ಒಂದು ದಿವಸ ಮಲಗಿ ನಿದ್ರಿಸುತ್ತಿರುವಾಗ ಒಬ್ಬ ಭವಿಯು ತನ್ನನ್ನು ಸೋಂಕಿದಂತೆ ಕನಸು ಕಂಡು ಎಚ್ಚತ್ತು ಕುಳಿತು ಆಹಾ! ಮಾಲಿನ್ಯ ಮನುಷ್ಯನಾದ ಆ ಭವಿಯು ನನ್ನನ್ನು ಮುಟ್ಟಿರುವದರಿಂದ ಈ ದೇಹವನ್ನು ಶುದ್ಧಗೊಳಿಸುವ ಬಗೆ ಹೇಗೆ ? ಗಡಿಗೆಯು ಸುಟ್ಟರೆ ಮಾತ್ರ ಶುದ್ಧವಾಗುವ ಕಾರಣ ಈ ದೇಹವನ್ನು ಸುಟ್ಟು ಶುದ್ಧಮಾಡುವದೇ ಸರಿಯಾ ದದ್ದು ಎಂದು ತಿಳಿದು ಶ್ರೀಶೈಲಕ್ಷೇತ್ರಕ್ಕೆ ಹೋಗಿ ಅಲ್ಲಿಯ ಹಿರಣ್ಯೇಶ್ವರನ ಮುಂಭಾಗದಲ್ಲಿ ಅಗ್ನಿಕುಂಡವನ್ನು ತಯಾರಿಸಿ ಅದರ ಮೇಲೆ ಒಂದು ಕಾವಲಿ ಯನ್ನಿರಿಸಿ ಕೆಂಪಗೆ ಕಾವ ಕಾವಲಿಯ ಮೇಲೆ ತನ್ನ ಶರೀರವನ್ನು ಹೊರ

ಳಿಸಿ ಶುದ್ಧಗೊಳಿಸುತ್ತ ಶಿವನಾಮವನ್ನು ನೆನೆಯುತ್ತಿರಲು ಪರಶಿವನು ಆತನ ವೀರಭಕ್ತಿಗೆ ಮೆಚ್ಚಿ ಶಿವಸಾಯುಜ್ಯ ಪದವಿಯನ್ನು ಕೊಟ್ಟನು.

## — ಮಂಚಣಾರ್ಯನ ಕಥೆಯು —

ಹಿಂದಕ್ಕೆ ಕಾಶಿಯಲ್ಲಿ ಮಂಚಣಾರ್ಯನೆಂಬ ಶಿವಭಕ್ತನು ಮಹಿಮಾನ್ವಿತನಾಗಿದ್ದನು. ಆತನು ತ್ರಿಕಾಲದಲ್ಲಿಯೂ ತನ್ನ ಕೈಬೆರಳುಗಳನ್ನು ಕಡಿದು ಪರಶಿವನಿಗೆ ಸಮರ್ಪಿಸಿ ಪುನಃ ಪಡೆಯುತ್ತ ಈ ಬ್ರಹ್ಮಾಂಡಕ್ಕೆ ಪರಶಿವನಲ್ಲದೆ ಅನ್ಯದೈವವಿಲ್ಲೆಂದು ಶಾಸ್ತ್ರಾಗಮ, ಪುರಾಣಗಳಿಂದ ಶಿವಸಿದ್ಧಾಂತವನ್ನು ಸ್ಥಾಪಿಸಿ ಕ್ಷೀರಸಮುದ್ರದಂತೆ ಕೀರ್ತಿಶೇಷನಾಗಿ, ವಿಶ್ವೇಶ್ವರನ ಭಕ್ತರಾದ ಶಿವ ಶರಣರ ಪಾದಕಿಂಕರನಾಗಿ, ಪಂಡಿತೋತ್ತಮನಾಗಿ ವಿರಾಜಿಸುತ್ತಿದ್ದನು. ಇದನ್ನು ಕಂಡು ಪರಮತವಾದಿಗಳು ಈತನನ್ನು ಹೇಗಾದರೂ ಮಾಡಿ ಸೋಲಿಸಬೇಕೆಂದು ನಿಶ್ಚಯಿಸಿ ಒಂದು ಸ್ಥಳದಲ್ಲಿ ಗುಂಪುಕೂಡಿ ಮಂಚಣಾರ್ಯನನ್ನು ವಾದಕ್ಕೆ ಕರೆತಂದರು. ಆಗ ಆತನು ಶಾಸ್ತ್ರಪ್ರಮಾಣಗಳಿಂದ ಶಿವಸಿದ್ಧಾಂತವನ್ನು ಸ್ಥಾಪಿಸಿದರೂ ಅವರು ಸುಮ್ಮನಿರದೆ ಎಲಾ— ಶಿವಭಕ್ತನೇ, ಬಾಯ್ಬಡಕತನದಿಂದ ಮೆಲ್ಲನೆ ಸೋಲಿಸಿ ಗೆದ್ದರೆ ನಾವು ಸುಮ್ಮನಿರುವೆವೇ ? ಪ್ರತ್ಯಕ್ಷ ಪ್ರಮಾಣದಿಂದ ನೀನಾಡಿದ ಮಾತುಗಳನ್ನು ಸಿದ್ಧಮಾಡಿ ತೋರಿಸೆಂದು ನುಡಿಯಲು ಅಹಾ ! ಇದಾವ ದೊಡ್ಡ ಕೆಲಸ. ನೀವು ಭಕ್ತಿ ವಿಶ್ವಾಸಗಳಿಂದ ಪೂಜಿಸುವ ವಿಷ್ಣುವು ನಿಮ್ಮ ಎದುರಿನಲ್ಲಿಯೇ ಬಂದು ವಿಶ್ವೇಶ್ವರನಿಗೆ ನಮಸ್ಕರಿಸುವಂತೆ ಮಾಡುವೆನು. ನೋಡಿರಿ ಎಂದು ಹೇಳಿ ಶಿವಶರಣರ ಪಾದಧ್ಯಾನವನ್ನು ಮಾಡಿ ಪಕ್ಕದಲ್ಲಿರುವ ನಾರಾಯಣದೇವನ ಗುಡಿಯ ಕಡೆಗೆ ತಿರುಗಿ ಹೇ— ವಿಷ್ಣುವೇ, ಜಗತ್ಪೂಜ್ಯನಾದ ನಿನ್ನೊಡೆಯನಾದ ಪರಶಿವನ ದರ್ಶನವನ್ನು ಪಡೆಯಲು ಬೇಗ ಬಾ ಎಂದು ಕರೆಯಲು ಭಕ್ತಾಗ್ರೇಸರನಾದ ಮಂಚಣಾರ್ಯನ ಮಾತನ್ನು ಭಕ್ತವತ್ಸಲನಾದ ವಿಷ್ಣುವು ಮೀರಲಾರದೆ ಥಟ್ಟನೆ ಹೊರಗೆ ನಡೆದು ಬಂದು ವಿಶ್ವೇಶ್ವರನ ಪಾದಗಳಿಗೆ ನಮಸ್ಕರಿಸಿದನು. ಇದನ್ನು ಕಂಡು ಆ ಊರವರೆಲ್ಲರೂ ಆಶ್ಚರ್ಯಪಡುತ್ತಿರಲು ಪರವಾದಿಗಳು ಮಂಚಣಾರ್ಯನ ಪಾದಗಳಿಗೆ ನಮಸ್ಕರಿಸಿದರು. ಆಗ ಶಿವನಿಗೆ ನಮಸ್ಕಾರಮಾಡಿದ ವಿಷ್ಣುವಿಗ್ರಹವು ಕಾಶೀಕ್ಷೇತ್ರದಲ್ಲಿ ವಿಶ್ವೇಶ್ವರನ ದೇವಾಲ

ಯದ ಮುಂದೆ ಇಂದಿಗೂ ಇರುವದು. ವಿಷ್ಣುವೇ ಸರ್ವೋತ್ತಮನೆಂದು ಹೇಳುವವರು ಈ ಸಂಗತಿಯನ್ನು ಲಕ್ಷ್ಯದಲ್ಲಿಡಬೇಕು. ಪರಶಿವನ ಅವತಾರಿಗಳಾದ ಶಂಕರ ದಾಸಿಮಯ್ಯನು ಅನ್ಯದೈವವನ್ನು ಖಂಡಿಸಿ ಶಿವನೇ ಸರ್ವೋತ್ತಮನೆಂದು ಸಿದ್ಧಾಂತಗೊಳಿಸಲು ಅವನನ್ನು ಅಪಮಾನಗೊಳಿಸಬೇಕೆಂದು ಕೆಲವು ಮತಾಂಧರ ಬೋಧೆಯಿಂದ ಜಗದೇಕಮಲ್ಲನು ಪಂಚಲೋಹದಿಂದ ವಿಷ್ಣುವಿನ ಮೂರ್ತಿಯನ್ನು ಮಾಡಿಸಿರಲು ಆ ಭಕ್ತನು ತನ್ನ ಮಹಿಮೆಯಿಂದ ಅದನ್ನು ನೀರಾಗಿ ಕರಗಿಸಲಿಲ್ಲವೇ ? ಹೇ ಬಿಜ್ಜಳ ಭೂಪಾಲನೇ, ನೀನು ಶಿವಭಕ್ತರ ಮಹಿಮೆಯನ್ನು ಅನೇಕ ವೇಳೆ ನೋಡಿದಾಗ್ಯೂ ಅವರ ಮೇಲೆ ಕೋಪಮಾಡುವದು ಯೋಗ್ಯವೇ ? ಇದೂ ಅಲ್ಲದೆ ಪೂಜ್ಯಸ್ವರೂಪನಾದ ಸೋಮನಾಥನನ್ನು ಸೌರಾಷ್ಟ್ರ ದೇಶದಿಂದ ತನ್ನ ಮನೆಗೆ ಈ ಬಾಚರಸನು ಬರಮಾಡಿಕೊಂಡನು. ಮತ್ತು ಬೊಕ್ಕಸದಲ್ಲಿಯ ಧಾನ್ಯಗಳನ್ನು ಕೊಟ್ಟವರ ಹೆಸರು ಬರೆಯುವಬದಲು ಶಿವಪಂಚಾಕ್ಷರೀ ಮಂತ್ರವನ್ನು ಬರೆದು ಲೆಕ್ಕವನ್ನು ಕೇಳಿದಾಗ ಚಾಚೂ ತಪ್ಪದೆ ಹೇಳುತ್ತಿರುವ ಈ ಭಕ್ತನ ಮಹಿಮೆಯನ್ನು ಎಷ್ಟೆಂದು ಹೇಳಲಿಕ್ಕಾದೀತು ? ಇಂಥಾದ್ದರಲ್ಲಿ ಆ ಬಾಚರಸನ ಮೇಲೆ ನೀನು ಕೋಪಿಸಬಹುದೇ ? ಎಂದು ಹೇಳಿ ವಿವೇಕಿಗಳಾದ ತನ್ನ ಭಕ್ತರ ಸಂಗಡ ಬಾಚರಸನನ್ನು ಬರುವಂತೆ ಹೇಳಿ ಕಳಿಸಲು ಆತನು ತನ್ನ ಆಪ್ತರೊಡನೆ ಸಭೆಗೆ ಬಂದು ಬಸವೇಶ್ವರನಿಗೆ ನಮಸ್ಕರಿಸಿ ಶಿವಭಕ್ತ ಸಮೂಹಕ್ಕೆ ವಂದಿಸಿ ರಾಜನ ಮುಖವನ್ನು ನೋಡಲು, ದೊರೆಯು ಕುಪಿತನಾಗಿ ಆ ಬಾಚರಸನನ್ನು ಕುರಿತು ಎಲೈ— ಶಿವಭಕ್ತನೇ, ಜಗತ್ಪಾಲಕನಾದ ನಾರಾಯಣ ವಿಗ್ರಹದ ಪ್ರತಿಷ್ಠಾಪನೆಗಾಗಿ ಸರ್ವರೂ ಬಂದಿರುವಾಗ ನೀನು ಮಾತ್ರ ಬಾರದೆ ಇರಬೇಕೇ? ಗರ್ವದಿಂದ ಕೂಡಿದ ನಿನ್ನ ಹೆಮ್ಮೆಯನ್ನು ಎಷ್ಟೆಂದು ಹೇಳೋಣ ಎಂದು ಗರ್ಜಿಸಲು ಅದಕ್ಕೆ ಆತನು— ರಾಜನೇ, ಪರಶಿವನು ತನ್ನ ಮಗನಾದ ಮನ್ಮಥನನ್ನು ಕಣ್ಣಿನ ಕಿಡಿಯಿಂದ ಸುಡುವ ಕಾಲದಲ್ಲಿ ಜಗತ್ಪೂಜ್ಯನೂ, ಬ್ರಹ್ಮಾಂಡ ಪಾಲಕನೂ ಆದ ನಾರಾಯಣನು ಏನು ಮಾಡುತ್ತಿದ್ದನು? ಲೋಕವನ್ನು ಕಾಪಾಡುವ ಶಕ್ತಿಯುಳ್ಳವನು ಹತ್ತು ಅವತಾರಗಳನ್ನು ಎತ್ತಿ ಏಕೆ ಮರಣ ಹೊಂದಿದನು ? ಬ್ರಹ್ಮನಿಗೆ ಜಗತ್ಕರ್ತನೆನ್ನುವ ಮಾತು ಸಹ ಸುಳ್ಳು. ಪರಮೇಶ್ವರನು ತನ್ನ ತಲೆಯನ್ನು ಕತ್ತರಿಸಿದಾಗ ಸೃಷ್ಟಿಯನ್ನು

ನಿರ್ಮಿಸುವ ಶಕ್ತಿಯುಳ್ಳ ಬ್ರಹ್ಮನು ತನ್ನ ತಲೆಯನ್ನು ಪುನಃ ಏಕೆ ಹುಟ್ಟಿಸಿ ಕೊಳ್ಳಲಿಲ್ಲ ? ಭವಬಂಧಿಗಳು ಲೋಕೇಶ್ವರರಾಗುವರೇ? "ಏಕೋ ರುದ್ರೋನ ದ್ವಿತೀಯಾಯತಸ್ಥೇ ಯಸ್ಮಾನ್ನಾ ಪರಮಸ್ತಿಕಿಂಚಿತ್, ಶಿವ ಏಕೋಧ್ಯೇಯಃ, ತಸ್ಮಾತ್ಸರ್ವಗತ ಶಿವಃ" ಎಂಬ ವೇದಾಗಮ ವಾಕ್ಯದಂತೆ ಪಶುಪತಿಯೂ, ಅಭವನೂ ಆದ ಲೋಕೇಶ್ವರನು ಶಿವನೊಬ್ಬನೇ ಅಲ್ಲದೆ ಮತ್ತಾರೂ ಇಲ್ಲ. ಆದ್ದರಿಂದ ಪರಶಿವನೇ ಲೋಕದ ಸೃಷ್ಟಿ, ಸ್ಥಿತಿ, ಲಯಗಳಿಗೆ ನಿಯಾಮಕನು. ವಿಷ್ಣು ಮೊದಲಾದ ದೇವತೆಗಳು ಭಕ್ತಿಯುಕ್ತರಾಗಿ ಶಿವನನ್ನು ಪೂಜಿಸುತ್ತಿರು ವವನ್ನು ನೀನು ಕೇಳಿಲ್ಲವೇ ? ಮೃತ್ಯುವಶರು ಮೃತ್ಯುಂಜಯನಿಗೂ, ಭವ ಬದ್ಧರು ಅನಾದಿ ಮೂರ್ತಿಗೂ, ವಿಷಭೀತರು ವಿಷಹರನಿಗೂ, ಹೇಗೆ ಸಮಾನ ರಾಗುವರು ? ಶಿವ, ಶಂಭು, ಅಭವ, ಪಶುಪತಿ, ಕಾಲಾಂತಕ, ಮಹಾದೇವ, ಮೃತ್ಯುಂಜಯ, ಈಶ್ವರ ಎಂಬ ನಾಮಗಳು ಪರಶಿವನಿಗಲ್ಲದೆ ಮತ್ತಾರಿಗೂ ಇಲ್ಲ. ಸರ್ವದೇವ ಪೂಜ್ಯನಾದ ಶಿವನಿಗೆ ವಿಷ್ಣು, ಬ್ರಹ್ಮಾದಿಗಳನ್ನು ಸರಿ ಮಾಡಲಾಗದು. ವಿಷ್ಣುವು ಬ್ರಹ್ಮನ ಗುದಸ್ಥಾನದಲ್ಲಿ ಹುಟ್ಟಿ ಅಧೋಕ್ಷಜ ನೆಂಬ ಹೆಸರನ್ನೂ, ಭೃಗುಋಷಿಯ ಪತ್ನಿಯನ್ನು ಬಯಸಿ ದಶವಿಧ ರೂಪ ವನ್ನೂ, ನಾರಸಿಂಹಾವತಾರದಲ್ಲಿ ಶರಭರೂಪಿಯಾದ ವೀರಭದ್ರನಿಂದ ಮರಣ ವನ್ನೂ ಹೊಂದಿದನು. ದಧೀಚಿ ಋಷಿಯೊಡನೆ ಯುದ್ಧಮಾಡಿ ತನ್ನ ಚಕ್ರವನ್ನು ಕಳೆದುಕೊಂಡು ಅವನ ಪಾದವನ್ನು ಸ್ಮರಿಸಿ ತನ್ನ ಹೃದಯದಲ್ಲಿ ಇರಿಸಿಕೊಂಡನು. ಜಲಂಧರ ಮೊದಲಾದ ರಾಕ್ಷಸರಿಗೆ ಕೈಸೆರೆಯಾದನು. ರಾಮಾವತಾರದಲ್ಲಿ ಸೀತಾದೇವಿಯನ್ನು ಕಳೆದುಕೊಂಡು ಗೋಳಿಡುತ್ತ ಕಡೆಗೆ ಕಳ್ಳನಾದ ರಾವಣನನ್ನು ಕೊಂದು ಬ್ರಹ್ಮಹತ್ಯವನ್ನು ಹೋಗಲಾಡಿಸಿ ಕೊಳ್ಳಲು ಸೇತುಮಧ್ಯದಲ್ಲಿ ರಾಮೇಶ್ವರಲಿಂಗವನ್ನು ನಿರ್ಮಿಸಿ ಪೂಜೆಮಾಡಿ ದನು. ಮತ್ಸ್ಯಾವತಾರದಲ್ಲಿ ಗಂಗಾ ಜಲದಲ್ಲಿ ಮತ್ಸ್ಯೇಶ್ವರನನ್ನು ಪೂಜಿಸಿ ಪಡೆದ ವರದಿಂದ ಸೋಮಕಾಸುರನನ್ನು ಜಯಿಸಿ ವೇದಗಳನ್ನು ತೆಗೆದು ಕೊಂಡು ಬಂದನು. ವಿಷ್ಣು ಬ್ರಹ್ಮಾದಿಗಳು ಪರಸ್ಪರ ತಾವು ಹೆಚ್ಚೆಂದು ಕಲಹ ಮಾಡಿ ಆ ಜಗಳ ನಿವಾರಣೆಗಾಗಿ ಮಧ್ಯದಲ್ಲಿ ಹುಟ್ಟಿದ ಶಿವಲಿಂಗದ ಪಾದ ವನ್ನೂ, ಶಿರಸ್ಸನ್ನೂ ಕಾಣಬೇಕೆಂದು ಹಂಸ, ಹಂದಿಗಳಾಗಿ ಹುಡುಕಿ ಕಾಣದೆ ಹೋದರು. ವಿಷ್ಣುವು ಶಿವನಿಗೆ ಬಾಣವಾಗಿ, ವಾಹನದ ಎತ್ತಾಗಿ,

ಮಾರ್ದಂಗಿಕನಾಗಿ, ಮನೆಯ ಗರತಿಯಾಗಿ, ಪಾದಪೂಜೆಗೆ ಕಣ್ಣನ್ನು ಕೊಟ್ಟವನಾಗಿ ತನ್ನ ಭಕ್ತಿಯನ್ನು ಹಲವು ಸಾರೆ ಹಲವು ರೀತಿಯಿಂದ ತೋರ್ಪಡಿಸಿರುವನು. ಬ್ರಹ್ಮನು ತನ್ನ ಮಗಳನ್ನು ಬಯಸಿ ಹೆಣ್ಣು ಜಿಂಕೆಯಾದ ಅವಳನ್ನು ಗಂಡು ಜಿಂಕೆಯ ರೂಪದಿಂದ ಬೆನ್ನಟ್ಟಿ ಹೋಗಲು ಬೆದರಿ ಬಂದ ಜಿಂಕೆಯ ಭಯವನ್ನು ಪರಶಿವನು ನಾಶಮಾಡಿ ಕಿರಾತರುದ್ರನೆಂಬ ಹೆಸರಿನಿಂದ ವಿರಾಜಿಸಿದನು. ಶಿವನಿಗೆ ಅಗ್ರಪೂಜೆಯನ್ನು ಮಾಡದೆ ನಡೆಸಿದ ದಕ್ಷಬ್ರಹ್ಮನ ಯಜ್ಞವನ್ನು ಭಂಗಮಾಡಿ ಸರಸ್ವತಿಯ ಮೂಗನ್ನು ಕೊಯ್ದು, ಅಗ್ನಿಯ ನಾಲಿಗೆಯನ್ನು ಸೀಳಿ, ಅಲ್ಲಿ ನೆರೆದಿದ್ದ ಎಲ್ಲ ದೇವತೆಗಳಿಗೆ ನಾನಾವಿಧ ಶಿಕ್ಷೆಮಾಡಿದನು. ಲೋಕ ಕಂಟಕರಾದ ತಾರಕಾಸುರರನ್ನು ಸಂಹರಿಸಿ, ದೇವತಾ ಸಮೂಹವನ್ನು ಸುಡುತ್ತಿದ್ದ ವಿಷವನ್ನು ಕುಡಿದು ದೇವತಾ ಸ್ತ್ರೀಯರ ಸೌಮಾಂಗಲ್ಯವನ್ನು ಕಾಪಾಡಿದನು. ವಿಷ್ಣುವು ಉಪಮನ್ಯು ಋಷಿಯಿಂದ ಶಿವದೀಕ್ಷೆಯನ್ನು ಹೊಂದಿ ಇಂದ್ರನೀಲ ರತ್ನದಿಂದ ನಿರ್ಮಿತವಾದ ಲಿಂಗವನ್ನು ಎದೆಯ ಮೇಲೆ ಧರಿಸಿಕೊಂಡನು. ಅಗಸ್ತ್ಯಮುನಿಯಿಂದ ಶಿವದೀಕ್ಷೆಯನ್ನು ಪಡೆದ ರಾಮಚಂದ್ರನು ರಾಮಗಿರಿಯಲ್ಲಿ ಶಿವನನ್ನು ಪೂಜೆಮಾಡಿ ಪಾಶುಪತಾಸ್ತ್ರವನ್ನು ಪಡೆದನು. ಶಿವಭಕ್ತನಾದ ನಂದೀಶನು ಕಾಶಿಕ್ಷೇತ್ರದಲ್ಲಿ ವಿಷ್ಣುವೇ ಹೆಚ್ಚಿನವನೆಂದು ಕೈಯೆತ್ತಿ ಹೇಳಿದ ವೇದವ್ಯಾಸನ ಭುಜವನ್ನು ಮೇಲೆಯೇ ನಿಲ್ಲಿಸಿ ಶಿವನೇ ಸರ್ವೋತ್ತಮನೆಂದು ಸಿದ್ಧಾಂತ ಮಾಡಿಸಿದನು. ಹೀಗೆ ಪರಶಿವನ ಮಹಿಮೆಯನ್ನು ಹೊಗಳಲು ಸಹಸ್ರ ಮುಖದ ಆದಿಶೇಷನಾಗಿ, ಸರಸ್ವತಿಯಾಗಿ, ಬ್ರಹ್ಮನಾಗಿ ಅನೇಕ ಬ್ರಹ್ಮಕಲ್ಪಗಳ ವರೆಗೆ ಹೊಗಳಿ ಹೇಳಿದರೂ ಮುಗಿಯದು. ಶಿವನನ್ನು ಭಕ್ತಿಯಿಂದ ಮೆಚ್ಚಿಸಿ ವರವನ್ನು ಪಡೆದ ಭಕ್ತರ ಚರಿತ್ರೆಗಳು ಅಸಂಖ್ಯಾತವಾಗಿವೆ. ಹಾಗು ಭಕ್ತನಾದ ಬಾಣನು ಮಾಡಿದ ಸ್ತೋತ್ರಕ್ಕೆ ಪರಶಿವನು ಒಲಿದು ಕತ್ತರಿಸಿ ಹೋಗಿದ್ದ ತೋಳುಗಳನ್ನು ಮತ್ತೆ ಕೊಡಲಿಲ್ಲವೇ ? ಸೂರ್ಯನಿಂದ ಪರಿಹರಿಸಲು ಅಸಾಧ್ಯನಾದ ಕುಷ್ಠರೋಗವನ್ನು ಮಯೂರನು ಶಿವಸ್ತೋತ್ರದಿಂದ ಹೋಗಲಾಡಿಸಿಕೊಳ್ಳಲಿಲ್ಲವೇ ? ವಿಷ್ಣುವಿನಿಂದ ಮರೆಯಾದ ಕೊರತೆಯ ರೋಗವನ್ನು ದಂಡಿಯು ಶಿವಧ್ಯಾನದಿಂದ ಕಳೆದುಕೊಂಡನು. ಕಾಳಿದಾಸನು ತನ್ನ ಕಣ್ಣುಗಳನ್ನು ಶಿವನಿಗೆ ಕೊಟ್ಟು ಪುನಃ ಪಡೆದುಕೊಂಡನು. ಮಲ್ಹಣನು ತನ್ನ ಸೂಳೆಯ ಬೋಧೆ

ಯಿಂದ ಶಿವಸ್ತುತಿಯನ್ನು ಮಾಡಿ ಕೈವಲ್ಯ ಮೋಕ್ಷವನ್ನು ಪಡೆದನು. ಈ ಪ್ರಕಾರ ಕವಿಗಳೂ ಸಹ ಶಿವಸ್ತೋತ್ರಮಾಡಿ ತಮ್ಮ ವಿದ್ಯಾಶಕ್ತಿ ತೋರ್ಪಡಿಸಿ ಮುಕ್ತರಾದರು. ಶಿವನು ಕರಿಕಾಳ ಚೋಳನ ಮನೆಯಲ್ಲಿ ಏಳು ದಿವಸಗಳ ವರೆಗೆ ಬಂಗಾರದ ಮಳೆ ಸುರಿಸಿದನು. ಪಿಟ್ಟವ್ವೆಯ ಮನೆಯಲ್ಲಿ ಬಿಟ್ಟಿಮಾಡಿ ದನು. ಅಮ್ಮವ್ವೆಗೆ ಮಗನಾದನು. ಸುಂದರ ನಂಬಿಗೆ ಆಳಾದನು. ಬಾಣನ ಮನೆಯ ಬಾಗಿಲನ್ನು ಕಾಯ್ದನು. ಹಲಾಯುಧನ ಬಹಿಷ್ಕಾರಕ್ಕೊಳಗಾ ದನು. ಓಹಿಲಾರ್ಯ ಮೊದಲಾದ ಪರಮ ಶಿವಭಕ್ತರನ್ನು ಪರಿವಾರ ಸಹಿತ ಕೈಲಾಸಕ್ಕೆ ಕರೆದುಕೊಂಡು ಹೋದಂಥ ಕರುಣಾಳುವೂ, ಭಕ್ತಸುಲಭನೂ ಆಗಿರುವದರಿಂದ ಶಿವನೊಬ್ಬನೇ ಜಗತ್ಕರ್ತನು, ಜಗದ್ಭರ್ತನು, ಜಗದ್ವಂದ್ಯನು ಎಂದು ಸಕಲ ಶ್ರುತಿ, ಸ್ಮೃತಿ, ಪುರಾಣ, ಆಗಮ ವಚನಗಳಿಂದ ಶಿವ ಸಿದ್ಧಾಂತವನ್ನು ಸ್ಥಾಪಿಸಿ ತ್ರಿಮೂರ್ತಿಗಳಿಗೆ ಭೇದವನ್ನು ಕಲ್ಪಿಸುವವರನ್ನೂ, ಈ ಲೋಕವೆಲ್ಲ ಬ್ರಹ್ಮವೇ ಎಂದು ನುಡಿಯುವ ವೇದಾಂತವಾದಿಗಳನ್ನೂ ಸೋಲಿಸಿ, ಶಿವಸಮಾನರು ಇರುವರೆಂದು ಹೇಳುವವರ ಬಾಯನ್ನು ಕಟ್ಟಿ ಭವಿಗಳು ಹಾಗು ಭಕ್ತರು ಸಮಾನರು ಎಂದು ಹೇಳುವ ಪಾಪಿಗಳಿಗೆ ದುರ್ಗ ತಿಯು ತಪ್ಪದೆಂದು ಸಿದ್ಧಾಂತ ಮಾಡಿ ಬಾಚರಸನು ನುಡಿಯುತ್ತ ಬಿಜ್ಜಳನ ಕಡೆಗೆ ತಿರುಗಿ ರಾಜನೇ, ನಾನು ಎಂದಿಗೂ ಶಿವನಿಗನ್ಯವಾದ ದೇವತೆಗಳನ್ನು ನೋಡತಕ್ಕವನಲ್ಲ. ಪ್ರಭುವಾದ ನೀನು ಖಂಡಿತವಾಗಿ ನೋಡಬೇಕೆಂದು ಹೇಳಿದರೆ ನಾನು ನೋಡುತ್ತೇನೆ ಎಂದು ಆ ಮೂರ್ತಿಯನ್ನು ದುರದುರನೆ ನೋಡಲು ಆ ವಿಗ್ರಹವು ಸಿಡಿದು ನುಚ್ಚುನೂರಾಗಿ ಹೋಯಿತು. ಆಗ ಎಲ್ಲರೂ ಪರಮಾಶ್ಚರ್ಯಭರಿತರಾಗಿ ತಲೆಬಾಗಿದರು. ರಾಜನು ದಿಗಿಲು ಪಟ್ಟುಕೊಂಡು ಆತನ ಮಹಿಮೆಯನ್ನು ಹೊಗಳುತ್ತ ತನ್ನ ಅರಮನೆಗೆ ಹೋದನು. ಬಸವೇಶ್ವರನು ಆತನ ಪಾದಗಳಿಗೆ ನಮುಸ್ಕರಿಸಿ ತನ್ನ ಮನೆಗೆ ಕರೆದುಕೊಂಡು ಹೋಗಿ ಪಾದಪೂಜೆ ಮಾಡಿ ಪ್ರಸಾದವನ್ನು ಗ್ರಹಿಸಿ ಸಂತೋಷಚಿತ್ತನಾಗಿದ್ದನು.

## — ಶಿವನಾಗಾರ್ಯನ ಕಥೆಯು —

ಆ ಕಲ್ಯಾಣ ಪಟ್ಟಣದಲ್ಲಿ ಶಿವಪಾದಭಕ್ತನಾಗಿಯೂ, ಶಿವಜ್ಞಾನ

ಸಂಪತ್ತಿಯನ್ನು ಹೊಂದಿ ನಿರ್ಮಲನಾಗಿಯೂ ಇರುವ ಶಿವನಾಗಾರ್ಯನೆಂಬ ಭಕ್ತನು ಶಿವೈಕ್ಯಭಾವದಿಂದ ಇದ್ದನು. ಬಸವೇಶ್ವರನು ಪ್ರತಿದಿವಸ ಭಕ್ತಿಯಿಂದ ಆತನ ಪೂಜೆಯನ್ನು ಮಾಡುತ್ತಿರಲು ಕೆಲವು ಜನ ವಿಪ್ರರು ಸಹಿಸಲಾರದೆ ರಾಜನ ಬಳಿಗೆ ಬಂದು ಆಯ್ಯಾ-ದೊರೆಯೇ, ಪ್ರಖ್ಯಾತನಾದ ನಿನ್ನ ಮುಖ್ಯ ಮಂತ್ರಿ ಬಸವೇಶ್ವರನು ಈ ಊರಲ್ಲಿರುವ ಒಬ್ಬ ಹೊಲೆಯನನ್ನು ಭಕ್ತೋತ್ತಮನೆಂದು ತಿಳಿದು ಅವನ ಪಾದವನ್ನು ತೊಳೆದು ಪೂಜೆಮಾಡಿ ಅವನ ಪಾದೋದಕವನ್ನು ತೀರ್ಥವಾಗಿ ಕುಡಿದು, ಉಂಡು ಉಳಿದುದನ್ನು ಪ್ರಸಾದವೆಂದು ಗ್ರಹಿಸುತ್ತ ಜೀವಿಸುವನು. ಇವನು ಸತ್ಪುರುಷನಂತೆ ರಾಜಸಭೆಗೂ ಬಂದು ಕುಳಿತು ರಾಣಿವಾಸವನ್ನು ಹೊಕ್ಕು ಬಳಿಕೆಯಾಗಿರುವ ನಲ್ಲಾ ! ಅಹಾ ! ಉಚ್ಚವರ್ಣದವರು ಅಂತ್ಯಜನರ ನೆಳಲನ್ನು ನೋಡಿದ ಮಾತ್ರಕ್ಕೆ ಸಚೇಲಸ್ನಾನ ಮಾಡಿ ಶುದ್ಧರಾಗಬೇಕೆಂದು ವೇದವಚನವಿರುವಾಗ ಉತ್ತಮನಾದ ಈ ಬಸವೇಶ್ವರನು ಅವನ ಪಾದೋದಕವನ್ನು ಕುಡಿದ ಮೇಲೆ ಉತ್ತಮ ಕುಲವು ಎಲ್ಲಿ ಉಳಿಯಿತು ? ಆ ಹೊಲೆಯನು ಬ್ರಾಹ್ಮಣರು ಹಾದಿಯಲ್ಲಿ ಬರುತ್ತಿದ್ದರೆ ಮಾರ್ಗವನ್ನು ಬಿಡದೆ, ಓರೆಯಾಗಿ ಸಹ ಹೋಗದೆ ಗರ್ವದಿಂದ ನುಗ್ಗಿಕೊಂಡು ಅಬ್ಬರಿಸಿ ಹೋಗುವನು. ರಾಜಶ್ರೇಷ್ಠನೇ, ನಿನ್ನ ರಾಜ್ಯದಲ್ಲಿ ವರ್ಣಾಶ್ರಮ ಧರ್ಮವೂ, ವೈದಿಕಾಚಾರವೂ ಹಾಳಾಗಿ ಹೋಗಿಗುವದು. ಹುಳಿಯೊಡನೆ ಹಾಲೂ, ವಿಷದ ಸಂಗಡ ಜೇನೂ, ಕುಲವಧುವಿನೊಡನೆ ಕುಂಟಣಿಯೂ, ಸತ್ಕುಲದವರೊಡನೆ ಹೀನಕುಲದವರೂ ಸೇರಿ ನಿನ್ನ ಕಲ್ಯಾಣಪುರವೆಲ್ಲ ಹೊಲೆಗಲಿಸಿ ಹೋಗಿದೆ. ಹೀಗೆ ರಾಜ್ಯದಲ್ಲಿ ನಡೆಯುವ ಅನಾಚಾರಗಳನ್ನು ರಾಜನು ತಿದ್ದಿ ವಿಚಾರಿಸಿ ಸರಿಪಡಿಸದೆ ಹೋದರೆ ರಾಜನಿಗೆ ಪಾಪ ಭೀತಿಯುಂಟು. ನೋಡಿದ್ದನ್ನು ನಾಡೊಡೆಯನಿಗೆ ಹೇಳದಿದ್ದರೆ ಪಾಪ ಬರುವದೆಂಬ ನೀತಿ ವಚನದಂತೆ ಅಳುಕಿ ತಮಗೆ ಬಿನ್ನೈಸಿದೆವು. ಎಂದು ನುಡಿಯಲು ಆ ರಾಜನು ಕಡುರೋಷದಿಂದ ಗುಡುಗುಡಿಸಿ ಆ ಬಸವರಾಜನನ್ನು ಕರೆದು ತರುವಂತೆ ಕಂಚುಕಿಗೆ ಆಜ್ಞಾಪಿಸಿದನು. ಸರ್ವಾಂತರ್ಯಾಮಿಯಾದ ಬಸವೇಶ್ವರನು ಅದೆಲ್ಲವನ್ನು ತಿಳಿದು ಶಿವನಾಗಾರ್ಯನನ್ನು ಬಂಗಾರದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ತಾನು ಪಕ್ಕದಲ್ಲಿಯೇ ಪಾದಚಾರಿಯಾಗಿ ಬರುತ್ತಿರುವವನ್ನು ಸಭಾಸದರು

ನೋಡಿ ದೊರೆಯೇ, ನೋಡು ನಿನ್ನ ಭಯವು ಬಸವೇಶ್ವರನಿಗೆ ಸ್ವಲ್ಪವೂ ಇಲ್ಲದೆ ಆ ಚಾಂಡಾಲನನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿಕೊಂಡು ಬರುತ್ತಿರುವನು. ಈಗ ಪಟ್ಟಣವೆಲ್ಲ ಚಾಂಡಾಲರಿಂದ ಮಿಶ್ರವಾಗಿದೆ ಹಾಗೂ ಈಗ ಸಭೆಗೆ ಬಂದು ಸೇರುವಂತಿದೆ. ಎಂದು ಹೇಳಲು ತನ್ನ ಸಭಾಮಂಟಪಕ್ಕೆ ಆತನನ್ನು ಬರಗೊಡಿಸಬಾರದೆಂದು ತಿಳಿದು ರಾಜನು ಅರಮನೆಯ ಮುಂಭಾಗದ ಕಟ್ಟೆಯ ಮೇಲೆಯೇ ಸಭೆಮಾಡಿ ಕುಳಿತುಕೊಂಡನು. ಈ ಕಪಟ ತಂತ್ರವನ್ನು ತಿಳಿದ ಬಸವೇಶನು ತನ್ನ ಮೇಲು ಹೊದಿಕೆಯನ್ನು ತೆಗೆದು ಆ ಶಿವನಾಗಾರ್ಯನಿಗೆ ಪೀಠವನ್ನಾಗಿ ಮಾಡಿ ಅದರ ಮೇಲೆ ಆತನನ್ನು ಕುಳ್ಳಿರಿಸಿ ತಾನು ಆತನ ಪಾದಗಳ ಬಳಿ ಕುಳಿತುಕೊಂಡನು. ಆಗ ರಾಜನು— ಬಸವರಾಜನೇ, ನೀನು ವೇದೋಕ್ತ ಸದಾಚಾರ ಸಂಪನ್ನತೆಯನ್ನು ತೊರೆದು ಗರ್ವದಿಂದ ಚಾಂಡಾಲರ ಸಹವಾಸವನ್ನು ಮಾಡಿ ಪಟ್ಟಣವನ್ನೆಲ್ಲ ಹೊಲೆಗಲಸಬಹುದೇ? ಮಂತ್ರಿವರ್ಯನಾದ ನೀನೇ ಅನಾಚಾರಿಯಾದರೆ ದೇಶದಲ್ಲಿ ಸದಾಚಾರವು ಹೇಗೆ ನಡೆಯುವದು ? ಸದಾಚಾರವಿಲ್ಲದಿದ್ದರೆ ಮಳೆ ಬೆಳೆಗಳು ಹೇಗೆ ಬರುವವು ? ಲೋಕನಿಂದೆಗೆ ಹೆದರದ ನೀನು ನನಗೆ ಭಯಪಡುವದುಂಟೇ ? ರಾಜ್ಯವೇ ನಿನ್ನದಾಗಿದೆ ನಾವು ನಿನಗೆ ಭಯಪಡಬೇಕಾಗಿದೆ. ಹೀಗಾದ ಮೇಲೆ ರಾಜ್ಯವನ್ನು ನೀನೇ ಸುಖವಾಗಿ ಅನುಭವಿಸಿಕೊಂಡಿರಬಹುದಲ್ಲಾ ! ಎಂದು ಕಠಿಣ ವಚನದಿಂದ ಮಾತನಾಡಿಸಲು ಆದನ್ನು ಕೇಳಿ ಬಸವೇಶ್ವರನು ನಗುತ್ತ— ಎಲೈ ರಾಜನೇ, ನಿನ್ನ ಕಡೆಯವರಾದ ಬ್ರಾಹ್ಮಣರ ಚಾಂಡಾಲ ಕೆಲಸವನ್ನು ಹೇಳುತ್ತೇನೆ ಕೇಳು— ಪೂರ್ವಕಾಲದಲ್ಲಿ ಬಡಗಿ ಮಾಚಲದೇವಿ ಎಂಬ ಚಾಂಡಾಲ ಕನ್ಯೆಯನ್ನು ಬ್ರಾಹ್ಮಣರೆಲ್ಲರೂ ಕೂಡಿ ಕ್ಷತ್ರಿಯಳನ್ನಾಗಿ ಮಾಡುತ್ತೇವೆಂದು ಪ್ರಯತ್ನಿಸಿ ಬಂಗಾರದಿಂದ ಆಕಳನ್ನು ಮಾಡಿಸಿ ಅದರ ಹೊಟ್ಟೆಯಲ್ಲಿ ಹಾಲು ತುಂಬಿಸಿ ಆ ಚಾಂಡಾಲ ಕನ್ಯೆಯನ್ನು ಅದರ ಹೊಟ್ಟೆಯಲ್ಲಿ ಒಳಹೊಗಿಸಿ ಹೊರಕ್ಕೆ ತೆಗೆದು ಅವಳು ಪವಿತ್ರಳಾದಳೆಂದು ಹೇಳಿ ಅವಳ ದೇಹಮಾಲಿನ್ಯಯುಕ್ತವಾದ ಹಾಲನ್ನು ತಾವು ಪಾನಮಾಡಿ ಬಳಿಕ ಆ ಸುವರ್ಣದ ಗೋವನ್ನು ತುಂಡುತುಂಡಾಗಿ ಕತ್ತರಿಸಿ ಸೋಮಯಾಜಿಗಳಿಗೆ ಮುಖವೂ, ತರ್ಕ ಸಿದ್ಧಾಂತಿಗಳಿಗೆ ಕುತ್ತಿಗೆಯೂ, ಪಂಡಿತ ಮಂಡಲಿಗೆ ಬಲ ಭಾಗವೂ, ವೈಶೇಷಿಕರಿಗೆ ಹೊಟ್ಟೆಯೂ, ಅಶ್ವಮೇಧಿಗಳಿಗೆ ಎಡಭಾಗವೂ,

ವೇದಾಧ್ಯಯನ ಸಂಪನ್ನರಿಗೆ ಬೆನ್ನೂ, ಉಪಾಧ್ಯಾಯರಿಗೆ ಕೊಂಬುಗಳೂ, ಯಜ್ಞದೀಕ್ಷಿತರಿಗೆ ಎದೆಯೂ, ಋಗ್ವೇದಿಗಳಿಗೆ ಬಾಲವೂ, ತ್ರಿವೇದಿಗಳಿಗೆ ತೊಡೆಗಳೂ, ಉಳಿದ ವಿದ್ಯಾರ್ಥಿಗಳಿಗೆ ದೇಹದ ಅಂಗವೂ ಬರುವಂತೆ ಹಂಚಿ ಕೊಂಡರು. ಮೊದಲು ಮಂತ್ರಪೂರ್ವಕವಾಗಿ ಅವರಲ್ಲಿ ಗೋತ್ವವನ್ನು ಆರೋ ಪಿಸಿ ಕೊನೆಗೆ ಅದನ್ನೇ ಕಡಿದು ಹಂಚಿಕೊಂಡರಲ್ಲವೇ ? ಗೋಹತ್ಯಾ ದೂಷಕ ರಾದ ಇವರೊಡನೆ ಶಿವದೀಕ್ಷಾ ಸಂಸ್ಕಾರವುಳ್ಳವರನ್ನು ಸರಿ ಹೋಲಿಸ ಬಹುದೇ ? ಕಾರೆಯ ಗಿಡವನ್ನು ಕಲ್ಪವೃಕ್ಷಕ್ಕೆ ಸಮನೆಂದು ಹೇಳುವಂತೆ ಈ ಬ್ರಾಹ್ಮಣರನ್ನು ಶಿವಭಕ್ತರಿಗೆ ಸಮವೆಂದು ಹೋಲಿಸುವದು ಯೋಗ್ಯವಲ್ಲ. ಈ ವಿಷಯದಲ್ಲಿ ಒಂದು ಚರಿತ್ರೆಯನ್ನು ಹೇಳುವೆನು ಕೇಳು:—

## — ಕಲ್ಲಿನಾಥನ ಕಥೆಯು —

ಪೂರ್ವಕಾಲದಲ್ಲಿ ಹಾವಿನ ಹಾಳು ಎಂಬ ಊರಲ್ಲಿ ಎಲ್ಲರೂ ಬ್ರಾಹ್ಮ ಣರೇ ವಾಸಮಾಡಿಕೊಂಡಿದ್ದರು. ಆ ಊರಲ್ಲಿ ಪರಮಶಿವಭಕ್ತಿ ಸಂಪನ್ನನಾದ ಕಲ್ಲಿನಾಥನೆಂಬ ಒಬ್ಬ ಶಿವಭಕ್ತನಿದ್ದನು. ಆ ಊರಲ್ಲಿ ಒಂದು ಹಾವು ಸರಿ ರಾತ್ರಿಯಲ್ಲಿ ಸಂಚಾರಕ್ಕೆ ಹೊರಟು ಪರಊರಿನಿಂದ ಬಂದವರನ್ನು ಕಚ್ಚಿ ಕೊಲ್ಲುತ್ತಿತ್ತು. ಒಂದು ದಿವಸ ಕಲ್ಲಿನಾಥನು ನಿದ್ರೆಮಾಡುತ್ತಿರುವಾಗ ಆ ಹಾವು ಬಂದು ಕಡಿದು ತಾನೇ ಸತ್ತುಹೋಯಿತು. ಕೂಡಲೇ ಕಲ್ಲಿನಾಥನು ಎಚ್ಚತ್ತು ಸತ್ತುಬಿದ್ದ ಹಾವನ್ನು ನೋಡಿ ಕರುಣೆಯಿಂದ ಮೈದಡವಿ ಮೈಮೇಲೆ ಕರುಣಾ ದೃಷ್ಟಿಯನ್ನು ಸುರಿಸಿ ಏಳೆಂದು ನುಡಿಯಲು ಸರ್ಪವು ಬದುಕಿತು. ಇದನ್ನು ಆ ಊರವರೆಲ್ಲರೂ ನೋಡಿ ಆತನಿಗೆ ದಾಸಾನುದಾಸರಾಗಿ ನಡೆದು ಕೊಳ್ಳುತ್ತಿದ್ದರು. ಒಂದು ದಿವಸ ಆತನ ಮನೆಯ ಪರಿಚಾರಿಕೆಯು ನೀರನ್ನು ತರುವದಕ್ಕಾಗಿ ಮಣ್ಣಿನ ಕೊಡವನ್ನು ತೆಗೆದುಕೊಂಡು ಬಾವಿಗೆ ಹೋಗುತ್ತಿ ರಲು ದಾರಿಯಲ್ಲಿ ಹೋಗುತ್ತಿದ್ದ ಬ್ರಾಹ್ಮಣನೊಬ್ಬನನ್ನು ತಾಕಿ ಭವಿಯು ಮುಟ್ಟಿದನಲ್ಲಾ ! ಎಂದು ಆ ಮಣ್ಣಿನ ಕೊಡವನ್ನು ಒಡೆದು ಶುದ್ಧವಾದ ಸ್ಥಳ ದಲ್ಲಿ ಅದನ್ನು ಹುಗಿದು ಮನೆಗೆ ಬಂದು ವಿಭೂತಿ ಸ್ನಾನವನ್ನು ಮಾಡಿ ಪರಿ ಶುದ್ಧಳಾಗಿ ಬೇರೊಂದು ಕೊಡವನ್ನು ತೆಗೆದುಕೊಂಡು ನೀರಿಗೆ ಹೋದಳು. ಇದನ್ನು ನೋಡಿ ಹಾರುವರು ಸಹಿಸಲಾರದೆ ಚಾಕರಳಾದ ಇವಳ ಹೆಮ್ಮೆ

ಯನ್ನು ಎಷ್ಟೆಂದು ಹೇಳೋಣ! ಬ್ರಾಹ್ಮಣನು ತನ್ನನ್ನು ಮುಟ್ಟಿದನೆಂದು ಕೊಡವನ್ನು ಒಡೆದಳಲ್ಲಾ! ಪರಿಶುದ್ಧರಾದ ವಿಪ್ರರು ಇತರರನ್ನು ಮುಟ್ಟ ಕೂಡದೆಂದು ವೇದವಚನವಿರುವದು. ಹೀಗಿರಲು ನೀರನ್ನು ಹೊರುವ ದಾದಿಯು ಹೀಗೆ ಅಪಮಾನ ಮಾಡಿದರೆ ಸಹಿಸಬಹುದೇ? ಆಗಲಿ ಅವಳನ್ನು ಹಿಡಿದು ತಂದು ಹೊಡೆದು ಜಜ್ಜದ ಹೊರತು ನಮ್ಮ ಕೋಪವು ತೀರದೆಂದು ಶಪಥಮಾಡಿ ಎಲ್ಲರೂ ಒಂದುಕಡೆ ಕೂಡಿ ಅವಳ ಸ್ವಾಮಿಯಾದ ಕಲ್ಲಿನಾಥ ನನ್ನು ತಮ್ಮ ಬಳಿಗೆ ಕರೆಯಿಸಿ ಸ್ವಾಮೀ, ತಾವು ಸಕಲವನ್ನೂ ತಿಳಿದವರು. ಘನಮಹಿಮರು. ಸತ್ತ ಹಾವಿಗೆ ಜೀವದಾನ ಮಾಡಿದವರು. ಸತ್ಪುರುಷ ರಲ್ಲಿ ಶ್ರೇಷ್ಠರು. ಈ ಲೋಕದಲ್ಲಿ ತಮ್ಮಂಥವರು ದೊರೆಯುವದು ದುರ್ಲ ಭವು. ನೀವು ದೊಡ್ಡ ಮನುಷ್ಯರಾದರೂ ನಿಮ್ಮ ಮನೆಯ ದಾದಿಯು ಪರಮ ನೀಚಳು. ಈ ದಿವಸ ಅವಳು ಒಂದು ನೀಚ ಕೆಲಸ ಮಾಡಿದ್ದಾಳೆ. ಬಹುಶಃ ಅದು ತಮಗೆ ಇನ್ನೂ ಗೊತ್ತಾಗಿರಲಿಕ್ಕಿಲ್ಲ. ಈಗ ಹೇಳುತ್ತೇವೆ ಕೇಳಿರಿ. ನಮ್ಮೂರಲ್ಲಿರುವ ಅಹಿತಾಗ್ನಿಕರಾದ ದಾಮೋದರಭಟ್ಟರ ಮಗ ನಾದ ವಾಮನ ಸೋಮಯಾಜಿಯನ್ನು ಕೇಳಿ ಬಲ್ಲಿರಷ್ಟೇ; ಅವನೇನು ಸಾಮಾ ನ್ಯನೇ? ಬರಿಯ ಬೂಟಾಟಿಕೆಯ ಬ್ರಾಹ್ಮಣನೇ? ವೇದನಿಷ್ಠನು. ಮಹಾ ಪಂಡಿತನು. ಸಾಕ್ಷಾತ್ ಭೂಲೋಕದ ಬ್ರಹ್ಮನಂತೆ ಇರುವನು. ಆತನನ್ನು ನಿಮ್ಮ ದಾದಿಯು ನೀರಿಗೆ ಹೋಗುವಾಗ ತಾಕಿದಳಂತೆ. ಅದಕ್ಕಾಗಿ ಆತನನ್ನು ಬೈದು ಮಣ್ಣಿನ ಆ ಕೊಡವನ್ನು ಒಡೆದು ಹಾಕಿದಳಲ್ಲಾ! ಇದೇನು? ಬ್ರಾಹ್ಮ ಣರು ಉಳಿದವರನ್ನು ಮುಟ್ಟಿದರೆ ಅವರಿಗೆ ಮೈಲಿಗೆ ಬರುವದು. ಹೀಗಿರಲು ಅವಳು ಕೊಡವನ್ನು ಒಡೆದಾಗ ನಮ್ಮ ಹುಡುಗರು ಅವಳ ತಲೆಯನ್ನೇ ಒಡೆ ಯುವೆವೆಂದು ಹೋಗಿದ್ದರು. ಆದರೆ ಸತ್ಯಸಂಧರಾದ ತಮಗೆ ತಿಳಿಸದೆ ಯಾವ ಕೆಲಸವನ್ನೂ ಮಾಡಬಾರದೆಂದು ತಡೆದು ನಿಮ್ಮನ್ನು ಕರೆಯಿಸಿ ನಡೆದ ಸಂಗತಿಯನ್ನು ಹೇಳಿರುವೆವು. ಈಗ ಅವಳನ್ನು ಕರೆಯಿಸಿ ವಿಚಾರ ಮಾಡಿ ತಪ್ಪಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಹೇಳಿದರು. ಆಗ ಕಲ್ಲಿ ನಾಥನು ಅಹಾ! ನಮ್ಮ ಸೇವಕಳು ಎಂದಿಗೂ ಅನ್ಯಾಯವನ್ನು ಮಾಡತಕ್ಕ ವಳಲ್ಲ. ಆದರೆ ಭವಿಗಳು ಭಕ್ತರನ್ನು ಮುಟ್ಟುವದು ಯಾವ ನ್ಯಾಯವು? ಎಂದು ಹೇಳಲು ಓಹೋ! ನಿಮ್ಮ ದಾದಿಯಾದುದರಿಂದ ಮಾಡಿದ ತಪ್ಪನ್ನು

ಮರೆಮಾಚಿ ಮಾತಾಡಿದರೆ ನಿಮ್ಮ ದೊಡ್ಡಸ್ತನವು ಉಳಿಯುವದೇ ? ಎಂದು ಹಾಸ್ಯಮಾಡಲು ಕಲ್ಲಿನಾಥನು ಕೋಪಾವಿಷ್ಟನಾಗಿ ಇವರಿಗೆ ತಕ್ಕಂತೆ ಉತ್ತರ ವನ್ನು ಹೇಳಬೇಕೆಂದು ವಿಚಾರಿಸಿ ಎಲೈ— ಭವಬಂಧಿಗಳೇ, ಕೋಪಮಾಡಿ ಕೊಳ್ಳದೆ ಸಾವಧಾನದಿಂದ ವಿಚಾರಿಸಿ ನೋಡಿರಿ. ನಿಮಗೆವೈದಿಕರೆಂದೂ, ಹಾರು ವರೆಂದೂ ಹೇಳಬಹುದು. "ಸರ್ವಂ ಹವೇ ಇದಂ ಭಸ್ಮ | ಸಏಷ ಭಸ್ಮಜ್ಯೋತಿಃ| ತಿರ್ಯಕ್ತಿಸ್ರೋರೇಖಾ ಪ್ರಕುರ್ವೀತ ವ್ರತಮೇತಚ್ಛಾಂಬವಂ | ರುದ್ರಸ್ಯ ನಯನಾಜ್ಜಾತಾ ರುದ್ರಾಕ್ಷಾಮಶ್ನುತೇ || ರುದ್ರೇಣಾತ್ತಮಶ್ನಂತಿ, ರುದ್ರೇಣಾ ಪೀತಂಪಿಬಂತಿ" ಎಂಬ ಶ್ರುತಿವಚನ ಸಿದ್ಧವಾದ ಭಸ್ಮ, ರುದ್ರಾಕ್ಷಿ ಮಾಲೆ ಗಳನ್ನು ತೊರೆದು ಗೋಪಿಯ ಮಲವನ್ನು ಹಣೆಗೆ ಹಚ್ಚಿಕೊಂಡು ತುಲಸೀ ಮಣಿಯನ್ನೂ, ತಾವರೆಯ ಬೀಜಗಳ ಸರವನ್ನೂ , ಕೊರಳಿಗೆ ಹಾಕಿಕೊಂಡು ಕಂಡ ಕಂಡ ದೇವರಿಗೆ ಕೈಮುಗಿಯುತ್ತ ನೈವೇದ್ಯಮಾಡಿದ ಎಂಜಲ ಅನ್ನ ವನ್ನು ತಿನ್ನುವ ನಿಮ್ಮಂತಹರನ್ನು ವೈದಿಕರೆಂದು ಹೇಳುವದು ಹೇಗೆ ? ಅಲ್ಲದೆ "ಕಾರಣಂ ತು ಧ್ಯೇಯ ಸರ್ವೈಶ್ವರ್ಯ ಸಂಪನ್ನಃ ಶಂಭುರಾಕಾಶ ಮಧ್ಯೇ ಶಿವಕರಃ ಸರ್ವಧ್ರುವಂ | ಶಿವಏಕೋಧ್ಯೇಯಃ ಮನ್ಯಂ ಪರಿತ್ಯಜ್ಯ | ಯೋ ವಿದುರ್ಬ್ರಹ್ಮವಾಚ್ಯಂ ಶ್ರೀರುದ್ರಂ ತೇ ಬ್ರಾಹ್ಮಣಾಃ" ಎಂಬ ವೇದವಚನದಂತೆ ಸರ್ವದೇವೋತ್ತಮನಾದ ಆ ಪರಶಿವನೊಬ್ಬನೇ ಜಗತ್ಕರ್ತನೆಂದು ಯಾರು ಅಂಗೀಕರಿಸುವರೋ ಅವರೇ ಬ್ರಾಹ್ಮಣರು. ಆದರೆ ಅನೇಕ ದೇವರನ್ನು ಪೂಜಿಸುವ ನಿಮ್ಮನ್ನು ಬ್ರಾಹ್ಮಣರೆಂದು ಹೇಳಲು ಹೇಗೆ ಸಾಧ್ಯವಾಗುವದು ? "ಋತಂ ಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣ ಪಿಂಗಳಂ | ಊರ್ಧ್ವರೇತಂ ವಿರೂ ಪಾಕ್ಷಂ ವಿಶ್ವರೂಪಾಯ ವೈನಮೋನಮಃ | ತ್ವಂ ದೇವೇಷು ಬ್ರಾಹ್ಮಣ್ಯೋ ಸ್ಸಹಂ ಮನುಷ್ಯೇಷು ಬ್ರಾಹ್ಮಣಃ | ಬ್ರಾಹ್ಮಣೋ ವೈಬ್ರಾಹ್ಮಣ ಮುಪಧಾ ವತ್ಯುಪಧಾವಾಮಿ" ಎಂಬ ಶ್ರುತಿವಾಕ್ಯದಂತೆ ಪರಮೇಶ್ವರನೊಬ್ಬನೇ ಪರ ಬ್ರಹ್ಮನು ಉಳಿದ ಸಕಲ ದೇವತೆಗಳು ಜೀವರು. ಪರಮೇಶ, ಪರಬ್ರಹ್ಮ, ಪರಮಾತ್ಮನೆಂಬ ನಾಮಗಳು ಪಾರ್ವತೀ ಪತಿಗಲ್ಲದೆ ಮತ್ತಾರಿಗುಂಟು ? ದೇವತೆಗಳಿಗೆಲ್ಲ ಬ್ರಾಹ್ಮಣನಾದ ಪರಶಿವನನ್ನು ಪೂಜಿಸುವವರು ಮಾತ್ರ ಬ್ರಾಹ್ಮಣರು. ಉಳಿದ ದೇವತೆಗಳನ್ನು ಪೂಜಿಸುವವರು ಹೇಗೆ ಬ್ರಾಹ್ಮಣರಾ ಗುವರು ? "ತತೋವಿಪ್ರಸ್ಯ ಸಂಬಂಧ ಶಿವಸ್ಯೈವಹಿಯುಜ್ಯತೇ | ಸಂಕರಾ

ಕ್ಸರ್ವ ದೇವಾಶ್ಚ ವೃಷಲಸ್ತು ಪುರಂದರಃ | ಪಿತಾಮಹಸ್ತು ವೈಶ್ಯಸ್ಯಾತ್ ಕ್ಷತ್ರಿಯ ಪರಮೋಹರಿಃ | ಬ್ರಾಹ್ಮಣೋ ಭಗವಾನ್ ರುದ್ರಸ್ಸರ್ವೇಷಾ ಮುತ್ತಮೋತ್ತಮಃ” ಎಂಬ ಪರಾಶರ ಪುರಾಣದಂತೆ ಬ್ರಾಹ್ಮಣರು ದೇವ ಬ್ರಾಹ್ಮಣನಾದ ಶಿವನನ್ನೂ, ಕ್ಷತಿಯ, ವೈಶ್ಯ, ಶೂದ್ರರು ವಿಷ್ಣು, ಬ್ರಹ್ಮ, ಇಂದ್ರರನ್ನೂ ಪೂಜಿಸುವದು ನ್ಯಾಯವು ಎಂದು ಹೇಳಿರುವಾಗ ನೀವು ವೇದೋಕ್ತ ಬ್ರಾಹ್ಮಣರಲ್ಲವೆಂದು ಖಂಡಿತವಾಗಿ ಹೇಳಬಹುದು. ಇದೂ ಅಲ್ಲದೆ “ಶಿವಭಕ್ತಜರಾಗಾರ ದಾಸೀಭುಕ್ತೋಜ್ಝಿತಾಶನಾಃ | ಶುನಕಾಃ ಸೂಕರಾಯಾಂತಿ ಯಯಾಜೂಕ ಕ್ರಿಯಾಂಗತಿಂ” ಎಂಬ ಆಗಮ ವಚನದಂತೆ ಶಿವಭಕ್ತರ ಮನೆಯ ದಾದಿಯು ಊಟಮಾಡಿ ಉಳಿದ ಅನ್ನವನ್ನು ತಿಂದು ನಾಯಿ ಹಂದಿ ಮೊದಲಾದವು ಸದ್ಗತಿಯನ್ನು ಹೊಂದುವವೆಂದು ಪ್ರಮಾಣವಿರುವಾಗ ಅಂತಹ ಭಕ್ತರ ಮನೆಯ ನಾಯಿಯನ್ನು ಮುಟ್ಟಲು ಸಹ ನೀವು ಅಯೋಗ್ಯರು. ಆದ್ದರಿಂದ ಶಿವದೀಕ್ಷಾ ಸಂಪನ್ನಳಾದ ಆ ದಾದಿಯನ್ನು ನೀವು ಮುಟ್ಟುವದು ಯಾವ ನ್ಯಾಯ ? ಎಂದು ನುಡಿಯಲು ಅದನ್ನು ಕೇಳಿ ರೇಗಿದ ಆ ಬ್ರಾಹ್ಮಣರು ಎಲೈ— ನೀಚನಾದ ಚಾಂಡಾಲನೇ, ನಿನ್ನನ್ನು ಕೇಳುವದಕ್ಕೆ ಬಂದ ನಮಗೆ ಹೀಗೆ ಹೇಳುವೆಯಾ ? ಕಾಡುಜೋಗಿಯಾದ ನಿನ್ನ ಪೌರುಷವು ಸಾಕು. ಇನ್ನು ಹೆಚ್ಚು ಮಾತುಗಳಿಂದ ಫಲವಿಲ್ಲ. ನಿನ್ನ ಪ್ರಾಣವನ್ನು ಕಾಪಾಡಿಕೋ ಎಂದು ಹಾರಿಹಾರಿ ಕುಣಿದಾಡುತ್ತ ತಮ್ಮ ತಮ್ಮೊಳಗೆ ನಾನಾವಿಧವಾಗಿ ಗೊಣಗುಟ್ಟಿ ನಿಂದಿಸಿಕೊಂಡು “ತಾಳ್ಮೆಯುಳ್ಳವನಿಗೆ ಬಾಳ್ವೆ” ಎಂಬ ಲೋಕವಾರ್ತೆಯನ್ನು ನೆನೆದು ಅಯ್ಯಾ, ನಿನ್ನಂತಹ ಭಕ್ತನ ಮನೆಯ ನಾಯಿಯು ನಮಗಿಂತಲೂ ಶ್ರೇಷ್ಠವಾದರೆ ಅದರ ಬಾಯಿಂದ ವೇದವನ್ನು ಹೇಳಿಸಿದರೆ ನೀನು ಹೇಳುವದು ಸರಿ. ಇಲ್ಲವಾದರೆ ನಿನ್ನನ್ನು ಕೊಲ್ಲದೆ ಬಿಡಲಾರೆವೆಂದು ನುಡಿಯಲು ಕಲ್ಲಿನಾಥನು ಅದಕ್ಕೆ ಒಪ್ಪಿ ತಮ್ಮ ಮನೆಯ ಬಾಗಿಲಲ್ಲಿ ಮಲಗಿದ್ದ ನಾಯಿಯನ್ನು ಕುರಿತು, ಶಿವಪ್ರಸಾದ ಪರಿತೃಪ್ತನೇ, ಇತ್ತ ಬಾ, ಪ್ರಣವ ಧ್ಯಾನಾಸಕ್ತನೇ, ಇಲ್ಲಿ ಬಾ ! ಎಂದು ಬಗೆ ಬಗೆಯಿಂದ ಸಂಬೋಧಿಸಿ ಕರೆಯಲು ಅದು ಬಾಲವನ್ನು ಅಲ್ಲಾಡಿಸುತ್ತ ಹತ್ತಿರಬರಲು ಅದನ್ನು ಕರುಣಾದೃಷ್ಟಿಯಿಂದ ನೋಡಿ ಈ ಹಾರುವರು ನಿನ್ನ ವೇದಪಾಠವನ್ನು ನೋಡಿ ಕೇಳಬೇಕೆಂದಿದ್ದಾರೆ. ವೇದದಲ್ಲಿಯ ಯಾವುದಾ

ದರೂ ಒಂದು ಋಕ್ಕನ್ನು ಪಠಿಸು ಎಂದು ನುಡಿಯಲು ರುದ್ರಾಂಶ ಸಂಭೂತ ವಾದ ಆ ನಾಯಿಯು ಕಾಲುಗಳನ್ನೂರಿ ಪದ್ಮಾಸನದಲ್ಲಿ ಕುಳಿತು, ಹೃದಯ ದಲ್ಲಿ ಗುರುಸ್ಮರಣೆಯನ್ನು ಮಾಡಿ, ಮೂಲಾಧಾರ ಕುಂಭವನ್ನು ನೆಲಿಗೊಳಿಸಿ ಮೂಗಿನ ತುದಿಯಲ್ಲಿ ದೃಷ್ಟಿಯನ್ನಿಟ್ಟು ಅ, ಉ, ಮಾ, ಗಳೆಂಬ ಅಕ್ಷರ ತ್ರಯ ದಿಂದ ಕೂಡಿದ ಜಪಪೂರ್ವಕವಾಗಿ ಈಡಾ, ಪಿಂಗಳ, ಸುಷುಮ್ನ ನಾಡಿಗಳನ್ನು ಸಂಧಾನಮಾಡಿ, ರೇಚಕ, ಪೂರಕ, ಕುಂಭಕಗಳಿಂದ ಪ್ರಾಣಾಯಾಮವನ್ನು ಮಾಡಿ ಉದಾತ್ತಾದಿ ಸ್ವರಗಳನ್ನು ಹಿಡಿದು ಪದ, ಕ್ರಮ, ಘನ, ಝುಟಾನುಕ್ರ ಮವಾಗಿ ಪ್ರತಿ ವೇದದಲ್ಲಿಯ ಒಂದೊಂದು ಋಕ್ಕನ್ನು ಪಠಿಸಿತು. ಆಗ ಬ್ರಾಹ್ಮಣರ ಅಹಂಕಾರವಳಿದು ಕಲ್ಲಿನಾಥನ ಮಹಿಮೆಯನ್ನು ಕೊಂಡಾಡುತ್ತ ಆತನ ಪಾದಗಳಿಗೆ ನಮಸ್ಕರಿಸಿದರು. ಎಲ್ಲ ಭಕ್ತರೂ ಉಘೇ ಎಂದು ಜಯ ಧ್ವನಿಯನ್ನು ಮಾಡಿದರು. ಆಗ ಆ ಭಕ್ತನು ನಾಯಿಗೆ ಸಾಕುಮಾಡುವಂತೆ ಹೇಳಿ ಭಕ್ತಸಮುದಾಯವನ್ನು ಕುರಿತು— ನಾಯಿಯು ವೇದಪಾಠವನ್ನು ಹೇಳಿದುದು ಇದೇ ಮೊದಲಲ್ಲ. ಇದಕ್ಕೂ ಪೂರ್ವದಲ್ಲಿ ನಡೆದಿದೆ. ಅದನ್ನು ಈಗ ವಿವರಿಸುವೆನು. ಅದೇನೆಂದರೆ— ಸೊನ್ನಲಾಪುರದ ಸಿದ್ಧರಾಮ ಶಿವ ಯೋಗಿಯ ಮನೆಯ ಬಾಗಿಲನ್ನು ಕಾಯುವ ಶಿಷ್ಯವೇದ ದೇಶಿಕನೆಂಬವನ ನಾಯಿಯು ವೇದಾಧ್ಯಯನ ಮಾಡಿತು. ಆದ್ದರಿಂದ ಇವರನ್ನು ತಿರಸ್ಕರಿಸಿ ದನೆಂದು ಬಸವೇಶ್ವರನು ಬಿಜ್ಜಳನಿಗೆ ಹೇಳಿದನು.

## — ಬಿಬ್ಬಬಾಚಯ್ಯನ ಕಥೆಯು —

ಜಂಗಮರನ್ನು ತನ್ನ ಪ್ರಾಣವೆಂದು ತಿಳಿದು ಅವರು ಹೊದೆದುಬಿಟ್ಟ ವಸ್ತ್ರಗಳನ್ನು ಧರಿಸಿ, ಅವರ ಪಾದಧೂಳಿಯನ್ನು ವಿಭೂತಿಯಾಗಿ ಧರಿಸಿ, ಒಂದು ವೃಷಭಧ್ವಜವನ್ನು ಬಂಡಿಯ ಮೇಲೆ ಬಿಗಿದು ಕಟ್ಟಿ ಅದಕ್ಕೆ ಛತ್ರ- ಚಾಮರಗಳಿಂದಲೂ, ಮೇಲ್ಕಟ್ಟು, ಕನ್ನಡಿ, ಕಲಶಗಳಿಂದಲೂ ಅಲಂಕಾರ ಮಾಡಿ ಅದಕ್ಕೆ ಎರಡು ಎತ್ತುಗಳನ್ನು ಹೂಡಿ ಅವುಗಳ ಕುತ್ತಿಗೆಗೆ ಹೂವಿನ ಸರ, ಗಂಟೆಯ ಸರಗಳನ್ನು ಕಟ್ಟಿ ಬಂಗಾರದ ಬಾಸಿಂಗವನ್ನು ಹಣೆಗೆ ಬಿಗಿದು ತಾನು ಬಂಡಿಯ ಮೂಕಿಯ ಮೇಲೆ ಕುಳಿತು ಉಘೇ, ಉಘೇ ಎಂದು ಶಬ್ದ ಮಾಡುತ್ತ ಒಂದೂವರೆ ಗಾವುದ ದೂರದಲ್ಲಿ ಎಲ್ಲಿಯಾದರೂ ಶರಣಜನರಿಗೆ

ಪರುವಗಳಾದರೆ ಅಲ್ಲಿಗೆ ಹೋಗಿ ಭಕ್ತಸಮೂಹಕ್ಕೆ ನಮಸ್ಕರಿಸಿ ಅವರ ಪಾದ ಧೂಳಿಯನ್ನು ಶರೀರಕ್ಕೆ ಲೇಪಿಸಿ, ಪಾದೋದಕವನ್ನು ಸಂತೋಷದಿಂದ ಸವಿದು, ಶಿರಸ್ಸಿನಲ್ಲಿ ಧರಿಸಿ ಗಣಂಗಳು ಉಂಡುಳಿದ ಪ್ರಸಾದವನ್ನು ಬಂಡಿಯಲ್ಲಿ ತುಂಬಿ ತಾನೂ ಉಂಡು ತೃಪ್ತನಾಗುತ್ತ ಅಸದೃಶವಾದ ಮಹಿಮಾಸ್ಪದವಾದ ಪ್ರಸಾದನಿಷ್ಠಾ ಗರಿಷ್ಠನಾಗಿ, ಘನತರವಾದ ವೀರಶೈವಾಚಾರತತ್ಪರನಾದ ಬಿಬ್ಬ ಬಾಚಯ್ಯನೆಂಬ ಭಕ್ತನು ಗೊಬ್ಬೂರು ಎಂಬ ಅಗ್ರಹಾರದಲ್ಲಿ ವಾಸ ಮಾಡಿಕೊಂಡಿದ್ದನು. ಇವನ ನಡತೆಯನ್ನು ಆ ಊರಲ್ಲಿದ್ದ ಇತರ ಭವಿಗಳು ನೋಡಿ ಸಹಿಸಲಾರದೆ ನಾನಾ ವಿಧವಾಗಿ ಜರೆದು ದೂಷಿಸುತ್ತಿದ್ದರು. ಅವನು ಅದನ್ನು ಲಕ್ಷಿಸದೆ ಎಂದಿನಂತೆ ತನ್ನ ಕಾಯಕ ಮಾಡುತ್ತ ಒಂದು ದಿವಸ ಆ ಗೊಬ್ಬೂರಲ್ಲಿದ್ದ ಒಬ್ಬ ಭಕ್ತನ ಮನೆಯ ಪರ್ವಕ್ಕೂ ಸಹ ಬಂದು ಕುಳಿತನು. ಅಲ್ಲಿಯ ಪರ್ವವು ನೆರವೇರಿದ ಬಳಿಕ ಶಿವಭಕ್ತರ ಪಾದೋದಕವನ್ನು ಸವಿದು ಅವರ ಪ್ರಸಾದದಿಂದ ತೃಪ್ತನಾಗಿ ಭಕ್ತಜನರು ಉಘೇ ಎಂದು ಕೂಗುತ್ತ ಉಗ್ಘಡದಿಂದ ಸಂಗಡ ಬರಲು ಅನ್ನವನ್ನು ತುಂಬಿಕೊಂಡು ಬಂಡಿಯನ್ನು ಹೊಡೆದುಕೊಂಡು ದಾರಿಯಲ್ಲಿ ಬರುತ್ತಿರಲು ಅದನ್ನು ಅಲ್ಲಿಯ ಬ್ರಾಹ್ಮಣರು ನೋಡಿ ಓಹೋ ! ಇದೇನು ನಂದಿಧ್ವಜವೋ ? ಛತ್ರ-ಚಾಮರವೋ ? ಮದುವೆ, ಮುಂಜಿಯೋ ? ಇಲ್ಲವೆ ಯಾರಾದರೂ ಭಕ್ತರು ಸತ್ತರೋ ? ಇಲ್ಲವೆ ಕಾಲುಸಹಿತ ಕೈಲಾಸಕ್ಕೆ ಪ್ರಯಾಣ ಮಾಡುವೆಯೋ? ಈ ಬಂಡಿಯೂ, ಈ ಹಾಡೂ, ಈ ಕುಣಿತವೂ, ಈ ಆಡಂಬರವೂ ಏಕೆ ? ಹೊಲೆಮಾದಿಗರು ಉಂಡು ಉಳಿದದ್ದನ್ನು ಬಂಡಿಯಲ್ಲಿ ತುಂಬಿಕೊಂಡು ಅರಚುತ್ತ ಊರೆಲ್ಲವನ್ನೂ ಹೊಲೆಗೆಡಿಸಬೇಕೆಂದು ಬರುತ್ತಿರುವೆಯಾ ? ಈ ದೇಶವನ್ನು ಆಳುವ ರಾಜನು ಷಂಡನೆಂದು ತಿಳಿದಿರುವೆಯಾ ? ಮರ್ಯಾದೆಯಿಂದ ಮನೆಯನ್ನು ಸೇರಬೇಕಾಗಿದ್ದರೆ ಈ ಬಂಡಿಯನ್ನು ಹಿಂದಿರುಗಿಸು ಎಂದು ಗರ್ಜಿಸಿದರು. ಆಗ ಬಾಚರಸನು ಕೋಪದಿಂದ ಕುದಿಯುತ್ತ ಎಲೈ ದುರ್ಮಾರ್ಗಿಗಳಿರಾ; ದುರಹಂಕಾರದಿಂದ ಮದಿಸಿ ಶಿವಭಕ್ತರ ಮಹಿಮೆಯನ್ನು ಕಾಣದೆ ನಿಂದಿಸುವದು ಶ್ರೇಯಸ್ಕರವಲ್ಲ. ಭವಬಂಧಿಗಳಾದ ನೀವು ಸತ್ಕುಲಪ್ರಸೂತರಾದ ಶಿವಶರಣರನ್ನು ನಿಂದಿಸಬಹುದೇ ? ನೀವು ನಮ್ಮನ್ನು ತಡೆದು ಕಾಡುವದು ಒಳ್ಳೆಯದಲ್ಲ. ಸಾರಿಸಾರಿ ಹೇಳುತ್ತೇನೆ ಶ್ರೀಗುರುಪ್ರಸಾದದಿಂದ ಶಿವದೀಕ್ಷೆ ಹೊಂದಿ

ಪುನರ್ಜನ್ಮ ಪಡೆದ ಶಿವಭಕ್ತರಿಗೆ ಪೂರ್ವದ ಜಾತಿಸಂಪರ್ಕಾದಿಗಳಿಲ್ಲ ಎಂಬುದನ್ನು ನೀವು ತಿಳಿಯಿರಿ. ಗುರುಗಳಲ್ಲಿ ಉತ್ತಮನಾದ ವ್ಯಾಸಮುನಿಯು ಯಾರ ಮಗನು ? ಅವನ ಜಾತಿನೀತಿಗಳನ್ನು ಎಣಿಸಬಹುದೇ ? ಆಧಿಕ್ಯವನ್ನು ಪಡೆದಿರುವ ಮಹಿಮಾಸ್ಪದರಾದ ಶಿವಭಕ್ತರಲ್ಲಿ ಜಾತಿ, ಕುಲ, ಪಂಥಗಳನ್ನು ಬಳಿಸಬಾರದು. ಚರ ಗುರು ಹರ ಪ್ರಸಾದವನ್ನು ನಿಂದಿಸಿ ಎಂಜಲು ಎಂದು ತಿಳಿಯುವವರು. ನೂರುಬ್ರಹ್ಮ ಕಲ್ಪಗಳವರೆಗೆ ನರಕಾಗ್ನಿಯಿಂದ ದಹಿಸಲ್ಪಡುವರೆಂದು ಆಗಮ ಪ್ರಮಾಣವಿದೆ. ಶಿವಭಕ್ತಿ ಸಂಪನ್ನರಾದವರಿಗೆ ಈ ಪ್ರಸಾದವು ಪಿಯೂಷವೆನಿಸುವದು. ಇತರರಿಗೆ ದಾವಾನಲಕ್ಕಿಂತಲೂ ಕ್ರೂರವಾಗುವದು. ಶಿವಭಕ್ತಿ ಸಂಪನ್ನರಾದ ಭಕ್ತರಿಗೆ ನಿಮ್ಮಂತಹ ಪಾಪಿಗಳನ್ನು ಕೊಲ್ಲುವದು ಅಸಾಧ್ಯವಲ್ಲ. ದೀಪದ ಬೆಳಕನ್ನು ಕಂಡುಬಂದು ಸಾಯುವ ಪತಂಗಗಳಂತೆ ಸುಮ್ಮನೆ ಸಾಯದೆ ಹೊರಟುಹೋಗಿರೆಂದು ನುಡಿಯಲು ಆ ಬ್ರಾಹ್ಮಣರು ಮೊದಲಿಗಿಂತಲೂ ಕೋಪಾವಿಷ್ಟರಾಗಿ ಎಲಾ ನೀಚನೇ ಸುಮ್ಮನೆ ಗಳಹಬೇಡ. ಕೀಳ ಮೂಳರ ಎಂಜಲವನ್ನು ತುಂಬಿಕೊಂಡುಬಂದು ಪರ್ವತ ಶ್ರೇಷ್ಠವೆಂದು ಅಬ್ಬರಮಾಡಿ ಹೇಳುವೆಯಾ? ಓಹೋ ! ಹಾಗಾದರೆ ಇದೇನು ವಿಷವೋ ? ದಾವಾಗ್ನಿಯೋ ? ಸಿಂಹವೋ ? ಹುಲಿಕರಡಿಗಳೇ ? ನೋಡೋಣವೆಂದು ಮಡಿಚೀಲವನ್ನೂ ದರ್ಭೆಯನ್ನೂ ನೆಲದಮೇಲಿಟ್ಟು ನಡುವನ್ನುಕಟ್ಟಿ, ಕಚ್ಚೆಯನ್ನು ಸರಿಯಾಗಿ ಬಿಗಿದು, ಜನಿವಾರವನ್ನು ಚನ್ನಾಗಿ ಸಿಕ್ಕಿಸಿಕೊಂಡು ನಾರಾಯಣಾ, ನೀನು ಹಿಡಿದುಕೋ, ನರಸಿಂಹ, ನೀನು ಎತ್ತುಗಳನ್ನು ತಡೆದು ನಿಲ್ಲಿಸು. ಮುರಾರಿಯೇ, ನೀನು ಧ್ವಜವನ್ನು ಕಿತ್ತುಹಾಕು. ಕೇಶವಾ, ಬಂಡಿಯನ್ನು ಕೆಡವಿಬಿಡು, ದಾಮೋದರಾ, ಮುಂದೆ ಬಂದವರನ್ನು ಈಕಡೆಗೆ ಬಿಡಬೇಡ, ಶ್ಯಾಮಾ, ಮೂಕಿಯ ಹಗ್ಗವನ್ನು ಕಿತ್ತುಹಾಕು. ಅಚ್ಯುತ, ನೀನು ಛತ್ರವನ್ನು ಮುರಿದು ತೋರಣಗಳನ್ನು ಪುಡಿಮಾಡು ಎಂದು ಕೂಗುತ್ತ ಮೇಲೆಬೀಳಲು ಉದ್ಯುಕ್ತರಾದರು. ಆಗ ಬಾಚಯ್ಯನು ಮತ್ತಿಷ್ಟು ಕಿಡಿ ಕಿಡಿಯಾಗಿ ಬಂಡಿಯಲ್ಲಿದ್ದ ಅನ್ನದ ಒಂದು ಅಗುಳನ್ನು ತೆಗೆದುಕೊಂಡು ಶಂಕರ ಮಹಾದೇವ ಈ ಹಾಳೂರನ್ನು ಸುಟ್ಟುಬಿಡು ಎಂದು ಆರಚುತ್ತಿರಲು ಕೂಡಲೇ ಆ ಅಗುಳು ಕಿಡಿಕಿಡಿಯಾಗಿ ಸುರಿದು ಊರೆಲ್ಲವೂ ಹೊತ್ತಿಕೊಂಡು ಉರಿಯುವದಕ್ಕೆ ಆರಂಭಿಸಿತು. ಆಗ ಮುದು

ಕರು, ಮೋಟರು, ಹೆಂಗಸರು, ಮಕ್ಕಳು ಮೊದಲಾದವರು ಹೊರಗೆ ಬಂದು ಅಯ್ಯೋ! ಬೆಂಕಿ! ಬೆಂಕಿ! ಬಂತು, ಬಂತು ನೀರನ್ನು ಸೇದಿ ತನ್ನಿರಿ. ಅಯ್ಯಯ್ಯೋ! ನನ್ನ ಮಗು, ನಮ್ಮ ತಂದೆ, ನನ್ನ ಹೆಂಡತಿ, ನನ್ನ ಮಾವ, ನನ್ನ ಹಸು, ನಮ್ಮ ಮನೆ, ದವಸ ಧಾನ್ಯಗಳೆಲ್ಲ ಸುಡುವವಲ್ಲಾ! ಈ ಪ್ರಳಯಾಗ್ನಿಯು ಎಲ್ಲಿಂದ ಬಂದಿತೋ? ಕಾಲು ಸುಟ್ಟಿತು. ಕಣ್ಣಿಗೆ ಉರಿ ತಾಕಿತು. ನಡುವು ಸೀದುಹೋಯಿತು. ಹೊಟ್ಟೆಯು ಕುಸ್ಸಳಿಸಿತು. ಆಹಾ! ಇನ್ನೇನು ಗತಿ? ಎಂದು ಊರಜನರೆಲ್ಲ ಗೋಳಿಡುತ್ತಿರಲು ಸೋಮಯಾಜಿಗಳೂ, ವೇದಾಂತಿಗಳೂ, ಶಾಸ್ತ್ರಬಲ್ಲ ಪಂಡಿತರೂ, ಜ್ಯೋತಿಷ್ಕರೂ, ಉಪಾಧ್ಯಾಯರೂ ಅಗ್ನಿಯಿಂದ ನೊಂದು ಬೆಂದು ಹೋಗುತ್ತಿರುವದನ್ನು ಅಗ್ರಹಾರದ ಜನರು ನೋಡಿ ಈ ಮಹಾತ್ಮನ ದಯೆಯಿಂದಲ್ಲದೆ ಇದು ಪರಿಹಾರವಾಗದೆಂದು ತಿಳಿದುಕೊಂಡು ಹೇ— ಶಿವಭಕ್ತನೇ, ದಯಾನಿಧಿಯೇ, ಭಕ್ತವತ್ಸಲನೇ, ಅರಿಯದೆ ಅಪರಾಧದಿಂದ ಮಾಡಿದ ನಮ್ಮ ತಪ್ಪನ್ನು ಕ್ಷಮಿಸಿ ನಮ್ಮ ಮನೆ-ಮಠ, ಹೆಂಡಿರು-ಮಕ್ಕಳನ್ನೂ, ಬಂಧು ಬಳಗದವರನ್ನೂ ಸಲುಹು. ನೀನಲ್ಲದೆ ನಮಗೆ ಮತ್ತಾರೂ ಪಾಲಕರಿಲ್ಲವೆಂದು ಹೊಗಳುತ್ತ ಸಮುದ್ರ ಮಥನಕಾಲದಲ್ಲಿ ದೇವತೆಗಳು ಶಿವನನ್ನು ಬೇಡಿಕೊಂಡಂತೆ ಮೊರೆಯಿಡಲು ಭಕ್ತವತ್ಸಲನಾದ ಬಾಚಯ್ಯನು ಪ್ರಸಾದವನ್ನು ಕರೆದು ತನ್ನ ಕೈಗಳಲ್ಲಿ ತೆಗೆದುಕೊಂಡು ಬಂಡಿಗೆ ತುಂಬಿ ಸತ್ತಿದ್ದವರನ್ನು ಬದುಕಿಸಿ ಊರನ್ನು ಎಂದಿನಂತೆ ಹೊಸದನ್ನಾಗಿ ಮಾಡಿ ಯಾರಿಗೇನೂ ತೊಂದರೆ ಇಲ್ಲದಂತೆ ಸಕಲವನ್ನೂ ಸರಿಗೊಳಿಸಿದನು. ಮೊದಲು ಮಲೆತುಮೇಲೆ ಬಿದ್ದವರನ್ನು ಕೊಂದು ಶರಣು ಬಂದವರನ್ನು ರಕ್ಷಿಸಿದನು. ಈ ಪ್ರಕಾರ ಶಿವಶರಣರು ಈ ಪ್ರಪಂಚವನ್ನು ಕ್ಷಣಕಾಲದಲ್ಲಿ ನಾಶ ಮಾಡಿ ಪುನಃ ಸೃಷ್ಟಿಸಬಲ್ಲರು. ಅವರ ಚರಿತ್ರೆ ಮಹಿಮಾನ್ವಿತವಾದುದು. ಹೇ ಬಿಜ್ಜಳರಾಜಾ, ಎಂತವರಾದರೂ ಶಿವಭಕ್ತನಲ್ಲವಾದರೆ ಅವನು ಹೀನನು. ಹೀನನಾದವನು ಶಿವಭಕ್ತನಾದರೆ ಅವನು ಬ್ರಾಹ್ಮಣೋತ್ತಮ ನೆನಿಸುವನು. ದಕ್ಷನು ತನ್ನ ಮಾವನಾಗಿದ್ದರೂ ಭಕ್ತಿಹೀನನಾದ್ದರಿಂದ ಅವನನ್ನು ಶಿವನು ದಹಿಸಿದನು. ಭಕ್ತಿವಂತನಾದ ಮಾದರಚನ್ನಯ್ಯ ನೆಂಬುವನ ಸಂಗಡ ಊಟ ಮಾಡಿದನು. ಶಿವಭಕ್ತನು ಹೊಲೆಯನಾದರೂ ಅವನು ಮಾನ್ಯನು. ಎಂಬ

ವಿಷಯದಲ್ಲಿ ಮತ್ತೊಂದು ಕಥೆಯನ್ನು ದೃಷ್ಟಾಂತಪೂರ್ವಕವಾಗಿ ನಿನಗೆ ಹೇಳುವೆನು ಕೇಳೆಂದು ಬಸವೇಶ್ವರನು ಹೇಳಲಾರಂಭಿಸಿದನು.

## — ಮಾದರ ದೂಡಯ್ಯನ ಕಥೆಯು —

ಪೂರ್ವದಲ್ಲಿ ಒಂದು ಊರೊಳಗೆ ದೂಡಯ್ಯನೆಂಬ ಶಿವಭಕ್ತನಿದ್ದನು. ಇವನ ಮಹಿಮೆಯನ್ನುವರ್ಣಿಸುವದು ಸಾಧ್ಯವು. ಆದರೂ ಮುಖ್ಯವಾದ ಒಂದು ನಿರ್ದೇಶವನ್ನು ವಿವರಿಸುತ್ತೇನೆಕೇಳು. ಆ ದೂಡಯ್ಯನ ಊರಲ್ಲಿ ವಾಸವಾಗಿದ್ದ ಒಬ್ಬ ಹಾರುವನು ಸಾಯಂಕಾಲ ಬಹಳಹೊತ್ತಾದರೂ ಮೇಯಲಿಕ್ಕೆಹೋಗಿದ್ದ ತನ್ನಹಸುಬಾರದಿದ್ದುದರಿಂದ ಎಲ್ಲಕಡೆಗೂ ಹುಡುಕಿ ಸಿಕ್ಕದೆ ಕತ್ತಲೆಯಲ್ಲಿ ಮನೆಗೆ ಬರುತ್ತಿರಲು ಕಾಣದೆ ಈ ದೂಡಯ್ಯನು ಸ್ನಾನಮಾಡಿದ ನೀರು ನಿಲ್ಲುವ ಬಚ್ಚಲ ಗುಂಡಿಯಲ್ಲಿ ಕಾಲೂರಿ ತೊಡೆಯವರೆಗೆ ಮುಳುಗಿಹೋಗಿರಲು ಅಲ್ಲಿಂದ ಮನೆಗೆಬಂದು ಕೆಸರಾಗಿದ್ದ ತನ್ನ ಕಾಲನ್ನು ತೊಳೆದು ನೋಡಲಾಗಿ ಆ ಗುಂಡಿಯಲ್ಲಿ ಮುಳುಗಿದ್ದ ಭಾಗವು ವಜ್ರ ಕಾಯದಂತೆ ಸುವರ್ಣಛಾಯೆಯಿಂದ ಹೊಳೆಯುತ್ತಿರುವದನ್ನು ನೋಡಿ ಆ ಬ್ರಾಹ್ಮಣನು ಪರಮಾಶ್ಚರ್ಯದಿಂದ ಆ ದೂಡಯ್ಯನ ಮಹಿಮೆಯನ್ನು ಕೊಂಡಾಡಿ ಮರಳಿಎಂದಿನಂತೆ ಆತನ ಮನೆಯ ಬಚ್ಚಲ ಗುಂಡಿಯನ್ನು ಹುಡುಕಿಕೊಂಡು ಬಂದು ಅದರಲ್ಲಿ ಸ್ನಾನಮಾಡಿ ತನ್ನ ಕುಷ್ಠರೋಗವನ್ನೆಲ್ಲ ಹೋಗಲಾಡಿಸಿಕೊಂಡು ಸುಖವಾಗಿದ್ದು ಆ ದೂಡಯ್ಯನ ವಾಕ್ಯಗಳನ್ನು ವೇದ ವಾಕ್ಯಗಳಂತೆ ನೆನೆದು ಪಠಿಸುತ್ತಿದ್ದನು. ಆತನು ಸ್ನಾನಮಾಡಿದ ನೀರು ಸಾಮಾನ್ಯವಾದುದೇ ? ಆ ನೀರು ನಿಂತ ಸ್ಥಳವು ಬಚ್ಚಲಗುಂಡಿಯೇ ? ಎಂದಿಗೂ ಅಲ್ಲ. ಅದು ಸಿದ್ಧರಸದ ನಿಧಿ, ಹಿಂದಕ್ಕೆ ಪರಮತದವನೊಬ್ಬನ ಕುಷ್ಠ ರೋಗವನ್ನು ಶಿವದಾಸ ಭೀಮಯ್ಯನೆಂಬ ಶರಣನು ಗುಣಪಡಿಸಿದ್ದನೆಂದು ಕೇಳಿದ್ದೆವು. ಈಗ ಈ ದೂಡಯ್ಯನು ಪ್ರತ್ಯಕ್ಷವಾಗಿ ಕುಷ್ಠರೋಗಿಯಾದ ಬ್ರಾಹ್ಮಣನನ್ನು ವಾಸಿ ಮಾಡಿದುದನ್ನು ಕಂಡೆವು. ಎಂದು ಭಕ್ತಮಂಡಲಿಯು ಹೇಳಿ ಕೊಳ್ಳುತ್ತಲಿತ್ತು. ಈ ವಾರ್ತೆಯನ್ನು ಕೇಳಿ ಆ ದೇಶದಲ್ಲಿಯ ಸಾವಿರಾರು ಮಂದಿ ರೋಗಿಗಳು ಬಂದು ಆ ಗುಂಡಿಯಲ್ಲಿ ಸ್ನಾನಮಾಡಿ ತಮ್ಮ ರೋಗವನ್ನು ಹೋಗಲಾಡಿಸಿಕೊಂಡು ಸುಖವಾಗಿದ್ದರು.

## — ಡೋಹರ ಕಕ್ಕಯ್ಯನ ಕಥೆಯು —

ಹರಗುರು ಚರಭಕ್ತನಾಗಿ ಶಿವದ್ವೇಷಿಗಳೆಂಬ ಕಮಲಕ್ಕೆ ಆನೆಯಂತಿರುವ ಕಕ್ಕಯ್ಯನೆಂಬ ಭಕ್ತನಿದ್ದನು. ಅವನ ಊರಲ್ಲಿ ಪ್ರತಿದಿವಸ ಒಬ್ಬ ಬ್ರಾಹ್ಮಣನು ಪುರಾಣವನ್ನು ಹೇಳುತ್ತಿದ್ದನು. ಈ ಕಕ್ಕಯ್ಯನು ದಿನಾಲು ಆ ಪುರಾಣವನ್ನು ಕೇಳುತ್ತಿದ್ದನು. ಒಂದು ದಿವಸ ಆ ಬ್ರಾಹ್ಮಣನು ಪುರಾಣದಲ್ಲಿ ಶಿವನು ಬ್ರಹ್ಮನ ಕಪಾಲವನ್ನು ಹಿಡಿದು ತಿರಿದುಂಡನು. ಅದಕ್ಕೆ ಅಡ್ಡಿ ಮಾಡಿದ ವಿಷ್ವಕ್ಸೇನನನ್ನು ಕೊಂದನು. ನೃಸಿಂಹಾವತಾರಿಯಾದ ವಿಷ್ಣುವು ಹಿರಣ್ಯಕಶ್ಯಪನನ್ನು ಸೀಳಿಹಾಕಲು ಅವನನ್ನು ಶಿವನು ಶರಭರೂಪದಿಂದ ಕೊಂದನು. ವಾಮನ ಮೂರ್ತಿಯ ಪಾದಗಳು ಗಗನ ಚುಂಬಿತವಾದವು. ಹಾಗು ಅವನ ಮೂಳೆಯನ್ನು ಮುರಿದು ಶಿವನು ಆಭರಣವನ್ನಾಗಿ ಧರಿಸಿದನು. ನಾರಾಯಣನು ಸೋಮುಕಾಸುರನನ್ನು ಕೊಂದು ವೇದವನ್ನು ತಂದನು. ಮತ್ತು ಆ ಮತ್ಸ್ಯದ ಬಾಲವನ್ನು ಸೀಳಿ ಶಿವನು ತನ್ನ ತಲೆಗೆ ಆಭರಣವಾಗಿ ಮಾಡಿಕೊಂಡನು. ವರಾಹಾವತಾರ ಮಾಡಿದ ವಿಷ್ಣುವು ಭೂಮಿಯನ್ನು ಧರಿಸಿದನು. ಹಾಗು ಆ ವರಾಹನನ್ನು ಷಣ್ಮುಖನು ಕೊಂದನು. ನಾರಾಯಣನು ದಕ್ಷಯಜ್ಞದಲ್ಲಿ ಅಗ್ರಪೂಜೆಯನ್ನು ಪಡೆದನು. ನಂತರ ಶಿವನು ಅವನ ತಲೆಯನ್ನು ಕಡಿದನು. ಈ ಮೊದಲಾದ ಸಂಗತಿಗಳನ್ನು ಸರಿಯಾಗಿ ಹೇಳದೆ ಸಭೆಗೆಲ್ಲ ಮೋಸ ಮಾಡುತ್ತಿರುವದನ್ನು ಕಂಡು ಕಕ್ಕಯ್ಯನು ಕೋಪದಿಂದ ಇಂತಹ ದುರ್ಮಾರ್ಗಿಗಳನ್ನು ಕೊಲ್ಲುವದೇ ಭಕ್ತರ ಲಕ್ಷಣವೆಂದು ಬಗೆದು ಗುಡಿಗುಡಿಸಿ ತನ್ನ ಕೈಯಲ್ಲಿಯ ಕಠಾರಿಯನ್ನು ಚಿಮ್ಮಿ ತಿರುಗಿಸುತ್ತ ಆ ಪುರಾಣಿಕನ ಮೇಲೇರಿ ಹೋದನು. ಆಗ ಅಲ್ಲಿದ್ದ ಭಕ್ತರೆಲ್ಲರೂ ಇದೇನು ಅನ್ಯಾಯ ! ಪುರಾಣಿಕನಾದವನನ್ನು ಕೊಲ್ಲಬಹುದೇ ? ಎಂದು ನುಡಿಯಲು ಕಕ್ಕಯ್ಯನು ಈತನು ಪರಮ ಪಾಪಿಯು. ಎಂದು ಹೇಳುತ್ತ ಅವನ ದೇಹವನ್ನು ಬಗಿದು ಕೀವು, ಹುಳಗಳು ತುಂಬಿ ನೊಣಗಳು ಜೊಂಯ್ಯನ್ನುತ್ತಿರುವದನ್ನು ಆ ಭಕ್ತ ಸಮುದಾಯಕ್ಕೆಲ್ಲಾ ತೋರಿಸಿ ಅವನ ಗುಣಗಳನ್ನು ವಿವರಿಸಿದನು ಮತ್ತು ಆತನ ಪರಾಕ್ರಮದಿಂದ ಕೂಡಿದ ಭಕ್ತಿಯನ್ನು ನೆನೆದು ಸರ್ವರೂ ಅವನನ್ನು ಹೊಗಳಿದರು. ಆದ್ದರಿಂದ ಕಕ್ಕಯ್ಯ

ನನ್ನು ನೀಚ ಕುಲೋತ್ಪನ್ನನೆಂದು ನುಡಿಯುವದು ಸಾಧ್ಯವೇ? ಹೇಳೆಂದು ಬಸವೇಶ್ವರನು ಬಿಜ್ಜಳ ರಾಜನನ್ನು ಕುರಿತು ಹೇಳುತ್ತಿದ್ದನು.

## — ಕೆಂಭಾವಿ ಭೋಗಾರ್ಯನ ಕಥೆಯು —

ಹಿಂದಿನ ಕಾಲದಲ್ಲಿ ಕೆಂಭಾವಿ ಎಂಬ ಗ್ರಾಮದಲ್ಲಿ ಭೋಗಾರ್ಯನೆಂಬ ಭಕ್ತನು ಅಸದೃಶ ದೃಢಭಕ್ತಿಯುಳ್ಳವನಾಗಿ ಸದಾ ಗುರುಲಿಂಗ ಜಂಗಮ ಸೇವಾ ತತ್ಪರನಾಗಿದ್ದನು. ಪರಶಿವನು ಅವನ ಮಹಿಮೆಯನ್ನು ಸಕಲರಿಗೂ ತಿಳಿಯುವಂತೆ ಪ್ರಚುರಪಡಿಸಬೇಕೆಂದು ನೆನೆದು ಒಂದು ದಿವಸ ಒಬ್ಬ ಹೊಲೆಯನ ವೇಷವನ್ನು ಧರಿಸಿ ಹಣೆಯಲ್ಲಿ ಭಸ್ಮವನ್ನೂ, ಕೊರಳಲ್ಲಿ ಲಿಂಗ, ರುದ್ರಾಕ್ಷಿಗಳನ್ನೂ ಧರಿಸಿ, ಹರಕು ಕಂಬಳಿಯನ್ನು ಉಟ್ಟು ಸತ್ತಕರುವನ್ನು ಹೆಗಲ ಮೇಲೆ ಹೊತ್ತುಕೊಂಡು ಆ ಭೋಗಾರ್ಯನ ಮನೆಗೆ ಬರುತ್ತಾ ಇದ್ದನು. ಆ ಭಕ್ತನು ಅವನನ್ನು ದೂರದಿಂದಲೇ ಕಂಡು ನಮಸ್ಕರಿಸಿ ಅವನ ಪಾದಗಳನ್ನು ಕಣ್ಣಿಗೊತ್ತಿಕೊಂಡು ಅವನು ಹೊತ್ತಿದ್ದ ಕರುವನ್ನು ತಾನು ಹೊತ್ತುಕೊಂಡು ಮನೆಗೆ ಕರೆತಂದು ಪಾದಪೂಜೆಯನ್ನು ಮಾಡಿ ಸತ್ಕರಿಸಿ ಆತನ ಪಾದತೀರ್ಥವನ್ನು ಶಿರದಲ್ಲಿ ಧರಿಸಿ ನಮಸ್ಕರಿಸಿ ನಿಂತಿರಲು ಆಗ ಶಿವನು ಅವನನ್ನು ನೋಡಿ ಹೇ— ಭಕ್ತಕುಲೋತ್ತಂಸನೇ, ಎಳೆಕರುವಿನ ಮಾಂಸವನ್ನು ತಿನ್ನುವ ನಿಯಮವನ್ನು ನಾನು ಹಿಡಿದಿರುವೆನು. ನಿನ್ನಿನ ದಿವಸ ಬಹಳ ಹಸಿವಾದ್ದರಿಂದ ನಾನು ಇದೇ ಕರುವನ್ನು ಹೊತ್ತುಕೊಂಡು ಜೇಡರ ದಾಸಯ್ಯನ ಮನೆಗೆ ಹೋಗಿ ಈ ಕರುವನ್ನು ಪಾಕಮಾಡಿ ಉಣಬಡಿಸೆಂದು ಹೇಳಿದೆನು. ಆಗ ಆತನು ತನ್ನ ಹೆಂಡತಿಯನ್ನು ಕೇಳಿ ಬರುತ್ತೇನೆಂದು ಹೇಳಿ ಹೋದವನು ಈ ವರೆಗೂ ಬರಲಿಲ್ಲ. ನನಗೆ ತುಂಬಾ ಹಸಿವಾಗಿದೆ. ಆದ್ದರಿಂದ ಈ ಕರುವನ್ನು ಕೂಡಲೇ ಅಡಿಗೆ ಮಾಡಿ ಉಣಬಡಿಸಿ ನನ್ನ ವ್ರತವನ್ನು ಸಾಂಗಮಾಡಿಸೆಂದು ನುಡಿಯಲು ಮಹಾಪ್ರಸಾದವೆಂದು ಹೇಳಿ ನಮಸ್ಕಾರ ಮಾಡಿ ಆ ಕರುವನ್ನು ಕತ್ತರಿಸಿ ಮಾಂಸವನ್ನು ತೆಗೆದು ನಿರ್ಮಲವಾಗಿ ತೊಳೆದು ಉಪ್ಪು, ಹುಳಿ, ಕಾರ ಮೊದಲಾದ ಸಾಂಬಾರದ ದ್ರವ್ಯಗಳನ್ನು ಸೇರಿಸಿ ಹೊಸ ತುಪ್ಪದಲ್ಲಿ ಹುರಿದು ಕರಿದು ಅಡಿಗೆ ಮಾಡಿ ದಿವ್ಯಭಕ್ಷ್ಯ ಭೋಜ್ಯಂಗಳೊಡನೆ ಉಣಬಡಿಸಿ ತೃಪ್ತಿ ಪಡಿಸಿದನು. ಈ ಸುದ್ಧಿಯನ್ನು ಕೇಳಿ

ಆ ಊರ ಬ್ರಾಹ್ಮಣರು ಕೋಪದಿಂದ ಹಲ್ಲು ಕಡಿದು, ಸಿಡಿದು ಬೀಳುತ್ತ ಊರಿಗಿಲ್ಲದ ಹೊಲೆಗೆಲಸವನ್ನು ಮಾಡಿ ಪವಿತ್ರವಾದ ಬ್ರಾಹ್ಮಣರ ಅಗ್ರಹಾರವನ್ನು ಹಾಳುಮಾಡಿದನಲ್ಲಾ ! ಈ ನೀಚನನ್ನು ಹಿಡಿದು ಹೊಡೆದು ಕತ್ತರಿಸಿ ನಾಶ ಮಾಡಿರಿ ಎಂದು ಕೋಲಾಹಲ ಧ್ವನಿಯನ್ನು ಮಾಡುತ್ತ ಅವನ ಮನೆಯನ್ನು ಹೊಕ್ಕು ನೋಡಲು ಊಟಮಾಡುತ್ತಿದ್ದ ಪರಶಿವನು ಮಾಯವಾದನು. ಆಗ ಭೋಗಾರ್ಯನು ಕೋಪದಿಂದ ಗುಡಿಗುಡಿಸುತ್ತ ಎಲಾ ಬ್ರಾಹ್ಮಣರೇ, ಪವಿತ್ರರಾದ ನಿಮ್ಮಂತಹ ಹಾರುವರು ಅಜ್ಞಾನದಿಂದ ನೀವು ಈಗ ಬಂದಿದ್ದ ಪರಶಿವನನ್ನು ಹೊಲೆಯನೆಂದು ಹೇಳಿದ್ದರಿಂದ ನಿಮ್ಮಂತಹ ಬಾಹಿರರು ಈ ಲೋಕದಲ್ಲಿ ಯಾರು ಇದ್ದಾರೆ ? ಆದ್ದರಿಂದ ನಿಮ್ಮ ದರ್ಶನ, ಸ್ಪರ್ಶನ, ಸಂಭಾಷಣೆಗಳು ನಮಗೆ ಯೋಗ್ಯವಲ್ಲ. ಇಂದಿನಿಂದ ನಿಮ್ಮ ಸಹವಾಸವನ್ನು ತೊರೆಯುವೆನು. ನೀವು ಇಂತಹರೆಂದು ನನಗೆ ಈ ವರೆಗೆ ತಿಳಿದಿರಲಿಲ್ಲ. ನಮ್ಮ ಮಾನ್ಯ, ಮನೆ, ಮಠಗಳನ್ನು ನೀವೇ ಅನುಭವಿಸಿಕೊಂಡು ಸುಖವಾಗಿ ಇರಿರೆಂದು ಹೇಳುತ್ತ, ಮನೆಯನ್ನು ಬಿಟ್ಟು ಊರ ಹೊರಕ್ಕೆ ಹೊರಡಲು ಆ ಊರಲ್ಲಿಯ ದೇವಾಲಯಗಳಲ್ಲಿದ್ದ ಸಮಸ್ತ ಲಿಂಗಗಳೂ ಮತ್ತು ಬ್ರಾಹ್ಮಣರು ಪೂಜೆಮಾಡುತ್ತಿದ್ದ ಸ್ಫಟಿಕಲಿಂಗ, ಪಾರ್ಥಿವಲಿಂಗ ಮೊದಲಾದವು ಸಂತೋಷದಿಂದ ಕುಣಿದಾಡುತ್ತ, ಕೆಲವು ನೆಗೆಯುತ್ತ, ಹಲವು ನೆಲವನ್ನು ಸೋಂಕದೆ ಆಕಾಶದಲ್ಲಿ ಹಾರಿಬರುತ್ತ ಭೋಗಾರ್ಯನನ್ನು ಹಿಂಬಾಲಿಸಿ ಊರನ್ನು ತೊರೆದು ಹೋಗಲು ಶಿವಭಕ್ತರೆಲ್ಲರೂ ಭೋಗಾರ್ಯನ ಮಾರ್ಗವನ್ನೇ ಹಿಡಿದು ಹೋಗಲು ಕೆರೆ ಕಟ್ಟೆ ಬಾವಿಗಳು ಬತ್ತಿ ಹೋದವು. ಬೆಳೆಗಳು ಬಾಡಿದವು. ಬಿರುಗಾಳಿ ಬೀಸಿತು. ಭೂಕಂಪವಾಯಿತು. ಹಗಲು ನಕ್ಷತ್ರಗಳು ಮೂಡಿದವು. ಹಕ್ಕಿಗಳು, ಹಸುಗಳು ವಿಕಾರಧ್ವನಿಯಿಂದ ಕೂಗಿದವು. ಹೀಗೆ ಅನೇಕ ಅಪಶಕುನಗಳು ತೋರಿದವು. ತಿನ್ನುಣ್ಣುವ ಅನ್ನದಲ್ಲಿ ಹುಳುಗಳಾದವು. ನಿಷ್ಕಾರಣವಾಗಿ ಊರೆಲ್ಲವೂ ಹೊಗೆಯಿಂದ ಮುಸುಕಿತು. ಇದನ್ನೆಲ್ಲ ನೋಡಿದ ಬ್ರಾಹ್ಮಣರು ಯಾವ ಭಕ್ತಶಿಖಾಮಣಿಯನ್ನು ಊರಿಂದ ಹೊರಗೆ ಹೊರಡಿಸಿದೆವೋ ಆ ಮಹಾತ್ಮನ ಮಹಿಮೆಯಿಂದ ಇಂತಹ ದುರ್ದಶೆ ಪ್ರಾಪ್ತವಾಯಿತೆಂದು ತಿಳಿದು ಆತನಿಂದಲ್ಲದೆ ಅನ್ಯರಾರಿಂದಲೂ ಬಿಡಿಸಲಾಗದೆಂದು ಯೋಚಿಸಿ ತಾವು ಆತನನ್ನು ಮೊರೆ ಹೊಕ್ಕು ಸುಖದಿಂದ ಬಾಳುವದು ಉಚಿತ

ವೆಂದು ಬಗೆದು ಗುಂಪು ಕೂಡಿ ಬೆರೆದು ಊರ ಹೊರಗೆ ಲಿಂಗಗಳ ಮಧ್ಯದಲ್ಲಿ ಕುಳಿತಿರುವ ಭೋಗಯ್ಯನನ್ನು ಕಂಡು ದೂರದಲ್ಲಿಯೇ ಅಡ್ಡ ಬಿದ್ದು ನಮಸ್ಕಾರಮಾಡಿ ನಾನಾ ಬಗೆಯಿಂದ ಹಲುಬಿ ಹಂಬಲಿಸಿ ದಯಾಸಿಧಿಯೇ, ಭಕ್ತ ಶಿಖಾಮಣಿಯೇ, ಮದಾಂಧರಾಗಿ ಗರ್ವದಿಂದ ನಿನ್ನ ಮಹಿಮೆಯನ್ನು ತಿಳಿಯದೆ ಮಾಡಿದ ನಮ್ಮ ಅಪರಾಧವನ್ನು ಕ್ಷಮಿಸು. ನೀನಿಲ್ಲದೆ ನಮ್ಮ ಅಗ್ರಹಾರವು ಹಾಳು ಸುರಿಯುತ್ತಿದೆ. ಮಕ್ಕಳು ಮರಿಗಳು ಸಾಯುತ್ತಿದ್ದಾರೆ. ನೀರು ಬತ್ತಿ ಹೋಗಿವೆ ಬೆಳೆಗಳು ಒಣಗಿ ಹೋಗಿವೆ ಹೀಗೆ ನಾನಾ ಅನರ್ಥಗಳುಂಟಾಗಿವೆ ಆದ್ದರಿಂದ ಭಕ್ತ ವತ್ಸಲನಾದ ನೀನು ಪುನಃ ಮನೆಗೆ ಬಂದು ನಮ್ಮನ್ನು ರಕ್ಷಿಸಬೇಕೆಂದು ಮೊರೆಯಿಡುತ್ತಿರುವ ಬ್ರಾಹ್ಮಣರಿಗೆ ಅಭಯವನ್ನು ಕೊಟ್ಟು ಸಮಸ್ತ ಲಿಂಗ, ಜಂಗಮಸಂಗದಿಂದ ಉತ್ತುಂಗ ಮಹಿಮನಾದ ಭೋಗಾರ್ಯನು ಆ ಊರನ್ನು ಹೊಕ್ಕು ತನ್ನ ಮನೆಯನ್ನು ಪ್ರವೇಶಿಸಲು ಲಿಂಗಗಳೆಲ್ಲವೂ ಸಂಭ್ರಮದಿಂದ ತಮ್ಮ ತಮ್ಮ ಪೀಠಗಳಲ್ಲಿ ಕುಳಿತುಕೊಳ್ಳುವಾಗ ಪಾರ್ಥಿವಲಿಂಗವು ಸ್ಫಟಿಕಲಿಂಗದ ಸ್ಥಾನದಲ್ಲಿಯೂ, ಸ್ಫಟಿಕಲಿಂಗವು ಪಾರ್ಥಿವ ಲಿಂಗದ ಪೀಠದಲ್ಲಿಯೂ, ಸಣ್ಣ ಲಿಂಗವು ದೊಡ್ಡ ಲಿಂಗದ ಪೀಠದಲ್ಲಿಯೂ, ದೊಡ್ಡ ಲಿಂಗವು ಸಣ್ಣ ಲಿಂಗದ ಪೀಠದಲ್ಲಿಯೂ ಬೇಗಬೇಗನೆ ಬಂದು ಸಡಗರದಿಂದ ಸೇರಿಕೊಳ್ಳಲು ಆ ಅಗ್ರಹಾರವು ಮೊದಲಿನಂತೆ ಮಂಗಳಕರವಾಯಿತು. ಭೋಗಾರ್ಯನು ಎಂದಿನಂತೆ ಗುರು-ಲಿಂಗ-ಜಂಗಮ ಸೇವಾ ತತ್ಪರನಾಗಿದ್ದನು.

## .... ಶ್ವಪಚಯ್ಯನ ಕಥೆಯು ....

ಶ್ವಪಚಯ್ಯನೆಂಬ ಭಕ್ತನೊಬ್ಬನು ಕಾಡಿನಲ್ಲಿ ಈಶ್ವರನಿಗಾಗಿ ಒಂದು ದಿವಸ ಅಡಿಗೆ ಮಾಡುತ್ತಿರುವಾಗ ಸಾಮವೇದಿ ಶಿಖಾಮಣಿ ಎಂಬ ಬ್ರಾಹ್ಮಣೋತ್ತಮನು ತನ್ನ ಮಂತ್ರಶಕ್ತಿಯಿಂದ ಆಕಾಶ ಮಾರ್ಗದಲ್ಲಿ ಬರುತ್ತಿರಲು ಅದನ್ನು ಕಂಡು ಶ್ವಪಚಯ್ಯನು ತಾನು ಮಾಡುವ ಅನ್ನಕ್ಕೆ ಭವಿಯ ದೃಷ್ಟಿ ಬೀಳುವದೆಂದು ತಿಳಿದು ಆ ಅಡಿಗೆಯ ಪಾತ್ರೆಯನ್ನು ಬಟ್ಟೆಯಿಂದ ಮರೆಮಾಡಿದನು. ಇದನ್ನು ಆ ಬ್ರಾಹ್ಮಣನು ನೋಡಿ ನೀಚ ಕುಲದಲ್ಲಿ ಹುಟ್ಟಿದವರ ಪಾಡೆಲ್ಲವೂ ಇಷ್ಟೇ ! ನನ್ನ ಮಹಿಮೆಯನ್ನು ತಿಳಿಯದೆ ಅನ್ನಕ್ಕೆ ನನ್ನ ನೆರಳು

ಬೀಳುವದೆಂಬ ಭಯದಿಂದ ತನ್ನ ಬಟ್ಟೆಯಿಂದ ಮುಚ್ಚಿದನಲ್ಲಾ ! ಇವನ ಅಹಂಭಾವವನ್ನೂ, ದುರುಳತನವನ್ನೂ ನೋಡಿದರೆ ಪರಮನೀಚನೆಂದು ತೋರುವದು. ಆದ್ದರಿಂದ ಇವನ ಸಂಗಡ ನನಗೇಕೆ ಮಾತು ? ಎಂದು ಅನ್ನುತ್ತ ಮುಂದೆ ಹೋಗುತ್ತಿರಲು ಆ ಭಕ್ತನನ್ನು ದೂಷಿಸಿದ ಪಾಪದಿಂದ ಆವನ ಮಂತ್ರ ಶಕ್ತಿಯು ನಷ್ಟವಾಗಿ ತನ್ನ ತಲೆಯ ಮೇಲೆ ನೆರಳಾಗಿ ಬರುತ್ತಿದ್ದ ಬಟ್ಟೆಯು ಕೆಳಗೆ ಜಾರಿಬಿದ್ದಿತು. ಬ್ರಾಹ್ಮಣನು ಎಷ್ಟು ಸಾಹಸ ಪಟ್ಟರೂ ಸಾಗಲಿಲ್ಲ. ಆಗ ಆತನು ಓಹೋ ! ಇದು ಮಹಿಮನಾದ ಆ ಭಕ್ತನ ದೂಷಣೆಯಿಂದಲೇ ಹೀಗಾಯಿತೆಂದು ತಿಳಿದು ಆತನ ಬಳಿಗೆ ಬಂದು ನಮಸ್ಕರಿಸಿ ಕರುಣೆಯನ್ನು ಹೊಂದಿ ಕೆಲವು ದಿವಸ ಸೇವೆಮಾಡಿಕೊಂಡಿದ್ದು ಶಿವದೀಕ್ಷೆಯನ್ನು ಪಡೆದು ಪವಿತ್ರನಾಗಿ ಈಶ್ವರನಲ್ಲಿ ಭಕ್ತಿಯನ್ನು ಸಂಪಾದಿಸಿ ತನ್ನ ಊರು ಸುತ್ತಲೂ ಇರುವ ಮೂವತ್ತಾರು ಊರುಗಳ ಜನರನ್ನು ಕರೆಯಿಸಿ ಅವರನ್ನು ಶಿವನ ಮೆಚ್ಚಿಗೆಗೆ ಪಾತ್ರರನ್ನಾಗಿ ಮಾಡಿ ಕೈಲಾಸವನ್ನು ಹೊಕ್ಕನು.

## .... ಉದ್ಭಟಾರ್ಯನ ಕಥೆಯು ....

ಹಿಂದಕ್ಕೆ ವಲ್ಲಕ್ಕೀ ನಗರದಲ್ಲಿ ಭೋಜ ನರಪಾಲನೆಂಬ ದೊರೆಯು ಆಳುತ್ತಿದ್ದನು. ಆತನ ಗುರುವಾದ ಉದ್ಭಟಾರ್ಯನು ರಾಜನಿಂದ ಸಮಸ್ತ ಮರ್ಯಾದೆಗಳನ್ನು ಹೊಂದಿ ಸೇವೆ ಮಾಡಿಸಿಕೊಳ್ಳುತ್ತ ಶ್ರುತಿ, ಶಾಸ್ತ್ರ, ತರ್ಕ ಮೀಮಾಂಸಾದಿಗಳ ಮತದಿಂದ ಪರವಾದಿಗಳನ್ನು ವಾದದಲ್ಲಿ ಗೆದ್ದು ಅಸದೃಶವಾದ ಕೀರ್ತಿಯನ್ನು ಸಂಪಾದಿಸಿ ಗಾಯನ ವಿದ್ಯಾನಿಪುಣಳಾದ ಜೊಮ್ಮಾಂಬೆ ಎಂಬವಳೊಡನೆ ಲಗ್ನವಾಗಿ ಸುಖದಿಂದ ಇದ್ದನು. ಇದನ್ನು ನೋಡಿ ಪರವಾದಿಗಳು ಅಸೂಯಾಭರದಿಂದ ಸಹಿಸಲಾರದೆ ರಾಜನ ಬಳಿಗೆ ಬಂದು ಅಯ್ಯಾ— ನಿಮ್ಮ ಗುರುಗಳಾದ ಉದ್ಭಟಾರ್ಯರು ಸಾಮಾನ್ಯರಲ್ಲ. ಮಾರ್ಮಲೆವ ಪಂಡಿತ ವೀರನು. ಸಕಲವನ್ನೂ ತಿಳಿದವರು. ಹಾಗೂ ಉತ್ತಮ ಕುಲೋತ್ಪನ್ನನು. ಆದರೂ ಕುಲ ವಯ, ರೂಪಗಳಿಗೆ ತನಗಸ್ಸು ಕೂಲೆಯಾದ ಸುಂದರಿಯನ್ನು ವರಿಸದೆ ಹೊಲತಿಯಾದ, ಸಂಗೀತ ವಿದ್ಯಾ ವಿಶಾರದೆಯಾದವಳನ್ನು ಮದುವೆಯಾಗಿ ನಮ್ಮ ಕುಲಧರ್ಮವನ್ನು ಹಾಳು

ಮಾಡುತ್ತಿರುವನೆಂದು ದೂರಿಕೊಳ್ಳಲು ರಾಜನು ಗುರುವಿನಲ್ಲಿ ತಪ್ಪನ್ನು
ಹುಡುಕದೆ, ಭಕ್ತಿಯನ್ನು ತೊರೆಯದೆ ಆ ಚಾಡಿಕಾರರ ಮಾತು ಕೇಳದೆ
ಸುಮ್ಮನಿದ್ದನು. ಇದನ್ನು ನೋಡಿ ಆ ಚಾಡಿಕಾರರು ನಾಚಿಕೆಯಿಂದ ತಲೆ
ತಗ್ಗಿಸಿ ರಾಜನ ಭಾವನೆಯನ್ನು ತಿಳಿದು ಪುನಃ ಅವನ ಹತ್ತಿರ ಬಾರದೆ
ದೂರಾದರು. ಹೀಗಿರಲು ಪರಶಿವನು ಆ ಭವಿಗಳಿಗೆ ಉದ್ಭಟಾರ್ಯನ ಮಹಿ
ಮೆಯನ್ನು ತೋರಿಸಬೇಕೆಂದು ಆತನ ಪ್ರಾಣಲಿಂಗವನ್ನು ಕೈಲಾಸಕ್ಕೆ ಬರ
ಮಾಡಿಕೊಂಡನು. ಆತನ ಬಂಧುಗಳು ಶರೀರವನ್ನು ಊರಹೊರಗಿನ ಒಂದು
ದೊಡ್ಡ ಆಲದ ಮರದ ಕೆಳಗೆ ಚಿತೆಯೊಡ್ಡಿ ಸುಟ್ಟರು. ಆಗ ಆ ಚಿತೆಯ
ಹೊಗೆಯು ಆ ಮರಕ್ಕೆ ತಾಕಿದ ಕೂಡಲೆ ಅಲ್ಲಿ ವಾಸವಾಗಿದ್ದ ಅಸಂಖ್ಯಾತ
ಪಿಶಾಚಿಗಳೆಲ್ಲ ಸಂತೋಷದಿಂದ ಕೈಲಾಸವನ್ನು ಸೇರಿಕೊಂಡವು. ಸ್ವಲ್ಪಕಾಲ
ಕಳೆದ ಮೇಲೆ ಮತ್ತೊಂದು ಪ್ರೇತವು ಬಂದು ತನ್ನ ಸಂಬಂಧಿಕರು ಅಲ್ಲಿ ಇಲ್ಲ
ದಿರುವದನ್ನು ನೋಡಿ ವ್ಯಸನದಿಂದ ಗೋಳಿಡುತ್ತ ತೆಪ್ಪಕ್ಕೆಬಿದ್ದ ಆನೆಯಂತೆ
ಭಯಂಕರವಾದ ಧ್ವನಿಯನ್ನು ಮಾಡಲು ಪುರಜನರೂ, ಉಳಿದ ಪ್ರಾಣಿಗಳೂ
ಭಯದಿಂದ ಗಡಗಡನೆ ನಡುಗಿ ಹೋದರು. ಈ ಶಬ್ದವನ್ನು ಕೇಳಿ ರಾಜನು
ಪರೀಕ್ಷಾರ್ಥವಾಗಿ ತನ್ನ ಮಂತ್ರಿ, ಪುರೋಹಿತ, ಆಪ್ತಮಿತ್ರ ಸೇನಾಸಮೇತ
ನಾಗಿ ಆಲದ ಮರದ ಹತ್ತಿರ ಬಂದು ನೋಡಲು ಕಾಲ ಮೇಘದಂತೆ ಕಪ್ಪಾದ
ಶರೀರವೂ, ಕೆಂಪಾಗಿರುವ ಕೆಂಜಡೆಯ ತಲೆಯೂ, ಬಾಚಿಯಂತಿರುವ ಹಲ್ಲು
ಗಳೂ, ದೊಡ್ಡ ಬಾಯಿಯೂ, ನೀರನ್ನು ಸುರಿಸುತ್ತಿರುವ ಕೆಂಪಾದ ಕಣ್ಣು
ಗಳೂ, ಕುತ್ತಿಗೆಯ ನರಗಳು ಉಬ್ಬಿಕೊಂಡು ಅಳುತ್ತಿರುವ ಪಿಶಾಚಿಯನ್ನು
ಕಂಡು ಬೆರಗಾಗಿ ಎಲೈ— ಪಿಶಾಚಿಯೇ, ನೀನು ಅಳುವದಕ್ಕೆ ಕಾರಣವೇ
ನೆಂದು ಕೇಳಲು ಆ ಪಿಶಾಚವು ಅಯ್ಯಾ ದೊರೆಯೇ ಕೇಳು. ನಾನು ಹೇಳಿ
ದಂತೆ ಮಾಡಿ ನನ್ನನ್ನು ತೃಪ್ತಿಪಡಿಸಿದರೆ ನಿನಗೆ ಸದ್ಗತಿಯುಂಟಾಗುವದೆಂದು
ಹೇಳಿ ತನ್ನ ಪೂರ್ವ ವೃತ್ತಾಂತವನ್ನು ಹೇಳತೊಡಗಿತು. ಕೈಲಾಸ ಪರ್ವತದ
ಶಿಖರದಲ್ಲಿರುವ ಮಂದ್ರೋದವೆಂಬ ಸರೋವರದ ಬಳಿಯಲ್ಲಿ ಮಹಾತ್ಮನಾದ
ಮಾರ್ಕಾಂಡೇಯ ಮುನಿಯು ತಪಸ್ಸನ್ನು ಆಚರಿಸುತ್ತಿದ್ದನು. ಶಿವನ ಸಭೆಗೆ
ಹೋಗಿದ್ದ ಗಂಧರ್ವರು ಆ ಕೊಳದ ಬಳಿ ಬಂದು ತಮ್ಮ ಉಡಿಗೆ ತೊಡಿಗೆಗ
ಳನ್ನು ತೆಗೆದಿಟ್ಟು ಅದರಲ್ಲಿ ಸ್ನಾನಮಾಡಿ ಅಲ್ಲಿಯ ಕೆಂದಾವರೆಯ ಹೂವುಗ

ಳನ್ನು ಮುರಿದು ಹಾಕಿದರು. ಇದನ್ನು ಕಂಡ ಆ ಋಷಿಯು ಕೋಪದಿಂದ ಬತ್ತಲೆಯಾಗಿ ನಿಂತಿದ್ದ ಏಳುನೂರು ಜನ ಗಂಧರ್ವರನ್ನು ನೋಡಿ ಶಿವನಿಗೆ ಅಭಿಷೇಕ ಮಾಡುವ ನಿರ್ಮಲ ಜಲವನ್ನು ಕಲಕಿ ಕದಡಿದ್ದರಿಂದಲೂ, ಶಿವನ ಪೂಜೆಗಾಗಿ ಬಿಟ್ಟಿದ್ದ ಕಮಲಗಳನ್ನು ಕಿತ್ತುದರಿಂದಲೂ ನೀವು ಭೂಲೋಕ ದಲ್ಲಿ ಪಿಶಾಚಿಗಳಾಗಿ ಬಾಳಿರೆಂದು ಶಾಪವನ್ನು ಕೊಟ್ಟನು. ಆ ಶಾಪದಿಂದ ಭಯಗ್ರಸ್ತರಾದ ನಾವು ವಿಮೋಚನವನ್ನು ನುಡಿಯಬೇಕೆಂದು ಅರಿಕೆ ಮಾಡಿ ಕೊಳ್ಳಲು, ಭೂಲೋಕದಲ್ಲಿ ಶಿವಮತವನ್ನು ಪ್ರಚುರ ಪಡಿಸುತ್ತಿರುವ ಉದ್ಭ ಟಾರ್ಯನು ಸತ್ತಮೇಲೆ ಆತನ ದೇಹವನ್ನು ಸುಡುವ ಹೊಗೆಯು ನಿಮಗೆ ತಾಕಿದ ಕೂಡಲೆ ನಿಮ್ಮ ಪಿಶಾಚತ್ವವು ನಾಶವಾಗುವದೆಂದು ಹೇಳಿದನು. ಆದ್ದರಿಂದ ನಾವೆಲ್ಲರೂ ಪಿಶಾಚಿಗಳಾಗಿ ಹನ್ನೆರಡುನೂರು ವರ್ಷಗಳಿಂದ ಈ ಆಲದ ಮರವನ್ನು ಆಶ್ರಯಿಸಿಕೊಂಡು ಬಾಳುತ್ತ ಉದ್ಭಟಾರ್ಯನ ಮರಣಕಾ ಲವನ್ನು ನಿರೀಕ್ಷಿಸಿಕೊಂಡಿದ್ದೆವು. ಹೊಟ್ಟೆಯ ಹಸಿವನ್ನು ತಾಳಲಾರದೆ ಆಹಾರ ವನ್ನು ಹುಡುಕಿಕೊಂಡು ಬರಲು ನಾನು ಹೋಗಿದ್ದೆನು. ಆ ಕಾಲದಲ್ಲಿ ಭಾಗ್ಯ ಶಾಲಿಗಳಾದ ನಮ್ಮವರೆಲ್ಲರೂ ಪವಿತ್ರರಾಗಿ ಕೈಲಾಸವನ್ನು ಸೇರಿದರು. ಮಂದ ಭಾಗ್ಯನಾದ ನಾನು ಮಾತ್ರ ಈ ಹಾಳು ಹೊಟ್ಟೆಗಾಗಿ ಹೋಗಿ ಸಂಗಡಿಗರನ್ನು ತೊರೆದು ಕೈಲಾಸವನ್ನು ಕಾಣದೆ ನೂರಾರು ವರ್ಷಗಳಿಂದ ಕಾದುಕೊಂಡಿ ದ್ದುದೂ ವ್ಯರ್ಥವಾಗಿ ಇನ್ನೂ ಪಿಶಾಚರೂಪದಿಂದಲೇ ಇರಬೇಕಾಯಿತಲ್ಲಾ ಎಂದು ಗೋಳಿಡುತ್ತಿದ್ದೇನೆ. ನನ್ನ ಮೇಲೆ ಕರುಣೆಯಿಟ್ಟು ನೀನು ಈ ಚಿತೆ ಯಲ್ಲಿ ಉಳಿದಿರುವ ಕಟ್ಟಿಗೆಗಳಿಂದ ಅರ್ಧ ಸುಟ್ಟಿರುವ ಈ ಮೂಳೆಗಳನ್ನು ಸೇರಿಸಿ ಚಿತೆಯೊಡ್ಡಿದರೆ ನಾನು ಕೈಲಾಸಕ್ಕೆ ಹೋಗುವ ಗುರುತಿಗಾಗಿ ಈ ಆಲದಮರವನ್ನು ಬೇರುಸಹಿತ ಕಿತ್ತುಕೊಂಡು ಕೈಲಾಸಕ್ಕೆ ಹೋಗುವೆನೆಂದು ಹೇಳಿತು. ಆಗ ದೊರೆಯು ಅದರ ಸಂಕಟವನ್ನು ನೋಡಿ ಮರುಗಿ ಹಾಗೆಯೇ ಆಗಲೆಂದು ಚಿತೆಯೊಡ್ಡಲು ಆ ಹೊಗೆಯು ತಾಕಿದ ಕೂಡಲೇ ಪಿಶಾಚತ್ವವು ತೊಲಗಿ ಹೋಗಲು ದಿವ್ಯವಾದ ಕುಂಡಲ, ಕಿರೀಟಗಳನ್ನು ಧರಿಸಿ ತೇಜೋ ರೂಪದಿಂದ ಹೊಳೆಯುತ್ತಿರಲು ರಾಜನು ಸಂತೋಷಭರಿತನಾಗಿ ತನ್ನ ಮಂತ್ರಿ, ಪುತ್ರ, ಮಿತ್ರ, ಕಳತ್ರ, ಮಂಡಳಿ, ಸಾಮಂತ ಮುಂತಾದ ಸಮಸ್ತ ಪರಿಜನರನ್ನು ಆ ಆಲದಮರದ ಮೇಲೆ ಕುಳ್ಳಿರಿಸಿ ತಾನೂ ಕುಳಿತುಕೊಳ್ಳಲು

ಆ ಗಂಧರ್ವನು ಸಂತೋಷದಿಂದ ರಾಜನನ್ನು ಹೊಗಳುತ್ತ ಆ ಮರವನ್ನು ಬೇರು ಸಹಿತ ಕಿತ್ತು ಕೈಲಾಸಕ್ಕೆ ತೆಗೆದುಕೊಂಡು ಹೋದನು.

ಇದೂ ಅಲ್ಲದೆ—

## — ಗುಡ್ಡವ್ವೆಯ ಕಥೆಯು —

ಪರಮ ಶಿವಭಕ್ತನಾದ ಮಾದರಚನ್ನಯ್ಯನ ವಂಶದವಳಾದ ಗುಡ್ಡವ್ವೆ ಎಂಬ ಒಬ್ಬ ಭಕ್ತಳು ನಾವದಿಗೆ ಎಂಬ ಊರಲ್ಲಿ ವಾಸಮಾಡಿಕೊಂಡಿದ್ದಳು. ಅವಳಿಗೆ ಕುಷ್ಠರೋಗವು ಪ್ರಾಪ್ತವಾಗಿ ಕೈಕಾಲು, ಮೂಗು, ಬಾಯಿಗಳೆಲ್ಲವೂ ಆಗಾಗ್ಗೆ ಕೊಳೆತು ಬೀಳುತ್ತಿದ್ದವು. ಆಕೆಯು ಒಂದು ದಿವಸ ಬೀದಿಯಲ್ಲಿ ಬರುತ್ತಿರುವಾಗ ಹಾರುವರು ಕಂಡು ಎಲೈ- ಪರಮಪಾಪಿಯಾದ ಚಾಂಡಾಲೆಯೇ, ಉತ್ತಮ ಕುಲೋತ್ಪನ್ನರಾದ ನಾವು ತಿರುಗಾಡುವ ಮಾರ್ಗದಲ್ಲಿ ನೀನು ಬರಕೂಡದು. ನಿನ್ನ ದೇಹವನ್ನು ನೋಡುವದೂ, ನಿನ್ನೊಡನೆ ಮಾತಾಡುವದೂ ನಮಗೆ ಯೋಗ್ಯವಲ್ಲ. ಆದ್ದರಿಂದ ನೀನು ಈ ಕ್ಷಣವೇ ಈ ಊರನ್ನು ಬಿಟ್ಟು ಹೊರಟು ಹೋಗೆಂದು ಧಿಕ್ಕರಿಸಿ ನುಡಿದು ಅವಳನ್ನು ಬಲವಂತವಾಗಿ ಹೊರಹೊರಡಿಸಿದರು. ಅವಳು ಆ ಅವಮಾನವನ್ನು ಲಕ್ಷಿಸದೆ ಸೌರಾಷ್ಟ್ರದ ಸೋಮನಾಥನನ್ನು ಮೆಚ್ಚಿ ತನ್ನ ದೇಹವನ್ನು ಪರಿಶುದ್ಧ ಮಾಡಿಕೊಳ್ಳಬೇಕೆಂದು ನೆನೆದು ಅಲ್ಲಿಗೆ ನಡೆದು ಹೋಗಲು ಅವಳ ಕಾಲುಗಳು ಕೊಳೆತು ಬಿದ್ದವು. ಆದರೂ ಅವಳು ಭಯದಿಂದ ನಡುಗಿ ಭಕ್ತಿಗೆಡದೆ ಧೈರ್ಯದಿಂದ ಮಂಡೆಯನ್ನೂರಿ ನಡೆಯುತ್ತ ಸ್ವಲ್ಪದೂರ ಬರುತ್ತಿರಲು ಮಂಡೆಯೂ ಕೊಳೆತು ಬಿದ್ದು ಹೋಯಿತು. ಆದರೂ ಹಿಂದೆಗೆಯದೆ ಶಿವಧ್ಯಾನ ಪರಾಯಣಳಾಗಿ ನಡುವಿನಿಂದ ತೆರಳುತ್ತ ಬರುತ್ತಿರಲು ನಡವು ಸಹ ಕೊಳೆಯುವ ದಕ್ಕೆ ಆರಂಭವಾಯಿತು. ಆಕೆಯು ಹೇಗಾದರೂ ಮಾಡಿ ತನ್ನ ವ್ರತವನ್ನು ಕಾಪಾಡಿಕೊಳ್ಳಬೇಕೆಂದು ಚಿಂತಿಸಿ ಭಕ್ತಿಯುತಳಾಗಿ ಪಡಿಗುಂಡಿನಂತೆ ತನ್ನ ದೇಹವನ್ನು ಉರುಳಿಸುತ್ತ ಮುಂದೆ ಬರುತ್ತಿರಲು ಭಕ್ತಳಭಾವವನ್ನು ತಿಳಿದ ಸೋಮನಾಥನು ತಾನು ಸುಮ್ಮನಿರುವದು ಯೋಗ್ಯವಲ್ಲೆಂದು ಪ್ರತ್ಯಕ್ಷನಾಗಿ ಅವಳ ಬಳಿಗೆ ಬಂದು ನಿಂತು ಕರುಣಾಮೃತದ ಕಲೆಗಳನ್ನು ಅವಳ ಮೇಲೆ ಚೆಲ್ಲಿ ಅಮೃತ ಹಸ್ತದಿಂದ ದೇಹವನ್ನು ಸವರುವಷ್ಟರಲ್ಲಿ ದಿವ್ಯವಾದ ಅಪ

ರಂಜಿಯನ್ನು ಪುಟವಿಟ್ಟು ಹೊಸದಾಗಿ ಎರಕವೆರೆದ ಗೊಂಬೆಯಂತೆ ಮನೋಹರವಾದ ತೇಜೋರೂಪಳಾದ ಅವಳು ತಟ್ಟನೆ ಎದ್ದು ಶಿವನ ಪಾದಗಳಿಗೆ ನಮಸ್ಕರಿಸಲು ಆತನು ಅವಳನ್ನು ಸಂತೋಷದಿಂದ ನೋಡಿ ಮೈದಡವಿ ನಿನ್ನ ಭಕ್ತಿಗೆ ಮೆಚ್ಚಿದ್ದೇನೆ ಬೇಕಾದ ವರವನ್ನು ಕೇಳೆಂದು ನುಡಿ ಯಲು ಆಕೆಯು ಭಕ್ತಿ ಪುರಸ್ಸರವಾಗಿ ಶಿವನಿಗೆ ಎರಗುತ್ತ ಸ್ವಾಮೀ, ಲೋಕ ಗುರುವಾದ ನಿನ್ನ ದರ್ಶನವಾದ ಮೇಲೆ ನನಗೆ ಮತ್ತಾವ ವರವು ಬೇಕು. ಶಾಶ್ವತವಾದ ನಿನ್ನ ಪಾದಭಕ್ತಿಯು ನನ್ನಲ್ಲಿ ನೆಲೆಗೊಂಡಿರುವಂತೆ ಮಾಡು ಎಂದು ಹೇಳುವಷ್ಟರಲ್ಲಿ ಹಾಗೆಯೇ ಆಗಲೆಂದು ಹೇಳಿ ಪರಶಿವನು ಅಂತರ್ಧಾನ ನಾದನು. ಇತ್ತ ಗುಡ್ಡವ್ವೆಯನ್ನು ಜರೆದು ಓಡಿಸಿದ್ದವರ ದೇಹವೆಲ್ಲವೂ ಕುಷ್ಠ ಮಯ ವಾಯಿತು. ಆದಕಾರಣ ಶಿವ ಭಕ್ತರ ಪೂರ್ವದ ಕುಲ ಜಾತಿಗಳನ್ನು ಹಿಡಿದಾಡುವವರು. ಮಹಾಪಾಪಕ್ಕೊಳಗಾಗುವರು. ಹೇ ಬಿಜ್ಜಳ ರಾಯನೇ ಗುರುಮುಖದಿಂದ ವಿಧಿವತ್ತಾಗಿ ಪ್ರಾಣಪ್ರತಿಷ್ಠಾಪನೆಮಾಡಿದ ಶಿವಲಿಂಗವನ್ನು ಕಲ್ಲೆಂದು ಹೇಳಬೇಕೇ ? ಶಿವದೀಕ್ಷಾ ಸಂಪನ್ನರಾಗಿ ಸುಸಂಸ್ಕೃತರಾದವರಲ್ಲಿ ಅಂತ್ಯಜತನವು ಇರುವದೇ? ಸಾಗರವನ್ನು ಸಂಗಮಿಸಿದ ನದಿಗಳೆಲ್ಲ ಸಮುದ್ರವೇ ಆಗುವಂತೆ, ಗುರು ಹಸ್ತ ಸ್ಪರ್ಶವನ್ನು ಹೊಂದಿದ ಮಾನವರೆಲ್ಲರೂ ಶಿವರೂಪಿ ಗಳಾಗುವರು. ಹಾಗು ಭ್ರಮರದ ಸಹವಾಸದಿಂದ ಕ್ರಿಮಿಯು ಭ್ರಮರವಾ ಗುವಂತೆ, ಲಿಂಗಸಂಗದಿಂದ ಮನುಜರೂ ಲಿಂಗಸ್ವರೂಪಿಗಳಾಗುವರು. ಚಿಪ್ಪಿ ನಲ್ಲಿ ಮುತ್ತೂ, ಕಲ್ಲಿನಲ್ಲಿ ಚಿನ್ನವೂ, ಕೆಸರಿನಲ್ಲಿ ತಾವರೆಯೂ, ಹುಳುವಿನಲ್ಲಿ ರೇಶಿಮೆಯೂ,ಕಟ್ಟಿಗೆಯಲ್ಲಿ ಅಗ್ನಿಯೂ,ಹುಟ್ಟುವದು ಸ್ವತಃಸಿದ್ಧವಾಗಿರುವದು. ಹೀಗೆ ನೀಚಸ್ಥಾನಗಳಲ್ಲಿ ಹುಟ್ಟಿದ ಪದಾರ್ಥಗಳಾದರೂ ಈ ಲೋಕದ ಜನರು ಅವುಗಳನ್ನು ಮನ್ನಿಸುವರು. ಶಿವ ಭಕ್ತನು ಯಾವ ಕುಲದಲ್ಲಿ ಹುಟ್ಟಿದರೂ ಅವನು ಲೋಕ ಪೂಜ್ಯನೇ ಸರಿ ! ಅದೂ ಅಲ್ಲದೆ ಲೋಕಪೂಜ್ಯನಾದ ವೇದ ವ್ಯಾಸಋಷಿಯು ಬೇಡತಿಯಲ್ಲಿಯೂ,ಮಾತಂಗಮುನಿಯು ಅಂತ್ಯಜೆಯಲ್ಲಿಯೂ ವಶಿಷ್ಠನು ಊರ್ವಶಿಯಲ್ಲಿಯೂ, ಹುಟ್ಟಿ ಭಕ್ತಿ ವಿಶೇಷದಿಂದ ಮಾನ್ಯರಾಗಿ ಸಮಸ್ತದೇವ ಬ್ರಾಹ್ಮಣರಿಗೆ ಪೂಜಿತರಾಗಿಲ್ಲವೇ ? ಆದ್ದರಿಂದ ಇವರಂತೆಯೇ ಶಿವಭಕ್ತರಲ್ಲಿ ನೀಚ ಕುಲವೆಂದು ತಿರಸ್ಕರಿಸುವದು ಪಾಪ ಹೇತುವು ಎಂದು ಬಸವೇಶ್ವರನು ನುಡಿದರೂ ಬಿಜ್ಜಳರಾಯನಿಗೆ ಜ್ಞಾನೋದಯವಾಗದೆ ಎಲ್ಲೈ

ಬಸವರಾಜನೇ, ಯುಕ್ತಿ, ಚಮತ್ಕಾರಗಳಿಂದ ಕೂಡಿದ ಕಥೆಗಳನ್ನು ಹೇಳುವ ನಿನ್ನ ವಾಕ್‌ಜಾಲವನ್ನು ಸಾಕುಮಾಡು. ಲೋಕದಲ್ಲಿ ಶಿವಭಕ್ತರೇ ದೊಡ್ಡ ವರೆಂದು ಹೇಳುವೆಯಲ್ಲಾ ! ಅವರ ದೇಹವನ್ನು ಚಿವುಟಿದರೆ ಹಾಲೂ, ಈ ಬ್ರಾಹ್ಮಣರ ದೇಹವನ್ನು ಚಿವುಟಿದರೆ ರಕ್ತವೂ ಬರುವದುಂಟೇ ? ಸರ್ವಥಾ ಇಲ್ಲ. ಎಂದು ಅನ್ನಲು ಕೋಪ ಭರಿತವಾದ ಹುಬ್ಬು ಗಂಟಿಕ್ಕಿದ ಬಸವೇಶ್ವರನು ಎಲೈ— ರಾಜನೇ ಶಿವಭಕ್ತರ ದಾರಿಯೇ ಈ ಲೋಕದಲ್ಲಿ ಸನ್ಮಾರ್ಗವು. ಉಳಿದ ಭವಿಗಳ ಮಾರ್ಗವು ದುರ್ಮಾರ್ಗವೆನಿ ಸುವದು. ಇದನ್ನು ಮರ್ಮನಿಂದಕರಾದ ಜನರು ತಿಳಿಯಲಾರರು. ಈ ಬ್ರಾಹ್ಮ ಣರು ಶಿವದ್ರೋಹಿಗಳು, ಸೋಮಪಾನ ವ್ಯಾಜದಿಂದ ಸುರಾಪಾನವನ್ನು ಅಂಗೀಕರಿಸುವರು. ವೇದದಲ್ಲಿ ಉಪಯೋಗವಿಲ್ಲದ ಭಾಗವನ್ನು ಕಟ್ಟಿ ಕೊಂಡು ಹೊತ್ತು ಅಲೆಯುವರು. ಸಜೀವ ಪ್ರಾಣಿಗಳನ್ನು ಯಜ್ಞದ ನೆವ ದಿಂದ ಕೊಲ್ಲುವ ಹಿಂಸಕರು. ದುಡ್ಡಿಗಾಗಿ ತಾವು ಸಂಪಾದಿಸಿದ ಪುಣ್ಯವನ್ನು ಮಾರಿಕೊಳ್ಳುವರು. ಮಹಾತ್ಮರಾದ ದಧೀಚಿ ಮೊದಲಾದವರ ಶಾಪದಿಂದ ಬಾಹಿರರಾದವರು. ಇಂಥವರು ಶಿವಭಕ್ತರಿಗೆ ಎಂದೂ ಸರಿಯಾಗಲಾರರು. ಆದರೂ ನನ್ನ ಮತವನ್ನು ಪ್ರಚುರಗೊಳಿಸುವದಕ್ಕಾಗಿ ನೀನಾಡಿದಂತೆ ಶಿವ ಭಕ್ತನ ಮೈಯಲ್ಲಿ ಹಾಲನ್ನು ಕರೆದು ತೋರಿಸುತ್ತೇನೆ ನೋಡೆಂದು ತನ್ನ ಕೋಮಲವಾದ ಕೈಯಿಂದ ಕಾಮಧೇನುವಿನ ಮೊಲೆಗಳಂತಿದ್ದ ಶಿವನಾಗಾ ರ್ಯನ ಕೈ ಬೆರಳುಗಳನ್ನು ಮೆಲ್ಲನೆ ಹಿಸುಕಲು ಆ ಬೆರಳುಗಳಿಂದ ಬಂದ ಹಾಲು ಪ್ರವಾಹರೂಪವಾಗಿ ಹರಿಯಿತು. ಅದನ್ನು ನೋಡಿ ಶಿವಭಕ್ತರೆಲ್ಲರೂ ಸಂತೋಷದಿಂದ ಉಘೇ ಎಂದು ಹೊಗಳುತ್ತ ಪೂರ್ವಕಾಲದಲ್ಲಿ ಕರಿಕಾಳ ಚೋಳನು ತನ್ನ ರಾಜ್ಯದಲ್ಲಿ ಸುವರ್ಣದ ಮಳೆಯನ್ನು ಸುರಿಸಿದನು. ಈಗ ಬಸವೇಶ್ವರನು ಹಾಲಿನ ಮಳೆ ಕರೆದನೆಂದು ಹೊಗಳುತ್ತ ಮಹಿಮಾನ್ವಿತ ಪರಮ ಶಿವತೇಜೋರೂಪಿಯಾದ ಶಿವನಾಗಯೋಗಿಯನ್ನು ನೋಡಿ ಹಿಗ್ಗಿ ಸಂತೋಷದಿಂದ ನಮಸ್ಕರಿಸುತ್ತಿದ್ದರು. ಬಸವರಾಜನು ತನ್ನ ಕೀರ್ತಿಯಿಂದ ಹಾಲನ್ನು ಕರೆಸು ಭೂಮಿಯನ್ನು ಬೆಳ್ಳಗೆ ಮಾಡಿದಂತೆ ಪರಮತದವರ ಮುಖವನ್ನೂ ಬೆಳ್ಳಗೆ ಮಾಡಿದನೆಂದು ದೊರೆಯು ಹೇಳುತ್ತಿರಲು ಪರಮತ ದವರೆಲ್ಲರೂ ನಾಚಿಕೆಯಿಂದ ತಲೆತಗ್ಗಿಸಿ ನಾವು ಶಿವಮತದ ರಹಸ್ಯವನ್ನು

ತಿಳಿಯಲಾರದೆ ಹೋದೆವು. ಅದು ಪರಮಪವಿತ್ರವಾದುದು. ತಿಳಿಯದೆ ಮಾಡಿದ ನಮ್ಮ ಅಪರಾಧವನ್ನು ಮನ್ನಿಸಬೇಕೆಂದು ಬೇಡಿಕೊಂಡು ದೀರ್ಘ ದಂಡ ನಮಸ್ಕಾರವನ್ನು ಮಾಡಿದರು. ಆಗ ಆ ಶಿವಯೋಗಿಯು ಸಂತುಷ್ಟನಾಗಿ ಹೆದರಿಬಂದು ನಮಸ್ಕರಿಸಿದ ಬ್ರಾಹ್ಮಣರಿಗೆ ಅಭಯ ದಾನವನ್ನು ಮಾಡಿದನು. ಕೂಡಲೇ ಬಸವೇಶ್ವರನು ದಿವ್ಯಾಲಂಕೃತವಾದ ಆನೆಯ ಮೇಲೆ ಅಂಬಾರಿಯನ್ನಿಟ್ಟು ಅದರಲ್ಲಿ ಆ ಯೋಗಿವರ್ಯನನ್ನು ಕುಳ್ಳಿರಿಸಿ ಬೆಂಗಾವಲಿಗಾಗಿ ತಾನು ಕುಳಿತು ಊರಲ್ಲೆಲ್ಲ ಮೆರೆವಣಿಗೆ ಮಾಡಿಸಿಕೊಂಡು ಬಂದು ತನ್ನ ಅರಮನೆಯನ್ನು ಹೊಕ್ಕು ಆತನ ಪಾದಪೂಜೆಯನ್ನು ಮಾಡಿದನಂತರ ಷೋಡಶೋಪಚಾರ ವಿಧಿಯಿಂದ ಕ್ರಮವಾಗಿ ಪೂಜಿಸಿ ಆ ಶಿವಯೋಗಿಯ ಕರುಣಾಕಟಾಕ್ಷಕ್ಕೆ ಪಾತ್ರನಾಗಿ ಪ್ರತಿದಿವಸ ತಪ್ಪದೆ ಸೇವೆಮಾಡುತ್ತ ಪ್ರಸಾದವನ್ನು ಪಡೆಯುತ್ತಿದ್ದನು.

## — ವಿಷಹರಣ ಕಥೆಯು —

ಆ ಕಲ್ಯಾಣಪುರ ನಿವಾಸಿಯಾದ ಬಸವೇಶ್ವರನು ಶಿವಮತವನ್ನು ಪ್ರಚಾರಮಾಡುತ್ತ ದ್ವೈತ, ಅದ್ವೈತ, ವಿಶಿಷ್ಟಾ ದ್ವೈತ, ಜೈನ, ಬೌದ್ಧ ಮೊದಲಾದ ಮತಗಳನ್ನು ಗೆದ್ದು ಶಿವನೇ ಸರ್ವೋತ್ತಮನೆಂದು ಸಿದ್ಧಾಂತಮಾಡಿ ಹೇಳಿ, ಶಿವನು ಕೈಲಾಸದಲ್ಲಿ ತನಗೆ ಮಾಡಿದ ಅಪ್ಪಣೆಯಂತೆ ಕಾರ್ಯವನ್ನು ನೆರವೇರಿಸುತ್ತಿದ್ದನು. ಹಾಗೂ ಗುರುಲಿಂಗ ಜಂಗಮರ ಪೂಜೆಯನ್ನೂ, ಅವರ ಪಾದತೀರ್ಥ ಸೇವನೆಯನ್ನೂ, ಶಿವಮಂತ್ರ ಜಪಾನುಷ್ಠಾನವನ್ನೂ, ಶಿವ ಶರಣರ ಕಥಾಲಾಪಗಳನ್ನೂ, ಸದಾಬಿಡದೆ ಮಾಡುತ್ತಿರಲು ಶಿವಭಕ್ತ ಮಂಡಲಿಯೆಲ್ಲವೂ ಆ ಬಸವರಾಜನನ್ನು ನೋಡಿ ಈತನು ಸುಜನ ಸುರಧೇನುವೆಂದೂ, ವಿದ್ವಜ್ಜನರ ಚಿಂತಾಮಣಿಯೆಂದೂ, ಶರಣ ಜನವರೇಣ್ಯನೆಂದೂ, ಭಕ್ತರ ನಿಧಿಯೆಂದೂ, ಭೂಲೋಕದ ಪುಣ್ಯರೂಪನೆಂದೂ ನಾನಾಬಗೆಯಿಂದ ಹೊಗಳತೊಡಗಿದರು. ಬಸವೇಶ್ವರನು ತನ್ನನ್ನು ನೆನೆದವನೇ ದೇವರು. ನೋಡಿದವನು ದೇವೇಂದ್ರನು. ನಮಸ್ಕರಿಸಿದವನು ಸಿದ್ಧಪುರುಷನು, ಸ್ತೋತ್ರ ಮಾಡಿದವನು ಗಣಾಗ್ರಗಣ್ಯನು, ಕಟಾಕ್ಷವನ್ನು ಪಡೆದವನು ಮುಕ್ತನು ಎಂದು ಕೊಂಡಾಡಿಸಿಕೊಳ್ಳುವ ಯೋಗ್ಯತೆಯನ್ನು ಸಂಪಾದಿಸಿಕೊಂಡು ಇರು

ತ್ತಿರಲು ಆ ಊರಲ್ಲಿ ನಾಚಯ್ಯ, ಅಲ್ಲಮದೇವ, ಹೊನ್ನಯ್ಯ, ಅಪ್ಪಿದೇವ, ಬೊಮ್ಮಯ್ಯ, ಅಮಾತ್ಯಮಲ್ಲ, ನಾಚಯ್ಯ, ಪಂಡಿತಯ್ಯ, ಕಲಕೇತಯ್ಯ, ಮಿಂಡಬೊಮ್ಮಯ್ಯ, ಜೇಡರ ದಾಸಯ್ಯ, ಲಕ್ಕಯ್ಯ, ಕಕ್ಕಯ್ಯ, ಕಲ್ಲಿನಾಥಯ್ಯ ಧವಳಯ್ಯ, ಚೌಡಯ್ಯ, ಏಕಾಂತರಾಮಯ್ಯ, ಭೀಮಯ್ಯ, ಸಿರಾಳದೇವಯ್ಯ, ನಾಡೆಯಶಾಂತಯ್ಯ, ಶಂಕರಯ್ಯ, ಗೊಗ್ಗಯ್ಯ, ಮಸಣಯ್ಯ, ಏಲೇಶ್ವರ ಕೇತಯ್ಯ, ಸಿಗುರುಚಂದಯ್ಯ, ಕೇಶಿರಾಜ, ಮೊರಟದಸಾಂಬಯ್ಯ, ರುದ್ರ ದೇವ, ಕಾಚಯ್ಯ,ಮಾಯಿಭಟ್ಟ, ಕದಿರೆರೇಮಯ್ಯ, ಕಿನ್ನರಯ್ಯ, ಬಾಚಯ್ಯ, ಮಲ್ಲಿನಾಥ, ಮಧುವರಸ, ಮಾದಯ್ಯ, ಗೋಣಿಮಾದಯ್ಯ, ಬಿಜ್ಜಳಯ್ಯ, ಭೋಗಿದೇವಯ್ಯ, ಸೋಮಣ್ಣ, ಮಾದಿರಾಜಯ್ಯ ಮೊದಲಾದ ಜಗದ್ವಂದ್ಯ ರಾದ ಪರಮ ಶಿವಭಕ್ತರೆಲ್ಲ ಬಸವೇಶನ ಮಹಿಮೆಯನ್ನು ನೋಡಿ ಸಂತೋಷ ದಿಂದ ಹಿಗ್ಗುತ್ತ ಸುಖದಿಂದ ಇದ್ದರು. ಆತನು ಶಿವಲೋಕದ ಸುಖಕ್ಕಿಂತ ಶರಣಜನ ಸುಖವೇ ಪರಮಸುಖವೆಂದು ತಿಳಿದಿದ್ದನು. ಹೀಗಿರಲು ಒಂದಾ ನೊಂದು ದಿವಸ ಆ ಕಲ್ಯಾಣಪುರದಲ್ಲಿದ್ದ ಲೋಕನಾಥಶಿವ, ಗಂಗಾಧರಶಿವ, ತ್ರಿಲೋಚನಶಿವ, ಅಘೋರಶಿವ, ಮಹಾಶಿವ, ಪರಮಾನಂದಶಿವ, ವಾಮ ದೇವಶಿವ, ಅಜಾತಶಿವ, ಮಹೇಶಶಿವ, ಗುರುಲಿಂಗಶಿವ, ಶ್ರೀಕಂಠಶಿವ, ಪಶು ಪತಿಶಿವ, ಗಿರೀಶಶಿವ, ಶಂಕರಶಿವ, ಈಶಾನಶಿವ ಮೊದಲಾದ ಶಿವದ್ವಿಜರು ಕೂಡಿದವರಾಗಿ ಬಿಜ್ಜಳ ರಾಜನ ಮನೆಗೆ ಬಂದು ರಾಜನೇ, ನೀನು ಸದ್ಧರ್ಮ ಪಾಲಕನು, ಇಂತಹ ನಿನ್ನ ರಾಜ್ಯದಲ್ಲಿ ಒಂದು ಅನ್ಯಾಯವು ಹುಟ್ಟಿರುವದು. ಅದೇನೆಂದರೆ— ಶಿವನಿಂದ ಅನುಗ್ರಹೀತವಾಗಿ ಚಂಡಿಕೇಶನಿಂದ ಸಂಪಾದಿತ ವಾಗಿ ನಮಗೆ ದೊರೆತಿರುವ ಶಿವಪ್ರಸಾದವೆಂಬುದು ನಮಗೆ ದೊರೆಯ ಬೇಕಾದ ಸೊಮ್ಮು. ಇದರ ಪೂರ್ವ ವೃತ್ತಾಂತವನ್ನು ಬಿನ್ನವಿಸುತ್ತೇವೆ. ಕೇಳು ಆ ಚಂಡಿಕೇಶನು ಬ್ರಾಹ್ಮಣನ ಮಗನಾಗಿ ಹುಟ್ಟಿ ಕಾಡಿನಲ್ಲಿ ದನಗ ಳನ್ನು ಮೇಯಿಸುತ್ತ ನದಿಯ ಮಳಲಿನಲ್ಲಿ ಲಿಂಗವನ್ನು ಮಾಡಿ ದನಗಳ ಹಾಲನ್ನು ಕರೆದು ಆ ಲಿಂಗಕ್ಕೆ ಅಭಿಷೇಕವನ್ನು ಮಾಡಿ ಅದನ್ನು ಭಕ್ತಿಯಿಂದ ಕಕ್ಕೆ, ಮೊದಲಾದ ಕಾಡು ಹೂಗಳಿಂದ ಪೂಜಿಸುತ್ತ ತನ್ನ ಕೊಳಲನ್ನು ಊದುತ್ತ ಸಂತೋಷಯುಕ್ತನಾಗಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತ ಶಿವಪೂಜೆಯನ್ನು ಮಾಡುತ್ತಿರಲು ನಮ್ಮಗಳ ಮನೆಗೆ ಬಂದು ಆಕಳುಗಳು

ಹೊತ್ತಿಗೊಂದು ಪಾವು ಸಹ ಹಾಲು ಕೊಡದಿರುವದನ್ನು ನೋಡಿ ಪರೀಕ್ಷಿಸಿ ನೋಡಬೇಕೆಂದು ಅವನ ತಂದೆಯು ಕಾಡಿಗೆ ಬರಲು ಆ ಚಂಡಿಕೇಶನು ಎಂದಿನಂತೆ ಮಳಲು ಲಿಂಗವನ್ನು ಮಾಡಿ ಹಸುಗಳ ಹಾಲನ್ನು ಕರೆದು ಪೂಜಿಸುತ್ತಿರುವದನ್ನು ಕಂಡು ಕುಪಿತನಾಗಿ ಆ ಲಿಂಗವನ್ನು ಕಾಲಿನಿಂದ ಝಾಡಿಸಿ ತುಳಿಯಲು ತನ್ನ ಪೂಜೆಯನ್ನು ಕೆಡಿಸಿದ್ದು ಶಿವಾಪರಾಧವೆಂದು ತಿಳಿದು ತನ್ನ ಕೈಯಲ್ಲಿದ್ದ ಕೊಡಲಿಯಿಂದ ತನ್ನ ತಂದೆಯ ತಲೆಯನ್ನು ಕಡಿದು ನೆಲಕ್ಕುರುಳಿಸಿದನು. ಕೂಡಲೆ ಪರಶಿವನು ಪ್ರತ್ಯಕ್ಷನಾಗಿ ಮೈದೋರಲು ಚಂಡೀಶನು ಆತನ ಪಾದಗಳಿಗೆ ನಮಸ್ಕರಿಸಿ ದೇವ ಸಮೂಹಕ್ಕೂ ಸಹ ಸಿಕ್ಕದಿರುವ ಶಿವ ಪ್ರಸಾದವನ್ನು ಪಡೆದು ಸಂತುಷ್ಟನಾಗಿ ಭಕ್ತಿಭರಿತನಾಗಿ ಸ್ತೋತ್ರ ಮಾಡಲು ಆತನ ರೋಮ ಕೂಪಗಳಿಂದ ಶಿವಪ್ರಸಾದ ಪೂರ್ವಕವಾಗಿ ಕೆಲವುಜನ ಗಣವರ್ಯರು ಜನಿಸಿದರು. ಆ ಚಂಡೀಶನು ಅವರಿಗೂ ಪ್ರಸಾದವನ್ನು ಕೊಟ್ಟು ಸ್ತೋತ್ರ ಪಾಠದಲ್ಲಿ ವಾಕ್‌ಪಟುತ್ವವನ್ನು ತೋರಿದ ಅವರನ್ನು ಸ್ತುತಿ ಪಾಠಕರಾಗುವಂತೆಯೂ, ಚಂಡಿ, ಚಾಮುಂಡಿ, ಕಾಳಿ, ಭೈರವ, ಗಣಪತಿ ಮೊದಲಾದ ದೇವಸ್ಥಾನಗಳಲ್ಲಿ ಅರ್ಚಕರಾಗಿರುವಂತೆ ಗೊತ್ತು ಮಾಡಿದನು. ಅಂತಹ ಗಣಂಗಳ ವಂಶೋದ್ಭವರಾದುದರಿಂದ ಈ ಶಿವ ಪ್ರಸಾದವು ನಮ್ಮ ಭಾಗ್ಯವಾಗಿರುವಾಗ ಈ ಊರಲ್ಲಿರುವ ವೀರಶೈವರು ತಮಗೆ ಬಸವೇಶ್ವರನ ಬೆಂಬಲವಿರುವದೆಂದು ನಮಗೆ ಕೊಡದೆ ತಾವೇ ಭುಂಜಿಸುತ್ತಿರುವರು. ಬಸವನು ನಮಗೆ ಮಾರ್ಗವನ್ನು ಕೊಡದಿರುವದರಿಂದ ನಾವು ಬಂದು ನಿನ್ನಲ್ಲಿ ದೂರಿಕೊಂಡೆವು. ಅವರ ಗರ್ವವನ್ನು ನಾಶಮಾಡಿ ನಮ್ಮ ಪದಾರ್ಥವನ್ನು ನಮಗೆ ಕೊಡಿಸಬೇಕು. ಇಲ್ಲವಾದರೆ ನಿನ್ನ ಮನೆಯ ಬಾಗಿಲಲ್ಲಿ ಅಗ್ನಿಕುಂಡವನ್ನು ನಿರ್ಮಿಸಿ ನಾವೆಲ್ಲರೂ ಪ್ರಾಣತ್ಯಾಗವನ್ನುಮಾಡುವೆವು ಎಂದು ನುಡಿದರು. ಆಗ ರಾಜನು ಬಸವೇಶ್ವರನನ್ನು ಕೂಡಲೆ ಸಭೆಗೆ ಬರಮಾಡಿ "ಇವರ ವಸ್ತುವಾದ ಶಿವ ಪ್ರಸಾದವನ್ನು ಇವರಿಗೆ ಕೊಡದೆ ನೀವೇ ಭುಂಜಿಸುವದು ಯಾವ ನ್ಯಾಯವು ?" ಎಂದು ಕೇಳಲು ಬಸವೇಶ್ವರನು ಚಂಡಪುತ್ರರನ್ನು ನೋಡಿ ಏನಯ್ಯಾ, ನಿಮಗೆ ದೇವಮಾನವಾದಿಗಳಿಂದ ಪ್ರತಿಷ್ಠಿತವಾಗಿರುವ ಸ್ಥಾವರ ಲಿಂಗ ಪ್ರಸಾದವು ದೊರಕುವದಲ್ಲದೆ ಇಷ್ಟಲಿಂಗದ ಪ್ರಸಾದವು ದೊರಕುವದುಂಟೇ ? ಸುವರ್ಣಲಿಂಗ, ಬಾಣಲಿಂಗ, ರತ್ನಲಿಂಗ, ಸ್ವಯಂಭೂಲಿಂಗ,

ಇಷ್ಟಲಿಂಗಗಳ ಪ್ರಸಾದವನ್ನು ಸ್ವೀಕರಿಸಲು ಚಂಡೀಶನು ಅರ್ಹನಲ್ಲ ಎಂಬು ದಾಗಿ ಶಿವಾಗಮ ವಚನವಿರುವದರಿಂದ ಯಾವ ಸ್ಥಾನದಲ್ಲಿ ಚಂಡೀಶನಿಗೆ ಶಿವ ಪ್ರಸಾದವು ದೊರೆಯುತ್ತಿತ್ತೋ ಅಲ್ಲಿ ನಿಮಗೆ ಈಗಲೂ ದೊರೆಯುತ್ತಿರುವದು. ಮಿಕ್ಕಬಳಿಯಲ್ಲಿ ಪ್ರಸಾದವು ದೊರೆಯಲಾರದು. ಎಂದು ನುಡಿಯಲು ಅವರು ಕುಪಿತಭಾವದಿಂದ ನಡುಗುತ್ತ ಚಿದಂಬರ, ಕಂಚಿ, ಕಾಳಹಸ್ತಿ ಮೊದಲಾದ ಪುಣ್ಯಕ್ಷೇತ್ರಗಳಲ್ಲಿರುವ ಶಿವಾಲಯಗಳಲ್ಲಿ ನಮಗೆ ಪ್ರಸಾದದ ಅಧಿಕಾರವಿರುವ ದನ್ನು ನೋಡಿಯೂ, ಕೇಳಿಯೂ ಲಿಂಗಪ್ರಸಾದದ ಅಧಿಕಾರ ಇಲ್ಲವೆಂದು ಹೇಳುತ್ತ ಬಲತ್ಕಾರದಿಂದ ನಮ್ಮ ಸೊಮ್ಮನ್ನು ಅಪಹರಿಸಿಕೊಂಡರೆ ನಾವು ಸುಮ್ಮನಿರುವೆವೇ ? ನಿಮ್ಮ ಎದುರಿನಲ್ಲಿಯೇ ಪ್ರಾಣತ್ಯಾಗವನ್ನು ಮಾಡಿ ಕೊಳ್ಳುವೆವು ಎಂದು ನುಡಿಯಲು ಬಸವೇಶನು ಓಹೋ ! ಅನ್ಯಾಯವಾಗಿ ನಿಷ್ಕಾರಣದಿಂದ ಪ್ರಾಣತ್ಯಾಗವನ್ನೇಂತು ಮಾಡುವಿರಿ ? ನಿಮ್ಮ ಗೊಡ್ಡು ಬೆದ ರಿಕೆಯನ್ನು ನೋಡಿ ನಿಜವಾದ ಶಿವಶರಣರು ಅಂಜುವರೇ ? ಗಾಳಿಯು ಅಲೆ ಯುವದರಿಂದ ಪರ್ವತವು ಅಲುಗುವದೇ ? ನಿಮ್ಮ ಸೊಮ್ಮು ಎಂದು ದೃಢ ವಾದ ಸಾಕ್ಷಿಯನ್ನು ಸಿದ್ಧಾಂತ ಮಾಡಿಕೊಟ್ಟು ತೆಗೆದುಕೊಂಡು ಹೋಗಿರಿ. ಮತ್ತು ಹಿಂದೆ ಯಾವ ವೀರ ಜಂಗಮನಿಂದ ಪ್ರಸಾದವನ್ನು ಪಡೆದಿರುವಿರಿ ? ಅಂತಹ ಅನುಭವವೇನಾದರೂ ಇದ್ದರೆ ಹೇಳಿರಿ. ಸುಮ್ಮನೆ ನಾಲಿಗೆಯ ರುಚಿ ಯನ್ನು ಬಯಸಿ ಲಿಂಗಪ್ರಸಾದವು ನಮ್ಮದೆಂದು ಹೇಳಿದರೆ ಕೊಡುವದಕ್ಕಾ ದೀತೇ ? ಅದನ್ನು ನೋಡುವದಕ್ಕೂ, ಮುಟ್ಟುವದಕ್ಕೂ ಅರ್ಹರಲ್ಲ. ಬಲಾ ತ್ಕರಿಸಿ ಕೊಟ್ಟೇತೀರಬೇಕೆಂದು ಹೇಳಿದರೆ ಶಿವಲಿಂಗಕ್ಕೆ ವಿಷವನ್ನು ಅಭಿಷೇಕ ಮಾಡುವೆವು . ಬೇಕಾದರೆ ತೆಗೆದುಕೊಳ್ಳಬಹುದು ಎಂದು ನುಡಿಯಲು ಶಿವ ದ್ವಿಜರು ಕೋಪದಿಂದ ಒದರುತ್ತ ಓಹೋ! ಒಂದು ಸಾರೆ ವಿಷವನ್ನು ಕೊಟ್ಟು ಕೊಂದು ಬಿಟ್ಟರೆ ಇವರ ಕಾಟವೇ ತಪ್ಪುವದೆಂದು ಯೋಚಿಸಿಕೊಂಡು ಹೀಗೆ ಹೇಳಿದಿರೋ ? ಷಡ್ರಸೋಪೇತವಾದ ಪ್ರಸಾದವನ್ನು ಭುಂಜಿಸಲು ನೀವು ಅರ್ಹರು. ನಾವು ಮಾತ್ರ ವಿಷವನ್ನು ಕುಡಿದು ಸಾಯುವದಕ್ಕೆ ಭಾಗಿಗಳೋ? ಅಳಿದ ಮೇಲೆ ಉಣ್ಣುವದೇನು ? ಬದುಕಿದ್ದರೆ ಹೊಡೆದಾಡಿ ಕಾರೆಯ ತಪ್ಪ ವನ್ನಾದರೂ ತಿಂದು ಸುಖವಾಗಿ ಬಾಳಬಹುದು. ಆ ವಿಷವು ನಮಗೆ ಪ್ರಸಾದ ವಾದಮೇಲೆ ನಿಮಗೆ ಅಲ್ಲವೇ ? ನೀವು ಅದನ್ನು ಕುಡಿದು ಜೀವಿಸಿಕೊಂಡರೆ

ನೀವೇಗೆದ್ದಂತೆ ಆಗಿ ನಾವೇ ಸೋಲುವೆವು ಇಲ್ಲವಾದರೆ ನಮ್ಮ ಸೊಮ್ಮು ನಮಗೆ ಬರುವದು. ಇದೇ ನಮ್ಮ ಪ್ರತಿಜ್ಞೆಯು ಎಂದು ನುಡಿಯಲು ಬಸವೇಶ್ವರನು ರಾಜನನ್ನು ಸಾಕ್ಷಿಯಾಗಿಟ್ಟು ಹಾಗೆಯೇ ಆಗಲೆಂದು ನುಡಿಯುತ್ತ ಸಂಗಮೇಶ್ವರನ ದೇವಾಲಯಕ್ಕೆ ಬಂದು ಸೇರಲು ಈ ಶಪಥವನ್ನು ನೋಡಲು ಊರಜನರೆಲ್ಲರೂ ಬಂದು ನೆರೆದರು. ಪರಶಿವನೂ ಕುತೂಹಲದಿಂದ ಈ ಉತ್ಸವವನ್ನು ನೋಡುವದಕ್ಕಾಗಿ ಏಕಾದಶರುದ್ರ ಗಣಂಗಳಿಂದ ಪಾರ್ವತಿ ಸಮೇತನಾಗಿ ಪುಷ್ಪಕ ವಿಮಾನವನ್ನೇರಿ ಆಕಾಶಮಾರ್ಗದಿಂದ ಬಂದು ಆ ದೇವಸ್ಥಾನದ ಬಳಿಯಲ್ಲಿ ನಿಂತುಕೊಂಡು ಬಸವೇಶ್ವರನು ಪಂಚಲೋಹಗಳ ಕೊಪ್ಪರಿಗೆಗಳಲ್ಲಿ ಬಗೆ ಬಗೆಯಾದ ವಿಷಗಳನ್ನು ಹುಡುಕಿಸಿ ತರಿಸಿ ಕೂಡಿಸಿ ಅದರ ಜೊತೆಗೆ ವತ್ಸನಾಭಿ, ಬ್ರಹ್ಮಪುತ್ರ ಮೊದಲಾದ ವಿಷಗಳನ್ನು ಬೆರೆಸಿ ಸವ್ವೀರ ಮೊದಲಾದ ಪಾಷಾಣಗಳನ್ನು ಅರೆದು ಬೆರೆಸುತ್ತಿರುವಾಗ ಆಕಾಶ ಮಾರ್ಗದಲ್ಲಿ ಸಂಚರಿಸುತ್ತಿದ್ದ ಪಕ್ಷಿಗಳು ಅದರ ಉಗ್ರ ವಾಸನೆಯನ್ನು ಸಹಿಸಲಾರದೆ ಸತ್ತು ಬೀಳಲು ಇಂತಹ ಭಯಂಕರವಾದ ವಿಷವನ್ನು ಕುಡಿಯುವದು ಹೇಗೆ ಸಾಧ್ಯವಾದೀತೆಂದು ಹೆದರುತ್ತ ಹಿಂಜರಿಯುತ್ತಿದ್ದರು. ಆಗ ಬಸವೇಶನು ಅರೆದಿರುವ ವಿಷವನ್ನು ದೊಡ್ಡ ದೊಡ್ಡ ಗುಂಡುಗಳನ್ನಾಗಿ ಮಾಡಿ ಕಡಾವಿಗೆಗಳಲ್ಲಿ ಮರಳುತ್ತಿರುವ ಎಣ್ಣೆಯಲ್ಲಿ ಹಾಕಿ ಕುದಿಸುತ್ತಿರಲು ಅದರ ಹೊಗೆಯು ದಶದಿಕ್ಕುಗಳನ್ನು ವ್ಯಾಪಿಸಿರಲು ದಿಕ್ಪಾಲಕರು ತಮ್ಮ ಪ್ರಾಣಗಳು ಹೋಗುವ ಹೊತ್ತು ಬಂತೆಂದು ನಡುಗುತ್ತಿದ್ದರು. ಇದೇನು ಕ್ಷೀರಸಾಗರದಲ್ಲಿ ಮತ್ತೊಂದು ವಿಷವು ಹುಟ್ಟಿತೇನೋ ಎಂದು ಬ್ರಹ್ಮನು ಭ್ರಾಂತನಾದನು. ಈ ಮೊದಲು ಹುಟ್ಟಿದ ವಿಷದಿಂದ ದೇಹವು ಕರಿದಾಗಿತ್ತು ಈಗ ಯಾವ ವಿಕಾರವಾಗುವದೋ ಎಂದು ವಿಷ್ಣುವು ಹೆದರಿದ್ದನು. ಶಿವನು ತನ್ನ ಕಂಠದಲ್ಲಿದ್ದ ವಿಷವು ಜಾರಿ ಕಳಚಿ ಹೋಗಿ ಹೀಗಾಯಿತೇನೋ ಎಂದು ಭ್ರಾಂತನಾಗಿ ಕನ್ನಡಿಯನ್ನು ಹಿಡಿದು ಪಾರ್ವತಿಗೆ ತೋರಿಸುತ್ತಿದ್ದನು. ಎಲ್ಲ ಕಡೆಗೆ ಭೀಕರ ವಾತಾವರಣವುಂಟಾಯಿತು. ನಾನಾವಿಧ ಮಹೋತ್ಪಾತಗಳುಂಟಾದವು. ನಕ್ಷತ್ರಗಳು ಉದುರಿದವು. ಆಗ ಬಸವೇಶ್ವರನು ಶಿವ ಶರಣರನ್ನು ಸಾಲಾಗಿ ಕೂಡ್ರಿಸಿ ಪೂಜೆಯನ್ನು ಮಾಡಿ ಮುಂದಿರುವ ಬಟ್ಟಲುಗಳಲ್ಲಿ ಸಜ್ಜುಮಾಡಿದ ವಿಷವನ್ನು ತುಂಬಿ ಬಡಿಸಿ ಶಿವಾರ್ಪಣಮಸ್ತು ಎಂದು

ಸಾಷ್ಟಾಂಗ ನಮಸ್ಕಾರ ಮಾಡಲು ಭಕ್ತರೆಲ್ಲರೂ ಉಘೇ, ಉಘೇ ಎಂದು ಸಂತೋಷ ಭರಿತರಾಗಿ ಧ್ವನಿಮಾಡುತ್ತಿರಲು "ಶಿವಯೋಗಿನಿ ಸಂತೃಪ್ತೇ ತೃಪ್ತೋಭವತಿ ಶಂಕರಃ ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ" ಎಂದು ಸಮಸ್ತ ಗಣಂಗಳು ಘೋಷಿಸುತ್ತ ತಾವು ಪ್ರಸಾದವನ್ನು ಸೇವಿಸುತ್ತ ಅನ್ಯೋನ್ಯವಾಗಿ ವಿನೋದಮಾಡಿ ಸದಾಶಿವಯ್ಯನವರೇ, ಇಲ್ಲಿ ಬನ್ನಿರಿ ವಿಜಯ ಪತಾಕೆಯನ್ನು ಕಟ್ಟಿರಿ. ಮಾಯಿದೇವನ ಹೊಟ್ಟೆಯು ಕಿರಿದಾದರೂ ಪ್ರಸಾದವು ಸಾಲದು. ಶಂಕರದೇವನು ವೀರನು. ಶಂಭುದೇವನು ಉಣ್ಣುವದು ಸ್ವಲ್ಪ. ದಾಸಿದೇವನಿಗೆ ಆಗಲೆ ಹೊಟ್ಟೆಯು ಉಬ್ಬಿತು. ಗಜೇಶನ ಲಿಂಗದ ಕರಡಿಗೆಯೂ ಊಟಮಾಡುತ್ತಿದೆ. ಮಲ್ಲಿದೇವನೇ, ಇದು ಹಾಲಿಗಿಂತಲೂ ರುಚಿಯಾಗಿರುವದಲ್ಲ. ಪರ್ವತನಾಥನು ತಲೆಯನ್ನು ತೂಗುತ್ತಿದ್ದಾನೆ. ಮಾರದೇವನೇ, ನೀನು ಉಡುದಾರವನ್ನು ಸಡಿಲು ಮಾಡಿ ನೋಡು. ಬೊಮ್ಮಯ್ಯನು ತೃಪ್ತನಾಗಿದ್ದಾನೆ. ರಾಮಯ್ಯನು ಕಂಠಪೂರ್ಣ ಉಂಡನು. ಬೊಮ್ಮಯ್ಯನು ಮೊದಲು ಬಡಿಸಿದ್ದನ್ನು ನುಂಗಿ ಬರಿಯ ಬಟ್ಟಲು ಮಾಡಿಕೊಂಡು ಕಡಾವಿಗೆಯನ್ನೇ ನೋಡುತ್ತಿದ್ದಾನೆ. ಹರದೇವನು ತೃಪ್ತನಾಗಿ ತೇಗಿದನು. ಕಕ್ಕಯ್ಯ, ಚಿಕ್ಕಯ್ಯರು ಲೆಕ್ಕವಿಲ್ಲದೆ ಊಟಮಾಡುತ್ತಿರುವರು. ಎಂದು ಅನೇಕ ಪ್ರಕಾರವಾಗಿ ಪರಸ್ಪರರು ಮಾತಾಡುತ್ತಿರಲು ಇತ್ತ ಗೊಗ್ಗಮ್ಮ, ದುಗ್ಗಳದೇವಿ, ಕಾಳಮ್ಮ, ಕಮಲಮ್ಮ, ಬಾಚಕ್ಕ, ಗುಗ್ಗಲದೇವಿ, ರೇಚವ್ವೆ, ಸೋಮಾಂಬೆ, ಮಾದವ್ವೆ, ಭೀಮವ್ವೆ, ಲಿಂಗಾಂಬಿಕಾ, ಸಂಗಾಂಬೆ, ಮುಂತಾದ ಶಿವಭಕ್ತೆಯರೂ ಪ್ರಸಾದವನ್ನು ಸವಿದು ತೃಪ್ತರಾದರು. ಬಳಿಕ ಎಲ್ಲರೂ ನಾನಾವಿಧ ಸರಸೋಕ್ತಿಗಳನ್ನು ಆಡುತ್ತ, ಒಬ್ಬರಿಂದೊಬ್ಬರು ಸೇವೆಗೊಂಡು ತಾವೂ ಸೇವೆ ಮಾಡಿ ಕೃತಾರ್ಥರಾಗುತ್ತ ಸಂತೋಷದಿಂದ ನಲಿಯುತ್ತಿದ್ದರು. ಭಕ್ತಜನರು ಸಂತೋಷದಿಂದ ಉಘೇ ಎಂದು ಕೂಗುತ್ತಿರಲು ಬಸವೇಶ್ವರನೂ ಪ್ರಸಾದವನ್ನು ಪರಿಗ್ರಹಿಸಿ ತೃಪ್ತನಾದನು. ಆ ಮೇಲೆ ಬಸವರಾಜನು ಸೇವಕರಿಗೆ ಆಜ್ಞೆಮಾಡಿ ಪುರೋಹಿತರನ್ನೂ, ಮಂತ್ರಿಗಳನ್ನೂ, ರಾಜಪುತ್ರರನ್ನೂ, ಅವರ ಬಂಧು-ಬಳಗದವರನ್ನೂ, ವಿದ್ವಾಂಸ, ಕವಿ, ಜೋಯಿಸ, ನರ್ತಕ, ಸ್ತುತಿಪಾಠಕ, ವಂದಿ, ಮಾಗಧ, ಹರಿಕಾರ, ಗುರಿಕಾರ, ಓಲೆಕಾರ, ಗಾಯಕ,

ವಾದ್ಯಕಾರ, ಪರಿಹಾಸಕ, ಛತ್ರಚಾಮರಧಾರಿಗಳನ್ನು ಬರಮಾಡಿ ಅವರೆಲ್ಲರಿಗೂ ಅಮೃತ ಸಮಾನವಾದ ವಿಷವನ್ನು ಉಣಬಡಿಸಿ ಅವರನ್ನು ತೃಪ್ತಿಪಡಿಸಲು ಅವರೆಲ್ಲರೂ ಬಸವರಾಜನನ್ನು ಹೊಗಳಲು ಅನಂತರ ರಾವುತ, ಮಾವುಟಿಗರಿಗೆ ಆಜ್ಞೆಮಾಡಿ ತಮ್ಮ ಸೈನ್ಯದಲ್ಲಿರುವ ಆನೆ, ಕುದುರೆಗಳಿಗೆ ವಿಷವನ್ನು ಕುಡಿಸಿದರು. ಹೂಮಳೆಯು ಸುರಿಯುತ್ತಿರಲು ದೇವದುಂದುಭಿಗಳು ಮೊಳಗಿದವು. ಕವಿಗಳು ತಮ್ಮ ಪಾಂಡಿತ್ಯದಿಂದ ಪದ ಪದ್ಯಗಳನ್ನು ರಚಿಸಿ ಬಸವರಾಜನನ್ನು ಕೊಂಡಾಡುತ್ತಿದ್ದರು. ಸಮುದ್ರದಲ್ಲಿ ಹುಟ್ಟಿದ ವಿಷವನ್ನು ನೀಲಕಂಠನು ಹೊಟ್ಟೆಗೆ ಕುಡಿಯಲಾರದೆ ಕೊರಳಲ್ಲಿಯೇ ಉಳಿಸಿಕೊಂಡನು. ಆದರೆ ನಮ್ಮ ಬಸವೇಶ್ವರನು ಊರವರೆಲ್ಲರಿಗೂ ವಿಷವನ್ನು ಕುಡಿಸಿ ತಾನೂ ಹೊಟ್ಟೆಯಲ್ಲಿ ಧರಿಸಿಕೊಂಡನು. ಆ ವಿಷವನ್ನು ಅಮರರಾದ ದೇವತೆಗಳೂ ಸಹ ಕುಡಿದರೆ ಸಾಯುತ್ತಿದ್ದರು. ಅಂತಹ ವಿಷವನ್ನು ಕುಡಿದು ಈತನು ಶಾಶ್ವತನಾಗಿದ್ದಾನೆಂದೂ, ಇವನ ಮಹಿಮೆಯು ಲೋಕ ಪೂಜ್ಯವಾದುದೆಂದೂ ನುಡಿಯುತ್ತಿರಲು ಶಿವದ್ವಿಜರು ಭಯದಿಂದ ನಡುಗುತ್ತ ತಮ್ಮ ಅಪರಾಧವನ್ನು ಕ್ಷಮಿಸೆಂದು ಬಸವೇಶ್ವರನ ಪಾದಗಳಿಗೆರಗಿ ಅವನಿಂದ ಅಭಯದಾನವನ್ನು ಹೊಂದಿ ಹಿಂದಿರುಗಿ ಹೊರಟು ಹೋದರು. ಈ ಪ್ರಕಾರ ಬಸವೇಶ್ವರನು ಶಿವಪ್ರಸಾದವು ಶಿವಭಕ್ತರ ಹೊರತು ಉಳಿದ ಭವಿಗಳಿಗೆ ದುರ್ಲಭವೆಂಬುದನ್ನು ನಿಜಮಾಡಿ ತೋರಿಸಿ ಸಕಲರನ್ನೂ ಮೆಚ್ಚಿಸಿದನು. ಆಗ ಬಿಜ್ಜಳನು ದಿವ್ಯಾಲಂಕಾರ ಭೂಷಿತವಾದ ತನ್ನ ಪಟ್ಟದಾನೆಯ ಮೇಲೆ ಬಸವೇಶ್ವರನನ್ನು ಕೂಡ್ರಿಸಿ ಜೊತೆಯಲ್ಲಿ ತಾನೂ ಕುಳಿತುಕೊಂಡು ಆತನನ್ನು ಅರಮನೆಗೆ ಕಳುಹಿಸಿ ತಾನೂ ತನ್ನ ಅರಮನೆಗೆ ಹೋದನು. ತನ್ನ ಮನೆಯನ್ನು ಸೇರಿದ ಬಸವೇಶನು ಎಂದಿನಂತೆ ಗುರುಲಿಂಗ ಜಂಗಮಾರ್ಚನಾ ತತ್ಪರನಾಗಿದ್ದನು.

## — ಜಗದೇವನ ಕಥೆಯು —

ಅದೇ ಕಲ್ಯಾಣ ಪಟ್ಟಣದಲ್ಲಿ ಶಿವಭಕ್ತಿ ಸಂಪನ್ನನೂ, ವೇದಾಗಮಜ್ಞನೂ ಆದ ಜಗದೇವನೆಂಬ ಬ್ರಾಹ್ಮಣನಿದ್ದನು. ಆತನು ಒಂದಾನೊಂದು ದಿವಸ ಬಸವೇಶ್ವರನ ಮನೆಗೆ ಬಂದು ವೀಳ್ಯವನ್ನು ಕೊಟ್ಟು ತನ್ನ ಮನೆಗೆ ಈ ದಿವಸ ಭೋಜನಕ್ಕೆ ದಯಮಾಡಿಸಬೇಕೆಂದು ಬಿನ್ನೈಸಲು ಬಸವೇಶ್ವರನು

ಆತನನ್ನು ನೋಡಿ ನೀವು ದ್ವಿಜರು. ಜಂಗಮರನ್ನು ಬಿಟ್ಟು ನಾನು ಬರುವದು ಸಮ್ಮತವಲ್ಲ. ನೀನು ಅವರೆಲ್ಲರನ್ನೂ ಸಂತೈಸುವದಾದರೆ ಬರುತ್ತೇನೆ ಎನ್ನಲು ಆತನು ಸ್ವಲ್ಪವೂ ಲೋಪವಾಗದಂತೆ ಸಂತೈಸುವೆನೆಂದು ಬಿನ್ನಹಮಾಡಿ ಸಡಗರದಿಂದ ಮನೆಗೆ ಬಂದು ಎಲ್ಲ ಅಡಿಗೆಯ ಸಾಮಾನುಗಳನ್ನು ಸಿದ್ಧಪಡಿಸಿ ವಿಧವಿಧ ಭಕ್ಷ್ಯಭೋಜ್ಯಾದಿಗಳನ್ನು ಅಣಿಗೊಳಿಸಿದನು ಮತ್ತು ಯಾವದೋ ಕಾರಣದಿಂದ ಬಸವೇಶ್ವರನು ತನ್ನ ಮನೆಗೆ ಬರುವದಕ್ಕಿಂತ ಮೊದಲೇ ತನ್ನ ದನು. ಮನೆಗೆ ಬ್ರಾಹ್ಮಣರನ್ನು ಕರೆದು ಅವರ ಪಾದಪೂಜೆಯನ್ನು ಮಾಡಿ ಸಂತೈಸಿ ಈ ವರ್ತಮಾನವನ್ನು ಚಾರರ ಮುಖದಿಂದ ಕೇಳಿದ ಬಸವೇಶ್ವರನು ಕೋಪದಿಂದ ಕೂಡಿ ಸುಮ್ಮನಿದ್ದನು. ಜಗದೇವನು ತನ್ನ ಮನೆಗೆ ಬಂದಿದ್ದ ಬ್ರಾಹ್ಮಣರನ್ನು ನಾನಾವಿಧವಾಗಿ ಉಪಚರಿಸಿ ಅವರವರ ಮನೆಗೆ ಕಳುಹಿಸಿ ಕೊಟ್ಟನು. ನಂತರ ಬಸವೇಶ್ವರನನ್ನು ಕರೆದುಕೊಂಡು ಹೋಗುವದಕ್ಕಾಗಿ ಆತನ ಮನೆಗೆ ಬಂದನು ಕೂಡಲೇ ಬಸವರಾಜನು ಕೋಪದಿಂದ ಕುದಿಯುತ್ತ ಈ ಚಾಂಡಾಲನ ಮುಖವನ್ನು ನೋಡಬಾರದೆಂದು ತೆರೆಯಿಂದ ತನ್ನ ಮುಖ ವನ್ನು ಮರೆಮಾಡಿಕೊಂಡು ಕುಳಿತು ಆ ಜಗದೇವನನ್ನು ಕುರಿತು- ಅಯ್ಯಾ, ಬ್ರಾಹ್ಮಣಾ, ನೀನು ಭವಬಂಧದಿಂದ ಕಟ್ಟುಬಿದ್ದವನಾಗಿ ಶಿವಚಿಹ್ನಗಳಾದ ವಿಭೂತಿಯನ್ನು ಹಣೆಯಲ್ಲಿಯೂ, ರುದ್ರಾಕ್ಷಿಗಳನ್ನು ಕೊರಳಲ್ಲಿಯೂ ಧರಿಸಿ ಕೊಂಡು ಶಿವಪೂಜಾಶಕ್ತಿಯುಳ್ಳವನಾದರೂ ಭ್ರಮೆಯಿಂದ ಅನೇಕ ದೇವರನ್ನು ಪೂಜಿಸುವ ಉತ್ಸಾಹ ಉಂಟಾಯಿತು. ಶಿವಶರಣರ ಪಾದಗಳನ್ನು ಮುಟ್ಟುವ ಹಸ್ತಗಳಿಂದ ಭವಿಗಳ ಕಾಲನ್ನು ಮುಟ್ಟಿ ತೊಳೆದಿರುವೆ. ಶಿವ ಪ್ರಸಾದವನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ಮುಕ್ತಿಮಾರ್ಗವನ್ನು ಹೊಂದುವದಕ್ಕೆ ಯೋಗ್ಯ ನಾದ ನೀನು ಹೀಗೆ ವಾಮಮಾರ್ಗ ಹಿಡಿದದ್ದು ಯೋಗ್ಯವಲ್ಲ. ಶಿವಪ್ರಸಾದ ವನ್ನು ಪರಿಗ್ರಹಿಸಿ ಪರಿಶುದ್ಧನಾದವನು ಬ್ರಾಹ್ಮಣರ ಪಂಕ್ತಿಯಲ್ಲಿ ಊಟ ಮಾಡುವದು ಎಂದಿಗೂ ಯೋಗ್ಯವಲ್ಲ. ಶಿವಭಕ್ತನು ಎಷ್ಟೇ ಕಷ್ಟಬಂದರೂ ಭವಿಗಳೊಡನೆ ಸಹಭೋಜನ ಮಾಡಕೂಡದು. ಇದಕ್ಕೊಂದು ದೃಷ್ಟಾಂತ ವನ್ನು ಹೇಳುವೆನು ಸಾವಧಾನ ಚಿತ್ತದಿಂದ ಕೇಳುವವನಾಗು.

## — ಏಲೇಶ್ವರ ಕೇತಯ್ಯನ ಕಥೆಯು —

ಲೋಕಾಶ್ಚರ್ಯಕರವಾದ ಮಹಿಮೆಯುಳ್ಳವನಾಗಿ, ಶಿವಭಕ್ತಿ ಸಂಪನ್ನನಾಗಿ ಲಿಂಗಧಾರಣೆಯಿಲ್ಲದವರ ಮುಖವನ್ನು ನೋಡದೆ, ಅವರ ಸಂಗಡ ಮಾತಾಡದೆ ಅವರಿಂದ ಏನನ್ನೂ ಪಡೆದುಕೊಳ್ಳದೇ ತನ್ನ ವಸ್ತುಗಳನ್ನು ಅವರಿಗೆ ಕೊಡದೆ ಇರುವ ವ್ರತವನ್ನು ಕೈಕೊಂಡು ತನ್ನ ಹೆಂಡತಿ, ಮಕ್ಕಳು, ಆಳು, ಕಾಳು, ದನಕರುಗಳಿಗೆಲ್ಲ ಲಿಂಗಧಾರಣೆಯನ್ನು ಮಾಡಿ ಆನಂತ ಮ ಮಾಸ್ಪದನೆನಿಸಿರುವದನ್ನು ಆ ಊರ ಇತರ ಜನರೆಲ್ಲರೂ ಕಂಡು ಅಸೂಯೆಯುಳ್ಳವರಾಗಿ ಈತನು ನಮ್ಮ ಸಂಗಡ ಯಾವ ವಿಧವಾದ ಸಂಬಂಧವನ್ನು ಬೆಳೆಸದಿರುವದರಿಂದ ಅವನ ಗರ್ವವನ್ನು ಮುರಿಯಬೇಕೆಂದು ಯೋಚಿಸಿ ಅವನ ಮನೆಯಲ್ಲಿ ಸಂಗ್ರಹಿಸಿಕೊಂಡಿದ್ದ ಬಿತ್ತುವ ಧಾನ್ಯಗಳಿಗೆ ಬೆಂಕಿಹಚ್ಚಿ ಸುಟ್ಟರು. ಆತನು ಅದನ್ನು ನೋಡಿ ಹುಸಿನಗೆಯಿಂದ ಆ ಸುಟ್ಟ ಬೂದಿಯನ್ನೇ ಹೊಲದಲ್ಲಿ ಚೆಲ್ಲಿ ಒಂದಕ್ಕೆ ನಾಲ್ಕರಂತೆ ಬೆಳೆಯನ್ನು ಒಕ್ಕಿ ಮನೆಯನ್ನು ತುಂಬಿಕೊಂಡನು. ಪೂರ್ವದಲ್ಲಿ ಭೂಮಿಗೆ ಬೀಜವನ್ನು ಬಿತ್ತದೆ ಬೆಳೆಯನ್ನು ಮಾತ್ರ ಬೆಳೆದನೆಂದು ಬೊಮ್ಮಯ್ಯನ ಕಥೆ ಕೇಳಿದ್ದೆವು. ಆದರೆ ಈಗ ನಮ್ಮ ಕೇತಯ್ಯನು ಬೂದಿಯನ್ನು ಚೆಲ್ಲಿ ಬೆಳೆ ಬೆಳೆದದ್ದನ್ನು ಕಣ್ಣಾರೆ ಕಂಡೆವೆಂದು ಶಿವಭಕ್ತರು ಹೊಗಳುತ್ತಿದ್ದರು. ಆಗ ಪರಮತದ ದುಷ್ಟರು ಮತ್ತಿಷ್ಟು ಹೊಟ್ಟೆಕಿಚ್ಚಿನಿಂದ ಆತನ ಮನೆಯ ದನಕರುಗಳನ್ನು ಕಳ್ಳರಿಂದ ಕದಿಸಿ ಹೊರಗೆ ಅಟ್ಟಿಸಿದರು. ಆ ಕಳ್ಳರು ರಾತ್ರಿಯಲ್ಲಿ ದನಗಳನ್ನು ಮತ್ತೊಂದು ಊರಿಗೆ ಹೊಡೆದುಕೊಂಡು ಹೋಗುತ್ತಿರುವಾಗ ಅವುಗಳ ಕೊರಳಲ್ಲಿದ್ದ ಲಿಂಗಗಳು ತಮ್ಮ ಕೊಟ್ಟಿಗೆಯ ಗೊಂತಿನಲ್ಲಿಯೇ ಉಳಿದಿರುವದನ್ನು ತಿಳಿದು ಎಷ್ಟು ಪ್ರಯತ್ನಪಟ್ಟರೂ ಹುಲ್ಲು ತಿನ್ನದೇ ನೀರು ಕುಡಿಯದೆ ಆರೇಳು ದಿವಸಗಳ ವರೆಗೆ ದಾರಿ ನಡೆದುಬಂದುದರಿಂದ ಆ ದನಗಳು ಇಂದೋ ನಾಳೆಯೋ ಸತ್ತುಹೋಗುವವು. ನಿಷ್ಕಾರಣವಾಗಿ ಗೋಹತ್ಯ ಪಾಪವು ನಮ್ಮನ್ನು ಕಾಡದೆ ಬಿಡುವದಿಲ್ಲೆಂದು ಅನ್ನುತ್ತ ಅವರು ಆ ದನಗಳನ್ನು ಹಿಂದಕ್ಕೆ ಅಟ್ಟಿ ಬಿಟ್ಟರು. ಆಗ ಆ ದನಗಳು ಹಾರುತ್ತ, ನೆಗೆಯುತ್ತಾ 'ಅಂಬಾ' ಎಂದು ಅರಚುತ್ತ ಏಳು ದಿನಗಳ ಹಾದಿಯನ್ನು ಏಳು ಗಳಿಗೆಯ ಹೊತ್ತಿನಲ್ಲಿ ನಡೆದು ತಮ್ಮ ಯಜಮಾನನ ಮನೆಯ ಬಳಿಗೆ ಬಂದವು. ಆಗ ಕೇತಯ್ಯನು ವೃತ

ಭ್ರಷ್ಟಗಳಾದ ಹಸುಗಳನ್ನು ಮನೆಯಲ್ಲಿ ಸೇರಿಸಬಾರದೆಂದು ತಲೆ ಬಾಗಿಲ ಕದವನ್ನು ಮುಚ್ಚಿಕೊಳ್ಳಲು ದನಗಳು ಅತ್ತಿತ್ತ ಅಲುಗಾಡದೆ ಹೊರಗೆ ನಿಂತು ಬಳಲುತ್ತಿರುವದನ್ನು ಆ ಊರ ಜನರು ಕಂಡು ಹುಲ್ಲು-ನೀರುಗಳನ್ನು ಮುಂದಿಟ್ಟರು. ಆ ಆಹಾರವನ್ನು ಮುಟ್ಟದೆ ತಮ್ಮ ಗೊತ್ತಿನ ಕಡೆಗೆ ತಿರುಗಿ ನೋಡುತ್ತ ಲಿಂಗಗಳನ್ನು ನೋಡಿ ನೋಡಿ ಅರಚುತ್ತಿದ್ದವು. ಮನೆಯ ಕೊಟ್ಟಿಗೆಯಲ್ಲಿ ಕಟ್ಟಿಹಾಕಿದ್ದ ಎಳೆಗರುಗಳು ಹಸಿದು ಬಳಲಿದ್ದರೂ ವ್ರತ ಭ್ರಷ್ಟರಾದ ತಮ್ಮ ತಾಯಿಗಳನ್ನು ನೆನೆದು ಅರಚಿಕೊಳ್ಳದೆ ಸುಮ್ಮನೆ ನಿಂತುಕೊಂಡಿದ್ದವು. ತನ್ನ ದನ ಕರುಗಳು ಪುರಜನರು ತಂದಿಟ್ಟಿದ್ದ ಹುಲ್ಲು-ನೀರನ್ನು ಸ್ವೀಕರಿಸದೆ ವ್ರತ ಕಾಪಾಡಿಕೊಂಡಿರುವದನ್ನು ಕಂಡ ಕೇತಯ್ಯನು ಸಂತೋಷದಿಂದ ಕೂಡಲೇ ಬಾಗಿಲ ಕದವನ್ನು ತೆರೆದನು. ಆಗ ಹಸುಗಳು ತಮ್ಮ ಗೊತ್ತುಗಳನ್ನು ಸೇರಿ ಕರುಗಳನ್ನು ಲಕ್ಷ್ಯಮಾಡದೆ ತಮ್ಮ ತಮ್ಮ ಲಿಂಗಗಳನ್ನು ಮುಟ್ಟಿ ಮುಟ್ಟಿ ಬಳಸಿಬಂದು ಪ್ರದಕ್ಷಿಣೆ ಮಾಡುವ ವ್ರತವನ್ನು ಮೊದಲು ನೆರವೇರಿಸಿಕೊಂಡು ಅನಂತರದಲ್ಲಿ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಯಜಮಾನನಿಗೆ ಮಣಿದು ನಮಸ್ಕರಿಸಿದವು. ಆಗ ಆತನು ಎಳೆಹುಲ್ಲು, ನೀರನ್ನು ತಂದಿಡಲು ಅವುಗಳು ಆಹಾರವನ್ನು ತಿಂದು ತಮ್ಮ ಬಳಲಿಕೆಯನ್ನು ನೀಗಿಸಿಕೊಂಡವು. ಕರುಗಳು ತಮ್ಮ ತಾಯಂದಿರ ವ್ರತ ಭಂಗವಾಗದಿರುವದನ್ನು ತಿಳಿದು ಮೊಲೆಯುಂಡು ಸುಖದಿಂದ ಇದ್ದವು. ಇದನ್ನು ಆ ಊರ ಜನರೆಲ್ಲರೂ ನೋಡಿ ಆಶ್ಚರ್ಯಪಟ್ಟು ಕೊಂಡಾಡಿದರು. ಜಗದೇವನಾದ ಎಲೈ— ಬ್ರಾಹ್ಮಣನೇ, ಪಶುಗಳಾದ ಆ ದನಗಳು ಸಹ ತಮಗೆಬಂದ ಆಪತ್ಕಾಲದಲ್ಲಿ ತಮ್ಮ ವ್ರತವನ್ನು ಕಾಪಾಡಿಕೊಂಡು ಸುಖವಾಗಿರುವಾಗ ವ್ರತಭಂಗ ಮಾಡಿದ ಮಾಡಿದ ಮಾನವನು ಆ ಪಶುಗಳಿಗಿಂತ ಹೀನನಲ್ಲವೇ? ನೀನು ತಿಳಿದವನಾಗಿದ್ದರೆ ಅಭವಿಗಳ ಸಹವಾಸ ಮಾಡುತ್ತಿದ್ದೆಯಾ? ಇದೂ ಅಲ್ಲದೆ ಮತ್ತೊಂದು ಮಹಿಮೆಯನ್ನು ಹೇಳುತ್ತೇನೆ ಕೇಳು.

## — ಸೌಂದರ ನಾಚಯ್ಯನ ಕಥೆಯು —

ಹಿಂದಿನ ಕಾಲದಲ್ಲಿ ಶಿವಭಕ್ತಿ, ಸದಾಚಾರ ಸಂಪನ್ನನಾದ ಸೌಂದರ

ನಾಚಯ್ಯನೆಂಬ ಒಬ್ಬ ಭಕ್ತನಿದ್ದನು. ಒಮ್ಮೆ, ಆವನ ಗೆಂಡತಿಯು ತುಂಬಿದ ಬಸುರಿಯಾಗಿದ್ದಳು. ಆ ಭಕ್ತನು ಮುಂದೆ ಹುಟ್ಟುವ ಮಗುವಿಗೆ ಕಟ್ಟುವದಕ್ಕಾಗಿ ಗರ್ಭಕ್ಕೇ ಲಿಂಗಧಾರಣೆ ಮಾಡಿಸಿದ್ದನು. ಮತ್ತು ಮಗು ಹುಟ್ಟಿದ ಕೂಡಲೇ ಲಿಂಗಧಾರಣೆ ಮಾಡಿಸಿದನು. ಮುಂದೇ ತುಸು ಹೊತ್ತಿನಲ್ಲಿಯೇ ಅದೇ ಗರ್ಭದಿಂದ ಮತ್ತೊಂದು ಶಿಶುವು ಹುಟ್ಟಿತು. ಅದನು ನೋಡಿ ಆ ಭಕ್ತನು ಗರ್ಭಕ್ಕೆ ಧರಿಸಿದ ಲಿಂಗವು ಒಂದು ಮಗುವಿಗೆ ಆಯಿತು. ಆದರೆ ಈ ಮಗುವಿಗೆ ಲಿಂಗವಿಲ್ಲ ಎಂದು ಬಿಟ್ಟುಬಿಡಲು ಆತನ ಹೆಂಡತಿಯು ಇದೇನು? ಒಂದು ಮಗುವಿಗೆ ಲಿಂಗವನ್ನು ಕಟ್ಟಿ ಇನ್ನೊಂದಕ್ಕೆ ಹಾಗೆಯೇ ಬಿಡುವದೇ? ಎಂದು ಕೇಳಲು ಆತನು ಗರ್ಭದ ಎಂಟನೆಯ ತಿಂಗಳಲ್ಲಿಯೇ ಗರ್ಭಕ್ಕೆ ಲಿಂಗ ಧರಿಸುವದು ವೀರಶೈವರ ಪದ್ಧತಿಯು. ಆದರೆ ಇನ್ನೊಂದು ಮಗುವು ಹುಟ್ಟುವದೆಂಬುದು ನಮಗೆ ತಿಳಿಯಲಿಲ್ಲ ಆದ್ದರಿಂದ ಈಗ ಕಾಲವು ಮೀರಿ ಹೋಗಿದೆ- ಇನ್ನು ಲಿಂಗಧಾರಣೆ ಮಾಡಿಸಿ ಫಲವಿಲ್ಲ. ಆದಕಾರಣ ಈ ಮಗುವನ್ನು ನಮ್ಮ ಮನೆಯಲ್ಲಿಟ್ಟುಕೊಳ್ಳದೆ ಹೊರಗೆ ಬೀಸಾಡತಕ್ಕದ್ದೆಂದು ಹೇಳಿ ಆ ಪ್ರಕಾರ ಹೊರಗೆ ಬಿಸುಡಿದನು. ಇಂತು ಶಿವಭಕ್ತರ ಮಾರ್ಗವು ವೀರಾಚಾರವೆಂದೆನಿಸಿರುವದು. ಭಕ್ತೋತ್ತಮನಾದ ಜಗದೇವನೇ, ನೀನು ಭವಿಗಳಾದವರ ಸಂಗವನ್ನು ಎಂತುಮಾಡಿದೆ? ಇದ್ದುದನ್ನು ಮರೆಮಾಚಿ ಇಲ್ಲದ್ದನ್ನು ನಿರ್ಮಿಸಿ ಸಕಲರಾಜರ ಬಳಿಯಲ್ಲಿಯೂ ಇದ್ದುಕೊಂಡು ಅವರಿಗೆ ದುರ್ಬೋಧೆಯನು ಮಾಡಿ ತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳುವರು. ವೇದಾಗಮ ಪುರಾಣ ಪ್ರಸಿದ್ಧವಾದ ಶಿವಧರ್ಮವನ್ನು ತೊರೆದು ವರ್ತಿಸುತ್ತಿರುವರು. ಪಶುಪತಿಯ ಸೇವೆ ಮಾಡುವದನ್ನು ಮರೆತು ಪಶುಗಳನ್ನು ಸೇರಿ ಪಾಪ ಹರಣಕ್ಕಾಗಿ ಸೇವಿಸುತ್ತಿದ್ದಾರೆ. ಶಿವನು ಅವರ ಮೂಗನ್ನು ಕೊಯ್ಯದೆ ಬಿಡುವನೇ? ವೀರಶೈವಾಚಾರ ನಿರತರಾದ ಭಕ್ತರಿಗೆ ಇವರ ಸ್ನೇಹವು ಶ್ರೇಯಸ್ಕರವಪ್ಪುದೇ? ನೊಣವು ಕಮಲದಲ್ಲಿಯ ಮಕರಂದದ ರುಚಿಯನ್ನೂ, ಕತ್ತೆಯು ಕಿನ್ನರಿಯ ಸೊಂಪನ್ನೂ, ಕೋಡಗನು ರತ್ನದ ಬೆಲೆಯನ್ನೂ, ಕೋಣನು ಸ್ವರ್ಗ ಸುಖವನ್ನೂ, ಕಪ್ಪೆಯು ಸಮುದ್ರ ಗಾಂಭೀರ್ಯವನ್ನೂ ತಿಳಿಯಲಾರದಂತೆ ಇವರು ಶಿವಮತದ ಪ್ರಭಾವವನ್ನು ಅರಿಯರು. ಹಾಗೂ ರತ್ನವನ್ನು ತೊರೆದು ಕಾಜನ್ನೂ, ಕಲ್ಪವೃಕ್ಷವನ್ನು ಸೇರದೆ ಬೂರಲ ಮರ

ವನ್ನು ಆಶ್ರಯಿಸುವ ಮೂಢ ಮನುಜರಂತೆ ನೀನು ಶಿವಭಕ್ತರ ಸಂಗವನ್ನು ತೊರೆದು ಭವಿಗಳ ಮಾರ್ಗವನ್ನವಲಂಬಿಸಬಹುದೇ ? ಶಿವಭಕ್ತಿಯೆಂಬ ಹಡಗವನ್ನು ಆಶ್ರಯಿಸಿ ಭವಸಮುದ್ರ ದಾಟುವದನ್ನು ಬಿಟ್ಟು ಭವಿಗಳೆಂಬ ಸೋರಿ ಬುರುಡೆಯನ್ನು ಹಿಡಿದು ಭವಸಾಗರವನ್ನು ದಾಟಲು ಪ್ರಯತ್ನಮಾಡಿದ ನಿನ್ನಂತಹ ಅಜ್ಞಾನಿಗಳು ಈ ಲೋಕದಲ್ಲಿರುವರೇ ? ಕಲ್ಲು ಸದಾ ನೀರಲ್ಲಿ ಇದ್ದರೂ ಅದು ಮೃದುವಾಗುವದೇ ? ಕರಿಯ ವಸ್ತ್ರವನ್ನು ಎಷ್ಟು ತೊಳೆದರೂ ಅದು ಬೆಳ್ಳಗಾಗುವದೇ ? ಹಾವಿಗೆ ಹಾಲನ್ನೆರೆದರೆ ವಿಷವು ಹೆಚ್ಚದೆ ಇರುವದೇ ? ಮನೆಯಲ್ಲಿಯ ಕಪಿಲಾಗೋವನ್ನು ಮರೆತು ಬೀದಿಯಲ್ಲಿಯ ನಾಯಿಯನ್ನು ತಂದು ಪೂಜಿಸುವರೇ ? ಈ ರೀತಿ ಮಾಡುವ ಅವಿವೇಕಿಗಳು ಈ ಪ್ರಪಂಚದಲ್ಲಿರುವರೇ ? ಶಿವನಿಗೆ ಶತ್ರುವಾಗಿ ಯಜ್ಞವನ್ನು ಮಾಡಿದ ದಕ್ಷನು ಯಾವ ಗತಿಗೆ ಬಂದನೆಂಬುದನ್ನು ಕಾಣೆಯಾ ? ಹನ್ನೆರಡು ವರ್ಷಕ್ಷಾಮದಲ್ಲಿ ಗೌತಮಖುಷಿಯು ಬ್ರಾಹ್ಮಣರನ್ನು ಸಂರಕ್ಷಿಸಲು ಇವರು ಆ ಋಷಿಯಮೇಲೆ ಗೋಹತ್ಯಾದೋಷವನ್ನು ಹೊರಿಸಿ ಅವನ ಶಾಪಕ್ಕೀಡಾಗಿ ನರಳುತ್ತಿರುವ ಈ ಹಾರುವರನ್ನು ನಂಬಿ ಯಾರು ಮೇಲ್ಮೆ ಪಡೆದಿರುವರು. (ಈ ಕಥೆಯು ಸಂಪೂರ್ಣವಾಗಿ ನಮ್ಮ ದ್ವಾದಶ ಜ್ಯೋತಿರ್ಲಿಂಗ ಮಹಾತ್ಮೆ ಪುಸ್ತಕದಲ್ಲಿ ಇದೆ. ಬೆಲೆ ೧ ರೂ.) ಪರಮ ಪತಿವ್ರತೆಯಾದ ಸಾಧ್ವಿಯು ಒಂದು ದಿನ ಒಮ್ಮೆ ಪರಪುರುಷನನ್ನು ನೋಡಿದ ಮಾತ್ರದಿಂದ ಆವಳ ವ್ರತಭಂಗವಾಗುವಂತೆ ಶಿವಭಕ್ತಿ ತತ್ಪರನಾದವನು ಒಂದುನಿಮಿಷ ಅನ್ಯದೇವತೆಯನ್ನು ಭಜಿಸಿದರೆ ಅವನು ಭ್ರಷ್ಟನಾಗುವನಲ್ಲದೆ ಶಿವಭಕ್ತಿಯು ಕೆಟ್ಟು ಹೋಗುವದು. ಒಡಕು ಗಡಿಗೆಯಲ್ಲಿ ತುಂಬಿಟ್ಟ ಹಾಲಿನಂತೆ ಅವನ ಶಿವಭಕ್ತಿಯು ಸೋರಿ ಹೋಗುವದು. ಒಬ್ಬ ಜಂಗಮನಿಗೆ ಒಂದು ತುತ್ತು ಅನ್ನವನ್ನು ಕೊಟ್ಟು ತೃಪ್ತಿ ಪಡಿಸಿದರೆ ಒಂದು ಸಾವಿರ ಬ್ರಾಹ್ಮಣರನ್ನು ಸಾವಿರ ಸಾರೆ ತೃಪ್ತಿಪಡಿಸಿದಷ್ಟು ಫಲ ಬರುವದು. ಆದ್ದರಿಂದ ಭವಬಂಧವನ್ನು ನೀಗಿ ಮುಕ್ತಿ ಸುಖವನ್ನು ಪಡೆಯಬೇಕಾಗಿದ್ದರೆ ಅನ್ಯದೇವತಾಭಕ್ತಿಯನ್ನು ತೊರೆದು ಶಿವಭಕ್ತಿಯೊಂದನ್ನೇ ಹೊಂದಿ ಭಜಿಸಬೇಕೆಂದು ನುಡಿದ ಬಸವೇಶ್ವರನ ಉಪದೇಶವನ್ನು ಕೇಳಿ ಜಗದೇವನು ತನ್ನ ತಪ್ಪನ್ನು ತಾನೇ ತಿಳಿದುಕೊಂಡು ಭಯದಿಂದ ಗಡಗಡನೆ ನಡಗುತ್ತ ಚಿತ್ತ ಚಾಂಚಲ್ಯದಿಂದ ಉಂಟಾದ ಅಪರಾಧವನ್ನು ನೀಗಿ ಕೊಳ್ಳುವದ

ಕ್ಕಾಗಿ ಶಿವಶರಣರ ಸಭೆಗೆ ನಮಸ್ಕಾರಮಾಡಿ ಕೈ ಮುಗಿದು ನಿಂತುಕೊಂಡು ಮಂದಭಾಗ್ಯನೂ, ಅವಿವೇಕಿಯೂ, ಭಕ್ತಿರಹಿತನೂ, ಪಾಪಾತ್ಮನೂ, ಆದ ನನ್ನ ಅಪರಾಧವನ್ನು ಕ್ಷಮಿಸಿ ಇದಕ್ಕೆ ಪ್ರಾಯಶ್ಚಿತ್ತವನ್ನು ಅಪ್ಪಣೆ ಕೊಡಿಸ ಬೇಕೆಂದು ಭಯ, ಭಕ್ತಿಗಳಿಂದ ಪ್ರಾರ್ಥಿಸಲು ತ್ರಿಕಾಲಜ್ಞಾನಿಯಾದ ಬಸವೇ ಶ್ವರನು ಮುಂದಾಗುವ ಕಾರ್ಯಗಳನ್ನು ತನ್ನ ಜ್ಞಾನಯೋಗದಿಂದ ತಿಳಿದು ಶಿವಗಣಂಗಳ ಅಪ್ಪಣೆ ಪಡೆದು ಎಲೈ– ಭಕ್ತನಾದ ಜಗದೇವನೇ, ಈ ಪಟ್ಟಣ ದಲ್ಲಿ ಮುಂದೆ ಒಂದು ದೊಡ್ಡ ಶಿವದ್ರೋಹವು ನಡೆಯುವದಿದೆ. ಆಗ ನೀನು ಆ ಶಿವದ್ರೋಹಿವನ್ನು ಸಂಹರಿಸಿದರೆ ನಿನ್ನ ಪಾಪವು ನಾಶವಾಗುವದೆಂದು ನುಡಿಯಲು ಜಗದೇವನು ಸಂತುಷ್ಟಮಾನಸನಾಗಿ ಬಸವೇಶ್ವರನ ಆಜ್ಞೆಯನ್ನು ಪಡೆದು ಆತನಿಂದ ವೀರ ತಾಂಬೂಲವನ್ನು ಪರಿಗ್ರಹಿಸಿ ಬಸವೇಶ್ವರನನ್ನೂ, ಶಿವಗಣಂಗಳನ್ನೂ ತನ್ನ ಮನೆಗೆ ಕರೆದುಕೊಂಡು ಹೋಗಿ ಅವರ ಪಾದ ಗಳನ್ನು ತೊಳೆದು ತೀರ್ಥವನ್ನು ಪರಿಗ್ರಹಿಸಿ ಸರ್ವರನ್ನು ತೃಪ್ತಿ ಪಡಿಸಿದನು. ಆಗ ಬಸವರಾಜನು ಗಣಸಮೇತನಾಗಿ ತನ್ನ ಮನೆಗೆ ಬಂದು ಎಂದಿನಂತೆ ಗುರುಲಿಂಗ ಜಂಗಮ ಸೇವಾತತ್ಪರನಾಗಿದ್ದನು.

## — ಮಧುವಯ್ಯ, ಅಲ್ಲಮಯ್ಯಗಳ ಕಥೆಯು —

ಕಲ್ಯಾಣನಿಧಿಯಾದ ಕಲ್ಯಾಣಪುರವೆಂದು ಹೆಸರಾದ ಆ ಕಲ್ಯಾಣ ಪಟ್ಟಣದಲ್ಲಿ ಶಿವೈಕ್ಯರಾದ ಶ್ರೇಷ್ಠ ಶಿವಭಕ್ತರ ಪ್ರಸಾದಕ್ಕೆ ಪಾತ್ರರಾದ ಮಧು ವಯ್ಯ, ಅಲ್ಲಮಯ್ಯ ಎಂಬ ಇಬ್ಬರು ಶಿವಭಕ್ತರು ಯಾವಾಗಲೂ ಪರಮ ಮಿತ್ರರಾಗಿ ಪರಸ್ಪರ ಅನ್ಯೋನ್ಯಭಾವನೆ ತೋರ್ಪಡಿಸುತ್ತ ಇದ್ದರು. ಇವರು ಬಸವನ ಮನೆಯಲ್ಲಿ ನಡೆಯುತ್ತಿರುವ ಶಿವಾನುಭವ ಗೋಷ್ಠಿಯಲ್ಲಿ ತಪ್ಪದೆ ನೆರೆದು ಸಮರಸವರ್ತಿಗಳಾಗಿ ಬಾಳುತ್ತಿರುವದನ್ನು ಪರಮತವಾದಿಗಳು ಸಹಿಸ ಲಾರದೆ ಅಸೂಯೆಯಿಂದ ಬಿಜ್ಜಳರಾಜನಲ್ಲಿಗೆ ಬಂದು ದೂರಿಕೊಂಡರು. ದೊರೆಯು ಶಿವಶರಣರ ಮತ್ತು ಬಸವೇಶ್ವರನ ಮಹಿಮೆಯನ್ನು ಪದೇ ಪದೇ ನೋಡಿ ತಿಳಿದವನಾಗಿದ್ದರೂ " ವಿನಾಶಕಾಲೇ ವಿಪರೀತ ಬುದ್ಧಿ " ಎಂಬ ನಾಣ್ನುಡಿಯಂತೆ ಅವರಿಬ್ಬರನ್ನೂ ತನ್ನ ಸಭೆಗೆ ಕರೆಯಿಸಿ ಯಾವದೊಂದೂ ವಿಚಾರಣೆಯಿಲ್ಲದೆ ಅವರ ಕಣ್ಣನ್ನು ಕೀಳಿಸಿದನು. ಅದನ್ನು ನೋಡಿ ಪುರ

ಜನರು ಅತ್ಯಂತ ಭಯದಿಂದ ರಾಜನಿಗೆ ಈ ತರದ ಕೆಟ್ಟಬುದ್ಧಿಯು ಹುಟ್ಟಿದ್ದು ರಾಜ್ಯನಾಶವಾಗುವದಕ್ಕೇ ಹೊರತು ಬೇರೆಯಲ್ಲ. ಶಿವಶರಣರು ಮುನಿದರೆ ಈತನು ಬದುಕುವದುಂಟೇ ? ಅವರ ಶಕ್ತಿ ಸಾಮರ್ಥ್ಯಗಳನ್ನು ಅನೇಕ ವೇಳೆ ನೋಡಿರುವನು ಎಂದು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತಿದ್ದರು. ಇತ್ತ ಶಿವಶರಣರು ಅತ್ಯಂತ ರೋಷಾವೇಶದಿಂದ ಕೂಡಿ ಬಸವೇಶ್ವರನ ಬಳಿಗೆ ಮಧುವಯ್ಯ, ಅಲ್ಲಮಯ್ಯರನ್ನು ಬರಮಾಡಿ ಇನ್ನು ನಾವು ಇಲ್ಲಿರುವದು ಯೋಗ್ಯವಲ್ಲ. ಶಿವದ್ರೋಹಿಯಾದ ಈ ಬಿಜ್ಜಳನನ್ನು ಕೊಲ್ಲಿಸಬೇಕೆಂದು ನಿಶ್ಚಯಿಸಿ ಜಗದೇವನನ್ನು ಬರಮಾಡಿ ಅಯ್ಯಾ, ನೀನು ಮೊದಲು ಮಾಡಿದ ಪ್ರತಿಜ್ಞೆಯಂತೆ ಬಿಜ್ಜಳರಾಯನನ್ನು ಕೊಂದು ಶಿವದ್ರೋಹಿಯನ್ನು ಸಂಹರಿಸು ವದರ ಮೂಲಕ ಶಿವ ಕೃಪೆಗೆ ಪಾತ್ರನಾಗು ಎಂದು ಹೇಳಿ ಮಡಿವಾಳ ಮಾಚಯ್ಯ, ಮಾದಿರಾಜಯ್ಯ, ಸುರಗಿ ಚೌಡಯ್ಯ, ಮುಸುಟೆ ಚೌಡಯ್ಯ, ಕಿನ್ನರಬ್ರಮ್ಮಯ್ಯ, ಕನ್ನಡಬೊಮ್ಮಯ್ಯ, ಕಲಕೇತಯ್ಯ, ಕುರುಳಕೇತಯ್ಯ, ದಸರಯ್ಯ ಮೊದಲಾದ ಶಿವಶರಣರೆಲ್ಲರೂ ಬಸವೇಶ್ವರನೊಡನೆ ಕೂಡಿಕೊಂಡು ಶಿವದ್ರೋಹಿಯಾದ ಬಿಜ್ಜಳನನ್ನು ಶಪಿಸುತ್ತ ಆ ಊರನ್ನು ತೊರೆದು ಕಪ್ಪಡಿ ಸಂಗಮನಾಥನಲ್ಲಿಗೆ ಪ್ರಯಾಣ ಬೆಳಿಸಲು ಆ ಪುರದ ಐಶ್ವರ್ಯವೆಲ್ಲವೂ ನಾಶ ವಾಯಿತು. ಮಹಾತ್ಮರಾದವರೇ ಊರನ್ನು ಬಿಟ್ಟು ಹೋದ ಬಳಿಕ ತಾವೂ ಇರಬಾರದೆಂದು ಅನೇಕಾನೇಕ ಪುರಜನರು ಅವರ ಸಂಗಡವೇ ಹೊರಟರು. ಆಗ ಪಟ್ಟಣದಲ್ಲಿ ಮಹೋತ್ಪಾತಗಳು ಕಂಡು ಬರಲು ಬ್ರಾಹ್ಮಣರು ಹೋಮ ಜಪ, ತಪ, ಶಾಂತಿಗಳನ್ನು ಮಾಡಿದರು. ಸಿಂಹಾಸನವು ನಡುಗಿತು. ಗೂಬೆ ಗಳು ಕೂಗಿದವು. ಅರಮನೆಯ ಕಳಸವು ಮುರಿದು ಬಿದ್ದಿತು. ದೊರೆಯು ಕನ್ನಡಿಯಲ್ಲಿ ತನ್ನ ಶಿರಸ್ಸು ಕಾಣದಿರಲು ಭಯಪಟ್ಟನು. ಜಗದೇವನು ಶರಣರ ಆಜ್ಞೆಯನ್ನು ಧರಿಸಿ ಮನೆಗೆ ಬಂದನು. ಆಗ ಆತನ ತಾಯಿಯು ಮಗನನ್ನು ಕುರಿತು ಈ ಲೋಕದಲ್ಲಿ ಶಿವದ್ರೋಹಮಾಡಿದ ಮನುಷ್ಯನನ್ನು ಕೂಡಲೇ ಸಂಹರಿಸಿ ಬಿಡಬೇಕು. ಒಂದು ವೇಳೆ ತಾನು ಅಶಕ್ತನಾದರೆ ತನ್ನ ಪ್ರಾಣವನ್ನಾದರೂ ಕೊಡಬೇಕು. ಹಾಗಲ್ಲದೆ ಶಿವದ್ರೋಹವನ್ನು ಗ್ರಹಿಸಿ ಕೊಂಡಿರುವವನು ಮಹಾಪಾಪಿಯೆನಿಸುವನು. ಅವನಿಗೆ ಎಲ್ಲಿಯೂ ಇಲ್ಲದ ನರಕ ಬಾಧೆಯು ಪೀಡಿಸುವದು. ಎಂದು ತಿಳಿಯುವದೇ ಶಿವಭಕ್ತಿಗೆ ಮೂಲವು.

ಶಿವದ್ರೋಹಿಯಾದವನನ್ನು ಕೊಲ್ಲದೆ, ತನ್ನ ಪ್ರಾಣವನ್ನಾದರೂ ಕೊಡಲಾರದೆ ಇರುವ ಶಿವಭಕ್ತನು ನೀಚನಾಗುವದರಿಂದ ನಾನು ಅವನನ್ನು ಎಂದೂ ಮೆಚ್ಚುವದಿಲ್ಲ. ತನ್ನ ತಂದೆಯು ಯಜ್ಞ ಮಾಡುತ್ತಿರುವಾಗ ಮಗಳಾದ ಪಾರ್ವತಿಯು ಶಿವನಿಂದೆಯನ್ನು ಕೇಳಿ ಸೈರಿಸಲಾರದೆ ಯಜ್ಞಕುಂಡದಲ್ಲಿಬಿದ್ದು ತನ್ನ ಪ್ರಾಣವನ್ನು ನೀಗಿಕೊಳ್ಳಲಿಲ್ಲವೇ ? ಉಪಮನ್ಯುವೆಂಬ ಋಷಿಯು ಶಿವನಿಂದೆಯನ್ನು ಕೇಳಿ ತಾಳಲಾರದೆ ಸತ್ತು ಬೂದಿಯಾದನಲ್ಲಾ ! ನೀನು ಶಿವದ್ರೋಹವನ್ನು ಕೇಳಿ, ನೋಡಿ ಅವನನ್ನು ಕೊಲ್ಲದೆ ಸುಮ್ಮನೆ ಮನೆಗೆ ಬಂದೆಯಲ್ಲಾ ! ಶಿವದ್ರೋಹಿಯನ್ನು ನಾಶಮಾಡುವದು ಶಿವಶರಣರಿಗೆ ಒಂದು ದೊಡ್ಡ ಕೆಲಸ. ಶಿವಗಣಂಗಳು ಮುನಿಸಿದರೆ ಲೋಕವನ್ನೇ ಸೂರೆಗೊಳ್ಳುವರು. ಇದು ಅಸಾಧ್ಯ ಕೆಲಸವೆಂದು ಅವರು ತಿಳಿವರೇ ? ನೀನು ಅವರಿಗೆ ಭಾಷೆಯನ್ನು ಕೊಟ್ಟು ಪ್ರತಿಜ್ಞೆಯನ್ನು ಮಾಡಿರುವದರಿಂದ ನಿನ್ನ ಮಾತನ್ನುಳಿಸಿಕೊಂಡು ಶಿವದ್ರೋಹಿಯನ್ನು ಕೊಂದು ಶರಣರ ಪ್ರೀತಿಗೂ, ಶಿವನ ಕಟಾಕ್ಷಕ್ಕೂ ಪಾತ್ರನಾಗು. ಹಾಗೆ ಮಾಡದೆ ಹೊಟ್ಟೆಯ ಆತುರವನ್ನು ಹೊಂದಿ ಮನೆಗೆ ಬರಬಹುದೇ ? ಛೀ ನಾಯೀ ! ಶಿವದ್ರೋಹಿಯನ್ನು ಕೊಲ್ಲುವದಕ್ಕೆ ಹೆದರಿ ಪ್ರಾಣ ಭಯದಿಂದ ಮನೆಗೆ ಬಂದ ನೀನು ನಾಯಿಯಾಗಿ ಹುಟ್ಟುವದರಲ್ಲಿ ಆಶ್ಚರ್ಯವೇನಿದೆ ? ನೀನು ನಿಜವಾದ ಶಿವಭಕ್ತನಾಗಿದ್ದರೆ ಶಿವದ್ರೋಹದ ವಾರ್ತೆಯನ್ನು ಕೇಳಿದ ಕೂಡಲೇ ಕಾದು ನೀರಾದ ಸೀಸನನ್ನು ಕಿವಿಯಲ್ಲಿ ಬಿಟ್ಟಂತಾಗಿ ಆ ಶಿವದ್ರೋಹಿಯನ್ನು ಕೊಲ್ಲಬೇಕಲ್ಲವೇ ? ಅದಕ್ಕೆ ತಪ್ಪಿಸಿಕೊಂಡು ಅನ್ನದ ರುಚಿಗಾಗಿ ದಪಗುಟ್ಟುತ್ತಿರುವ ನಿನ್ನ ಗಂಟಲಲ್ಲಿ ಅದು ಹೇಗೆ ಇಳಿಯುವದೋ ನಾನು ಕಾಣೆನು. ಛೀ ಹೊಟ್ಟೆ ಬಾಕನೇ, ನಾಯಿಯೇ, ಎಂದು ಧಿಕ್ಕರಿಸಿ ಜರೆಯಲು ಜಗದೇವನು ನಾನು ಶಿವದ್ರೋಹಿಯನ್ನು ಕೊಲ್ಲುವವರೆಗೂ ನಾಯಿಗೇ ಎಂದು ಹೇಳುತ್ತಿರುವಷ್ಟರಲ್ಲಿ ಮಲ್ಲಯ್ಯ ಬೊಮ್ಮಯ್ಯ ಎಂಬ ಇಬ್ಬರು ವೀರಭಕ್ತರು ಶಿವದ್ರೋಹಿಯನ್ನು ಕೊಲ್ಲುವದಕ್ಕೆ ಉದ್ಯುಕ್ತರಾಗಿ ಬರಲು, ಅವರೆಲ್ಲರೂ ಆ ತಾಯಿಯ ಆಶೀರ್ವಾದವನ್ನು ಪಡೆದು ವೀರ ತಾಂಬೂಲವನ್ನು ಹೊಂದಿ ವೀರಕಾಸೆಯನು, ಕಟ್ಟಿ, ದೇಹದಲ್ಲಿ ಭಸ್ಮವನ್ನು ಧರಿಸಿ, ರುದ್ರಾಕ್ಷಿಯ ಆಭರಣಗಳನ್ನು ತೊಟ್ಟುಕೊಂಡು, ಕಾಲರುದ್ರರಂತೆ ಭಯಂಕರವಾದ ಖಡ್ಗಗಳನ್ನು ತೆಗೆದುಕೊಂಡು ಮನಸ್ಸಿನಲ್ಲಿ ವೀರ

ಪ್ರಮಥ ಪುಂಗವರನ್ನು ಧ್ಯಾನಿಸಿ, ಶಿವಗಣಂಗಳಿಗೆ ನಮಸ್ಕರಿಸಿ ರಾಜ ಬೀದಿ ಯಲ್ಲಿ ರಭಸದಿಂದ ಬರುತ್ತಿರಲು ಶುಭಶಕುನವನ್ನು ಕಂಡು ಆನಂದದಿಂದ ಮುನ್ನಡೆಯಲು ಪುರಜನರು ಆಶ್ಚರ್ಯಚಕಿತರಾಗಿರಲು ಇವರು ಬಿಜ್ಜಳನ ಅರಮನೆಯ ಬಾಗಿಲಿಗೆ ಬಂದುದನ್ನು ನೋಡಿ ಚತುರಂಗಬಲವು ಹೆದರಿ ಹಿಮ್ಮೆಟ್ಟಿತು. ಆ ಮೂವರೂ ಆಡಂಬರದಿಂದ ರಾಜನ ಶಯನ ಶಾಲೆಯನ್ನು ಹೊಕ್ಕು ಬರುತ್ತಿರುವಾಗ ರಾತ್ರಿಯಲ್ಲಿಯ ದೀಪಗಳು ಇನ್ನೂ ಹೊಳೆಯುತ್ತಿದ್ದವು. ಆಗ ರಾಜನ ಬಳಿಯಲ್ಲಿದ್ದ ಸಾಮಂತ ಅರಸರು ರೌದ್ರವೇಷದಿಂದ ನುಗ್ಗಿದ ಈ ವೀರರನ್ನು ನೋಡಿ ರಾಜನಿಗೆ ಅಡ್ಡವಾಗಿ ನಿಂತು ತಮ್ಮ ಖಡ್ಗವನ್ನು ತಿರುಗಿಸಲಾರಂಭಿಸಿದರು. ಜಗದೇವಯ್ಯ, ಮಲ್ಲಯ್ಯಗಳು ಅವರ ಖಡ್ಗದ ಪೆಟ್ಟಿಗೆ ಶಿವಗುರಾಣಿ ಅಡ್ಡ ಕಟ್ಟಿಕೊಂಡು ರಾಜನ ಸಿಂಹಾಸನದ ಬಳಿಗೆ ಬಂದು ಸಿಂಹನಾದದಿಂದ ಗರ್ಜಿಸಿ ಶಿವನನ್ನೂ, ಶಿವಶರಣರನ್ನೂ ಮನಸ್ಸಿನಲ್ಲಿ ನೆನೆಯುತ್ತ "ಶಿವಭಕ್ತರಿಗೆ ಮಂಗಳವಾಗಲಿ, ಶರಣರ ಅಪ್ಪಣೆಯಂತೆ ಶಿವ ದ್ರೋಹಿಯಾದ ರಾಜನ ವಧೆಯನ್ನು ಮಾಡುತ್ತೇವೆ." ಎಂದು ಹೇಳಿ ರಾಜನ ತಲೆಯನ್ನು ಕತ್ತರಿಸಿ ಕೆಡವಿದರು. ರಾಜನು ಸತ್ತು ಭೂಮಿಗೆ ಬಿದ್ದು ಶಿವ ಭಕ್ತನಿಂದ ಮರಣವನ್ನು ಹೊಂದಿದ್ದಕ್ಕಾಗಿ ಸ್ವರ್ಗದಲ್ಲಿ ದೇವೇಂದ್ರನ ಪದವಿ ಯನ್ನು ಸಂಪಾದಿಸಿಕೊಂಡನು. ಶಿವದ್ರೋಹಿಯಾದ ರಾಜನ ಮರಣ ವಾರ್ತೆ ಯನ್ನು ಕೇಳಿ ಶಿವಭಕ್ತರೆಲ್ಲರೂ ಸಂತೋಷಪಟ್ಟರು. ಆ ಮೇಲೆ ವೀರಕಾಸೆ ಯನ್ನು ಕಟ್ಟಿದ್ದ ಆ ಮೂರು ಜನಭಕ್ತರು ಶಿವದ್ರೋಹವನ್ನು ಮಾಡಿದವರಿ ಗೆಲ್ಲ ಇದೇ ಗತಿಯೆಂದು ಒಂದು ಕಾಗದವನ್ನು ಬರೆದು ಅದನ್ನು ಬಿಜ್ಜಳನ ಕೈಗೆ ಕಟ್ಟಿ, ಅರಮನೆಯನ್ನೆಲ್ಲ ಸೂರೆ ಮಾಡಿದರು. ಇವರ ವೀರತ್ವವನ್ನು ನಿಲ್ಲಿಸುವ ಶೂರನು ಆ ದೇಶದಲ್ಲಿ ಯಾರೂ ಕಂಡು ಬರಲಿಲ್ಲ. ಅಲ್ಲಿಂದ ಹೊರಟು ಅವರು ಶಿವನಾಮವನ್ನು ಹೊಗಳುತ್ತ ತಾಯಿಯ ಬಳಿಗೆ ಬಂದು ನಮಸ್ಕರಿಸಿ ನಿನ್ನ ಸಂತೋಷಕ್ಕಾಗಿ ಶಿವಶರಣರ ಆಜ್ಞೆಯಂತೆ ಶಿವದ್ರೋಹಿ ಯನ್ನು ಕೊಂದು ಬಂದಿರುವೆವು ಎಂದು ಹೇಳಲು ತಾಯಿಯು ಅತ್ಯಂತ ಸಂತೋಷದಿಂದ ನಗುತ್ತ ಮಗನನ್ನು ಮುದ್ದಾಡಿ ಬೊಮ್ಮಯ್ಯ, ಮಲ್ಲಯ್ಯ ಗಳನ್ನು ಬಹುಮಾನದಿಂದ ವಿಶೇಷವಾದ ಸಂಭ್ರಮದೊಡನೆ ಸತ್ಕಾರ ಮಾಡಿ ದಳು. ಬಳಿಕ ಜಗದೇವನು ಶಿವದ್ರೋಹವನ್ನು ಕೇಳಿದ ಕೂಡಲೇ ಶಿವದ್ರೋ

ಹಿಯಾದವನನ್ನು ಸಂಹರಿಸದೆ ತಡಮಾಡಿದ ಆ ಅಪರಾಧವನ್ನು ಪರಿಹರಿಸಿ ಕೊಳ್ಳುವದಕ್ಕಾಗಿ ನನ್ನ ಪ್ರಾಣವನ್ನೇ ಕೊಡುವೆನು. ಇದಕ್ಕೆ ಮತ್ತೊಂದು ಪ್ರಾಯಶ್ಚಿತ್ತವಿಲ್ಲೆಂದು ತಿಳಿದು ಖಡ್ಗದಿಂದ ತನ್ನ ಶಿರಸ್ಸನ್ನು ಕತ್ತರಿಸಿ ಕೊಂಡನು. ಕೂಡಲೇ ಶಿವನು ಪ್ರತ್ಯಕ್ಷನಾಗಿ ಆತನ ಶಿರಸ್ಸನ್ನು ಪುನಃ ದೇಹಕ್ಕೆ ಹಚ್ಚಿ ಪ್ರಾಣದಾನವನ್ನು ಮಾಡಲು ಆತನು ಅತ್ಯಂತ ಭಕ್ತಿಯಿಂದ ಆ ಪರಶಿವನ ಪಾದಗಳಿಗೆರಗಲು ಅವನನ್ನು ಮೇಲಕ್ಕೆತ್ತಿ ಬಿಗಿದುಅಪ್ಪಿಕೊಂಡು ಹೊಗಳಿ ಆತನ ತಾಯಿ, ಮಿತ್ರ ಸಮೇತ ಆತನನ್ನು ಪುಷ್ಪಕ ವಿಮಾನದಲ್ಲಿ ಕೂಡ್ರಿಸಿಕೊಂಡು ಆಕಾಶದಲ್ಲಿ ಪುಷ್ಪವೃಷ್ಟಿಯಾಗುತ್ತಿರುವಾಗ ದೇವದುಂದು ಭಿಗಳು ಮೊಳಗುತ್ತಿರಲು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ಸಾಲೋಕ್ಯ ಪದವಿ ಯನ್ನು ದಯಪಾಲಿಸಿ ಸುಖಸಂಪದದಿಂದ ಇರಿಸಿದನು. ಈ ಪ್ರಕಾರ ಜಗ ದೇವನು ಮಾಡಿದ ಮಹಾಕಾರ್ಯದ ಎಲ್ಲ ವರ್ತಮಾನವನ್ನು ಬಸವೇಶ್ವರನು ಕೇಳಿ ಸಂತೋಷಪಟ್ಟು ತನ್ನ ಗುರುಗಳಾದ ಕೂಡಲ ಸಂಗಮನಾಥನ ದರ್ಶನ ಪಡೆಯಲು ಪ್ರಮಥ ಗಣಂಗಳೊಡನೆ ಸಡಗರದಿಂದ ಕಪ್ಪಡಿ ಸಂಗ ಮಕ್ಕೆ ದಯಮಾಡಿಸಿದನು. ಶಿವದೇವಾಲಯವನ್ನು ಪ್ರವೇಶಿಸುತ್ತಲೇ ಮೊದಲು ಗುರುರೂಪವನ್ನು ಧರಿಸಿ ಬಂದಂತೆಯೇ ಸಂಗಮನಾಥನು ಈಗಲೂ ಪ್ರತ್ಯಕ್ಷನಾದನು. ಬಸವೇಶ್ವರನು ಕಂಡು ಆನಂದ ಭಾಷ್ಪವನ್ನು ಸುರಿಸುತ್ತ ರೋಮಾಂಚಿತನಾಗಿ ದೀರ್ಘದಂಡ ನಮಸ್ಕಾರವನ್ನು ಮಾಡಿ ಎದ್ದು ಕೈಮು ಗಿದು ನಿಂತು ಗದ್ಗದಸ್ವರದಿಂದ— ಸ್ವಾಮೀ, ದಯಾನಿಧೇ, ಜಗದ್ಗುರೋ, ಮತ್‌ಪ್ರಾಣನಾಥಾ, ಕೂಡಲ ಸಂಗಮನಾಥಾ, ನಾನು ಜನಿಸಿದಂದಿನಿಂದ ಇಲ್ಲಿಯವರೆಗೆ ತಮ್ಮ ಅಪ್ಪಣೆಯ ಪ್ರಕಾರ ತಮ್ಮ ಸೇವೆ ಮಾಡುವದರಲ್ಲಿ ಏನಾ ದರೂ ಕುಂದುಕೊರತೆ, ಲೋಪದೋಷಗಳು ಉಂಟಾಗಿದ್ದರೆ ಅವುಗಳನ್ನು ಮನ್ನಿಸಿ ಕಾಪಾಡಬೇಕು ಎಂದು ಬಿನ್ನೈಸಲು ಶ್ರೀ ಸಂಗಮನಾಥನು ತನ್ನ ಮುದ್ದಿನ ಮಗುವನ್ನು ತಬ್ಬಿ ತಲೆ ಸವರಿ ಕರುಣಾ ಕಟಾಕ್ಷದಿಂದ ನೋಡಿ ತನ್ನ ಪ್ರಸಾದವನ್ನು ಕೊಟ್ಟು ಅತ್ಯಂತ ವಾತ್ಸಲ್ಯದಿಂದ ಕೈಹಿಡಿದು ಕರೆದು ಕೊಳ್ಳಲು ಆತನು ಗರ್ಭಗೃಹದಂತರಾಳವನ್ನು ಪ್ರವೇಶಿಸಿದನು. ಕೂಡಲೇ ಪರಮಾಶ್ಚರ್ಯವಾಯಿತು ! ಬೆಳಕಿನೊಳು ಬೆಳಕು ಬೆರೆದಂತಾಯಿತು. ಬಸ ವೇಶ್ವರನು ಸಂಗಮನಾಥನಲ್ಲಿ ಬೆರೆದು ಲಿಂಗಮಯನಾದನು. ಆಕಾಶದಲ್ಲಿ

ಪ್ರಮಥ ಗಣಂಗಳು ಹೂಮಳೆಯನ್ನು ಸುರಿಸಿದರು. ದೇವದುಂದುಭಿಯು ಮೊಳಗಿತು. ಶಿವಶರಣರು ಉಘೇ! ಉಘೇ! ಎಂದು ಉದ್ಘೋಷಿಸುತ್ತಿದ್ದರು. (ಅಂದಿನಿಂದ ಭಕ್ತಿಕಂದನಾದ ಬಸವೇಶ್ವರನು ಸಕಲಭಕ್ತರ ಹೃದಯದಲ್ಲಿಯೂ ಸ್ಥಿರವಾಗಿ ನಿಂತನು. ಇಲ್ಲದಿದ್ದರೆ ಭಕ್ತಿಮುಕ್ತಿಗಳ ಗುರುತನ್ನು ಯಾರೂ ತಿಳಿಯುತ್ತಿದ್ದಿಲ್ಲ.) ಬಳಿಕ ಅಲ್ಲಿದ್ದ ಚನ್ನಬಸವೇಶ್ವರ, ಮಾಚಿದೇವ ಮೊದಲಾದ ಶಿವಶರಣರೆಲ್ಲರೂ ಈ ಬಸವೇಶ್ವರನ ಚರಿತ್ರವೆಂಬುದು ರನ್ನಗನ್ನಡಿಯಾಗಲು ಅದರಲ್ಲಿ ಶಿವಗಣಂಗಳ ಚರಿತ್ರೆಯೆಂಬ ವಿಸ್ತಾರವಾದ ಭೂಮಿಯು ಪ್ರತಿಬಿಂಬಿಸಿದಂತಾಯಿತು. ಈ ಬಸವೇಶ್ವರನ ಚರಿತ್ರವೆಂಬ ಸಮುದ್ರದಲ್ಲಿ ಒಂದು ಸಣ್ಣ ಹನಿಯನ್ನು ಸಹ ಹೊಗಳುವದಕ್ಕೆ ಚತುರ್ಮುಖದ ಬ್ರಹ್ಮನಿಗೂ, ಸಹಸ್ರ ಮುಖದ ಆದಿಶೇಷನಿಗೂ ಶಕ್ಯವಾಗುವದಿಲ್ಲ. ಈ ಬಸವೇಶ್ವರನು ಪ್ರಮಥ ಗಣಂಗಳಲ್ಲಿ ಅಗ್ರಗಣ್ಯನು. ಅಗಣ್ಯ ಮಹಿಮನು ಜಗತ್ತಿನ ಸೃಷ್ಟಿ, ರಕ್ಷಾ, ಶಿಕ್ಷಣ ದೀಕ್ಷಿತನು. ದಯಾಸಮುದ್ರನು. ಅನಾದಿ ಭಕ್ತನು. ಆದಿಶಕ್ತಿ ಸ್ವರೂಪನು. ಜ್ಞಾನಾನಂದಮಯನು. ಅಷ್ಟಾವರಣ ಸ್ವರೂಪನು, ಭಕ್ತಿ, ಜ್ಞಾನ ಮಾರ್ಗ ಪ್ರದರ್ಶಕನು. ಭವರೋಗ ವೈದ್ಯನು, ಅಜ್ಞಾನಾಂಧಕಾರ ಸೂರ್ಯನು. ಮುಕ್ತಿಕಾಂತಾ ರಮಣನು. ಗಾಳಿಯಲ್ಲಿ ಸುಳಿಗಾಳಿಯು ಹುಟ್ಟಿ ಅದರಲ್ಲಿಯೇ ಅಡಗಿದಂತೆಯೂ, ಸಮುದ್ರದಲ್ಲಿ ನೊರೆಯು ಹುಟ್ಟಿ ಅಲ್ಲಿಯೇ ಲೀನವಾದಂತೆಯೂ, ಅಂತರಿಕ್ಷದಲ್ಲಿ ಮಿಂಚುಹುಟ್ಟಿ ಹೊಳೆದು ಮುಳುಗಿದಂತೆಯೂ, ಈ ಬಸವೇಶ್ವರನು ಶ್ರೀಗುರು ಕಾರುಣ್ಯದಿಂದ ಹುಟ್ಟಿ ಆ ಗುರುದಯಾ ಸಂಪತ್ತಿನಿಂದ ಬೆಳೆದು ಕೊನೆಗೆ ಆ ಗುರುವಿನಲ್ಲಿಯೇ ಐಕ್ಯನಾದನು. ಈತನಂತಹ ವೀರಶೈವ ಕ್ರಿಯಾಜ್ಞಾನ ಸಂಪನ್ನರು ಈ ಜಗತ್ತಿನಲ್ಲಿ ಇನ್ನಾರಿರುವರು? ಎಂದು ಅನೇಕ ವಿಧವಾಗಿ ಕೊಂಡಾಡಿ ಸಕಲ ಶರಣ ಗಣ ಸಮೂಹದೊಡನೆ ಉಳುವೆಯ ಮಾನನೆಗೆ ಪ್ರಯಾಣಮಾಡಿ ಅಲ್ಲಿ ನೆಲೆಸಿ ಶಿವತತ್ವಾನುಭವದಲ್ಲಿ ಕಾಲವನ್ನು ಕಳೆಯುತ್ತಿದ್ದರು. ಕೆಲವರು ಶ್ರೀಶೈಲದ ಕಡೆಗೆ ಪ್ರಯಾಣ ಮಾಡಿದರು. ಆದರೆ ಬಸವೇಶ್ವರರ ಧರ್ಮಪತ್ನಿ ಗಂಗಾಂಬಿಕೆಯು ಹಸ್ತ ಪೀಠದಲ್ಲಿರುವ ಶಿವಲಿಂಗದಲ್ಲಿ ಪ್ರಾಣದೃಷ್ಟಿ, ಮನೋದೃಷ್ಟಿಗಳನ್ನು ಅನುಸಂಧಾನ ಕ್ರಮದಿಂದ ಅಳವಡಿಸಿ ಭೃಂಗಕೀಟಕ ನ್ಯಾಯದಂತೆ ಲಿಂಗಮಯಳಾದಳು.

ಜಗತ್ಪಾವನರೂ, ಅಪರಿಮಿತ ಮಹಿಮರೂ, ನಿತ್ಯತೃಪ್ತರೂ, ನಿರುಪಾಧಿಕರೂ, ಆದ ಯಾವ ಮಹಾ ಕೃಪಾಳುಗಳು ಭಕ್ತಿ ಮಾರ್ಗವನ್ನು ತೋರಿಸಿ ಭವಭಾರಿಗಳ ಬಂಧವಿಮೋಚನೆಯನ್ನೆಸಗಿ ಶಿವಮತವನ್ನು ಬೆಳಗಿ ಪರಮತವನ್ನು ಕೊರಗಿಸಿ ಜಗತ್ತನ್ನು ಉದ್ಧರಿಸುವದಕ್ಕಾಗಿ ಈ ಭೂಮಿಯಲ್ಲಿ ಅವತಾರ ಮಾಡಿದ್ದರೋ ಅಂತಹ ಶಿವಶರಣರನ್ನೂ, ಅವರಲ್ಲಿ ಶ್ರೇಷ್ಠನಾದ ಬಸವೇಶ್ವರನನ್ನೂ ಅವಿಚ್ಛಿನ್ನವಾದ ಭಕ್ತಿಯಿಂದ ಭಜಿಸುವೆನು. ಭಕ್ತ್ಯೈಕ ಸುಲಭನಾದ ಆ ನನ್ನ ಸ್ವಾಮಿಯು ಸಕಲರಿಗೂ ಸದಾ ಸನ್ಮಂಗಳವನ್ನು ದಯಪಾಲಿಸಲಿ.

ಎಲೈ ಬಸವೇಶ್ವರನೇ, ಅನಾಥನಾದ ನನ್ನನ್ನು ಉದ್ಧರಿಸಲು ನೀನಲ್ಲದೆ ಮತ್ತೊಂದು ದೈವವನ್ನು ನಾನು ಕಾಣೆನು. ನೀನೇ ಗುರುವು. ನೀನೇ ಲಿಂಗವು ,ನೀನೇ ಜಂಗಮವು, ನೀನೇ ತಾಯಿಯು, ನೀನೇ ತಂದೆಯು, ನೀನೇ ಗತಿಯು, ನೀನೇ ಮತಿಯು ಅಗಣಿತಗಳಾದ ಜನ್ಮಗಳನ್ನೆತ್ತಿ ಪಡಬಾರದ ಕಷ್ಟಗಳನ್ನುಪಟ್ಟೆನು. ಇನ್ನು ಈ ಭವಬಂಧನವನ್ನು ಸೈರಿಸಲಾರೆನು. ಶರಣಾಗತನಾದ ನನ್ನನ್ನು ಮುಕ್ತನನ್ನಾಗಿಮಾಡು. ಈ ಲೋಕದಲ್ಲಿ ನಾನು ಅನೇಕ ಪಾಪ ಕೃತ್ಯಗಳನ್ನು ಮಾಡಿದ್ದೇನೆ. ನನ್ನಲ್ಲಿ ಶತಾಪರಾಧವಿದ್ದರೂ ಕ್ಷಮಿಸಿ ದುಃಖಸಮುದಲ್ಲಿಬಿದ್ದು ನರಳುತ್ತಿರುವ ನನ್ನನ್ನು ಕರುಣಾಕಟಾಕ್ಷದಿಂದ ನೋಡಿ ಕಾಪಾಡು. ನಿನ್ನ ದಿವ್ಯ ಸ್ವರೂಪವು ಸದಾ ನನ್ನ ಮನಸ್ಸಿನಲ್ಲಿಯೂ, ನಿನ್ನ ನಾಮವು ನನ್ನ ನಾಲಿಗೆಯಲ್ಲಿಯೂ, ನಿನ್ನ ಭಕ್ತರ ಪಾದವು ನನ್ನ ಶಿರಸ್ಸಿನ ಮೇಲೆಯೂ ಸದಾ ನೆಲೆಸಿರುವಂತೆ ವರವನ್ನು ದಯಪಾಲಿಸು. ನಿನ್ನ ಪಾದಧೂಳಿಯು ನನ್ನ ಲಲಾಟಕ್ಕೆ ತಿಲಕವಾಗಲಿ. ನಿನ್ನ ರೂಪ ದರ್ಶನವು ನನ್ನ ಕಣ್ಣಿಗೆ ಸುಖಾಂಜನವಾಗಲಿ. ನಿನ್ನ ಪಾದುಕೆಗಳು ನನ್ನ ಶಿರಸ್ಸಿಗೆ ಭೂಷಣವಾಗಲಿ. ನಿನ್ನ ಚರಿತ್ರವನ್ನು ಓದುವ, ಕೇಳುವ, ಬರೆಯುವ, ಪೂಜಿಸುವ ಮಾನವರಿಗೆ ದುಷ್ಟರೋಗ, ಅಪಮೃತ್ಯು, ಚೋರಭಯ, ವಿಷಭಯ, ಅಗ್ನಿಭಯ, ದುಷ್ಟಮೃಗಭೀತಿ, ಶತ್ರುಭೀತಿ, ಜಲಕಂಟಕಾದಿಗಳು, ದುಃಖ, ದಾರಿದ್ರ್ಯಗಳು ಪರಿಹಾರವಾಗಿ ದೀರ್ಘಾಯುಷ್ಯ, ಆರೋಗ್ಯ, ಐಶ್ವರ್ಯ, ಪುತ್ರ ಪೌತ್ರಾದಿ ಸಂಪತ್ತನ್ನೂ, ವಿದ್ಯಾ, ವಿನಯ, ಕೀರ್ತಿ, ಗಾಂಭೀರ್ಯ,

ಧೈರ್ಯ, ಶಮ ದಮಾದಿಗಳನ್ನೂ, ಭಕ್ತಿ ಜ್ಞಾನ, ವೈರಾಗ್ಯ ಭಾಗ್ಯವನ್ನೂ, ಶಾಶ್ವತವಾದ ಮುಕ್ತಿಯನ್ನೂ ಕೊಟ್ಟು ಕಾಪಾಡು.

ಮಹಾಮಹಿಮರಾದ ಪೂರ್ವಜರ ಪಾದಗಳಲ್ಲಿ ಶರಣಾಗತನಾಗಿ ಅಮೋಘವಾದ ಅವರ ಅನುಗ್ರಹ ಬಲದಿಂದ ಸುಲಭ ಕನ್ನಡದಲ್ಲಿ ಕಥಾ ರೂಪವಾಗಿ ಬರೆದಿರುವ ಈ " ಶ್ರೀಬಸವೇಶ್ವರ ಕಥಾಮೃತ " ಕೃತಿಯು ಶ್ರೀ ಶಿವಶರಣರ ಮೆಚ್ಚುಗೆಗೆ ಪಾತ್ರವಾಗಿ, ಸದ್ಭಕ್ತ ಜನರಿಂದ ಅಂಗೀಕೃತವಾಗಿ ಆ ಚಂದ್ರಾರ್ಕವಾಗಿ ಈ ಭೂಮಿಯಲ್ಲಿ ವಿರಾಜಿಸುತ್ತಿರಲಿ.

ಜಗಜ್ಜನನೀಜನಕರಾದ ಪಾರ್ವತೀಪರಮೇಶ್ವರರು ಸಮಸ್ತ ಸನ್ಮಂಗಳವನ್ನುಂಟುಮಾಡಲಿ.



